೧೪ನೆಯ ವರ್ಷದ ೨-೩-೪ನೆಯ ಕುಡಿಗಳು

# ಶ್ರೀ ಸಾನೆ ಗುರೂಜಿ ಹಾಗೂ ಅವರ ಕೃತಿಗಳು

ಸಂಪಾದಕರು:

**ಶ್ರೀ. ಬುರ್ಲಿ ಬಿಂದುಮಾಧವ**



೧೧-೬-೧೯೫೨

ಮಿಂಚಿನಬಳ್ಳಿ ಚಾವಡಿ
ಧಾರವಾಡ

ಬೆಲೆ: ೮-೦-೦

೧೪ನೆಯ ವರ್ಷದ ೨-೩-೪ನೆಯ ಕುಡಿಗಳು

# ಶ್ರೀ ಸಾನೆ ಗುರೂಜಿ

ಹಾಗೂ

# ಅವರ ಕೃತಿಗಳು

ಸಂಪಾದಕ:

ಬುರ್ಲಿ ಬಿಂದುಮಾಧವ

( ೧೧-೬-೧೯೫೨ )

ಮಿಂಚಿನಬಳ್ಳಿ’ ಚಾವಡಿ, ಧಾರವಾಡ

ಮುಸಲ್ಮಾನ ಅರಸರು ಜುಲುಮೆಯಿಂದ ಧರ್ಮಪ್ರಸಾರವನ್ನಂತೂ ಮಾಡುತ್ತಿದ್ದರು. ಆದರೆ ಹಿಂದೂಧರ್ಮದಲ್ಲಿ ಕೀಳು ಎಂದು ಎಣಿಸಲ್ಪಡುತ್ತಿದ್ದ ಲಕ್ಷಾಂತರ ಜನರು, ಕೀಳುತನವನ್ನು ಕಳೆದುಕೊಳ್ಳುವದಕ್ಕಾಗಿ, ಹೆಣ್ಣು ಹೊನ್ನಿನ ಆಶೆಗಾಗಿ ಮುಸಲ್ಮಾನ ಧರ್ಮವನ್ನು ಸ್ವೀಕರಿಸಹತ್ತಿದ್ದರು. ಇದಲ್ಲದೆ ವಿರಕ್ತರಾದ ಮುಸ್ಲಿಂ ಫಕೀರರು ಕೈಯಲ್ಲಿ ಕಂದೀಲುಗಳನ್ನು ಹಿಡಿದು ಕೊಂಡು ಬಾಯಿಯಲ್ಲಿ ಮುಸ್ಲಿಂ ಧಾರ್ಮಿಕ ಗೀತಗಳನ್ನು ಹಾಡುತ್ತ ಮುಸ್ಲಿಂ ಸಂದೇಶವನ್ನು ಬೀರಲು ಊರೂರು ಹೊರಟಿದ್ದರು. ಇಂತಹ ಸಮಯದಲ್ಲಿ ಹಿಂದೂ ಧರ್ಮದ ಸಂದೇಶವನ್ನು ಕೊಡುವವರಾರು? ಕೇಳುವವರಾರು?

ಧರ್ಮವು ರಸಾತಳಕ್ಕೆ ಇಳಿದಂತೆ, ಆರ್ಥಿಕ ಅವನತಿಯೂ ಆಗಿ ಅನ್ಯಾನ್ನದೆಸೆಯು ರಾಷ್ಟ್ರದಲ್ಲಿ ಉತ್ಪನ್ನವಾಗಿದ್ದಿತು ಎಲ್ಲ ಕಡೆಗೂ ಜುಲುಮೆ. ಧರ್ಮ-ಧರ್ಮಗಳಲ್ಲಿ ಬಡಿದಾಟ, ಜಾತಿಜಾತಿಗಳಲ್ಲಿ ಜಗಳಾಟ, ಶೈವ-ವೈಷ್ಣವ ರಲ್ಲಿ ಹೊಡೆದಾಟ. ಹೀಗಾಗಿ, ನಾವೆಲ್ಲರೂ ಭಾರತೀಯರು ಎಂಬ ಅರಿವು ಮಾಯವಾಗಿ ಹಿಂದೂಸಮಾಜವು ಜರ್ಜರಿತವಾಗಿತ್ತು. ಒಂದು ವಿಚಾರವಿಲ್ಲ. ಒಂದು ಧ್ಯೇಯವಿಲ್ಲ. ಜೀರ್ಣವಾದ ತರಗೆಲೆಯು ಬಿರುಗಾಳಿಗೆ ಎಲ್ಲೆಲ್ಲಿಯೂ ಹಾರಿಹೋಗುವಂತೆ ದೀನ, ದರಿದ್ರ, ದುರ್ಬಲವಾದ ಭಾರತೀಯರ ಗತಿಯು ಆಗಿದ್ದಿತು. ಜನತೆಯು ದೇವಾ! ರಕ್ಷಿಸು! ರಕ್ಷಿಸು! ಎಂದು ಗೋಳಿಡುವ ಕಾಲವದು.

ಅಮಾವಾಸ್ಯೆಯು ಸಮೀಪಿಸಿದಂತೆ, ಪ್ರಕಾಶಮಾನನಾದ ಚಂದ್ರನ ಉದಯವೂ ತೀರ ಹತ್ತಿರಬಂದಹಾಗೆ. ಭಾರತವಲ್ಲೆಲ್ಲ ಕಗ್ಗತ್ತಲೆಯು ಕವಿದಿದ್ದರೂ ಎಲ್ಲಿಯಾದರೂ ಪ್ರಕಾಶವು ಪ್ರಕಟವಾಗುವದೆಂದು ಜನತೆಗೆ ಅನಿಸಹತ್ತಿತು. ಆದರೆ ಈ ಪ್ರಕಾಶವು ಎಲ್ಲಿಂದ ಬರುವದು? ಎಲ್ಲಿ ಈ ಆಶಾಕಿರಣ ಹೊರಬೀಳುವದು ಎಂದು ಎದುರುನೋಡುತ್ತಿರುವಾಗ, ಮಹಾರಾಷ್ಟ್ರದಲ್ಲಿ ಈ ಕರ್ಮಜ್ಯೋತಿಯು ಉದಯವಾಯಿತು. ಭಾರತಕ್ಕೆ ಮಾರ್ಗದರ್ಶನ ಮಾಡಿದ ಮಹಾಶಕ್ತಿಯೂ ಇದೇ!

ಮುಸಲ್ಮಾನ ಧರ್ಮದಲ್ಲಿಯ 'ದೇವರು ಒಬ್ಬನೇ' ಎಂಬ ಕಲ್ಪನೆಯ ಪರಿಣಾಮವು ಆಗಹತ್ತಿತು. ಮಸೀದೆಯಲ್ಲಿ ಎಲ್ಲರೂ ಸಮಾನರು, ಎಲ್ಲರೂ ಅಣ್ಣತಮ್ಮಂದಿರು. ದೇವರು ಒಬ್ಬನೇ! ನಾವೆಲ್ಲರೂ ಬಂಧುಗಳು ಎಂಬ

ಬೆಲೆ:

| | |
|---|---|
| ಉತ್ತಮ ಪ್ರತಿ | ೮—೦—೦ |
| ಸಾದಾ ಪ್ರತಿ | ೬—೮—೦ |

## ಮುಂದೆ ಬರಲಿರುವ ಪುಸ್ತಕಗಳು



೧. ವೈದಿಕವಾಙ್ಮಯ ಪರಿಚಯ

೨. ಗೀತಾಂಜಲಿ

೩. ಪಂಚವಾರ್ಷಿಕ ಯೋಜನೆ

೪. ಕನ್ನಡ ಸಾಹಿತ್ಯ

೫. ಕರ್ನಾಟಕದ ಐತಿಹಾಸಿಕ ಕ್ಷೇತ್ರಗಳು

೬. ಭಾಗವತ ಸಾರೋದ್ಧಾರ

ಇತ್ಯಾದಿ.

ಮುದ್ರಕರು :
ಶ್ರೀ. ನಾ. ಅ. ಹೊಸಕೇರಿ
ವಿಜಯ ಮುದ್ರಾಲಯ
ಧಾರವಾಡ.

ಪ್ರಕಾಶಕರು :
ಶ್ರೀ. ಬುರ್ಲಿ ಬಿಂದುಮಾಧವ
ಮಿಂಚಿನಬಳ್ಳಿ ಚಾವಡಿ
ಧಾರವಾಡ.

ವಿಚಾರಗಳು ಅನೇಕ ಜಾತಿ–ಮತ–ಪಂಥಗಳಿಂದ, ೩೩ ಕೋಟಿ ದೇವತೆಗಳ ಕಲ್ಪನೆಯಿಂದ ಹಣ್ಣಾದ ಹಿಂದೂಸಮಾಜದ ಮೇಲೆ ಆಗದೇ ಇರಲಿಲ್ಲ.

ಇಂತಹ ಸಮಯದಲ್ಲಿ ಸಾಧುಸಂತರು ಮುಂದೆ ಬಂದರು. ಅವರು ಆ ಕಾಲದ ಸಂದೇಶವನ್ನು ತಿಳಿದುಕೊಂಡರು. ಅದನ್ನು ಜನತೆಯಲ್ಲಿ ಬೀರಿದರು. ಅವರು ಬ್ರಹ್ಮವಿದ್ಯೆಯ ಗುಪ್ತಭಂಡಾರವನ್ನು ಒಡೆದರು. ಸಂಸ್ಕೃತದಲ್ಲಿಯ ಧರ್ಮದ ಮರ್ಮವನ್ನು ಜನತೆಯ ಭಾಷೆಯಲ್ಲಿ ತಂದರು. ಸುಲಭ ಶೈಲಿಯ ಅಭಂಗಗಳನ್ನು ರಚಿಸಿದರು. ಅವುಗಳ ಮುಖಾಂತರ ಮಹಾರಾಷ್ಟ್ರವನ್ನು ಏಕಮುಖವಾಗಿ ಮಾಡಿದರು. ಭಾಗವತ ಧರ್ಮೀಯರಾದ ಸಂತರು ಮಹಾರಾಷ್ಟ್ರದ ಎದುರು ಶ್ರೀವಿಠ್ಠಲನನ್ನು ನಿಲ್ಲಿಸಿದರು. ಅನೇಕ ದೇವತೆಗಳು ಇರಬಹುದು. ಆದರೆ ಸರ್ವಾಂತರ್ಯಾಮಿಯಾದ ಸ್ವಾಮಿ ಒಬ್ಬನೇ. ಅವನೇ ವಿಠ್ಠಲನು ಎಂದು ಎಲ್ಲರ ಮನಸ್ಸನ್ನು ಒಂದೆಡೆ ಎಳೆದರು. ಮತ್ತು ಜನತೆಯಲ್ಲಿ ಐಕ್ಯತೆ ಉತ್ಪನ್ನ ಮಾಡುವದಕ್ಕಾಗಿ ಪಂಢರಿಯ **ವಾರಿಯನ್ನು** ಪ್ರಾರಂಭಿಸಿದರು. ಆಷಾಢ ಹಾಗೂ ಕಾರ್ತೀಕದ ವಾರಿಗಳಿಗೆ ಮೊದಲಾಯಿತು. ಆಯಾ ಸ್ಥಳಗಳಿಂದ ಮಹನೀಯರಾದ ಸಂತರೊಡನೆ, ಹರಿಯ ನಾಮಗರ್ಜನೆಯನ್ನು ಮಾಡುತ್ತ ಸಾವಿರಾರು ಜನ ಭಯಭಕ್ತಿಯಿಂದ ಬೆನ್ನುಹತ್ತಿದರು. ಚಂದ್ರಭಾಗೆಯ ಉಸುಬಿನ ಬೈಲಿನಲ್ಲಿ ಭಾರತದ ಐಕ್ಯತೆಯ ದರ್ಶನವಾಗ ಹತ್ತಿತು. ಇಟ್ಟಿಗೆಯ ಮೇಲೆ, ಸಮಚರಣನಾಗಿ, ಕಟಿತಟದ ಮೇಲೆ ಕೈ ಇಟ್ಟುಕೊಂಡ ಜಗತ್ಪಾಲಕನಾದ **ಶ್ರೀವಿಠ್ಠಲನ** ಎದುರಿನಲ್ಲಿ ಜನತೆ ಭೇದಭಾವವನ್ನು ಮರೆಯತೊಡಗಿತು. ಪಾಂಡುರಂಗನ ಅಧ್ಯಕ್ಷತೆಯಲ್ಲಿ ನವ ಮಹಾರಾಷ್ಟ್ರವು ನಿರ್ಮಾಣವಾಗಹತ್ತಿತು.

ಪಾಂಡುರಂಗನ ಭಕ್ತರು—ಅನೇಕ ಜಾತಿಯ ಜನರು—ಭಕ್ತಿಯಿಂದ ಒಬ್ಬರನ್ನೊಬ್ಬರು ಆಲಿಂಗಿಸುತ್ತಿದ್ದಾರೆ. ನಾಮಸ್ಮರಣೆಯಲ್ಲಿ ಮೈಮರೆಯುತ್ತಿದ್ದಾರೆ.

ಈ ಸುಂದರವಾದ ದೃಶ್ಯವನ್ನು ತುಕಾರಾಮ ಮಹಾರಾಜರು ಆನಂದಿತರಾಗಿ “ ಈ ಐಕ್ಯದ ದೃಶ್ಯವು ಕಲ್ಲಿನಲ್ಲಿ ಸೆಲೆಯೊಡಿಸುವದು, ಕಠೋರ ಹೃದಯಗಳನ್ನು ಕರಗಿಸಿ ಬೆಣ್ಣೆಯಂತೆ ಮಾಡುವದು ” ಎಂದು ವರ್ಣಿಸಿದ್ದಾರೆ.

ಭಾಗವತರಾದ ಸಂತರು ಜನತೆಯ ನುಡಿಯಲ್ಲಿಯೇ ಧರ್ಮೋಪದೇಶ ವನ್ನು ಮಾಡಿದರು. ಭೇದವನ್ನು ಕಡಿಮೆಮಾಡಿದರು. ಲಕ್ಷಾವಧಿ ಜನರನ್ನು ಒಂದೆಡೆ ತಂದು ಏಕರಾಷ್ಟ್ರೀಯತೆಯ ದರ್ಶನವನ್ನು ಮಾಡಿಸಿದರು. ಚಿನ್ನಕ್ಕೆ ಕುಂದಣ ಕೂಡಿಸಿದಂತೆ, "ತಾಯಿಯೇ! ವಿಶ್ವದ ಚಿಂತೆಯನ್ನೇ ಮಾಡುತ್ತಲಿರುವೆ" ಎಂದು ವಿಶ್ವದ ಹಿತವನ್ನೇ ಚಿಂತಿಸುತ್ತಿದ್ದ ಸಮರ್ಥ ರಾಮದಾಸರು, ಸಮಾಜಕ್ಕೆ ಬಲದ ವೀರಕರ್ಮದ ದೀಕ್ಷೆಯನ್ನು ಕೊಡಲು ಕಂಕಣಬದ್ಧರಾದರು. ೧೨ ವರ್ಷ ತಪವನ್ನಾಚರಿಸಿ, ೧೨ ವರ್ಷ ಭಾರತ ವನ್ನೆಲ್ಲ, ಸಂಚರಿಸಿ ದೀನ ದರಿದ್ರಳಾದ ಭಾರತ ಮಾತೆಯ ದರ್ಶನಗೈದ ಸಮರ್ಥರು, ಹಾಯ! ಹಾಯ್! ಎಂತಹ ದಾರುಣವಾದ ಪರಿಸ್ಥಿತಿಯಿದು! ತಿನ್ನಲು ಅನ್ನವಿಲ್ಲ! ತಲೆಯಲ್ಲಿ ವಿಚಾರವಿಲ್ಲ! ಮೈಯಲ್ಲಿ ಬಲವಿಲ್ಲ!!! ಅನ್ನ, ಅನ್ನ, ಅನ್ನವೆಂದು ಹಲುಬುತಿದೆ ಭಾರತ! ಏನು ಗತಿ ಎಂದು ಚಿಂತಾಮಗ್ನ ರಾಗುತ್ತಿದ್ದರು.

ಗಿರಿ ಕಂದರಗಳಿಂದಲೂ ಕೋಟೆ ಕೊತ್ತಳಗಳಿಂದಲೂ ತುಂಬಿದ ಮಹಾರಾಷ್ಟ್ರವೇ ಸ್ವರಾಜ್ಯ ಸ್ಥಾಪನೆ ಯೋಗ್ಯವಾಗಿದೆ ಎಂದು ಆಲೋಚಿಸಿ ಸಮರ್ಥರು ಅದೇ ತಮ್ಮ ಕರ್ಮ ಭೂಮಿಯೆಂದು ನಿಶ್ಚಯಿಸಿದರು. ಬಿದ್ದ ಜನತೆಯಲ್ಲಿ ಸುಪ್ತ ಶಕ್ತಿ ಇರುತ್ತದೆ, ಘರ್ಷಣದಿಂದ ಅದು ಹೊರಬೀಳು ವುದು ಎಂದು ಹೇಳಹತ್ತಿದರು. "ಕಿಡಿಯಂತೂ ಹಾರಲಿ ಬೆಂಕಿ ತಾನೇ ಹೊತ್ತುವದು." ಎಂದು ಅವರ ಮತ.

ಭಾಗವತ ಧರ್ಮೀಯ ಸಂತರು ಐಕ್ಯವನ್ನು ಸಾಧಿಸಿದ್ದರು. ಉತ್ಕಟತೆ ಯನ್ನು ನಿರ್ಮಿಸಿದ್ದರು. ಸಮರ್ಥರು ಕರ್ಮದ ಸಂದೇಶವನ್ನು ಸಾರಲು ಮುಂದೆ ಬಂದರು. ಅವರು ಜನತೆಗೆ ಹೊಸ ದೈವತವನ್ನೆ ತೋರಿಸಿದರು ಕೋದಂಡಪಾಣಿಯಾದ ಪ್ರಭು **ಶ್ರೀ ರಾಮಚಂದ್ರನೇ ಆ ದೈವತ.** ಶ್ರೀ ರಾಮಚಂದ್ರನ ಉಪಾಸನೆಯ ಉಪದೇಶವನ್ನಿತ್ತರು. ಅದರಲ್ಲಿ ಒಂದು ಉದ್ದೇಶವಿದ್ದಿತು. ರಾಮನ ಅವತಾರವು ಯಾವುದಕ್ಕೋಸುಗ? ರಾವಣನ ಸಂಹಾರಕ್ಕಾಗಿ, ೩೩ ಕೋಟಿ ದೇವತೆಗಳ ಬಂಧವಿಮೋಚನೆಗಾಗಿ, ಅಂಥಮೇಲೆ ರಾಮನು ಈಗ ಬರಲಾರನೇ? ಬರುವನು ಆದರೆ ನಾವು ಸಂಯಮಿಗಳಾಗ ಬೇಕು. ಗೊಡ್ಡು ಹರಟೆಯನ್ನು ಬಿಡಬೇಕು. ಧೈರ್ಯವನ್ನು ತಾಳಿ

ಸಾಹಸದ ಕಾರ್ಯಕ್ಕೆ ಕೈಯಿಕ್ಕಬೇಕು. ದೇವರು ಬರಲು ಸಿದ್ಧ. ಆದರೆ ಆತನು ನಮ್ಮಿಂದ ಸಾಹಸದ ಅಪೇಕ್ಷೆಯನ್ನು ಮಾಡುವನು. ನೀವು ಕೈ ಕಾಲುಗಳನ್ನು ಅಲುಗಾಡಿಸಿರಿ. ಏಳಿರಿ! ಗೋಪಾಲರು ಕೋಲನ್ನು ಅಲುಗಾಡಿಸಿದರೆ ಪ್ರಭುವು ಸಹಾಯ ನೀಡಲು ಸಿದ್ಧ.

ಸಮರ್ಥರು ರಾಮಚರಿತ್ರದ ಸಂದೇಶವನ್ನು ಕೊಟ್ಟರು. ಹನುಮಂತನ ಉಪಾಸನೆ ಪ್ರಾರಂಭಿಸಿದರು. ಬಲೋಪಾಸನೆಗೆ ಪ್ರಾರಂಭವಾಯಿತು. ಹೃದಯದಲ್ಲಿ ಐಕ್ಯವೂ! ಬಾಹುಗಳಲ್ಲಿ ಬಲವೂ ರಾಷ್ಟ್ರಕ್ಕೆ ಅವಶ್ಯವಲ್ಲವೆ? ಊರೂರಿಗೆ ಗರಡೀಮನೆಗಳು ತೆರೆಯಲ್ಪಟ್ಟು ಜನತೆ ಭುಜ ಚಪ್ಪರಿಸಹತ್ತಿತು. ಬಲಸಂವರ್ಧನೆಯೊಡನೆ ಸಂಘಟನೆಗೂ ಕೈಯಿಕ್ಕಿದರು. ಆದರೆ ಇದೆಲ್ಲವೂ ಹನುಮಂತನ ಬಲ. ಈ ಬಲವೆಲ್ಲ ರಾಮನ ಸೇವೆಗೆ. ಯಾರು ಮಹಾನ್ ಮುಖಂಡರೆಂದು ಜನತೆಯಿಂದ ಮನ್ನಿಸಲ್ಪಡುವರೊ ಅವರ ಚರಣದಲ್ಲಿ ಈ ಶಕ್ತಿಯನ್ನು ಅರ್ಪಿಸಿರಿ ಎಂದು ಸಮರ್ಥರು ಉಪದೇಶಿಸಹತ್ತಿದರು.

ಯುದ್ಧಕಾಂಡದ ಮೇಲೆ ಜೋರನ್ನು ಕೊಟ್ಟು ಸಮರ್ಥರು ವರ್ಣಿಸಹತ್ತಿದರು. ರಾಮನ ವೀರಶ್ರೀಯನ್ನು ವರ್ಣಿಸುವ ಈ ಯುದ್ಧಕಾಂಡವು ಮಹಾರಾಷ್ಟ್ರದಲ್ಲೆಲ್ಲ ಉದ್ಘೋಷಿಸಲ್ಪಡಹತ್ತಿತು. ಸ್ವೈರಾಜ್ಯವನ್ನು ಭೇದಿಸಿ ಜನರ ಅಂತಃಕರಣದಲ್ಲಿ ಶ್ರೀರಾಮ ಚರಿತೆಯು ವೀರರಸವನ್ನು ತುಂಬಿತು.

ಸಮರ್ಥರ ಸಂಘಟನೆಯು ಅದ್ಭುತವಾದುದು ಸಂಯಮದ ಶಿಸ್ತಿನ ಪ್ರಚಾರವನ್ನು ಮಾಡುವದಕ್ಕಾಗಿ ತರುಣರ ಒಂದು ಸಂಘಟನೆಯನ್ನೇ ಪ್ರಾರಂಭಿಸಿದರು. 'ಬುದ್ಧಿವಂತರು, ತೇಜಸ್ವಿಗಳು ಆದ ತರುಣರನ್ನು ನೀವು ಕಂಡರೆ ನನ್ನ ಕಡೆಗೆ ಕಳುಹಿಸಿಕೊಡಿ' ಎಂದು ತಮ್ಮ ಶಿಷ್ಯರಿಗೆ ಬೋಧಿಸಿದರು. ಅವರ ದೈವವನ್ನು ತೆರೆಯುವವರು ನಾವು. ಅವರ ಮನಸ್ಸಿನ ಗೊಂದಲವನ್ನೆಲ್ಲ ನಾವು ಕಳೆಯುವೆವು ಅವರಿಗೆ ಧ್ಯೇಯವನ್ನು ತೋರಿಸುವೆವು. ಎಂದು ತೇಜಸ್ವಿ ತರುಣರ ಮನಸ್ಸನ್ನು ತಮ್ಮ ಕಡೆಗೆ ಸೆಳೆದುಕೊಂಡರು. **ಮನಸ್ಸಿಗುಪದೇಶವೆಂಬ** ಗ್ರಂಥವನ್ನು ಬರೆದು ಚಿಕ್ಕ ಚಿಕ್ಕ ಪದ್ಯಗಳನ್ನು ಜನರಲ್ಲಿ ಹರಡಹತ್ತಿದರು. ಸಮರ್ಥರ ಶಿಷ್ಯರು ಈ ಶ್ಲೋಕಗಳನ್ನು ಅನ್ನುತ್ತ, ವೇದ ವಿಚಾರಗಳನ್ನು ಹರಡುತ್ತ ನಾಡಿನಲ್ಲೆಲ್ಲ ಫಕೀರರಂತೆ

ಹಬ್ಬಿದರು. "ನಾವು ಸ್ವತಂತ್ರರಾಗುವಾ, ಸ್ವಲ್ಪು ಸಾಹಸ; ಮಾಡೋಣ ಹೀನ ವಿಚಾರಗಳನ್ನು ತ್ಯಜಿಸೋಣ, ಉಜ್ವಲ ಭವಿಷ್ಯಕ್ಕಾಗಿ ಕಾಯೋಣ" ಎಂಬ ಸಮರ್ಥರ ಸಂದೇಶವನ್ನು ನಾಡಿನಲ್ಲೆಲ್ಲ ಬೀರಿದರು. ಇದರಿಂದ ಪ್ರಚಂಡ ಜಾಗ್ರತಿಯಾಯಿತು. ರಾಷ್ಟ್ರದಲ್ಲಿ ನವಶಕ್ತಿಯ ಸಂಚಾರ ವಾಯಿತು. ಆದರೆ ಈ ಜಾಗ್ರತಿಯನ್ನು ಸ್ವಾತಂತ್ರ್ಯಕ್ಕೆ ಉಪಯೋಗಿಸು ವವರಾರು? ಜನತೆಯ ಆಶಾ ಆಕಾಂಕ್ಷೆಗಳನ್ನು ಪೂರೈಸುವವರಾರು? ಪರಿಸ್ಥಿತಿಯಂತೂ ಪರಿಪಕ್ವವಾಗಿತ್ತು. ಯಾವನಾದರೂ ಒಬ್ಬ ಮಹಾ ಪುರುಷನು ಬರುವನೆಂದು ಎಲ್ಲರಿಗೂ ಅನಿಸಹತ್ತಿತು. ಚಳವಳಿಗಳ ಪ್ರಚಂಡ ತೆರೆಗಳು ಜನತೆಯ ಅಂತಃಕರಣವನ್ನು ಕೆರಳಿಸುತ್ತಿದ್ದವು. ತುಕಾರಾಮರ ಐಕ್ಯದ ಗರ್ಜನೆಯೂ ಸಮರ್ಥರ ಸಂಯಮದ ಸಂದೇಶವೂ ಜನತೆಯನ್ನು ಎಚ್ಚರಿಸುತ್ತಲಿದ್ದಿತು ಕವಿಗಳೂ ಲಾವಣಿಕಾರರೂ ಜನರಲ್ಲಿ ತಮ್ಮ ಕಾವ್ಯ ಗಳಿಂದ ಸ್ಫೂರ್ತಿಯನ್ನು ತುಂಬುತ್ತಿದ್ದರು. ಚಾಲನೆಯನ್ನು ಕೊಡುವ ಪ್ರತಾಪರವಿಯು ಉದಯವಾಗುವನೆಂಬ ಶ್ರದ್ಧೆಯು ಜನತೆಯಲ್ಲಿ ದೃಢ ವಾಗುತ್ತ ನಡೆದಿತ್ತು.

ತೆರೆಗಳಲ್ಲಿಯ ಶುಭ್ರವಾದ ಬುರುಗು ಉತ್ಪನ್ನವಾಗುತ್ತದೆ. ಜನತೆಯ ಹೃದಯದಲ್ಲಿಯ ವೇದನೆಯೆ ಮಹಾಪುರುಷರ ಜನ್ಮಕ್ಕೆ ಕಾರಣವಾಗುತ್ತದೆ. ಯೋಗ್ಯಕಾಲದ ನಿರೀಕ್ಷಣೆಯು ಮಾತ್ರ ಅವಶ್ಯ.

ಶಿವನೇರಿಯಲ್ಲಿ ಶಿವಾಜಿಯು ಜನ್ಮಿಸಿದನು. ೧೬೩೦ರ ಅಕ್ಷಯ ತೃತಿಯೆಯ ದಿನ ಅಕ್ಷಯಕೀರ್ತಿ **ಶಿವಛತ್ರಪತಿಯು** ಅವತರಿಸಿದನು. ಮಾತೆಯಾದ ಜಿಜಾಬಾಯಿಗೆ ದುಃಖದಲ್ಲಿಯೇ ಆನಂದ. ರಾಜಾ ಶಹಾಜಿ ದೂರದಲ್ಲಿದ್ದನು. ಶಹಾಜಿಯು ಆ ಕಾಲದ ಮಹಾಯೋದ್ಧನು. 'ಉತ್ತರ ದಲ್ಲಿ ಶಹಾಜಹಾನನು ದಕ್ಷಿಣದಲ್ಲಿ ಶಹಾಜಿ' ಎಂಬ ಗಾದೆಯು ಮನೆ ಮಾತಾಗಿದ್ದಿತು. ಆ ಕಾಲಕ್ಕೆ ದಿಲ್ಲಿ ಪತಿಯು ಸರದಾರನನ್ನು ಮುಲ್ಹೇರದ ಹತ್ತರ ಹೊಡೆದೋಡಿಸಿ ಚಿಕ್ಕ ಬಾಲಕನಾದ ನಿಜಾಮನನ್ನು ರಕ್ಷಿಸು ತ್ತಿದ್ದನು. ಆವರೆ ಮುಂದೆ ಶಹಾಜಿಯು ವಿಜಾಪುರಕ್ಕೆ ಬಂದನು. ವಿಜಾಪುರದ ರಾಜನು ಶಹಾಜಿಗೆ ಮೊರೆಹೊಕ್ಕನು. ಶಹಾಜಿಯು ದಕ್ಷಿಣದಲ್ಲಿ ವಿಜಾಪುರದ ರಾಜ್ಯವನ್ನು ಬೆಳೆಯಿಸಿದನು. ಸ್ವತಂತ್ರ ಸಾಮ್ರಾಟನಂತೆ

ನಡೆಯುತ್ತ ದೊಡ್ಡ ದೊಡ್ಡ ದರ್ಬಾರಗಳನ್ನು ಕೂಡಿಸುತ್ತ ಕವಿಗಳಿಂದ ಹೊಗಳಿಸಿಕೊಳ್ಳುತ್ತ ಸ್ವತಂತ್ರ ರಾಜನಂತೆಯೆ ಇದ್ದನು. ಆದರೆ ವಿಜಾಪುರದ ಅರಸರ ಅಂಕಿತದಲ್ಲಿಯೆ ಅವನು ಬಾಳುತ್ತಿದ್ದ. ಈಗಲೂ ಕೂಡ ಸ್ವತಂತ್ರ ನಾಗಲು ಬಂಡು ಹೂಡಲು ಸಮರ್ಥನಾಗಿರಲಿಲ್ಲ.

ಆದರೆ ತನ್ನ ಮಗನು ಮಾತ್ರ ಸ್ವತಂತ್ರನಾಗಬೇಕೆಂದು ಅವನಿಗೆ ಅನಿಸುತ್ತಿರಬೇಕು. ಏಕೆಂದರೆ, ಪುಣೆಯ ಹತ್ತಿರವಿರುವ ಜಹಾಗೀರನ್ನು ಬಾಲ ಶಿವಾಜಿಗೆ ಕೊಟ್ಟನು. ದಾದೋಜಿ ಕೊಂಡದೇವನು ಅದರ ವ್ಯವಸ್ಥೆ ನೋಡುವಂತೆ ಮಾಡಿದನು. ಈ ಜಹಾಗೀರಿಯ ಸಲುವಾಗಿ ಶಿವಾಜಿಯ ಹೆಸರಿನಿಂದ ಒಂದು ಮುದ್ರೆಯನ್ನು ಕೊರೆಯಿಸಿ ಅದರಲ್ಲಿ '**ಪ್ರತಿಪಚ್ಚಂದ್ರ ರೇಖೇವ**' ಎಂಬ ಅಕ್ಷರಗಳನ್ನು ಕೆತ್ತಿಸಿದ್ದನು. ಬಿದಿಗಿಯ ಚಂದ್ರನಂತೆ ಶಿವಾಜಿಯ ಕೀರ್ತಿಯು ಹಬ್ಬಲೆಂಬುದೇ ಅವನ ಮನೋಭಿಲಾಷೆ. ಶಿವಾಜಿಯು ಸ್ವತಂತ್ರ ರಾಜನಾದರೆ ಖಂಡೋಬನಿಗೆ ಚಿನ್ನದ ನಾಣ್ಯದಿಂದ ಅಭಿಷೇಕ ಮಾಡಿಸುವೆನೆಂದು ಶಹಾಜಿಯು ಹರಕೆ ಹೊತ್ತಿದ್ದನು. ತಾನು ವಿಜಾಪುರದ ದರಬಾರದಲ್ಲಿಯೇ ಇದ್ದು, ಇತ್ತ ಶಿವಾಜಿಯನ್ನು ಬೆಳೆಯಗೊಡಬೇಕು ಇದರ ಸಂಶಯದ ಗಾಳಿಯೂ ಕೂಡ ಬಾದಶಹನಿಗೆ ಹತ್ತಬಾರದು ಎಂದು ಶಹಾಜಿಯು ಎಣಿಸಿರಬೇಕು. ಶಿವಾಜಿಯ ಶಕ್ತಿಯು ಬೆಳೆದು ಉತ್ತರದಿಂದ ಶಿವಾಜಿಯು ದಕ್ಷಿಣದಿಂದ ತಾನು ದಂಡೆತ್ತಿ ವಿಜಾಪುರವನ್ನು ನಡುವೆಯೇ ಹಿಚುಕಬೇಕೆಂದು ಅವನು ಲೆಕ್ಕ ಹಾಕಿರಬಹುದು. ದಕ್ಷಿಣದಲ್ಲಿಯ ರಾಜ್ಯವನ್ನು ಮುಂದೆ ಶಿವಾಜಿಯ ರಾಜ್ಯಕ್ಕೆ ಕೂಡಿಸಿ, ನರ್ಮದೆಯಿಂದ ಕನ್ಯಾಕುಮಾರಿಯ ವರೆಗೆ ಸ್ವತಂತ್ರ ಮರಾಠಾ ರಾಜ್ಯವನ್ನು ಹಬ್ಬಿಸಬೇಕೆಂಬ ವಿಚಾರವು ಶಹಾಜಿಯ ಮನಸ್ಸಿನಲ್ಲಿ ಇದ್ದಿಲ್ಲವೆಂದು ಯಾರು ಹೇಳಬಲ್ಲರು?

ಏನೇ ಇರಲಿ. ವಿಜಾಪುರದ ದರ್ಬಾರದ ಮಧ್ಯದಲ್ಲಿ ಕುರ್ನಿಸಾತ್ ಮಾಡಲೊಪ್ಪದ, ರಾಜಮಾರ್ಗದಲ್ಲಿ ಗೋವಧೆಮಾಡುವಂಥವರನ್ನು ದಂಡಿಸುವ ಬಾಲವೀರನು ಶಹಾಜಿಯಿಂದ ಬಹು ದೂರದಲ್ಲಿ ಜೀಜಾಬಾಯಿಯ ಪ್ರೇಮದ ಪವಿತ್ರ ತೇಜಸ್ವಿ ಸಾನ್ನಿಧ್ಯದಲ್ಲಿ ಬೆಳೆಯುತ್ತಲಿದ್ದನು. ರಾಮಾಯಣ ಮಹಾಭಾರತದ ಕಥೆಗಳನ್ನು ಆಲಿಸುತ್ತಿದ್ದನು. ಸಮರ್ಥರ ಪ್ರಚಾರಕರ ಸಂದೇಶವನ್ನು ಕುತೂಹಲದಿಂದ ಕೇಳುತ್ತಿದ್ದನು. ಸುತ್ತು

ಸುತ್ತಲಿನ ಪರಿಸ್ಥಿತಿಯನ್ನು ನಿರೀಕ್ಷಿಸುತ್ತಲಿದ್ದನು. ತರುಣ ಮಿತ್ರರೊಡನೆ ಗಂಭೀರವಾಗಿ ಆಲೋಚಿಸುತ್ತಿದ್ದನು. ಬಾಲ ಶಿವಾಜಿಯು ಎದುರಿನಲ್ಲಿ ಸ್ವಾತಂತ್ರ್ಯದ ದಿವ್ಯ ಧ್ಯೇಯವು ಒಡಮೂಡಿತು. ಆದರೆ ಅದನ್ನು ಕೃತಿಯಲ್ಲಿ ತರುವದೆಂತು ? ರಾಮನಿಗೆ ವಾನರರ ಸಹಾಯವಿದ್ದಿತು. ನನಗೆ ಮಾಡುವವ ರಾರು ? ಬಡವರಾದ ಮಾವಳೇ ಜನರು ಮಾಡಬಹುದು ! ಇನಾಮುದಾರರು, ಜಹಾಗೀರದಾರರು, ಜಮೀನದಾರರು ತನಗೆ ಸಹಾಯ ಮಾಡುವದು ಶಕ್ಯ ವಿಲ್ಲೆಂದು ಬಾಲ ಶಿವಾಜಿಯು ಕಂಡುಕೊಂಡನು. ಯಾರಿಗೆ ಉಣ್ಣಲು ಅನ್ನವಿಲ್ಲವೊ ಉಡಲು ಬಟ್ಟೆಯಿಲ್ಲವೊ ಅವರೇ ಮುಂದೆ ಬರುವರು. ಎಲ್ಲಿ ನೋಡಿದಲ್ಲಿ ನಾಡಗೌಡರ, ಗೌಡರ ರಾಜ್ಯ. ಇವರಾದರೊ ಬಾದಶಹರ ಹಂಗಿನಲ್ಲಿರುವವರು ! ಇತ್ತ ಬಡ ಜನರನ್ನು ಸುಲಿಯುವವರು. ರೈತರ ಹೊಲ, ಫಲಭರಿತ ವೃಕ್ಷ, ಹುಲ್ಲು ಇವೆಲ್ಲವುಗಳಲ್ಲಿ ಇವರಿಗೆ ಅರ್ಧಪಾಲು. ಈ ಪರಿಸ್ಥಿತಿಯನ್ನು ಕಂಡು ಶಿವರಾಯನು ಸಂತಾಪಗೊಂಡನು. ವಿಜಾಪುರದ ಬಾದಶಹನ ವಿರುದ್ಧವಾಗಿಯೂ ಈ ನಾಡಗೌಡರ ವಿರುದ್ಧವಾಗಿಯೂ ಬಂಡು ಹೂಡುವದನ್ನು ನಿಶ್ಚಯಿಸಿದನು. ಬಂಡನ್ನು ಹೇಗೆ ಹೂಡಬೇಕು ? ಹಣ ವನ್ನೆಲ್ಲಿಂದ ತರಬೇಕು ? ಶಸ್ತ್ರಾಸ್ತ್ರಗಳನ್ನು ಹೇಗೆ ಸಂಗ್ರಹಿಸಬೇಕು ? ಸೈನ್ಯವನ್ನು ಹೇಗೆ ಕಟ್ಟಬೇಕು, ಇವೇ ಮೊದಲಾದ ಸಮಸ್ಯೆಗಳು ಅವ ನೆದುರಿಗೆ ಇದ್ದವು. ಬಾಲ ಶಿವಾಜಿಯು ತನ್ನ ಸಂಗಡಿಗರೊಡನೆ ಗಂಭೀರವಾಗಿ ಈ ಪ್ರಶ್ನೆಗಳನ್ನು ಚರ್ಚಿಸುತ್ತಿದ್ದನು.

ಶಿವರಾಯನು ಅತ್ಯಂತ ನಿರಹಂಕಾರಿಯು. ಕೃಷ್ಣನು ಗೋಪಾಲ ರೊಡನೆ ಬೆರೆತಂತೆ, ಮಾವಳೇ ಜನರೊಡನೆ ಬೆರೆತು ಆಡುತ್ತಿದ್ದನು. ಗಿರಿಗಳನ್ನು ಏರುವದು, ದರಿ ಕಂದರಗಳನ್ನು ನಿರೀಕ್ಷಿಸುವದು, ಕುದುರೆ ಹತ್ತುವದು ದಾಂಡಪಟ್ಟಾ ಭಾಲೆ ಕತ್ತಿ ಕಠಾರಿಗಳನ್ನು ತಿರುವುವದು ಇದೇ ಅವನ ಆಟ. ತರುಣರ ಸಂಗಡ ಚಿಕ್ಕ ಸಣ್ಣ ಗುಂಪುಗಳನ್ನು ಮಾಡಿ ಹುಸಿ ಯುದ್ಧಗಳನ್ನು ಮಾಡುವದರಲ್ಲಿಯೆ ಅವನಿಗೆ ಆನಂದ. ಹೀಗೆ ಸಮಾನ ವಿಚಾರದ, ಸಮಾನ ಧ್ಯೇಯದ ತರುಣರ ತಂಡವು ಬೆಳೆಯಹತ್ತಿತು. ಪರಸ್ಪರರಲ್ಲಿ ಮಾತು ಕತೆಗಳಾಗಹತ್ತಿದವು. ತಂಡಗಳು ಬೆಳೆಯಹತ್ತಿದವು. ಕಾರ್ಯೋನ್ಮುಖ ರಾಗುವ ಸಮಯವನ್ನು ಕಾಯಹತ್ತಿದರು.

# ಎರಡು ಮಾತುಗಳು

" ಸಾನೆ ಗುರೂಜಿ ಹಾಗೂ ಅವರ ಕೃತಿಗಳು " ಎಂಬ ಈ ಗ್ರಂಥವು ಸಕಾಲಕ್ಕೆ ಪ್ರಕಟವಾಗುತ್ತಿರುವದನ್ನು ಕಂಡು ಸಂತೋಷವಾಗುತ್ತದೆ. ಸಾನೆ ಗುರೂಜಿಯವರ ಸಾದಾ ಜೀವನವೂ ರಾಷ್ಟ್ರೀಯ ವೃತ್ತಿಯೂ ನನ್ನನ್ನು ಮುಗ್ಧಗೊಳಿಸಿದ್ದವು. ಅವರು ತಮ್ಮ ಕಥೆ ಕಾದಂಬರಿಗಳಿಂದಲೂ, ಪ್ರಬಂಧಗಳಿಂದಲೂ ಮಹಾರಾಷ್ಟ್ರವನ್ನೇ ಜಾಗೃತಗೊಳಿಸಿ, ತರುಣರನ್ನೆಲ್ಲ ಕುಣಿಸಿ, ಕುಣಿದು, ಅವರ ಹೃದಯಸಿಂಹಾಸನವನ್ನೇರಿದ್ದಾರೆ. ಅವರ ಲಲಿತ ಹಾಗೂ ರಾಷ್ಟ್ರೀಯ ವಾಙ್ಮಯದ ಪರಿಚಯವು ಕನ್ನಡಿಗರಿಗೆ ಆಗಬೇಕೆಂಬುದೇ ಈ ಪ್ರಕಟನೆಯ ಉದ್ದೇಶ.

ಇದರಲ್ಲಿ ಗುರೂಜಿಯವರ ಚರಿತ್ರೆ, ಕಥೆ, ಕಾದಂಬರಿ, ಕವಿತೆ, ಪ್ರಬಂಧ, ಪತ್ರಲೇಖನ ಮೊದಲಾದವುಗಳನ್ನು ಸಂಗ್ರಹಿಸಿ, ಅವರ ದರ್ಶನವು ಆಗುವಂತೆ ಪ್ರಯತ್ನಿಸಲಾಗಿದೆ.

ಈ ಗ್ರಂಥದ ಕಲ್ಪನೆಯು ಹೊಳೆದುದು ಮಿತ್ರರಾದ ಶ್ರೀ ಲಕ್ಷ್ಮಣರಾವ ಬೇಂದ್ರೆಯವರಿಗೆ. ಅವರ ಹೊಳವನ್ನು ಹಾಕಲು ಸಹಾಯ ನೀಡಿದವರು ಶ್ರೀ. ಗೋಖಲೆ ಭಾಸ್ಕರರಾಯರು. ಅಮ್ಮಳನೇರದ ಶ್ರೀ ಎಂ. ಡಿ. ಪುಸಾಳಕರ ವಕೀಲರು ಈ ಕೃತಿಗಳ ಅನುವಾದ ಮಾಡಲು ಅನುಮತಿ ಕೊಟ್ಟವರು. ಗೆಳೆಯರಾದ ಶ್ರೀ ಕೃ. ಶ್ರೀ. ಬೆಟಗೇರಿ, ಬೆಳಗಾವಿ ರಾಮಚಂದ್ರರಾಯರು, ಗೋಖಲೆ, ನಾರಾಯಣ ಶರ್ಮಾ, ವೆಂಕಟರಾವ ಸವಣೂರ ಗೋವಿಂದರಾವ ಚುಳಕಿ, ನರಸಿಂಹ ದಾಬಡೆ, ಶ್ರೀನಿವಾಸರಾವ ಕುಲಕರ್ಣಿ ಮೊದಲಾದವರು ಅನುವಾದದ ಕಾರ್ಯದಲ್ಲಿ ನೆರವಾಗಿದ್ದಾರೆ.

ಶ್ರೀ. ಹೊಸಕೇರಿ ನಾರಾಯಣಾಚಾರ್ಯ, ಕೇಳಕರ ಬಾಬುರಾಯರೂ ಅನೇಕ ತೊಂದರೆಗಳನ್ನು ಸಹಿಸಿಯೂ ಸಕಾಲಕ್ಕೆ ಒದಗುವಂತೆ ಮುದ್ರಣ ಮಾಡಿಕೊಟ್ಟಿದ್ದಾರೆ. ಈ ಎಲ್ಲರಿಗೂ ನನ್ನ ಅನಂತ ಧನ್ಯವಾದಗಳು.

ಮೊದಲನೇ ಕುಡಿಯು ಹೊರಟು ೪-೫ ತಿಂಗಳಾದರೂ ತಾಳ್ಮೆಯಿಂದ ಬಳ್ಳಿಗೆ ಸಹಾನುಭೂತಿಯನ್ನು ತೋರಿಸಿದ್ದಕ್ಕಾಗಿ, ಚಂದಾದಾರರಿಗೆ ನಾನು ಋಣಿಯಾಗಿದ್ದೇನೆ.

ಈ ಪ್ರಕಟನೆಯಲ್ಲಿ ೧೪ನೆಯ ವರ್ಷದ ೨-೩-೪ನೆಯ ಕುಡಿಗಳು ಅಡಕವಾಗಿವೆ. ಮೊದಲನೆಯ ಕುಡಿಯನ್ನು ಈ ಮೊದಲೇ ಕೊಡಲಾಗಿದೆ.

ಬಳ್ಳಿಯ ಆರ್ಥಿಕಸ್ಥಿತಿಯು ಮಾತ್ರ ಕುಪ್ಪಳಿಸಿದೆ. ಸಹೃದಯರಾದ ಕನ್ನಡಿಗರ ನೆರವಿನಿಂದ ಅದು ಚೇತರಿಸಿಕೊಳ್ಳುವದೆಂದು ನಂಬಿದ್ದೇನೆ. ಅದು ಈಗ ೨-೩ ಸಾವಿರ ರೂ. ಸಾಲದಿಂದ ನರಳುತ್ತಿದೆ. ಎಂದಿನಂತೆ ೧೫ನೆಯ ವರ್ಷದ ಮೊದಲನೆಯ ಕುಡಿಯು ವಿಜಯಾದಶಮಿಗೆ ಪ್ರಕಟವಾಗುವದು.

ಸಾನೆ ಗುರೂಜಿಯವರ ದಿವ್ಯ ಜೀವನವೂ ಅವರ ಸ್ಫೂರ್ತಿಯೂ ಕನ್ನಡಿಗರಲ್ಲಿ ನವಚೈತನ್ಯವನ್ನುಂಟು ಮಾಡಲೆಂದು ಹಾರೈಸುವೆ.

ಧಾರವಾಡ
೧೧-೬-೧೯೫೨

ತಮ್ಮ ಸೇವಕ
**ಬುರ್ಲಿ ಬಿಂದುಮಾಧವ**

# ಪರಿವಿಡಿ



## ಜೀವನ ಪರಿಚಯ



## ಕೃತಿ ಪರಿಚಯ

## ೪. ಸಂಕೀರ್ಣ ವಿಭಾಗ

ಪತ್ರಗಳು :



ವಿಚಾರಸಂಕಲನ :



ಕವನಗಳು :



## ೫. ಕಾದಂಬರಿ



ಶ್ರೀ ಸಾನೆ ಗುರೂಜಿಯವರು

# ಸಾನೆ ಗುರೂಜಿ ಹಾಗೂ ಅವರ ಕೃತಿಗಳು



## ೧

## ಸಾನೆ ಗುರೂಜಿಯವರ ಜೀವನ ಕಥೆ

ಘನಘೋರ ಅರಣ್ಯ. ಹಾವಿನಂತೆ ಹಬ್ಬಿದ ಕಾಲುದಾರಿ. ಎರಡೂ ಬದಿಗೆ ಗೋಡಂಬೆ, ಮಾವು, ಹಲಸು, ಮೊದಲಾದ ಫಲಪುಷ್ಪಗಳಿಂದ ಭರಿತವಾದ ವೃಕ್ಷರಾಜಿ. ಸೂರ್ಯನು ತನ್ನ ಕಿರಣಗಳನ್ನು ಹರಡಲು ವನದೇವತೆಗೆ ಪ್ರಾರ್ಥಿಸಬೇಕಾಗುತ್ತಿದ್ದ ದಟ್ಟಡವಿ. ಸುಪ್ರಭಾತವಾಗುತ್ತಲಿದೆ. ನಿರ್ಮಲವಾದ ಝರಿಗಳು ಧ್ವನಿಗೈಯುತ್ತಲಿವೆ. ಇಂತಹ ಅರಣ್ಯದಲ್ಲಿ ಒಂದು ಎತ್ತಿನ ಗಾಡಿ ಹೋಗುತ್ತಲಿದೆ. ತೊಡೆಯ ಮೇಲೆ ಕೂಸನ್ನೆತ್ತಿಕೊಂಡು ಅದಕ್ಕೆ ಸಕ್ಕರೆಯ ನಿದ್ರೆಯು ಬರಲೆಂದು ತಾಯಿ ಪ್ರೇಮದಿಂದ ತಲೆತಟ್ಟುತ್ತಲಿದ್ದಾಳೆ. ಆಕೆಯು "ಈ ಘೋರಾರಣ್ಯದಲ್ಲಿಯ ನಿರ್ಮಲವಾದ ನೀರಿನ ಧಘೆಧಘೆಗಳ ಧ್ವನಿಯಲ್ಲಿ **ನನ್ನ ಶ್ಯಾಮನ ಜೀವನವು ಜಾಗ್ರತವಾಗಲಿ**" ಎಂದು ಹಾಡುತ್ತ ಆಶೀರ್ವದಿಸುವಾಗ ಶ್ಯಾಮನು ಒಮ್ಮೆಲೇ ಎದ್ದು ಕುಳಿತನು. ಶ್ಯಾಮನ ಅಂತರಾತ್ಮವು ಆಗಲೇ ಜಾಗ್ರತವಾಗಿ ಮೆಲ್ಲಮೆಲ್ಲನೆ ಸ್ವತಃ ತೇಜಸ್ವಿಯಾದುದಲ್ಲದೆ, ಹೋದ ಅರ್ಧ ಶತಮಾನದಲ್ಲಿ ಸಾವಿರಾರು ಜನರ ಅಂತಃಕರಣಗಳನ್ನು ಜಾಗ್ರತಗೊಳಿಸಿತು. ಈ ಶ್ಯಾಮನೇ ಗಾಂಧೀಜಿಯ ಪರಮ ಭಕ್ತ, ಆರ್ತರ ಮಿತ್ರ, ಸ್ತ್ರೀಜೀವನದ ರಹಸ್ಯವನ್ನರಿತು ಅದನ್ನು ವರ್ಣಿಸುವ ಮಹಾಪುರುಷ. ದಲಿತರ ಆಶೆ-ಆಕಾಂಕ್ಷೆಗಳನ್ನು ಎತ್ತಿಹಿಡಿಯುವ ಮಹಾವೀರ. ಕಸಬರಿಗೆ ಹಾಗೂ ಲೆಕ್ಕಣಿಕೆಗಳಿಂದ ಉತ್ಕೃಷ್ಟವಾಗಿ ಜನರ ಅಂತಃಕರಣವನ್ನು ಶುದ್ಧಗೊಳಿಸುವ ಮಹಾಸೇವಕ. ಅಹಂಕಾರವನ್ನಳಿದು ನಮ್ರತೆಯಿಂದ ವರ್ತಿಸುವ ಆಧುನಿಕ ಸಂತ. 'ಅಮೃತಸ್ಯ ಪುತ್ರಾಃ' ಎಂದು

ಆಶೀರ್ವಾದವನ್ನು ಪಡೆದ ಆ ಮಹಾಪುರುಷನೇ **ಪಾಂಡುರಂಗ ಸದಾಶಿವ ಸಾನೆ ಉರ್ಫ ಸಾನೆ ಗುರೂಜಿ.**

ಮೇಲಿನ ಸದ್ಗುಣಗಳೆಲ್ಲ ಹುಟ್ಟಿದಾಗಲೇ ಇರಲಿಲ್ಲ. ಶಂಕರಾಚಾರ್ಯರು ಬಾಲ್ಯದಲ್ಲಿಯೇ ಸಿದ್ಧಪುರುಷರಿದ್ದರಂತೆ. ಜ್ಞಾನೇಶ್ವರರು ಚಿಕ್ಕವರಿರುವಾಗಲೇ ಯೋಗಿರಾಜರಾದರಂತೆ. ಆದರೆ ಈ ನಿಸರ್ಗದತ್ತ ಸಹಜಪ್ರಾಪ್ತವಾದ ದೊಡ್ಡಿಸ್ತನವು ಸಾನೆ ಗುರೂಜಿಯವರಿಗಿರಲಿಲ್ಲ. ಸುಸಂಸ್ಕೃತ ಶ್ರೀಮಂತರ ಮನೆತನದಲ್ಲಿ ಹುಟ್ಟಿದ ಬಾಲಕನಿಗೆ ಇಂತಹ ಸದ್ಗುಣಗಳೂ ಸಾಧುವೃತ್ತಿಯೂ ಒಮ್ಮೊಮ್ಮೆ ಇರಬಹುದು. ಆದರೆ 'ಶ್ರೀಮತಾಂ ಗೇಹೆ' ಬೆಳೆಯುವ ಭಾಗ್ಯವು ಇವರ ಹಣೆಯಬರಹದಲ್ಲಿರಲಿಲ್ಲ. ಗುರೂಜಿಯ ಜನ್ಮವು ಸರದಾರ ಸಾನೆ ಮನೆತನದಲ್ಲಿಯಾದರೂ ಹೆಸರಿಗೆ ಹಾಲಪ್ಪ ಕುಡಿಯಲು ಮಜ್ಜಿಗೆಯಿಲ್ಲ ಎಂಬಂತೆ ಇವರ ಸ್ಥಿತಿಯಿದ್ದಿತು. ಇವರು **ವಡವಲಿ** ಜಹಗೀರದಾರರು (ಖೋತ). ಇವರ ಕೆಲಸವೆಂದರೆ ಊರಿನ ಹಪ್ತೆಯನ್ನು ವಸೂಲ ಮಾಡಿ ಸರಕಾರಕ್ಕೆ ಕಳಿಸುವ ಪಗಾರವಿಲ್ಲದ ದಲಾಲರು. ಈ ವಸೂಲಿಯ ೧/೪ ಭಾಗ ಮಾತ್ರ ಇವರಿಗೆ ದೊರೆಯುತ್ತಿತ್ತು. ಇವರ ಹೊಲಗಳೆಲ್ಲ ಇದೇ ಊರಲ್ಲಿ. ಒಂದು ಸುಂದರವಾದ ತೋಟವೂ ಇದ್ದಿತು. ಎರಡನೆಯವರ ಸುಲಿಗೆಯು ಆ ಕಾಲಕ್ಕೆ ಅಧರ್ಮವಾಗಿರಲಿಲ್ಲ. ಶ್ರೀಯುತ ಸಾನೆಯವರೇ ಒಂದೆಡೆಯಲ್ಲಿ 'ನನ್ನ ತಾಯಿಯ ಮೈಮೇಲಿರುವ ಈ ಆಭರಣಗಳೆಲ್ಲಿಂದ ಬಂದವು? ಅತ್ಯಂತ ತೇಜಸ್ವಿಯಾದ ನತ್ತು ಎಲ್ಲಿಯದು? ಹಳ್ಳಿಯ ಬಡ ಸ್ತ್ರೀಯರ ಮುತ್ತಿನಂತಹ ಕಣ್ಣೀರಿನಿಂದಲೇ ಅದು ಸಿದ್ಧವಾಗಿರಬೇಕು' ಎಂದಿದ್ದಾರೆ.

## ಬ್ಯಾರಿಸ್ಟರನಾಗುವವನಿದ್ದಾನೆ

ಗುರೂಜಿಯವರ ತಂದೆತಾಯಿಗಳ ಮನೆತನಗಳೆರಡೂ ಪಾಲಗಡದಲ್ಲಿ ಇದ್ದವು. ಚಿಕ್ಕಂದಿನಲ್ಲಿ ಈ ಎರಡೂ ಮನೆತನಗಳು ಸುಸಂಪನ್ನವಾಗಿದ್ದವು. ತಾಯಿಯ ಲಗ್ನದ ಸಮಯದಲ್ಲಿ ಆಕೆಯ ಮೈಯ್ಯನ್ನೆಲ್ಲ ಬಂಗಾರದಿಂದ ಮುಚ್ಚಿದ್ದರಂತೆ. ತುಂಬಿದ ಮನೆಯಿಂದ ಗೋಕುಲಕ್ಕೆ ಬಂದಿದ್ದಳು ಈ

ಮಹಾತಾಯಿ ಎಂದು ಹೇಳುತ್ತಾರೆ. ಏನೇ ಇರಲಿ ಗುರೂಜಿಯು ಹುಟ್ಟುವ ಕಾಲಕ್ಕೆ ಸಾನೆಯವರ ಮನೆತನವು ಶ್ರೀಮಂತರದೆಂದು ಪ್ರಸಿದ್ಧಿಯಿತ್ತು. ಇವರ ಮನೆತನವು ಮೊದಲಿನಿಂದಲೂ ಶ್ರದ್ಧಾವಂತ ಹಾಗೂ ಆಚಾರಶೀಲ ಮನೆತನವೆಂದು ಕೊಂಕಣದಲ್ಲಿ ಹೆಸರು ಪಡೆದಿತ್ತು. ಸಾನೆಯವರ ತಂದೆಯಾದ ಸದಾಶಿವರಾಯರು ಶ್ರದ್ಧಾಳಗಳು, ಶಿಸ್ತಿನ ಭಕ್ತರು. ಅವರು ಸ್ವಾಭಿಮಾನಿ ಗಳಿದ್ದು, ಅತ್ಯಂತ ಉದಾರರು. ಅವರ ಮನಸ್ಸು ಪ್ರೇಮಮಯವಾದುದು. ಆದರೆ ಅತ್ಯಂತ ಸಂಯಮಿಗಳು. ಇವರು ೧೭–೧೮ ವರ್ಷದವರಿರುವಾಗಲೇ ಮನೆತನದ ಭಾರವನ್ನು ಹೊರಬೇಕಾಯಿತು. ಆದರೆ ಅಕಸ್ಮಿಕವಾಗಿ ಆರ್ಥಿಕ ಸಂಕಟಕ್ಕೊಳಗಾಗಬೇಕಾಯಿತು. ಬಡತನದ ಬವಣೆಯು ಬಂದರೂ ಸ್ವಾಭಿಮಾನವನ್ನೂ ಮನೆತನದ ಗೌರವವನ್ನೂ ಕಳೆದುಕೊಳ್ಳಲಿಲ್ಲ. ಪರಿಸ್ಥಿತಿ ಯೊಡನೆ ಹೋರಾಡಿದರು. ಗುರೂಜಿಯವರ ತಾಯಿಯ ಹೆಸರು ಯಶೋದಾ. ೧೮೯೯ರಲ್ಲಿ ಪಾಲಗಡದಲ್ಲಿ ಈ ಶ್ಯಾಮನಿಗೆ ಜನ್ಮವಾಯಿತು. ಪಂಢರಿನಾಥ ಎಂದು ಹೆಸರಿಟ್ಟರು. ಚಿಕ್ಕಂದಿನಲ್ಲಿ ಪಂಢರಿಯೆಂದು ಕರೆಯುತ್ತಿದ್ದರು. ಪಂಢರಿಯು ಮಹಾ ಅಭಿಮಾನಿ. ಅಜ್ಜನು ಪಂಡ್ಯಾ ಎಂದು ಒದರಿದೊಡನೆ ಸಿಟ್ಟಿಗೆದ್ದು, ಸಂತಾಪಗೊಂಡು ಉತ್ತರಿಸುತ್ತಿದ್ದನು. ಆಗ ಅಜ್ಜನಿಗೆ 'ನೀನೇನೋ ಪಂಡ್ಯಾ ಎಂದು ಅನ್ನುವಿ, ನಿನಗೆ ಚೆನ್ನಾಗಿ ಕರೆಯಲು ಬರುವ ದಿಲ್ಲವೆ? ಅವನು ಬಹಳ ದೊಡ್ಡವನಾಗುವವನಿರುವನು. ಬ್ಯಾರಿಸ್ಟರನಾಗು ವನು. ಪಂಢರಿನಾಥನಾಗುವನು' ಎಂದು ಉತ್ತರಿಸುವನು. ಗುರೂಜಿಯವರು ಬ್ಯಾರಿಸ್ಟರರಾಗದಿದ್ದರೂ ದೀನ ಹೀನ ಪತಿತರ ಅಂತಃಕರಣವನ್ನು ಸಮಾಜದ ಮುಂದೆ ಮಂಡಿಸುವ ಮಹಾನ್ ಭಕ್ತರಾದರು.

## ತಾಯಿಯೇ ಗುರುವು, ತಾಯಿಯೇ ಕಲ್ಪತರುವು

ಪಂಢರಿಯು ಬೆಳೆಯುತ್ತ ನಡೆದನು. ಅವನ ಹೃದಯವು ಅರಳಹತ್ತಿತು. ಈ ಕಮಲವನ್ನು ಯಾರು ಅರಳಿಸುತ್ತಿದ್ದರು? ಯಾವ ಉಷೆ? ಯಾವ ಪ್ರಭಾತ? ಯಾವ ಮಣ್ಣು? ಯಾವ ಶಕ್ತಿ? ಗುರೂಜಿಯೇ ಒಂದೆಡೆಯಲ್ಲಿ **'ತಾಯಿಯೇ ನನ್ನ ಗುರು, ತಾಯಿಯೇ ನನ್ನ ಕಲ್ಪತರು'** ಎಂದು ವರ್ಣಿಸಿದ್ದಾರೆ.

ಸಾನೆ ಗುರೂಜಿಯವರ ಜೀವನವನ್ನು ಅರಿಯಲಪೇಕ್ಷಿಸುವವರು '-ಶ್ಯಾಮಾಚಿ ಆಯಿ' ಎಂಬ ಅವರ ಕಾದಂಬರಿಯನ್ನು ಪುನಃಪುನಃ ಓದಬೇಕು. ತಾಯಿಯ ಹೃದಯವು ಪ್ರೇಮಮಯವಿದ್ದು, ಮಕ್ಕಳ ಸಲುವಾಗಿ ಬೇಕಾದುದನ್ನು ಮಾಡಲು ಸಿದ್ಧರಿರುವರೆಂಬುದು ಜಗತ್ಪ್ರಸಿದ್ಧವಿದ್ದರೂ ಗುರೂಜಿಯ ತಾಯಿಯು ಅದರಲ್ಲಿಯೂ ವಿಲಕ್ಷಣಳಾದ ಸ್ತ್ರೀರತ್ನವಿರಬೇಕು. ಆಕೆಯ ಮೇಲೆ ಆಕಾಶವೇ ಹರಿದುಬಿದ್ದಿತ್ತು. ಮನೆತನವು ಒಡೆದ ಮೂಲಕ ಒಡತನವು ಬೆನ್ನಟ್ಟಿದ್ದಿತು. ದೊಡ್ಡ ಸಾಲವೂ ಇವರ ಪಾಲಿಗೆ ಬಂದಿತ್ತು. ಆಗಲೇ ಹೊಲವನ್ನು ಮಾರಿದ್ದರೆ ಋಣಮುಕ್ತರಾಗಬಹುದಿತ್ತು. ಆದರೆ ಹೊಲದ ಮೋಹವು ಅದನ್ನು ಮಾರಗೊಡಲಿಲ್ಲ. ಸಾಲವು ಬೆಳೆಯುತ್ತ ನಡೆಯಿತು. ದಾರಿದ್ರ್ಯವು ಮನೆಯನ್ನು ವ್ಯಾಪಿಸಿತು. ಸಾವುಕಾರರ ಕಠಿಣ ವಾದ ನೀತಿಯು ಅಂತಃಕರಣವನ್ನು ಕೊರೆಯುತ್ತಿದ್ದಿತು. ಇಂತಹ ಪ್ರಸಂಗದಲ್ಲಿ ಶ್ಯಾಮನ ತಾಯಿಯು ಸ್ವರ್ಗಸ್ಥಳಾದಳು. ಆದರೆ ಸಾಯುವ ಮೊದಲು ಆಕೆಯು ಮಕ್ಕಳಿಗಾಗಿ ಮಾಡಿದ ಕಾರ್ಯವು ಅಷ್ಟಿಷ್ಟಲ್ಲ. ಮನೆಯಲ್ಲಿ ಹೊಟ್ಟೆತುಂಬ ಅನ್ನವಿಲ್ಲ. ಮೈಮೇಲೆ ಗಟ್ಟಿಯಾದ ಬಟ್ಟೆಗಳಿಲ್ಲ. ಮಕ್ಕಳಿಗೆ ಕಲಿಸಲು ಕೈಯ್ಯಲ್ಲಿ ಹಣವಿಲ್ಲ. ಇಂತಹ ಸ್ಥಿತಿಯಲ್ಲಿದ್ದರೂ ಆ ಮಹಾ ಸಾಧ್ವಿಯು ಎದೆಗುಂದಲಿಲ್ಲ. ತನ್ನ ಮಕ್ಕಳು ಉದಾತ್ತರೂ ಉತ್ಕೃಷ್ಟ ನೀತಿವಂತರೂ ಆಗಬೇಕೆಂಬ ಲವಲವಿಕೆಯಿಂದ ಆಮರಣ ಹೋರಾಡಿದಳು. ಸಾನೆ ಗುರೂಜಿಯಲ್ಲಿರುವ ಸದ್ಗುಣಗಳಿಗೆಲ್ಲ ಅವರ ತಾಯಿಯೇ ಮೂಲ. ಮನುಷ್ಯರ ಮೇಲಷ್ಟೇ ಅಲ್ಲ, ಸರ್ವಭೂತಗಳ ಮೇಲೆಯೂ ಫಲಪುಷ್ಪಗಳ ಮೇಲೆಯೂ ಪ್ರೇಮವನ್ನು ಮಾಡಲು ಕಲಿಸಿದಳು. ತನ್ನ ಮಕ್ಕಳನ್ನು ಪ್ರೀತಿಸುವದೇನೂ ಮಹತ್ವವಲ್ಲ, ಆದರೆ ಎರಡನೆಯವರ ಮಕ್ಕಳನ್ನು ತನ್ನ ಮಕ್ಕಳಂತೆಯೇ ಪ್ರೀತಿಸಬೇಕೆಂಬುದನ್ನು ಆವಳು ಕಲಿಸಿದಳು. ಆಕೆಯ ಪ್ರೇಮದಿಂದ, ಆಕೆಯ ಸ್ನೇಹಮಯ ಕೋಪದಿಂದ, ಆಕೆಯ ಕಣ್ಣೀರುಗಳಿಂದ ಗುರೂಜಿಯ ಮನಸ್ಸು ಅತ್ಯಂತ ಕೋಮಲವೂ ಕರುಣಾಮಯವೂ ಆಗಿದ್ದಿತು. 'ಒಮ್ಮೊಮ್ಮೆ ಸಿಟ್ಟಿಗೆದ್ದು ತಾಯಿಯು ನನ್ನನ್ನು ಹೊಡೆಯುವಳು, ಒಮ್ಮೊಮ್ಮೆ ಪ್ರೇಮದಿಂದ ಆಲಿಂಗಿಸಿ ಮುದ್ದಿಡುವಳು- ಈ ಇಬ್ಬಗೆಯಿಂದ ನನ್ನನ್ನು ಮೂರ್ತಿಯನ್ನಾಗಿಮಾಡಿದಳು' ಎಂದು ಗುರೂಜಿಯವರು ಒಂದೆಡೆ ಉಲ್ಲೇಖಿಸಿದ್ದಾರೆ.

## ಮಣ್ಣಿನ ಮಡಿಕೆಯೇ ಅಮೃತಕಲಶವಾಯಿತು

ಸಾನೆ ಗುರೂಜಿಯವರು ತಾವೇ ತಮ್ಮಷ್ಟಕ್ಕೆ ತಾವು ಮಣ್ಣಿನ ಮುದ್ದೆಯೆಂದು ಒಂದೆಡೆ ಹೇಳಿದ್ದಾರೆ. ಇದರ ಕಾರಣವೇನಿರಬಹುದು? ತಮ್ಮ ಅಪೂರ್ಣತೆಯ ಎಚ್ಚರಿಕೆಯು ಅವರ ಅಂತಃಕರಣವನ್ನು ಕೊರೆಯುತ್ತಿದ್ದಿತು. ಅವರ ಬಾಲ್ಯವು ಹರ್ಷಾಮರ್ಷ ಭಯೋದ್ವೇಗಗಳಿಂದ ತುಂಬಿದೆ. ನಮ್ಮನಿಮ್ಮಂತೆಯೇ ಅವರಿಗೂ ವಾಸನೆಗಳಿದ್ದವು, ದುರ್ಗುಣ ಗಳಿದ್ದವು. ಆದರೆ ಆ ಮೃಣ್ಮಯ ಮೂರ್ತಿಯು ತಾಯಿಯ ಪ್ರೇಮಮಯ ಕೈಗಳಿಂದ ತಿದ್ದಲ್ಪಟ್ಟಿತ್ತು, ಸಂಸ್ಕಾರಗೊಳಿಸಲ್ಪಟ್ಟಿತ್ತು, ಇಚ್ಛಾಶಕ್ತಿಯಿಂದ ಪ್ರಾಣಪ್ರತಿಷ್ಠಾಪನೆ ಮಾಡಲ್ಪಟ್ಟಿತ್ತು. ಸತತ ಸೇವೆಯ ಯಜ್ಞದಿಂದ ಅದು ಸುಡಲ್ಪಟ್ಟಿತ್ತು. ನೂರಾರು ಭಾವನೆಗಳ ಚಿತ್ರವಿಚಿತ್ರ ಬಣ್ಣಗಳಿಂದ ಅದು ಚಿತ್ರಿಸಲ್ಪಟ್ಟಿತ್ತು. ಮತ್ತು ಈ 'ಮೃತ್ತಿಕೆಯ ಕಲಶದಿಂದ' ವಿಶಾಲ ಸಹಾನುಭೂತಿಯ ಸವಿಯಾದ ಸಾಹಿತ್ಯಸುಧೆಯು ತುಂಬಿ ಹೊರಸೂಸಿ ಕಂಠದಿಂದ ಹೊರಬೀಳಹತ್ತಿತು. ಕೊಂಕಣದ ಒಂದು ಮೂಲೆಯಲ್ಲಿಯು ಮಹತ್ವಾಕಾಂಕ್ಷಿ, ಶೀಘ್ರಕೋಪಿ, ಮತ್ಸರಿ, ಹಟವಾದಿಯಾದ ಒಬ್ಬ ತುಂಟನು ಜನ್ಮಕ್ಕೆ ಬಂದನು. ಆದರೆ ಆ ಜೀವನವು ಅದ್ಭುತವಾದ ವಿರಾಟ ವಿಶ್ವಜೀವನದ ದರ್ಶನವನ್ನು ಮಾಡಿಕೊಂಡುದರಿಂದ ವಾಸನೆಗಳೆಲ್ಲ ಕ್ಷಯ ವಾದವು. ರಾಗ, ದ್ವೇಷಗಳು ಈಶ್ವರಾರ್ಪಣೆ ಮಾಡಲ್ಪಟ್ಟವು. ಹಟವಾದವು ಸತ್ಯಾಗ್ರಹದಲ್ಲಿ ರೂಪಾಂತರಿಸಲ್ಪಟ್ಟಿತು. ತುಂಟನೆಂದು ಕಾಣುವ ಬಾಲಕನ ಮುಖದಿಂದಲೇ ಮಹಾರಾಷ್ಟ್ರವನ್ನೇ ಚಕಿತಗೊಳಿಸುವಂಥ ದಿವ್ಯ ವಾಙ್ಮಯ ಪ್ರವಾಹವು ಹೊರಬಿದ್ದು ನಾಲ್ಕೂ ಕಡೆಗೂ ಪಸರಿಸಿತು. ಕೆಸರಿನಲ್ಲಿ ಮಂದ ಸುಗಂಧವನ್ನು ಬೀರುವ ಶತದಲ ಕಮನೀಯ ಕಮಲವು ಪ್ರಕಾಶಿಸಲ್ಪಟ್ಟಿತು.

## ತಾಯಿಯೇ ಜೀವನವಿಕಾಸದ ಪ್ರೇರಕಳು

ಈ ಜೀವನಕಮಲವು ಅರಳಿ ಮಕರಂದವನ್ನು ಬೀರಲು ತಾಯಿಯ ಪ್ರೇರಣೆಯೇ ಕಾರಣ. ಗುರೂಜಿಯು ತಾಯಿಯೊಡನೆ ಪೂರ್ಣ ಸಮರಸನಾದ ಮೂಲಕವೇ ಅವರು ಮಹಾರಾಷ್ಟ್ರದ ಪ್ರೀತಿಯ ಪುತ್ರರಾದರು. ಆ ಮಹಾಸಾಧ್ವಿಯ ಹೃದಯವೆಂದರೆ ಅನೇಕ ಭಾವನೆಗಳಿಂದ ತುಂಬಿದ

ಪ್ರಚಂಡ ಮಹಾಸಾಗರ. ಆಕೆಯ ಅಂತಃಕರಣದ ಕೋಮಲತೆ ಹಾಗೂ ಭಾವನಾಮಯ ಜೀವನಗಳನ್ನು ನಾವು ಕ್ವಚಿತ್ತಾಗಿ ಕೆಲ ಸ್ತ್ರೀಯರಲ್ಲಿ ಕಾಣಬಹುದು. ಪವಿತ್ರ ವಿಚಾರಗಳ ಹಾಗೂ ಉತ್ಕೃಷ್ಟ ಭಾವನೆಗಳ ಅಮೃತಕಲಶವನ್ನೇ ತನ್ನ ಮಕ್ಕಳಿಗಾಗಿ ಆಕೆಯು ಕೊಟ್ಟಳು. ಸ್ವಾವಲಂಬನ, ಪ್ರೇಮ, ಕಷ್ಟಸಹಿಷ್ಣುತೆ, ನಿರಹಂಕಾರವೃತ್ತಿ, ಸ್ವಾರ್ಥತ್ಯಾಗ ಹಾಗೂ ಔದಾರ್ಯಗಳು ಮಕ್ಕಳಲ್ಲಿ ಬೇರೂರುವಂತೆ ಪೌರಾಣಿಕ ಕಥೆಗಳನ್ನು ಹೇಳುತ್ತ ಅವರ ಮನಗಾಣಿಸುತ್ತ ಅವರ ಜೀವನದಲ್ಲಿ ಭದ್ರವಾದ ತಳಹದಿಯನ್ನು ಹಾಕಿದಳು. ಗುರೂಜಿಯು ಸೇವೆಯನ್ನು ಮಾಡುವಾಗ ಯಾವ ಕಾರ್ಯವೂ ತ್ಯಾಜ್ಯವೆಂದು ಎಂದೂ ತಿಳಿಯಲಿಲ್ಲ. ತಾಯಿಯ ಸೀರೆಯನ್ನೊಗೆಯುವಾಗ ಆಕೆಯೊಡನೆ ಬೀಸುವಾಗ ಎಂದೂ ಅವರು ನಾಚಲಿಲ್ಲ. ಆದುದರಿಂದಲೇ ದೊಡ್ಡವರಾದ ಮೇಲೆ ಯಾರ ಸೇವೆಯನ್ನು ಮಾಡಲೂ ಅವರು ಹಿಂದು ಮುಂದು ನೋಡಲಿಲ್ಲ. ದೀನದರಿದ್ರರ, ಹಿಂದುಳಿದವರ, ಕುರುಡ-ಕುಂಟರ, ಸೇವೆಯನ್ನು ಮಾಡಲು ಚಿಕ್ಕಂದಿನಲ್ಲಿಯೇ ಕಲಿಸಿದ ಮೂಲಕ ಹರಿಜನರ ವಿಷಯದಲ್ಲಿ ಅವರ ಅಂತಃಕರಣದಲ್ಲಿ ತಳಮಳವು ಉಂಟಾಯಿತು. ಮನೆಗೆಲಸ ಗಳನ್ನೆಲ್ಲ ತಾಯಿಯೇ ಸ್ವತಃ ಮಾಡುತ್ತಿರುವ ಮೂಲಕ ಬಡವರ ಬಗ್ಗೆ ಅವರಲ್ಲಿ ಕಳವಳ ಉಂಟಾಯಿತು. ಎರಡನೆಯವರ ಮಕ್ಕಳಿಗೆ ಮೊಲೆ ಉಣಿಸುವ ಈ ತಾಯಿಯು ಎಲ್ಲ ಚಿಕ್ಕಮಕ್ಕಳನ್ನು ಹತ್ತಿರ ಕರೆಯಬೇಕು ಎಂಬುದನ್ನು ಕಲಿಸಿದಳು. ಮೊಗ್ಗೆಗಳನ್ನು ಹರಿಯಬೇಡ, ಜುಲುಮೆಯಿಂದ ಮೊಗ್ಗೆ ಅರಳಲಾರವು ಎಂದು ಕಲಿಸಿದ ಮೂಲಕ ಬಾಲಕರ ಶಿಕ್ಷಣದ ಬಗ್ಗೆ ಗುರೂಜಿಯು ವಿಚಾರಪರರಾದರು. ಎಲೆಯನ್ನು ಹಚ್ಚದೆ ಊಟವಿಲ್ಲ. ಈಜಲು ಹೋಗದಿದ್ದರೆ ಶಿಕ್ಷೆಗೆ ಗುರಿಯಾಗುವಿ ಎಂದು ತಾಯಿಯು ಬೆದರಿಸಿದ ಮೂಲಕವೆ ಸ್ವಾವಲಂಬನವು, ನಿರ್ಭಯತೆಯು ಗುರೂಜಿಯಲ್ಲಿ ಉಂಟಾದವು. ಧರ್ಮದ ಆಡಂಬರಕ್ಕಿಂತ ಮೂಕ ಪ್ರಾರ್ಥನೆಯೇ ಮೇಲು ಎಂದು ಅವರ ತಾಯಿಯೇ ಅವರಿಗೆ ಕಲಿಸಿದಳು. ಅಣ್ಣನು ಉಡುಗರೆಯನ್ನು ಕಳಿಸಿದರೆ ಅದರಿಂದ ತನ್ನ ಪತಿದೇವನಿಗೆ ಧೋತರವನ್ನು ಕೊಂಡು ತರುತ್ತಿದ್ದ ತಾಯಿಯ ಈ ಮಾತು ತನಗೆ ಚಿಕ್ಕಂದಿನಲ್ಲಿ ತಿನ್ನಲು ಕೊಟ್ಟ ಹಣದಿಂದ ಬಂಧುವಿಗೆ ಕೋಟನ್ನು ಹೊಲಿಸಲು ಗುರೂಜಿಗೆ ಪ್ರೇರಿಸಿತು. ಅತಿ ಅಚ್ಚಿ

ಮಾಡಿ ಮಕ್ಕಳನ್ನು ಅಡ್ಡದಾರಿಗೆ ಹಚ್ಚುವ ಪ್ರೇಮವು ಅವಳದಲ್ಲ. ಗುರೂಜಿಯು ಶಿಕ್ಷಣಕ್ಕಾಗಿ ಮನೆ ಬಿಡುವೆನೆಂದು ಹೇಳಿದೊಡನೆ 'ಹೋಗಿ ಬಾ' ಎಂದು ಆಶೀರ್ವದಿಸಿದಳು. ದೇವರ ಸಲುವಾಗಿ ಹಾಗೂ ದೇಶದ ಸಲುವಾಗಿ ಎಲ್ಲಿಯೂ ಹೋಗಬಹುದೆಂದಳು. 'ಸ್ವಾತಂತ್ರ್ಯವನ್ನು ದೊರಕಿಸು ವದಕ್ಕಾಗಿ ಸರ್ವ ಆಭರಣಗಳನ್ನು ತೆಗೆದೊಗೆ, ಸ್ವಾತಂತ್ರ್ಯದ ಸೌಂದರ್ಯವೇ ನಿಜವಾದ ಸೌಂದರ್ಯ' ಎಂದು ಒಮ್ಮೆ ಉಪದೇಶಿಸಿದಳಂತೆ. ಆಕೆಯ ಪ್ರೇಮವು ಬಂಧನಕಾರಿಯಾಗಿರಲಿಲ್ಲ, ಸ್ವಾತಂತ್ರ್ಯಪ್ರೇರಕವಾಗಿತ್ತು. ರವೀಂದ್ರನಾಥರು ಒಮ್ಮೆ ತಮ್ಮ ತಾಯಿಗೆ ಮಕ್ಕಳ ಮೇಲೆ ರತ್ನಖಚಿತವಾದ ಹೊದಿಕೆಗಳನ್ನು ಹಾಕಿ ಅವರನ್ನು ಮಳೆ-ಗಾಳಿಗಳಿಗೆ ಹಾಗು ಸೂರ್ಯಪ್ರಕಾಶಕ್ಕೆ ಎರವು ಮಾಡಬೇಡ ಎಂದು ಉಪದೇಶಿಸಿದರಂತೆ. ಈ ಜ್ಞಾನವು ಶ್ಯಾಮನ ತಾಯಿಗೆ ನೈಯುಂಡಿತ್ತು. ಆದುದರಿಂದಲೇ ಗುರೂಜಿಯ ಮನಸ್ಸಿನ ಹಾಗೂ ಶರೀರದ ಬೆಳವಣಿಗೆಯನ್ನು ಉತ್ಕೃಷ್ಟವಾಗಿ ಮಾಡಿದಳು. ಗುರೂಜಿಗೆ ನಿಜವಾದ ಶಿಕ್ಷಣದಾತ್ರಿಯು ತಾಯಿಯೇ.

## ಬಾಲ್ಯದ ಸುಖದುಃಖಗಳು

ತಾಯಿಯ ಕೃಪಾಛತ್ರದಲ್ಲಿ ನಗುತ್ತಲೂ ಅಳುತ್ತಲೂ ಏಳುತ್ತಲೂ ಬೀಳುತ್ತಲೂ ಪಂಢರಿಯು ಬೆಳೆಯುತ್ತ ನಡೆದನು. ಕಡುದಾರಿದ್ರ್ಯದಲ್ಲಿಯೇ ಒಂದು ವಟವೃಕ್ಷವು ವಿಸ್ತಾರವಾಗುತ್ತ ನಡೆಯಿತು. ಪಾಲಗಡದಲ್ಲಿಯೇ ಪ್ರಾಥಮಿಕ ಶಿಕ್ಷಣವಾಯಿತು. ಚಿಕ್ಕತಮ್ಮನಾದ ಯಶವಂತನು ಅಕಸ್ಮಾತ್ತಾಗಿ ಮರಣವನ್ನೈದಿದನು. ಆದರೆ ಗುರೂಜಿಯು ಅವನ ನೆನಪನ್ನು ಎಂದೂ ಮರೆಯಲಿಲ್ಲ. ಚಿಕ್ಕಂದಿನಿಂದ ದೇವರಲ್ಲಿ ಗುರೂಜಿಗೆ ವಿಶ್ವಾಸ ಬಹಳ. ಶ್ರೀರಾಮನ ನಿಸ್ಸೀಮ ಭಕ್ತ. ಅವನ ಭಜನೆಯನ್ನು ಮಾಡುತ್ತಿದ್ದರು. ಮೂರ್ತಿಯನ್ನು ಪೂಜಿಸುತ್ತಿದ್ದರು. ಭಕ್ತಿಪೂರ್ವಕವಾಗಿ ಸ್ತೋತ್ರಗಳನ್ನು ಅನ್ನುತ್ತಿದ್ದರು. ಮುಂದೆಮುಂದೆ ಮೂರ್ತಿಪೂಜೆಯು ಬದಲು ಅಂತರ್ಯಾಮಿಯಾದ ಪರಮಾತ್ಮನ ಚಿದಂಶವನ್ನೀಕ್ಷಿಸುವ ದೃಷ್ಟಿಯು ಬೆಳೆಯುತ್ತ ನಡೆಯಿತು.

೧೧ನೆಯ ವರ್ಷ ಗುರೂಜಿಯು ಅಭ್ಯಾಸಕ್ಕೆಂದು ಪುಣೆಯಲ್ಲಿದ್ದ ಮಾವನ ಮನೆಗೆ ಹೋದರು. ಮಾವಂದಿರಾದ ಪರಚುರೆಯವರು ಶೀಘ್ರ

ಕೋಪಿಗಳೂ ಶಿಸ್ತು ಉಳ್ಳವರೂ ಪ್ರೇಮುಲ ಸ್ವಭಾವದವರೂ ಇದ್ದರು. ಗುರೂಜಿಯ ಶಿಕ್ಷಣವು ಮನೆಯಲ್ಲಿಯೇ ನಡೆಯಬೇಕೆಂದು ಅವರ ಅಪೇಕ್ಷೆ. ಆದಕ್ಕಾಗಿ ಅವರು ಬಹಳ ಪ್ರಯತ್ನಪಟ್ಟರು. ಅವರ ನೆರೆಯಲ್ಲಿರುವ ಮಾಧವರಾವ ಎಂಬ ಅವರ ಮಿತ್ರರು ಅತ್ಯಂತ ಪ್ರೇಮದಿಂದ ಗುರೂಜಿಗೆ ಕಲಿಸಹತ್ತಿದರು. ಮಾವನ ಸಿಟ್ಟು-ಸಂತಾಪಗಳಿಗೆ ಪಾಂಡುರಂಗನು ಬೇಸತ್ತ. ಅಭ್ಯಾಸವನ್ನು ತಪ್ಪಿಸುವದಕ್ಕಾಗಿ ಅವನು ಪ್ರಯತ್ನಿಸುತ್ತಿದ್ದ. ಆದರೂ ಹಳೆಯ ಗ್ರಂಥಗಳ ವಾಚನ, ಕವಿತೆಗಳನ್ನು ಪಾಠ ಮಾಡೋಣ ಮೊದಲಾದ ಅಭ್ಯಾಸವು ಬಹಳ ನಡೆಯಿತು. ಚಿಕ್ಕಂದಿನಲ್ಲಿ ಗುರೂಜಿಯ ಕಣ್ಣುಗಳು ಕೆಟ್ಟವು. ಗುರೂಜಿಯು ಎಲ್ಲಿ ಕುರುಡನಾಗುವನೋ ಎಂದು ಮನೆಯವರೆಲ್ಲ ಚಿಂತಿಸಹತ್ತಿದರು. ಡಾಕ್ಟರರ ಪ್ರಯತ್ನದಿಂದ ಚೆನ್ನಾಯಿತು. ಆದರೆ ಒಂದು ಕಣ್ಣು ಮಾತ್ರ ಅದುವಾಗಿಯೇ ಉಳಿಯಿತು. ಆದರೆ ಗುರೂಜಿಯ ಅಂತಃ-ಚಕ್ಷುವು ತೆರೆಯುತ್ತ ನಡೆಯಿತು. ಗುರೂಜಿಗೆ ಅಹಮ್ಮದನೆಂಬ ಒಬ್ಬ ಮುಸಲ್ಮಾನ ಮಿತ್ರನು ದೊರಕಿದನು. ಅವರಿಬ್ಬರ ಪ್ರೇಮವು ಆತ್ಮ ಒಂದೇ ದೇಹ ಮಾತ್ರ ಭಿನ್ನವೆನ್ನುವಷ್ಟರ ವರೆಗೆ ಬೆಳೆಯಿತು. ಇದನ್ನು ಕಂಡು ಮಾವನು ಗಾಬರಿಯಾಗಿ ಪಂಢರಿಯನ್ನು ಶಾಲೆಗೆ ಕಳಿಸುವದನ್ನೇ ಬಿಟ್ಟನು. ಪಂಢರಿಯು ಪಾಲಗಡಕ್ಕೆ ಮರಳಿ ಬಂದು ಪುನಃ ಮರಾಠಿ ಕಲಿಯಹತ್ತಿದನು. ಶಾಲೆಯ ಪರೀಕ್ಷೆಗೆಂದು ಬಂದ 'ಖರೇ' ಎಂಬ ಸದ್ಗೃಹಸ್ಥರು ಪಂಢರಿಯ ಉತ್ತರಗಳನ್ನು ಕೇಳಿ ಸಂತೋಷಪಟ್ಟು, ಶಿಕ್ಷಣಾರ್ಥವಾಗಿ ಅವನನ್ನು ತಮ್ಮೊಡನೆ ಕರೆದುಕೊಂಡು ಹೋಗುವೆನೆಂದರು. ಆದರೆ ತಂದೆತಾಯಿಗಳು ಒಪ್ಪಲಿಲ್ಲ. ಎಲ್ಲಿ ಆವನು ಕಳವು ಮಾಡಲು ಕಲಿಯುವನೋ ಎಂಬ ಭೀತಿ ಬಾಧಿಸಿ ಶ್ರೀಮಂತರ ಮನೆಯಲ್ಲಿ ಇರುವದೇ ಬೇಡವೆಂದು ಹೇಳಿದರು. ಆದರೆ ಮಾವನ ಮನೆಗೆ ಪುನಃ ಕಳಿಸಲ್ಪಟ್ಟನು. ಮಾವನಿರುವ ವಾಡೆಯಲ್ಲಿ ಜನಾರ್ದನನೆಂಬ ಹುಡುಗನು ಗೆಳೆಯನಾದನು. ಅವರಿಬ್ಬರೂ ಕೂಡಿ ತೋಟ ಕಾಯುವವನ ಕಣ್ಣು ತಪ್ಪಿಸಿ ಪೇರಲಹಣ್ಣುಗಳನ್ನು ಕದಿಯಹತ್ತಿದರು. ಚಿಕ್ಕವನೆಂದು ಆ ಮಾಳಿಯು ಅವರನ್ನು ಬಿಟ್ಟನು. ಮಾವನ ಮನೆಯಲ್ಲಿಯ ಗುರೂಜಿಯ ಮುಖ್ಯ ಹೋರೆಯೆಂದರೆ ಮಾವನ ಮಗಳಾದ ಯಶೋದೆಯನ್ನು ಆಡಿಸುವದು. ಗುರೂಜಿಯನ್ನು ಕಂಡೊಡನೆಯೇ ಆ ಹುಡುಗಿಯು ಅಳುವ

ದನ್ನು ಬಿಟ್ಟು ನಗುತ್ತಿದ್ದಿತು. ಆದರೆ ಇದೇ ಕೆಲಸವು ಬೆನ್ನುಹತ್ತಿದೊಡನೆ ಪಂಢರಿಯು ಆ ಹುಡುಗಿಯನ್ನು ಚಿವುಟಿ ಅಳಿಸುತ್ತಿದ್ದನು. ಮಾವನ ಮನೆಗೆ ಪಂಢರಿಯು ಬೇಸತ್ತನು. ಆದರೆ ಬಿಡುಗಡೆಯ ಮಾರ್ಗವೇನೂ ತೋಚಲೊಲ್ಲದು. ಪುಸ್ತಕದಲ್ಲಿಟ್ಟಿದ್ದ ಒಂದೂವರೆ ರೂಪಾಯಿಯನ್ನು ಎಬ್ಬಿಸಿ ಮುಂಬಯಿಗೆ ಪಲಾಯನ ಮಾಡಿ ದೊಡ್ಡ ಮಾವನ ಕಡೆಗೆ ಹೋದನು. ಪುಣೆಯ ಮಾವನು ಮುಂಬಯಿಗೆ ತಂತಿಯನ್ನು ಕೊಟ್ಟನು. ಮುಂಬಯಿ ಯಿಂದ ಪುಣೆಗೆ ಮರಳಿ ಬರಬೇಕಾಯಿತು. ಪಂಢರಿಯು ಅತ್ಯಂತ ನಿರಾಶನಾಗಿ ಬೇಸತ್ತು ಜೀವನವನ್ನು ಕಳೆಯಹತ್ತಿದನು. ಆ ವಾಡೆಯಲ್ಲಿ ಸ್ತ್ರೀಸಮಾಜವು ದೊಡ್ಡದಿತ್ತು. ಪಂಢರಿಗೆ ನೂರಾರು ಕವಿತೆಗಳು ಬಾಯಿಪಾಠವಾಗಿದ್ದವು. ಆರ್ಯಾ ಹಾಗೂ ಶ್ಲೋಕಗಳು ಅವನ ನಾಲಿಗೆಯ ಮೇಲೆ ಕುಣಿಯುತ್ತಿದ್ದವು. ಕಥೆ ಹೇಳುವ ಕಲೆಯಲ್ಲಿ ಅವನು ಒಳ್ಳೇ ಹೆಸರು ಪಡೆದಿದ್ದನು. ಎಲ್ಲ ಹೆಣ್ಣುಮಕ್ಕಳಿಗೂ ಅವನು ಅತ್ಯಂತ ಪ್ರಿಯನಾಗಿದ್ದನು. ಎಲ್ಲರೂ ಇವನನ್ನು ಕೌತುಕದಿಂದ ನೋಡುತ್ತಿದ್ದರು. ಮಾಣಿಕಳೆಂಬ ಒಬ್ಬ ಅತ್ತೆಯ ಮನೆಯ ಸೊಸೆಯು ಪಂಢರಿಯ ಮನಸ್ಸಿನ ಮೇಲೆ ಬಹಳ ಆಳವಾದ, ಗಂಭೀರವಾದ ಪರಿಣಾಮವನ್ನುಂಟುಮಾಡಿದಳು. ಆಕೆಯ ಮೇಲೆ ನಡೆಯುವ ಅಸನ್ವಿತ ಛಲವನ್ನು ಕಂಡು ಮರುಗುತ್ತಿದ್ದನು. ಕುಳಿತಲ್ಲಿಯೇ ಮಲಮೂತ್ರಗಳನ್ನು ಮಾಡಿ ಅವುಗಳನ್ನು ತೆಗೆಯಲು ಹಚ್ಚುತ್ತಿದ್ದ ತುಂಟಗಂಡನನ್ನು ಕಂಡು, ಹಲ್ಲು ಕಡಿಯುತ್ತಿದ್ದನು. ಇಂತಹ ಛಲದಿಂದ ಕಣ್ಣೀರಿಡುವ ಮಾಣಿಕಳಿಗೆ ತಂದೆಯ ಸ್ಥಾನದಲ್ಲಿ ಪಂಢರಿಯಾದನು. ಪಂಢರಿಯ ಮುಂದೆ ಆಕೆಯು ತನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದಳು. ಅದನ್ನು ಕೇಳಿ ಪಂಢರಿಯು ಅವಳೊಡನೆ ತಾನೂ ಅಳುತ್ತಿದ್ದನು. ಅಲ್ಪಾವಧಿಯಲ್ಲಿಯೇ ಆಕೆಯು ದುಃಖಪಡುತ್ತ ಮರಣವನ್ನೈದಿದಳು. ಇದರಿಂದ ಸಾನೆ ಗುರೂಜಿಯ ಅಂತಃಕರುಣದಲ್ಲಿ ಪ್ರತಿಯೊಬ್ಬ ಸೊಸೆಯರ ವಿಷಯಕ್ಕೆ ಅಪಾರವಾದ ಕರುಣವು ನಿರ್ಮಾಣವಾಯಿತು.

ಪುಣೆಯ ಜೀವನವು ಪಂಢರಿಗೆ ಬಹಳ ಬೇಸರವಾಯಿತು. ಪಂಢರಿಯ ವೇದನೆಯನ್ನು ಮಾವನು ತಿಳಿದನು. ಅವನನ್ನು ಮರಳಿ ಪಾಲಗಡಕ್ಕೆ ಕಳಿಸಿಕೊಟ್ಟನು.

## ಚಕಮಕಿಯಿಂದಲೇ ಕಿಡಿಯು ಹೊರಬೀಳುವದು

ಪಂಢರಿಯು ಪಾಲಗಡಕ್ಕೆ ಮರಳುವಷ್ಟರಲ್ಲಿ ಒಬ್ಬಳೇ ಒಬ್ಬಳಾದ ಅಕ್ಕನು ವಿಷಮಜ್ವರದಿಂದ ಬಳಲುತ್ತಿದ್ದಳು. ವೈದ್ಯರೆಲ್ಲ ಕೈಯೂರಿದ್ದರು. ಗುರೂಜಿ ಹಾಗೂ ಅವರ ಅಜ್ಜ ವೈದ್ಯಕಗ್ರಂಥಗಳನ್ನು ನೋಡಿ ಔಷಧದ ಯೋಜನೆ ಮಾಡಿದರು. ದೇವರ ಅನುಗ್ರಹದಿಂದ ಆಕೆಗೆ ಗುಣವಾಯಿತು. ಈ ಸೇವೆಯ ಸಮಯದಲ್ಲಿ ಒಂದು ಮಹತ್ವದ ಸಂಗತಿಯು ಸಂಭವಿಸಿತು. ಅಕ್ಕನ ಕೂಸನ್ನು ಆಡಿಸುವ ಹೊಣೆಯು, ಪಂಢರಿಯ ಮೇಲೆ ಬಿದ್ದಿತು. ಪಂಢರಿಯು ಆಲಸ್ಯದಿಂದ ಬೇಸರಿಯುತ್ತಿದ್ದ. ಮನೆಗೆಲಸದಿಂದ ಕಂಗೆಟ್ಟ ಶುಶ್ರೂಷೆ ಮಾಡಿಮಾಡಿದಣಿದು ಬೇಸತ್ತ ತಾಯಿಯು, 'ಗುಣಿಯಾದ ಈಕೆಯು ಇಷ್ಟು ನರಳುತ್ತಿರುವಾಗ.........ಅದಕ್ಕಿಂತ ಈ ಖೋಡಿಯು ಯಾಕೆ ಸಾಯಲೊಲ್ಲದು ? ನಮ್ಮನ್ನು ಉರಿಸಲಿಕ್ಕೆ ಉಳಿದಿದೆ.' ತಾಯಿಯ ಈ ಕರ್ಣಕಠೋರ ಮಾತುಗಳನ್ನು ಕೇಳಿ ಪಂಢರಿಯು ಪುನಃ ಜಾಗ್ರತನಾದ. 'ಗುಣಿಯಾದ ಮನುಷ್ಯನೇ ಜಗತ್ತಿಗೆ ಬೇಕು, ಬೇಕೆನಿಸುತ್ತಾನೆ' ಎಂಬುದನ್ನು ಅರಿತನು. ಗುಣಹೀನವಾದ ಒರಟುಜೀವನದ ಉಪಯೋಗವೇನು ? ಈ ಬಗೆಗೆ ಗುರೂಜಿಯು ಅನ್ನುವದೇನೆಂದರೆ, "ಯಾಕೆ ಬದುಕಬೇಕೆಂಬುದನ್ನು ನಾನು ತಿಳಿದೆ. ಚಕಮಕಿಯಾಗದೆ ಕಿಡಿಯು ಹೊರಬೀಳಲಾರದು. ನನ್ನ ಆಯುಷ್ಯದಲ್ಲಿ ಈ ಕಿಡಿಯು ಹಾರಿತು. ತೇಜವು ಹೊರಟಿತು. ಬೆಳಕು ಕಂಡಿತು. ಈ ಸಂಸ್ಕಾರವು ನನ್ನ ಮನಸ್ಸಿನ ಮೇಲೆ ಆಳವಾದ ಪರಿಣಾಮವನ್ನುಂಟು ಮಾಡಿತು."

## ಜೀವನದ ಬುತ್ತೀಗಂಟು

೧೯೧೮ರಲ್ಲಿ ಗುರೂಜಿಯು ದಾಪೋಲಿಯ ಹೈಸ್ಕೂಲಿಗೆ ಕಳಿಸಲ್ಪಟ್ಟರು. ಅಲ್ಲಿ ಸೋದರತ್ತೆಯ ಮನೆಯಲ್ಲಿರಹತ್ತಿದರು. ಮನೆಗೆಲಸವೆಲ್ಲವೂ ಇವರ ಪಾಲಿಗೆ ಬಂದಿತು. ಬಹಳ ಕಷ್ಟಮಯ ಜೀವನವನ್ನು ಕಳೆಯಬೇಕಾಗುತ್ತಿತ್ತು. ಎಷ್ಟೋ ಸಲ ಗೊಡ್ಡುಸಾರು ಅನ್ನಗಳೇ ಇವರ ಮುಖ್ಯ ಆಹಾರವಾಗುತ್ತಿತ್ತು. ಆದರೆ ಶಾಲೆಯ ಜೀವನವು ಮಾತ್ರ ಬಹಳ ಆನಂದವನ್ನೀಯುತ್ತಿತ್ತು. ಉತ್ತಮ ಶಿಕ್ಷಕರು, ಜೀವಕ್ಕೆ ಜೀವ ಕೊಡುವ ಗೆಳೆಯರು ದೊರೆತರು.

ಅಲ್ಪಸ್ವಲ್ಪ ಸ್ವಾತಂತ್ರ್ಯವೂ ದೊರೆತುದರಿಂದ ಗೆಳೆಯರ ಸಹವಾಸದಲ್ಲಿ ಶಿಕ್ಷಕರ ಉತ್ತೇಜಕ, ಧನ್ಯೋದ್ಗಾರಗಳನ್ನು ಪಡೆಯುತ್ತ ಪಂಢರಿಯ ಮನಸ್ಸು ವಿಕಾಸವನ್ನು ಹೊಂದಹತ್ತಿತು. ಮುಂದಿನ ಆಯುಷ್ಯದ ಬುತ್ತೀಗಂಟು ಕಟ್ಟಲ್ಪಡಹತ್ತಿತು. 'ರಾಧಾರಮಣ'ರೆಂಬ ಪ್ರಸಿದ್ಧ ಕವಿಗಳು ಸಂಸ್ಕೃತವನ್ನು ಕಲಿಸುತ್ತಿದ್ದರು. ಕರ್ತೃತ್ವಶಾಲಿಗಳೂ ವಿದ್ವಾಂಸರೂ ಆದ ಶಿಕ್ಷಕರು ಗುರೂಜಿಗೆ ಲಭಿಸಿದರು. ಗುರೂಜಿಯ ಇತಿಹಾಸದ ಅಭ್ಯಾಸವು ಬೆಳೆಯಿತು. ಸಂಸ್ಕೃತದ ಅನೇಕ ಕಾವ್ಯಗಳನ್ನು ಮುಗಿಸಿದರು. ಮೊದಲಿನಿಂದಲೂ ಗುರೂಜಿಯ ಸ್ಮರಣಶಕ್ತಿಯು ವಿಲಕ್ಷಣವಾಗಿತ್ತು. ಒಮ್ಮೆ ಓದಿದರೆ ಸಾಕು. ಬಾಯಿಪಾಠವಾಗುತ್ತಿತ್ತು. ಬೆಳೆಯುವ ವಯಸ್ಸಿನೊಡನೆ—ಸಮಸ್ಯೆಗಳು ಹೆಚ್ಚಾದವು. ಕಾವ್ಯಶಕ್ತಿಯು ಅರಳಹತ್ತಿತು. ಶಾಮನ ಆಯುಷ್ಯದಲ್ಲಿ ಇದು ವಸಂತಕಾಲ. ಅವರ ಪರಮಮಿತ್ರರಾದ 'ರಾಮು, ರಾ. ಕೆ. ಜೋಸಿ, ಇಲ್ಲಿಯೇ ಶಿಕ್ಷಕರಾಗಿದ್ದರು. ಅವರಿಗೆ ಕಾವ್ಯಮಯ ಪತ್ರಗಳನ್ನು ಬರೆಯಹತ್ತಿದರು. ವಕ್ತೃತ್ವವು ಸ್ಫುರಣಗೊಂಡಿತು. ಬರೆಹಕ್ಕೆ ಕಳೆಯೇರಿತು. ಶಬ್ದಭಾಂಡಾರವು ಬೆಳೆಯಹತ್ತಿತು. 'ಇಲ್ಲಿಯೇ ನನ್ನ ಬುದ್ಧಿಯ ಹಾಗೂ ಹೃದಯದ ವಿಕಾಸವಾಯಿತು' ಎಂದು ಗುರೂಜಿಯು ಒಂದೆಡೆ ಬರೆಯುತ್ತಾರೆ. ಗುರೂಜಿ ಹಾಗೂ ಅವರ ಗೆಳೆಯರು ಶಿಕ್ಷಕರನ್ನು ಅನೇಕ ಸಲ ಕಾಡುತ್ತಿದ್ದರು. ಅವರಿಂದ ಅನೇಕ ಸಲ ಏಟುಗಳನ್ನೂ ತಿನ್ನುತ್ತಿದ್ದರು. ಆದರೆ ಎಲ್ಲ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಪ್ರೇಮವು ಶ್ಯಾಮನ ಮೇಲೆ ಮೆಲ್ಲಮೆಲ್ಲನೆ ಬೆಳೆಯುತ್ತ ನಡೆಯಿತು.

## 'ಧ್ರುವನ ಹಾಗೆ ಹೋಗು'

ಇತ್ತ ಮನೆಯ ಆರ್ಥಿಕ ಪರಿಸ್ಥಿತಿಯು ಹದಗೆಡುತ್ತ ನಡೆಯಿತು. ಸಾಲ ಮಿತಿಮೀರಿ ಬೆಳೆದು, ಶಿಕ್ಷಣಕ್ಕೆ ಸಹಾಯಮಾಡಲು ಹಿರಿಯರು ಅಸಮರ್ಥರಾದರು. ದೊಡ್ಡ ಮನೆತನದವರಾದುದರಿಂದ ಮಾಫಿ ಮಾಡಿರೆಂದು ಕೇಳಲು ನಾಚಹತ್ತಿದರು. ಗುರೂಜಿಯು ದಾಪೋಲಿಗೆ ಶರಣುಹೊಡೆಯುವ ನಿಶ್ಚಯವನ್ನು ಮಾಡಿದರು. ಔಂಧದಲ್ಲಿ ಕೆಲವು ಗೆಳೆಯರಿದ್ದರು. ಅವರ ಸಹಾಯದ ಮೇಲೆ ವಿಶ್ವಾಸವಿಟ್ಟು ಗುರೂಜಿಯು ಕೊಂಕಣವನ್ನು ಬಿಟ್ಟರು.

ಇಲ್ಲಿಂದಲೇ ಗುರೂಜಿಯ ಕಷ್ಟತರ ಪ್ರವಾಸವು ಪ್ರಾರಂಭವಾಯಿತೆಂದು ಹೇಳಬಹುದು. ದಾಪೋಲಿಯಲ್ಲಿರುವ ವರೆಗೆ, ಪಂಢರಿಯು ಪ್ರತಿ ಶನಿವಾರ ಶಾಲೆ ಬಿಟ್ಟೊಡನೆ, ಮಧ್ಯಾನ್ಹದ ಬಿಸಿಲಿನಲ್ಲಿ ೧೫ ಮೈಲು ನಡೆಯುತ್ತ ಪಾಲಗಡಕ್ಕೆ ಬರುತ್ತಿದ್ದನು. ಸೋಮವಾರದ ವರೆಗೆ ತಾಯಿಯ ಪ್ರೇಮಾದರದ ಸಂತೋಷದಲ್ಲಿ ಕಾಲ ಕಳೆದು ಶಾಲೆಗೆ ಬರುತ್ತಿದ್ದನು. ಔಂಧದಲ್ಲಿ ತಾಯಿಯು ಹೇಗೆ ದೊರೆಯಬೇಕು ? ತಾಯಿಗೆ ಶ್ಯಾಮನ ಭೆಟ್ಟಿಯು ಎಲ್ಲಿಯಾಗಬೇಕು ? ಆದರೆ ಈ ಮೋಹವು ತಾಯಿಗೆ ರುಚಿಸಲಿಲ್ಲ. 'ಧ್ರುವನಂತೆ ಹೋಗಿ ಬಾ' ಎಂದಳು. "ಹೊರಗಿನ ಜೀವನಸಮುದ್ರದಲ್ಲಿ ಸಾಯಬಹುದು, ಮುಳುಗಬಹುದು! ನೀರಲ್ಲಿ ಮುಳುಗಿ ಮುತ್ತುಗಳನ್ನೂ ತೆಗೆಯಬಹುದು! ಮೋಸ ಹೋಗಬಹುದು! ಪಾರಾಗಲೂ ಬಹುದು! ಎಲ್ಲವೂ ಅನಿಶ್ಚಿತ! ಮಗನಿಗೆ ಈಸಲು ಕಲಿಸಿ ತಾಯಿಯು ಅಪಾರವಾದ ಸಮುದ್ರದಲ್ಲಿ ಬಿಟ್ಟು ಬಿಟ್ಟಳು. 'ಧ್ರುವನಂತೆ ಹೋಗು' ಎಂದಳು. ತೇಜಸ್ವಿಯಾದ, ನಿಶ್ಚಯದ ಮೇರುವಾದ ಪರಮಪವಿತ್ರನಾದ ಧ್ರುವನೆಲ್ಲಿ? ಸುಂಬಳಬುರುಕ, ಮೇಲಿಂದ ಮೇಲೆ ತಪ್ಪುಮಾಡುವ, ಎಡವುವಂತಹ, ಚಂಚಲವೃತ್ತಿಯ ಶ್ಯಾಮನೆಲ್ಲಿ ?" ಎಂದು ಗುರೂಜಿಯು ಒಂದೆಡೆ ಚಿತ್ರಿಸಿದ್ದಾರೆ.

ಹೆಜ್ಜೆಹೆಜ್ಜೆಗೆ ತಪ್ಪುವ ಶ್ಯಾಮನೇ ನಿರ್ದೋಷಸತ್ವದ ಕಡೆಗೆ ನಡೆಯ ತೊಡಗಿದ್ದನು. ಪ್ರತಿಕ್ಷಣಕ್ಕೆ ಜಾರುವ ಶ್ಯಾಮನೇ ದೊಡ್ಡವನಾಗುತ್ತ ನಡೆದಿದ್ದ. ಅವನ ಚಂಚಲತ್ವವು ಮಾಯವಾಗಿ, ಪರಮಕಾರುಣಿಕನಾಗ ಹತ್ತಿದ್ದ. ಗುರೂಜಿಯು ಕೆಸರಲ್ಲಿ ಹೂತರು. ಉಸುಬಿನಲ್ಲಿ ಸಿಕ್ಕರು. ತೆರೆಗಳಲ್ಲಿ ಮುಳುಗಿದರು. ಆದರೆ, ತಾಯಿಯ ಕೃಪೆಯಿಂದ ಮುಳುಗುವಾಗ ತೇಲಿದರು. ಸಾಯುವಾಗ ಬದುಕಿದರು. ಬೀಳುವಾಗ ಎದ್ದರು.

## ಔಂಧದಲ್ಲಿಯ ಕಷ್ಟದ ಜೀವನ

ದಾಪೋಲಿಯಿಂದ ಔಂಧಕ್ಕೆ ರಹಿಮತ್‌ಪುರದ ಮೇಲೆ ಎತ್ತಿನ ಗಾಡಿಯಲ್ಲಿ ಹೋಗಬೇಕಾಗುತ್ತದೆ. ಗಾಡಿ ಹೊಡೆಯುವವನು ಬಹಳ ಮೃದುಸ್ವಭಾವದವನಿದ್ದ. ಗುರೂಜಿಯು ಅವನು ಕೊಟ್ಟ ಚಟ್ನಬಕ್ಕರಿಯನ್ನು

ಆನಂದದಿಂದ ತಿಂದರು. ಮೊದಲಿನಿಂದಲೂ ಗುರೂಜಿಯು ಸುಧಾರಕರಿದ್ದರು. ಸ್ಪೃಶ್ಯಾಸ್ಪೃಶ್ಯ, ಭೇದಾಭೇದಗಳು ಗುರೂಜಿಗೆ ರುಚಿಸುತ್ತಿರಲಿಲ್ಲ. ಜಾತಿ-ಭೇದವಂತೂ ಬಹಳೇ ದೂರ ಉಳಿಯಿತು. ದಾಪೋಲಿಯಲ್ಲಿ ಅತ್ತೆಯಾದರೂ ಇದ್ದಳು. ಇಲ್ಲಿ ಯಾರು? ತಾಯಿಯೂ ಇಲ್ಲ, ಅತ್ತೆಯೂ ಇಲ್ಲ. ಇದ್ದ ಹೆಣ್ಣುಮಕ್ಕಳೆಲ್ಲ ಅಕ್ಕತಂಗಿಯರೇ, ಮುದುಕಿಯರೆಲ್ಲ ತಾಯಂದಿರೇ. ಅವರು ಪ್ರೇಮದಿಂದ ಶ್ಯಾಮನಿಗೆ ನೆರವೀಯಬೇಕು. ಇಲ್ಲಿ ಏನೂ ಮನೆತನದ ಮರ್ಯಾದೆ ಅಡ್ಡಬರಲಿಲ್ಲ. ಕೆಲ ದಿನ ಅನ್ನಛತ್ರದಲ್ಲಿ ಊಟಮಾಡಿದರು. ಕೆಲದಿನ ಮಧುಕರಿಯನ್ನು ಬೇಡಿದರು. ಕೆಲದಿನ ಗಿರಣಿಯ ಗೆಳೆಯರು ಹಿಟ್ಟನ್ನು ಕೊಟ್ಟಾಗ ಬಕ್ಕರಿಯನ್ನು ಬೇಯಿಸಿ ತಿನ್ನುತ್ತಿದ್ದರು. ದಾರಿದ್ರ್ಯದಲ್ಲಿ ಎಲ್ಲ ತಪ್ಪುಗಳೂ ಕ್ಷಮ್ಯ ಎಂಬ ಪಾಠವನ್ನು ಗುರೂಜಿಯು ಕಲಿತರು. ಒಳ್ಳೆಯ ಹಾಗೂ ಕೆಟ್ಟ ಅನುಭವಗಳನ್ನೂ ಪಡೆಯಹತ್ತಿದರು. ಕಡ್ಲಿಗಳನ್ನು ತಿಂದು ಎಷ್ಟೋ ಸಲ ಜೀವಿಸುತ್ತಿದ್ದರು. ಈ ಕಷ್ಟಮಯ ಜೀವನಕ್ಕೆ ಬೇಸತ್ತು ಒಮ್ಮೆ ಅತ್ತೆಗೆ 'ಶ್ಯಾಮನನ್ನು ತಿರಸ್ಕರಿಸಬೇಡ. ಒಣ ಅನ್ನವನ್ನು ತಿಂದು ಬೇಸತ್ತಿರುವೆ. 'ಕಲಿತು ತಾಯಿಗೆ ಸುಖವನ್ನು ಕೊಡಬೇಕೆನಿಸುತ್ತಿದೆ.' ಆದರೆ ಅದು ನನ್ನ ದೈವದಲ್ಲಿದ್ದಂತೆ ಕಾಣುವದಿಲ್ಲ. ಇಲ್ಲಿಯ ವರೆಗೆ ನಿನಗೆ ಬರೆಯ ಬಾರದೆಂದು ತಡೆದಿದ್ದೆ. ಆದರೆ ಅತ್ತಾ! ಯಾರಿಗಾದರೂ ಶಿಕ್ಷಣವನ್ನು ಕೊಟ್ಟು ನನಗೆ ಐದು ರೂಪಾಯಿಗಳನ್ನು ಕಳಿಸುವಿಯಾ? ಅದರಲ್ಲಿಯೇ ನಾನು ಸ್ವರ್ಗವನ್ನು ನಿರ್ಮಿಸುವೆನು' ಎಂದು ಪತ್ರ ಬರೆದರು. ಇವರು ಅತ್ತೆಯು ಇವರ ತಮ್ಮನಿಗೂ ಕಲಿಸುತ್ತಿದ್ದಳು. ಗುರೂಜಿಗೆ ಆಕೆಯು ಬಹಳ ನೆರವನ್ನು ನೀಡಿದಳು. ಗುರೂಜಿಯಾದರೂ ಆಕೆಯನ್ನು ತಾಯಿಯಂತೆ ಮನ್ನಿಸುತ್ತಿದ್ದರು.

## ಪ್ಲೇಗದ ಹಾವಳಿ

ಈ ಸುಮಾರಿಗೆ ಔಂಧದಲ್ಲಿ ಪ್ಲೇಗದ ಹಾವಳಿಯು ಪ್ರಾರಂಭವಾಯಿತು. ಪರಸ್ಥಳದ ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಊರುಗಳಿಗೆ ಹೋಗಬೇಕೆಂದು ರಾಜಾಜ್ಞೆಯಾಯಿತು. ಗುರೂಜಿಯೂ ಅನಿವಾರ್ಯವಾಗಿ ಪಾಲಗಡಕ್ಕೆ ಮರಳಬೇಕಾಯಿತು. ತಾಯಿಯ ಪ್ರೇಮಪ್ರವಾಹವು ಹರಿಯಿತು. ಚಿಕ್ಕ ಮಗನಾದ ಸದಾನಂದನು ಪ್ಲೇಗಿಗೆ ಬಲಿಯಾದ ಮೂಲಕ—ಪಂಢರಿಯನ್ನು

ಕಂಡು ತಾಯಿಗೆ ಬಹಳ ಆನಂದವಾಯಿತು. ಒಂದು ತಿಂಗಳಾದರೂ ಪಂಢರಿಯು ಮರಳದ್ದನ್ನು ಕಂಡು, ಅಭ್ಯಾಸವನ್ನು ತಪ್ಪಿಸಲು ಇಲ್ಲಿ ನಿಂತಿರಲಾರನಷ್ಟೆ! ಎಂದು ತಂದೆಗೆ ಸಂಶಯ ಬಂದಿತು. ತಂದೆ ಈ ಬಗೆಯಾಗಿ ಮಾತಾಡುವದನ್ನು ಕೇಳಿ, ಗುರೂಜಿಗೆ ವ್ಯಥೆಯಾಯಿತು. ಇನ್ನೂ ತಂದೆಯ ವಿಶ್ವಾಸವನ್ನು ತಾನು ಸಂಪಾದಿಸಬೇಕೆಂದು ಅವರಿಗೆ ಅನಿಸಿತು. ಮರುದಿನವೇ ತಾಯಿಯ ಅಪ್ಪಣೆಯನ್ನು ತೆಗೆದುಕೊಂಡು ಮುಂಬಯಿಗೆ ಹೊರಟರು. ಮುಂಬಯಿಯಲ್ಲಿ ಅವರ ಮಾವನಿದ್ದನು.

## ರಾಷ್ಟ್ರೀಯತೆಯ ಉಗಮ

ಮುಂಬಯಿಯ ಈ ನಾಲ್ಕಾರು ದಿನದ ವಾಸ್ತವ್ಯವು ಪಂಢರಿಯ ಜೀವನದಲ್ಲಿ ಹೊಸ ಅಧ್ಯಾಯವನ್ನೇ ಪ್ರಾರಂಭಿಸಿತು. ನಾಟ್ಯಾಚಾರ್ಯರಾದ ಖಾಡಿಲಕರರು ಒಂದು ಉಜ್ವಲವಾದ ರಾಷ್ಟ್ರೀಯ ಭಾವನೆಯನ್ನು ಉದ್ದೀಪನಗೊಳಿಸುವ ಒಂದು ಭಾಷಣವನ್ನು ಮಾಡಿದರು. ಅದರ ಪರಿಣಾಮವು ಗುರೂಜಿಯ ಮನಸ್ಸಿನ ಮೇಲೆ ಬಹಳವಾಯಿತು. ಇವರು ಕೇಳಿದುದು ಇದೇ ಮೊದಲಿನ ರಾಜಕೀಯ ಭಾಷಣ. ಗುರೂಜಿಯು ಪುಣೆಗೆ ಬಂದರು. ಆ ಸಮಯದಲ್ಲಿ ಮಹರ್ಷಿ ಅಣ್ಣಾಸಾಹೇಬ ಪಟವರ್ಧನರು ಮರಣವನ್ನೈದಿದ್ದರು. ಅವರ ಅಂತ್ಯದರ್ಶನಕ್ಕೆ ಹೋದಾಗ ಲೋಕಮಾನ್ಯರ ದರ್ಶನವಾಯಿತು. ಗುರೂಜಿಯು ಆಕರ್ಷಿಸಲ್ಪಟ್ಟರು. ಆ ಮಹಾಪುರುಷರ ಸಂದರ್ಶನವು ಗುರೂಜಿಯ ಮೇಲೆ ವಿಲಕ್ಷಣವಾದ ಪ್ರಭಾವವನ್ನು ಬೀರಿತು. ರಾಷ್ಟ್ರದ ಬಗೆಗೆ ವಿಚಾರಮಾಡಹತ್ತಿತು.

## ಪುಣೆಯ ಜೀವನ

ಮನೆಬಿಟ್ಟು ಬಂದ ಗುರೂಜಿಯು ಪುಣೆಯಲ್ಲಿ ಗೆಳೆಯನಾದ ರಾಮನ ಮನೆಯಲ್ಲಿ ನಿಂತರು. ಮೊದಲಿನ ಮೂರು ದಿವಸ ಚುರಮುರಿ ಪುಟಾಣಿಯ ಮೇಲೆ ನಡೆಯಿತು. ಖಾನಾವಳಿಯಲ್ಲಿ ಉಣ್ಣುವೆನೆಂದು ಹೇಳಿ, ಚುರಮುರಿ ತಿಂದು ನೀರು ಕುಡಿದು ಬರುತ್ತಿದ್ದರು. ಮೂರು ದಿನಗಳಲ್ಲಿಯೇ ಬತ್ತಿ ಹೋದರು. ಅಟ್ಟವನ್ನೇರುವ ಸಾಮರ್ಥ್ಯವು ಕೂಡ ಅವರಿಗೆ ಉಳಿಯಲಿಲ್ಲ. ರಾಮನ ತಾಯಿಗೆ ಸಂಶಯ ಬಂದಿತು. ಆಕೆಯ ಭಾವನು ಅದನ್ನು ಕಂಡು

ಹಿಡಿದು ಮನೆಯಲ್ಲಿಯೇ ಊಟ ಮಾಡಲು ಹೇಳಿದರು. ವಾರದಲ್ಲಿ ನಾಲ್ಕು ದಿವಸ ವಾರಾನ್ನವನ್ನು ಉಣ್ಣುತ್ತ ಕಾಲಕಳೆದರು. ದಾರಿದ್ರ್ಯಕ್ಕೆ ಈ ಮಹಾಪುರುಷರು ಬೆದರಲಿಲ್ಲ. ಮಾನಾಪಮಾನಗಳನ್ನು ಸಹಿಸುತ್ತ ಮುನ್ನುಗ್ಗಿದರು.

## ರಕ್ಷಾಕವಚವು ಕಳಚಿತು

ಶಾಲೆಗೆ ಹೋಗಹತ್ತಿದರು. ಇಂಗ್ಲೀಷ ಆರನೆಯ ಇಯತ್ತೆಯಲ್ಲಿದ್ದರು. ನೂತನ ವಿದ್ಯಾಲಯದ ೬ನೆಯ ಇಯತ್ತೆಯ ಪರೀಕ್ಷೆಯು ಕೇವಲ ಎಂಟು ದಿನ ಮಾತ್ರ ಉಳಿದಿತ್ತು. ತಾನು ಉತ್ತೀರ್ಣನಾಗುವೆನೆಂಬ ವಿಶ್ವಾಸದಿಂದ ಪರೀಕ್ಷೆಗೆ ಕುಳಿತರು. ಉತ್ತೀರ್ಣನೂ ಆದರು. ಮ್ಯಾಟ್ರಿಕ್ ಪರೀಕ್ಷೆಯ ವರ್ಗದಲ್ಲಿ ಬಂದೆನಲ್ಲ ಎಂದು ಆನಂದವಾಯಿತು. ಈ ವರ್ಷದಲ್ಲಿ ಗುರೂಜಿಗೆ ದೊಡ್ಡ ಆಘಾತವಾಯಿತು. ದೇವತೆಯಂತಿದ್ದ ಅವರ ತಾಯಿಯು ಸ್ವರ್ಗಸ್ಥ ಳಾದಳು. ಸ್ವಪ್ನದಲ್ಲಿ ತಾಯಿಯನ್ನು ಗುರೂಜಿಯು ಕಂಡು ಗಾಬರಿಗೊಂಡು, ಲಗುಬಗೆಯಿಂದ ಊರಿಗೆ ಹೊರಟರು. ಆದರೆ ದಾರಿಯಲ್ಲಿಯೇ ಅವರ ಅತ್ತೆಯು ಭೆಟ್ಟಿಯಾಗಿ, ದುಃಖವಾರ್ತೆಯನ್ನು ಹೇಳಿದಳು ಶ್ಯಾಮು, ಶ್ಯಾಮು ಎಂದು ನೆನೆಯುತ್ತ ಪ್ರಾಣಬಿಟ್ಟಳೆಂಬ ಮಾತಂತೂ ಗುರೂಜಿಗೆ ಬಹಳ ದುಃಖವನ್ನೀಯಿತು. ಊರಿಗೆ ಹೋಗಿ ಭಸ್ಮಭೂಮಿಗೆ ನಮಿಸಿ ಪುಣೆಗೆ ಮರುಳಿದರು. ಅವರ ಮೇಲೆ ಆಕಾಶಕೊಡ್ಲೆಯೇ ಬಿದ್ದು, ಅವರ ಆಶೆ ಆಕಾಂಕ್ಷೆ ಗಳೆಲ್ಲ ಚೂರುಚೂರಾಗಿದ್ದುವು. ಕಲಿತು ದೊಡ್ಡವನಾಗಿ, ದಾರಿದ್ರ್ಯ ಅಪಮಾನ ಗಳಿಂದ ಬೆಂದ ತಾಯಿಯ ಸೇವೆಯನ್ನು ಮಾಡಿ ಸುಖದಿಂದ ಇರಿಸಬೇಕೆಂಬ ಅವರ ಕನಸುಗಳೆಲ್ಲವೂ ವ್ಯರ್ಥವಾದವು. ನಿರಾಶೆಯು ಅವರ ಜೀವನವನ್ನು ವ್ಯಾಪಿಸಿತು. ಮಾತೃವಿಯೋಗದ ದುಃಖವು ಅವರ ಆಯುಷ್ಯವಿರುವ ವರೆಗೆ ಅವರ ಹೃದಯವನ್ನು ಕೊರೆಯುತ್ತಿದ್ದಿತು. ಅವರಿಗೆ ಆದ ದುಃಖವನ್ನು ಊಹಿಸಲು ಅಸಾಧ್ಯ. ಈ ಬಗೆಯ ದುಃಖವನ್ನು ಮಹಾತ್ಮರು ಮರಣ ವನ್ನೈದಿದಾಗ ಅವರು ಮತ್ತೆ ಅನುಭೋಗಿಸಿದರು.

## ಮೊದಲನೆಯ ಭಂಗೀ ಕೆಲಸ

ಗುರೂಜಿಯು ರಾಮನ ಮನೆಯನ್ನು ತನ್ನದಾಗಿಯೇ ಭಾವಿಸಿದ್ದರು. ಅವನ ತಂಗಿಯು ಬೇನೆಬಿದ್ದಾಗ ಆಕೆಯ ಸೇವೆಯನ್ನು ಮನಃಪೂರ್ವಕವಾಗಿ

ಮಾಡಿದರು. 'ಬೆಡ್‌ಪ್ಯಾನ್' ಎಂದರೇನೆಂಬುದು ಗೊತ್ತಿಲ್ಲದ ಮೂಲಕ ಅದರಲ್ಲಿಯ ಹೊಲಸನ್ನೆಲ್ಲ ಬಚ್ಚಲದಲ್ಲಿಯೇ ಚೆಲ್ಲಿದರು. ಹೊಲಸೆಲ್ಲವು ಬಚ್ಚಲ ತುಂಬ ಬಿದ್ದು ನಾರುವದನ್ನು ಕಂಡು ತನ್ನ ಅಜ್ಞಾನಕ್ಕಾಗಿ ನಕ್ಕು ಎಲ್ಲವನ್ನು ಬಳಿದು ತುಂಬಿ ಚೆಲ್ಲಿದರು. ಭಂಗೀ ಕಾರ್ಯಕ್ಕೆ ಇದೇ ಮೊದಲು. ಮುಂದೆ ಅವರು ಅನೇಕ ಜನರ ಶುಶ್ರೂಷೆಯನ್ನು ಮಾಡಿದರು. ಅನೇಕ ವಿದ್ಯಾರ್ಥಿಗಳ ಮಲಮೂತ್ರಗಳನ್ನು ಸ್ವಚ್ಛಮಾಡಿದರು. ಎಷ್ಟೋ ಊರುಗಳ ಗಟಾರವನ್ನು ಬಳಿದರು. 'ಲೆಕ್ಕಣಿಕೆಗಿಂತಲೂ ನಾನು ಕಸಬರಿಗೆಯ ಲಾಲಿತ್ಯದ ಉಪಾಸಕ ನಿರುವೆ' ಎಂದು ಅನ್ನುತ್ತಿದ್ದರು. ಇವರ ಚಾರಿತ್ರ್ಯದ ಪರಿಣಾಮವು ರಾಮನ ಮನೆಯವರ ಮೇಲೆಯೂ ಮಿತ್ರರ ಮೇಲೆಯೂ ಬಹಳವಾಯಿತು. ಮಿತ್ರರು ಅದೇನು ಸ್ವಾಮಿ' ಎಂದು ಅನ್ನಹತ್ತಿದರು. ಗುರೂಜಿ ನಾಚಿಕೊಂಡು ಓಡಿ ಹೋಗುತ್ತಿದ್ದರು. ಅವರೆಲ್ಲರೂ ಇವರನ್ನು ಹಿಡಿದುಕೂಡಿಸುತ್ತಿದ್ದರು. ಗುರೂಜಿ ಗಾದರೋ ಸತ್ತಂತೆ ಅನಿಸಬೇಕು. ಆತ್ಮಸ್ತುತಿಯು ಗುರೂಜಿಗೆ ಸೇರುತ್ತಿದ್ದಿಲ್ಲ. ಸತ್ಕಾರವನ್ನು ಮಾಡಿಸಿಕೊಳ್ಳಲು ನಾಚಿಕೆಯಾಗುತ್ತಿತ್ತು. ಅವರ ಮಾಡುವ ದನ್ನು ಕಂಡು ಗಾಬರಿಯಾಗುತ್ತಿದ್ದರು. ಈ ಭಾರವು ಬೇಡವೆಂದು ಅವರಿಗೆ ಅನಿಸುತ್ತಿತ್ತು. ಈ ಬಗೆಯ ಸಾತ್ವಿಕವೃತ್ತಿಯ ಮನುಷ್ಯರಿವರು. ಏಕಾಂತ ಭಕ್ತರು. 'ಮೂಕಬಧಿರರಂತಿಪ್ಪರೋ ನೋಳ್ಪ ಜನಕೆ' ಎಂಬ ಮಾದರಿಯ ವ್ಯಕ್ತಿಗಳು.

## ಸ್ವಯಂಸೇವಕ—ಸಾನೆ

ಗುರೂಜಿಯು ಮ್ಯಾಟ್ರಿಕ್ ಪರೀಕ್ಷೆಯಾದೊಡನೆಯೇ ಊರಿಗೆ ಬಂದನು. ಅಣ್ಣನ ಮದುವೆಯು ನಡೆಯಿತು. ಅತ್ತಿಗೆಯು ಇದ್ದ ಊರವಳೇ. ಆಕೆಯ ಅಡಿಗೆಯು ಚೆನ್ನಾಗಿ ಆಗುವದಿಲ್ಲೆಂದು ಮಾವನವರು ಕುರುಕುರು ಮಾಡುತ್ತಿದ್ದರು. ಗುರೂಜಿಯು ಅತ್ತಿಗೆಯ ಪಕ್ಷವನ್ನು ಹಿಡಿದು ಜಗಳಾಡ ಹತ್ತಿದನು. ಅತ್ತೆಮನೆಯ ಸೊಸೆಯಾದ ಮಾಣಿಕಳ ಅರಿವು ಅವರಿಗೆ ಪ್ರತಿ ಕ್ಷಣವಾಗುತ್ತಿತ್ತು. ಗುರೂಜಿಯು ಪುನಃ ಪುಣೆಗೆ ಬಂದು ನ್ಯೂ ಪೂನಾ ಕಾಲೇಜಿನಲ್ಲಿ ಪ್ರವೇಶಿಸಿದರು. ಆ ಕಾಲದ ನಗರಾಧ್ಯಕ್ಷರಾದ ಹರಿ ನಾರಾಯಣ ಆಪ್ಟೆಯವರು, ಸಾಕ್ಷರ ಹಾಗೂ ನಿರಕ್ಷರರ ಗಣತಿಗಾಗಿ ಸ್ವಯಂಸೇವಕರು

ಬೇಕೆಂದರು. ಗುರೂಜಿಯುವರು ಸ್ವಯಂಸೇವಕರಾಗಿ, ಮನಃಪೂರ್ವಕವಾಗಿ ದುಡಿದರು. ೧೯೧೮ರಲ್ಲಿ ಇನಫ್ಲುಎಂಝಾ ಬೇನೆಯು ಹಬ್ಬಿದಾಗ ಗುರೂಜಿಯು ಮನೆಮನೆ ತಿರುಗಾಡಿ ಔಷಧೋಪಚಾರಗಳನ್ನು ಕೊಟ್ಟು, ಜನಸೇವೆಯನ್ನು ಮಾಡಿದರು. ಲೋಕಮಾನ್ಯರ ವೀರ ರಾಷ್ಟ್ರೀಯ ಜೀವನವಂತೂ ಎದುರಿಗೇ ಇದ್ದಿತು. ಅವರ ಪವಿತ್ರ ಆಚಾರ-ವಿಚಾರಗಳು ಗುರೂಜಿಯ ಮನಸ್ಸನ್ನು ಆಕರ್ಷಿಸಿದವು. ವಾಚನ ಹಾಗೂ ಅಭ್ಯಾಸಗಳಲ್ಲಿ ಅವರು ತಲ್ಲೀನರಾದರು. ಎಫ್. ವಾಯ್. ಪರೀಕ್ಷೆಯ ಸಮಯದಲ್ಲಿ ಗುರೂಜಿಯು ಬೇನೆಬಿದ್ದರು. ಆದರೂ ಪ್ರಿನ್ಸಿಪಾಲರು, ಇಂಟರದ ಪ್ರವೇಶಕ್ಕೆ ಅನುಮತಿ ಕೊಟ್ಟರು. ಗುರೂಜಿಯು ಕೂಡ ಇದರ ಸಮುಪಯೋಗವನ್ನು ಮಾಡಿಕೊಂಡರು. ಇಂಟರದಲ್ಲಿ ೧೦೦ಕ್ಕೆ ೬೦ ಗುಣಗಳನ್ನು ಸಂಪಾದಿಸಿ ಉತ್ತೀರ್ಣರಾದುದಲ್ಲದೆ, ಸಂಸ್ಕೃತದಲ್ಲಿ ೨ನೆಯ ಶಿಷ್ಯವೃತ್ತಿಯನ್ನು ಸಂಪಾದಿಸಿದರು. ಕಾಲೇಜದ ಅಭ್ಯಾಸವನ್ನಲ್ಲದೆ ಕಾರ್ಲಾಯಿಲ್, ರಸ್ಕಿನ್, ಇಮರ್ಸನ್ ಮೊದಲಾದವರ ಅಭ್ಯಾಸವನ್ನು ಮಾಡಿದರು. ಮುಂದಿನ ಸಾಹಿತ್ಯಸೃಷ್ಟಿಯ ಬೀಜಗಳು ಈ ಅವಧಿಯಲ್ಲಿಯೇ ಬಿತ್ತಲ್ಪಟ್ಟವು.

ಲಾಲಾ ಲಜಪತರಾಯ, ಬಿಪಿನಚಂದ್ರ ಪಾಲ, ದೇಶಬಂಧು ದಾಸ, ಮೋತಿಲಾಲ ನೆಹರು ಮೊದಲಾದ ಸ್ವಾತಂತ್ರ್ಯಭಕ್ತರ ಉಪನ್ಯಾಸಗಳು ಗುರೂಜಿಯ ಅಂತಃಕರಣವನ್ನು ಅಲ್ಲೋಲಕಲ್ಲೋಲ ಮಾಡುತ್ತಿದ್ದವು. ರಾಷ್ಟ್ರೀಯ ಭಾವನೆಯಿಂದ ಪ್ರೇರಿತರಾಗಿ ಗುರೂಜಿಯು ದೊಡ್ಡ ದೊಡ್ಡ ಐತಿಹಾಸಿಕ ವ್ಯಕ್ತಿಗಳ ಜೀವನವನ್ನು ಅಭ್ಯಾಸಮಾಡಹತ್ತಿದರು. ಮಹಾ ಪುರುಷರ ವಿಚಾರ ಹಾಗೂ ಭಾವನೆ, ಅವರ ಸ್ವಾತಂತ್ರ್ಯದ ತಳಮಳ ಮತ್ತು ಕಾರ್ಯಕೌಶಲಗಳನ್ನು ನಿರೀಕ್ಷಿಸಹತ್ತಿದರು. ಪ್ರತಿಯೊಬ್ಬರಿಂದ ಹೊಸ ಹೊಸ ಸ್ಫೂರ್ತಿಯನ್ನು ಪಡೆಯಹತ್ತಿದರು. ರಾಷ್ಟ್ರೀಯ ಜೀವನದ ಉಗಮವು ಈ ಕಾಲದಲ್ಲಿಯೇ ಆಯಿತು.

## ಗಾಂಧೀಜಿ ದರ್ಶನ

ಗಾಂಧೀಜಿಯುವರ ಸತ್ಯಾಗ್ರಹದ ಮೊದಲನೆಯ ರಣಕಹಳೆಯು ಊದಲ್ಪಟ್ಟಿತ್ತು. ಮುಂಬಯಿಯಲ್ಲಿ ಚೌಪಾಟಿಯ ಮೇಲೆ, ಅದ್ಭುತವಾದ

ಸಭೆ ಜರುಗಿತು. ಗುರೂಜಿಯು ಗಾಂಧೀಜಿಯ ದರ್ಶನವನ್ನು ತೆಗೆದುಕೊಂಡರು. ಅದೇ ಪ್ರಥಮದರ್ಶನ. ಇದರಿಂದ ಗುರೂಜಿಯ ಅಂತಃಕರಣವು ತುಂಬಿ ಬಂದಿತು. ಜನ್ಮಾಂತರದ ಪರಿಚಯದ ಹಾಗೂ ಸೌಹಾರ್ದದ ಅನುಭವವು ಬಂದಂತೆ ಭಾಸವಾಯಿತು, ಎಂದು ಅವರು ಹೇಳುತ್ತಿದ್ದರು.

ಶಿಷ್ಯವೃತ್ತಿಯ ಮೂಲಕ ಶಿಕ್ಷಣವು ಮುಂದುವರಿಯಿತು. ಕಾಲೇಜದವರೂ ಶಿಷ್ಯವೃತ್ತಿಯನ್ನು ಕೊಟ್ಟು ಇವರನ್ನು ಗೌರವಿಸಿದರು. ಪ್ರಾಧ್ಯಾಪಕ ಪೋತದಾರ, ಘಾರಪುರೆ, ಕರಮರಕರ, ನಾ. ಸಿ. ಫಡಕೆ, ಇವರೆಲ್ಲರೂ ಸಾನೆ ಗುರೂಜಿಯ ಗುರುಗಳು. ಇವರೆಲ್ಲರೂ ಗುರೂಜಿಯ ಬಗೆಗೆ ಅತ್ಯಂತ ಆದರವುಳ್ಳವರಿದ್ದರು. ಸನ್ಮಿತ್ರರ ಸಹವಾಸದಿಂದ ಗುರೂಜಿಯ ಜೀವನ ಕಮಲವು ಅರಳಹತ್ತಿತು. ತತ್ವಜ್ಞಾನದ ಕಡೆಗೆ ಮನಸ್ಸು ಓಡಹತ್ತಿತು. ಬಿ. ಎ. ಕ್ಕೆ ಯಾವ ವಿಷಯವನ್ನು ಆರಿಸಬೇಕೆಂಬ ವಿಷಯದಲ್ಲಿ ವಿವಂಚನೆ ಉಂಟಾಯಿತು. ಅವರ ಮನಸ್ಸು ತತ್ವಜ್ಞಾನದ ಕಡೆಗೆ ಹರಿಯುತ್ತಿತ್ತು. ಸಂಸ್ಕೃತ ವಿಷಯವೆಂದರೆ ಅವರಿಗೆ ಬಹಳ ಪ್ರೀತಿ. ಮರಾಠಿಯನ್ನು ಅದೇ ವರ್ಷ ಅಭ್ಯಾಸಕ್ರಮದಲ್ಲಿ ಸೇರಿಸಿದ್ದರು. ಆದರೆ ಅದು ಉಪೇಕ್ಷಿಸಲ್ಪಡುತ್ತಿತ್ತು ಆದರ ಅವಹೇಳನವು ಗುರೂಜಿಗೆ ಸಹನವಾಗದೆ ಮರಾಠಿಯನ್ನೇ ಐಚ್ಛಿಕ ವಿಷಯವೆಂದು ತೆಗೆದುಕೊಂಡರು. ಬಿ. ಎ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಕಾಲೇಜಿನಲ್ಲಿ ಗುರೂಜಿಗೆ ಫೆಲೋಶಿಪ್ ದೊರಕಿತು. ಅವರ ಸಾಹಿತ್ಯದ ಹಾಗೂ ವಕ್ತೃತ್ವದ ಶಕ್ತಿಗಳೆರಡೂ ಬೆಳೆಯಹತ್ತಿದ್ದವು. ಪುಣೆಯಲ್ಲಿ ಮಿತ್ರಮಂಡಳಿಯೆಂಬ ಚಿಕ್ಕ ಸಂಸ್ಥೆ ಇದ್ದಿತು. ಅದರ ವತಿಯಿಂದ ಗುರೂಜಿಯು ರಾಮಕೃಷ್ಣ ಪರಮಹಂಸರ ಮೇಲೆ, ಪರಿಣಾಮಕಾರಿಯಾದ ಹಾಗೂ ಪಾಂಡಿತ್ಯಪೂರ್ಣವಾದ ಉಪನ್ಯಾಸವನ್ನಿತ್ತರು. ಕಾಲೇಜದ ನಿಯತಕಾಲಿಕದಲ್ಲಿ 'ದತ್ತ' ಕವಿಯ ಮೇಲೆ ಸುಂದರವಾದ ಲೇಖವನ್ನು ಬರೆದರು. ಈ ಎರಡೂ ಕೃತಿಗಳು, ಗುರೂಜಿಯತ್ತ ಜನತೆಯ ಮನಸ್ಸನ್ನು ಎಳೆದವು. ಕೊಂಕಣದಲ್ಲಿಯ ಸಸಿಯು ದೇಶದಲ್ಲಿ ಬೆಳೆಯಹತ್ತಿತು. ಅದು ಮುಂದೆ ಹೆಮ್ಮರವಾಗಿ, ಸುಂದರ ಫಲಪುಷ್ಪಗಳನ್ನು ಬಿಡುವದೆಂಬುದನ್ನು ಆ ಕಾಲದ ಜನರೇನು ಬಲ್ಲರು?

## ಪ್ರಕ್ಷುಬ್ಧ ಮನಸ್ಸು ತತ್ವಜ್ಞಾನದ ಕಡೆಗೆ

೧೯೩೦ರಲ್ಲಿ ಸತ್ಯಾಗ್ರಹದ ರಣದುಂದುಭಿಯು ಹೊಡೆಯಲ್ಪಟ್ಟಿತು. ಫಡಕೆ, ಘಾರಪುರೆ, ಇತ್ಯಾದಿ ಪ್ರಾಧ್ಯಾಪಕರೂ ಕಾಲೇಜನ್ನು ಬಿಟ್ಟರು. ವಿದ್ಯಾರ್ಥಿಗಳು ರಾಜಕಾರಣದಲ್ಲಿ ಭಾಗ ವಹಿಸಬಾರದೆಂದು ಸಾನೆ ಗುರೂಜಿಗೆ ಅನಿಸುತ್ತಿತ್ತು. ಆದರೆ ಮನಸ್ಸಿನಲ್ಲಿ ಮಾತ್ರ ಸಮಾಧಾನವಿರಲಿಲ್ಲ. ೧೯೨೧ರಲ್ಲಿ 'ನಿಮ್ಮೊಬ್ಬ ಮಗನು ಫಕೀರನಾದನೆಂದು ತಿಳಿದುಕೊಳ್ಳಿರಿ' ಎಂದು ತಂದೆಗೆ ಒಂದು ಪತ್ರ ಬರೆದರು. ಪ್ರಕ್ಷುಬ್ಧ ಮನಸ್ಸಿನಿಂದ ತತ್ವಜ್ಞಾನದ ಕಡೆಗೆ ಹೊರಳಿದರು. ಕೇಸರಿ ವೃತ್ತಪತ್ರದಲ್ಲಿ ಅಮಳನೇರದ ತತ್ವಜ್ಞಾನ ಮಂದಿರಕ್ಕೆ ಒಬ್ಬ ಫೆಲೋ ಬೇಕಾಗಿರುವನೆಂದು ಜಾಹೀರಾತು ಬಂದಿತ್ತು. ಗುರೂಜಿಯು ಅರ್ಜಿ ಮಾಡಿದರು. ಅಲ್ಲಿ ಕೂಡಲೆ ಅವರಿಗೆ ಪ್ರವೇಶವೂ ದೊರೆಯಿತು. ಇಲ್ಲಿಂದ ಮುಂದೆ ಖಾನದೇಶವೇ ತಮ್ಮ ಕರ್ಮಭೂಮಿಯೆಂದು ಗುರೂಜಿಯು ನಿಶ್ಚಯಿಸಿದರು. ಅಮಳನೇರದ ತತ್ವಜ್ಞಾನ ಮಂದಿರವು ಭಾರತದಲ್ಲಿಯ ಒಂದು ಪ್ರಸಿಷ್ಠವಾದ ಸಂಸ್ಥೆ. ಪ್ರೊ. ಮಲಕಾನಿ ಓಕರೆಂಬ ತತ್ವಜ್ಞಾನಿಗಳು ಈ ಸಂಸ್ಥೆಯವರೇ! ಗುರೂಜಿಯು ಫೆಲೋ ಎಂದು ಇಲ್ಲಿ ಬಂದರು. ವೇದವೇದಾಂತದ ಅಭ್ಯಾಸವನ್ನು ಮಾಡಿದರು. ಇಲ್ಲಿಂದಲೇ ಎಂ. ಎ ಆದರು. ಇಲ್ಲಿಯೇ ಜಗತ್ತಿನ ವಿವಿಧ ತತ್ವಜ್ಞಾನಗಳ ಅಭ್ಯಾಸವನ್ನು ಮಾಡಿದರು. ಶಮ, ದಮಗಳು ಪ್ರಾಪ್ತವಾಗದೇ ಅದ್ವೈತದ ಅಭ್ಯಾಸ, ಶಂಕರ ಭಾಷ್ಯದ ಅಭ್ಯಾಸ ವ್ಯರ್ಥವೆಂದು ಅವರು ಹೇಳುತ್ತಿದ್ದರು. ನಾನಾ ಪ್ರಾಂತದ ವಿದ್ಯಾರ್ಥಿಗಳು ಇಲ್ಲಿರುತಿದ್ದರು. ಏಕರಾಷ್ಟ್ರೀಯತ್ವದ ಕಲ್ಪನೆಯು ಇಲ್ಲಿಯೇ ಅವರಲ್ಲಿ ಬೇರೂರಿತು. ಅಮರನಾಥನೆಂಬ ದಿಲ್ಲಿಯ ವಿದ್ಯಾರ್ಥಿ ಯೊಬ್ಬನು ಇವರ ಕೋಣೆಯಲ್ಲಿಯೇ ಇರುತ್ತಿದ್ದನು. ಅವನು ಒಮ್ಮೆ 'ಸಾನೆ' ನಿಮ್ಮ ಸಾಬಾಣವನ್ನು ಸ್ವಲ್ಪ ತೆಗೆದುಕೊಳ್ಳಲಾ, ಎಂದು ಕೇಳಿದನು. ಕೂಡಲೇ ಗುರೂಜಿಯು, ಒಂದೇ ಖೋಲಿಯಲ್ಲಿದ್ದ ನಾವು ಭೇದವನ್ನು ಎಣಿಸಬೇಕೆ? ಎಂದರು. ತತ್ವಜ್ಞಾನದಲ್ಲಿ ಡಂಭವೂ ಹೇಗೆ ಇರಲು ಶಕ್ಯವಿದೆ ಎಂಬುದನ್ನು ಇಲ್ಲಿಯೇ ಕಂಡುಕೊಂಡರು. 'ತತ್ವಜ್ಞಾನಿಗೆ ನೀತಿಯ ಸಂಬಂಧವಿಲ್ಲ'; ತುಡುಗು ಮಾಡಿದರೂ ಆತ್ಮಕ್ಕೆ ಅದು ಅಂಟುವದಿಲ್ಲ,

ಪ್ರಕೃತಿಸ್ತ್ವಾಂನಿಯೋಕ್ಷ್ಯತಿ; ಬ್ರಹ್ಮಜ್ಞಾನಿಗಳಿಗೆ ಸ್ನಾನಾದಿಗಳ ಆವಶ್ಯಕತೆ ಏನು? ಇಂತಹ ಮೋಸದ ತತ್ವಜ್ಞಾನವನ್ನು ಅವರು ನಿಷೇಧಿಸುತ್ತಿದ್ದರು. "ರಾಮಕೃಷ್ಣ, ತುಕಾರಾಮರ ಅನುಕರಣ ಮಾಡಿರಿ" ಎಂದು ಉಪದೇಶ ಮಾಡುತ್ತಿದ್ದರು. ಆ ತತ್ವಜ್ಞಾನಮಂದಿರದಲ್ಲಿದ್ದ ಒಬ್ಬ ಸನ್ಯಾಸಿನಿಯ ಜೀವನದ ಪರಿಣಾಮವು ಇವರ ಮನಸ್ಸಿನ ಮೇಲೆ ಬಹಳವಾಯಿತು. ಆಕೆಯು ಹೇಳಿದ ಕಥೆಗಳ ಮೇಲೆಯೇ 'ಸತಿ' ಎಂಬ ಕಾದಂಬರಿಯು ರಚಿಸಲ್ಪಟ್ಟಿದೆ. ಶಂಕರ ಸಖಾರಾಮ ಖಾರಕರ ಎಂಬುವವರು ಇವರ ಎರಡನೆಯ ಮಿತ್ರರು. ವಿಶ್ವಭಾರತಿ, ಪಾಂಡೀಚೇರಿ, ಅಲ್ಮೋರಾ—ಇಂತಹ ಅನೇಕ ಆಶ್ರಮಗಳನ್ನು ತಿರುಗಾಡಿ ಮನಶ್ಶಾಂತಿ ಇಲ್ಲದೆ, ಅವರು ಈ ತತ್ವಜ್ಞಾನಮಂದಿರಕ್ಕೆ ಬಂದಿದ್ದರು. ಅವರು ಒಂದು ಪಂಜೆಯುಮೇಲೆ ಇರುತ್ತಿದ್ದರು. ಗುರೂಜಿಯು ಕೂಡ ೧೯೨೧ರಿಂದ ಖಾದಿಯನ್ನು ಉಪಯೋಗಿಸಹತ್ತಿದರು. ಒಮ್ಮೆ ಅವರ ಆಪ್ತನೊಬ್ಬನು 'ನಿನ್ನೊಡನೆ ತಿರುಗಾಡಲು ನನಗೆ ನಾಚಿಕೆಯಾಗುತ್ತದೆ' ಎಂದರು. ಸ್ವಾಭಿಮಾನಿಯಾದ ಗುರೂಜಿಗೆ ಅದು ಸಹನವಾಗಲಿಲ್ಲ. ಕೂಡಲೇ 'ನಿನ್ನಂತಹ ಚಿತ್ರವಿಚಿತ್ರ ಬಣ್ಣಗಳನ್ನು ಧರಿಸಿದ ಪಂಚರಂಗಿ ಗಿಳಿಗಳೊಡನೆ ಅಡ್ಡಾಡಲು ನನಗೂ ನಾಚಿಕೆ ಬರುತ್ತದೆ' ಎಂದು ಕೂಡಲೇ ಉತ್ತರ ಕೊಟ್ಟರು. ತತ್ವಜ್ಞಾನಮಂದಿರದಲ್ಲಿ ಒಮ್ಮೆ ಸಂತೋಷಕೂಟವಿದ್ದಿತು. ಮಂದಿರದಲ್ಲಿ ಒಬ್ಬ ಆಳಿದ್ದನು. ಆಳಿನ ಮಗನಾದ ರೂಪಲ್ಯಾ ಎಂಬುವನನ್ನು ತಮ್ಮ ಪಙ್ಕ್ತಿಯಲ್ಲಿಯೇ ಕೂಡಿಸಿಕೊಳ್ಳಬೇಕೆಂದು ಗುರೂಜಿಯವರು ಆಗ್ರಹವನ್ನು ಹಿಡಿದರು. ಆದರೆ ತತ್ವಜ್ಞಾನಮಂದಿರದಲ್ಲಿ ಹೆಸರಿಗೆಯಿದ್ದ ತತ್ವಜ್ಞಾನಿಗಳೆಲ್ಲ ಸಿಟ್ಟಿಗೆದ್ದರು. ಎಲ್ಲರೂ ವಿರೋಧಿಸಿದರೂ ಕೂಡ ಗುರೂಜಿಯವರು ತಮ್ಮ ನಿಶ್ಚಯವನ್ನು ಬದಲಿಸಲಿಲ್ಲ. ಶಂಕರ, ಗುರೂಜಿ, ರೂಪಲ್ಯಾ ಮೂವರೂ ಹಿಂದುಗಡೆಗೆ ಒಂದೆಡೆಯಲ್ಲಿಯೇ ಊಟಕ್ಕೆ ಕುಳಿತರು. ಆ ತತ್ವಜ್ಞಾನಮಂದಿರದಲ್ಲಿ ಗುರೂಜಿಯು ಆತ್ಮಾರ್ಪಣ ಸಂಘವನ್ನು ತೆರೆದರು. ನಿರಾಶೆಯಿಂದ ಜೀವನವು ತುಂಬಿದೆ ಎಂದು ಹಗಲೆಲ್ಲ ಅವರಿಗೆ ಅನಿಸುತ್ತಿತ್ತು. ಜೀವನದಲ್ಲಿ ಅರ್ಥವಿಲ್ಲೆಂದು ಅವರು ಮೇಲಿಂದಮೇಲೆ ಅನ್ನುತ್ತಿದ್ದರು. ಎಷ್ಟೋ ಸಲ ಚೂರಿಯನ್ನು ಕುತ್ತಿಗೆಯ ವರೆಗೆ ಒಯ್ದು ತಿರುಗಿ ತೆಗೆದದ್ದು ಉಂಟು.

## ನಾನು ಫಕೀರನಿರುವೆ

ಗುರೂಜಿಯು ಲಗ್ನಮಾಡಿಕೊಳ್ಳಬೇಕೆಂದು ಅವರ ಮನೆಯವರು ಇಚ್ಛಿಸುವದು ಸ್ವಾಭಾವಿಕ. ಅವರು ಪ್ರಸಂಗ ಬಂದಾಗೆಲ್ಲ ಈ ಮಾತನ್ನು ಹೇಳುತ್ತಿದ್ದರು. ಲಗ್ನಮಾಡಿಕೊಳ್ಳದಿರುವ ನಿಶ್ಚಯವನ್ನು ಚಿಕ್ಕಂದಿನಲ್ಲಿಯೇ ಅವರು ಮಾಡಿದಂತೆ ತೋರುತ್ತದೆ. ಏಕೆಂದರೆ, ನಾನು ಬೈರಾಗಿಯಾಗುವೆನು ಎಂದು ತಮ್ಮ ತಾಯಿಗೆ ಅವರು ಮೇಲಿಂದ ಮೇಲೆ ಹೇಳುತ್ತಿದ್ದರಂತೆ, ೧೯೨೬-೨೭ರಲ್ಲಿ ಈ ಭೀಷ್ಮಪ್ರತಿಜ್ಞೆಗೆ ಭಂಗಬರುವ ಪ್ರಸಂಗ ಒದಗಿತ್ತು. ಆದರೆ ಕನ್ಯಾದ ತಂದೆ-ತಾಯಿಗಳ ಅಜಾಣತನದ ಮೂಲಕ ಅದು ತಪ್ಪಿತು. ೧೯೪೦ರಲ್ಲಿ ೩೬ ಗುಣಗಳು ಕೂಡಿಬರುವ ಒಂದು ಉತ್ಕೃಷ್ಟ ಕನ್ಯೆಯನ್ನು ತಂದು ಅತ್ತೆಯು ಬಹಳ ಬಲವಂತಪಡಿಸಿದಳು. ಆಗಲೂ ಕೂಡ ನಾನು ಫಕೀರನಿರುವೆ, ನನಗೇನೂ ಬೇಡವೆಂದು ಉತ್ತರ ಕೊಟ್ಟರು.

೧೯೨೩ರಲ್ಲಿ ಅಣ್ಣನಿಗೆ ಅರ್ಧಾಂಗವಾಗಿದೆಯೆಂದು ಸುದ್ದಿ ಕೇಳಿ ಬಡೋದೆಗೆ ಹೋದರು. ಅಲ್ಲಿಂದ ಮರಳಿದ ಸ್ವಲ್ಪ ಅವಧಿಯಲ್ಲಿಯೇ ಇನ್ನೊಂದು ಪೆಟ್ಟು ಬಿದ್ದಿತು. ಆ ಕಾಲಕ್ಕೆ ಬಾಕರೇ ಶಾಸ್ತ್ರಿಗಳೆಂಬ ವೇದಾಂತಿಗಳೊಬ್ಬರು ಅಮಳನೇರದಲ್ಲಿರುತ್ತಿದ್ದರು ಗುರೂಜಿ ಹಾಗು ಶಾಸ್ತ್ರಿಗಳಿಬ್ಬರೂ ಕೂಡಿ ವೇದಾಂತವನ್ನು ಓದುತ್ತಿದ್ದರು. 'ಸಾನೆಯವರೇ! ನಿಮ್ಮ ಹಿರಿಯರು ಒಮ್ಮೆಲೇ ತೀರಿಕೊಂಡರೆ ನಿಮಗೆ ಏನು ಎನಿಸುವದು?' ಎಂದು ಶಾಸ್ತ್ರಿಗಳು ಪ್ರಶ್ನಿಸಿದರು 'ನನಗೆ ಬಹಳ ಕೆಡಕೆನಿಸುವದು' ಎಂದು ಗುರೂಜಿಯು ಕೂಡಲೇ ಉತ್ತರ ಕೊಟ್ಟರು. ಈ ಉತ್ತರವನ್ನು ಕೊಡುವಷ್ಟರಲ್ಲಿಯೇ ತಂತಿಯನ್ನು ತೆಗೆದುಕೊಂಡು ಮಿತ್ರನು ಕಾದಿದ್ದನು. ದಾಪೋಲಿಗೆ ತಂದೆಯು ಕೋರ್ಟಿನ ಕಾರ್ಯಕ್ಕಾಗಿ ಹೋದಾಗ ಅಕಸ್ಮಾತ್ತಾಗಿ ಮರಣವನ್ನು ಹೊಂದಿದರು ಎಂದು ಇದ್ದಿತು. ಇದರಿಂದ ಗುರೂಜಿಗೆ ಅತ್ಯಂತ ದುಃಖವಾಯಿತು. 'ನನ್ನ ಲಗ್ನವಾಗದಿದ್ದರೂ ಚಿಂತೆಯಿಲ್ಲ. ನಿನ್ನನ್ನು ಸುಖದಲ್ಲಿಡುವೆನು. ನನ್ನ ಹತ್ತರ ಇರು' ಎಂದು ಹೇಳುತ್ತಿದ್ದ ಗುರೂಜಿಯ ಆಶೆಯ ಮಂದಿರವೆಲ್ಲ ಕಳಚಿ ಬಿದ್ದು ನಿರಾಶೆಯು ವ್ಯಾಪಿಸಿತು.

ತತ್ವಜ್ಞಾನದಲ್ಲಿಯೂ ಗುರೂಜಿಯ ಮನಸ್ಸು ಹತ್ತಲೊಲ್ಲದು.

ಅಮಳನೇರವನ್ನು ಬಿಟ್ಟು ಮುಂಬಯಿಗೆ ಬಂದರು. ವಿಲ್ಸನ್ ಕಾಲೇಜದಲ್ಲಿ ಟ್ಯೂಟರ ಸ್ಥಳಕ್ಕಾಗಿ ಪ್ರಯತ್ನಿಸಿದರು. ಅದು ಸಾಧ್ಯವಾಗಲಿಲ್ಲ. ಪುನಃ ಖಾನದೇಶಕ್ಕೆ ಮರುಳಿದರು. ಹೈಸ್ಕೂಲಿನಲ್ಲಿ ನವಕರಿಯನ್ನು ಹಿಡಿದರು. ಕಾಲೇಜ ಪ್ರಿನ್ಸಿಪಾಲರ ಕಡೆಗೆ ಅರ್ಜಿಯನ್ನು ಮಾಡಿರೆಂದು ಪತ್ರ ಬಂದಿತು. ಆದರೆ ಗುರೂಜಿಯವರು ಪ್ರಾಧ್ಯಾಪಕತ್ವದ ಹವ್ಯಾಸವನ್ನೇ ಬಿಟ್ಟುಬಿಟ್ಟರು.

## ಹೊಸ ಜೀವನ — ಹೊಸ ಬೆಳಕು

ಖಾನದೇಶದ ಶಿಕ್ಷಣಸಂಸ್ಥೆಯಿಂದ ನಡೆಯಿಸಿದ ' ಪ್ರತಾಪ ಹೈಸ್ಕೂಲ ' ಎಂದು ಪ್ರಖ್ಯಾತಿ ಪಡೆದ ಸಂಸ್ಥೆಯು ಅಮಳನೇರದಲ್ಲಿದೆ. ಶ್ರೀ. ಗೋಖಲೆ, ಕುವಲಯಾನಂದ ಗುಣೆ, ಸರದೇಸಾಯಿ, ಜಾಂಭೇಕರ ಮೊದಲಾದ ಅನೇಕ ತ್ಯಾಗಿಗಳು ಈ ಸಂಸ್ಥೆಯನ್ನು ಬೆಳೆಯಿಸಿದ್ದರು ಇವರಿಗೂ ತತ್ವಜ್ಞಾನ ಮಂದಿರಕ್ಕೂ ನಿಕಟ ಸಂಬಂಧವಿದ್ದಿತು. ಅಲ್ಲಿಯ ತ್ಯಾಗಿಗಳೂ ಕರ್ತೃತ್ವ ಶಕ್ತಿಯುಳ್ಳವರೂ ತೇಜಸ್ವಿಗಳೂ ಆದ ತರುಣರು ತಮ್ಮ ಸಂಸ್ಥೆಯಲ್ಲಿ ಬರ ಬೇಕೆಂದು ಸಂಚಾಲಕರು ಅಪೇಕ್ಷಿಸುತ್ತಿದ್ದರು. ಗುರೂಜಿಯು ಈ ಸಂಸ್ಥೆಯಲ್ಲಿ ಸೇರುವದನ್ನು ನಿಶ್ಚಯಿಸಿದರು. ಪಾಂಡುರಂಗ ಸದಾಶಿವ ಸಾನೆಯವರು ಅಂದಿನಿಂದ ಸಾನೆ ಗುರೂಜಿಯಾದರು. ಅಮಳನೇರದ ಹೈಸ್ಕೂಲಿನಲ್ಲಿ ವಿದ್ಯಾರ್ಥಿಗಳ ಸಂಬಂಧವು ಮತ್ತೆ ಗುರೂಜಿಯವರಿಗೆ ಬಂದಿತು. ಅವರ ಹೃದಯದಲ್ಲಿ ಅದಕ್ಕೆ ಚಿರಂತನವಾದ ಸ್ಥಾನವು ದೊರೆಯಿತು. ಇಲ್ಲಿಯವರೆಗೆ ಆತ್ಮವಿಕಾಸವನ್ನು ಮಾಡಿಕೊಳ್ಳುತ್ತಿದ್ದ ಗುರೂಜಿಯು ಈಗ ಅನೇಕ ಅರಳುವ ಮೊಗ್ಗೆಗಳಿಗೆ ಪ್ರಕಾಶವನ್ನೂ ನೀರನ್ನೂ ಜೀವನವನ್ನೂ ಕೊಟ್ಟು ಅವು ಪೂರ್ಣ ಅರಳುವಂತೆ ಮಾಡುವ ಹೊಣೆಯನ್ನು ಹೊತ್ತರು.

ವಿದ್ಯಾರ್ಥಿಗಳಲ್ಲಿ ಕೂಡಲೆ ಪ್ರಿಯರಾದರು. ಪ್ರಿನ್ಸಿಪಾಲರಾದ ಗೋಖಲೆ ಯವರು, ಸ್ವಲ್ಪ ಕಠೋರ ಸ್ವಭಾವದವರು, ಸಿಸ್ತಿನ ಭಕ್ತರು ಸಾನೆ ಗುರೂಜಿ ಯಾದರೋ ಮೃದುಪ್ರಕೃತಿ, ಅಂತಃಸ್ಫೂರ್ತಿನಿಷ್ಠರು. ನಡುನಡುವೆ ಚಕಮಕಿ ಗಳಾಗುತ್ತಿದ್ದವು. ಆದರೆ ಇಬ್ಬರೂ ಪರಸ್ಪರರ ಯೋಗ್ಯತೆಯನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ಗುರೂಜಿಯವರು ಕಾರ್ಯದಲ್ಲಿ ಯಾವಾಗಲೂ ಮುಂದೆ

ಇದ್ದರೂ ಜನತೆಯಲ್ಲಿ ಹಿಂದೆ ಉಳಿಯುತ್ತಿದ್ದರು. ಬಲು ಸಂಕೋಚ ಸ್ವಭಾವ. ಗೋಖಲೆಯವರು, ಛಾತ್ರಾಲಯದ ಹೊಣೆಯನ್ನು ಗುರೂಜಿಗೆ ಪೂರ್ಣವಾಗಿ ಒಪ್ಪಿಸಿದರು. ಅವರು ಸಂಕೋಚದಿಂದಲೇ ಅದನ್ನು ಸ್ವೀಕರಿಸಿದರು. ಛಾತ್ರಾಲಯುದಲ್ಲಿ ಹೊಸ ಜೀವವು ಬಂದಿತು. ಮೆಲ್ಲಮೆಲ್ಲನೆ ಛಾತ್ರಾಲಯದ ಕಾರ್ಯದಲ್ಲಿ ಪೂರ್ಣವಾಗಿ ತನ್ಮಯರಾದರು 'ನನ್ನ ಜೀವನದಲ್ಲಿ ನಡುವಿನ ಸ್ಥಿತಿಯೇ ಇಲ್ಲ. ನಾನು ಪೂರ್ಣವಾಗಿ ಸಮರಸನಾಗುವೆ, ಇಲ್ಲವೆ ದೂರವಾಗಿ ಉಳಿಯುವೆ.' ಅವರ ಜೀವನದ ಈ ಸೂತ್ರವು ಇಲ್ಲಿಯೂ ಸತ್ಯವಾಯಿತು. ಛಾತ್ರಾಲಯದ ಪ್ರತಿಯೊಂದು ಕಾರ್ಯದಲ್ಲಿಯೂ ಮನಸ್ಸು ಹಾಕಿ ಪೂರ್ಣತೆಯನ್ನು ತರಲು ಯತ್ನಿಸಿದರು. ಸ್ವಚ್ಛತೆಯನ್ನು ಕಾಯ್ದರು, ಹೂದೋಟಗಳನ್ನು ನಿರ್ಮಿಸಿದರು. ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸಿದರು ಜಹಗೀರದಾರ-ಶ್ರೀಮಂತರ ಮಕ್ಕಳು ಕೂಡ ಗುರೂಜಿಯ ಪ್ರಭಾವಕ್ಕೊಳಗಾಗಿ, ತ್ಯಾಗಿಗಳಾಗಿ ಬೇಕಾದ ಸೇವಾಕಾರ್ಯಕ್ಕೆ ಸಿದ್ಧರಾದರು. ಸೇವೆಯಲ್ಲಿ ಆನಂದಪಡಹತ್ತಿದರು. ಛಾತ್ರಾಲಯುವನ್ನು ಸೇರಲು ನಾಮುಂದೆ, ನೀ ಮುಂದೆ ಎಂದು ವಿದ್ಯಾರ್ಥಿಗಳು ನುಗ್ಗಹತ್ತಿದರು. ವಶೀಲಿಯನ್ನು ಹಚ್ಚುವ ಪ್ರಸಂಗ ಬರಹತ್ತಿತು. ಮಳೆ-ಚಳಿಗಳನ್ನು ಲೆಕ್ಕಿಸದೆ, ನಾವು ಛಾವಣಿಯಲ್ಲಿ ಮಲಗುವೆವು, ನಮಗೆ ಪ್ರವೇಶವನ್ನು ಕೊಡಿರಿ ಎಂದು, ವಿದ್ಯಾರ್ಥಿಗಳು ಬೆನ್ನುಹತ್ತಿದರು. ಗುರೂಜಿಯವರೊಡನೆ ಇರುವದು, ಅವರೊಡನೆ ಕಾರ್ಯಮಾಡುವದು, ಅವರೊಡನೆ ಆಡುವದರಲ್ಲಿಯೇ ವಿದ್ಯಾರ್ಥಿಗಳಿಗೆ ಹೆಮ್ಮೆ ಹಾಗೂ ಆನಂದಗಳುಂಟಾಗಹತ್ತಿದವು. ಶ್ರೀಮಂತರು ಕೂಡ ನೀರು ಸೇದುವುದು, ಕಸಗೂಡಿಸುವುದು, ಮೊದಲಾದ ಕಾರ್ಯಗಳಲ್ಲಿ ರಮಮಾಣರಾದರು. ಹೂದೋಟವು ಫಲಪುಷ್ಪಭರಿತವಾಯಿತು. ಅಂದಮಾನದ ಪಡಭೂಮಿಯುಂತಿದ್ದ ಛಾತ್ರಾಲಯದ ಪ್ರದೇಶವೆಲ್ಲವೂ ಆನಂದಭುವನವಾಗಿ ಕಂಗೊಳಿಸಿತು. ಬಾಲಕರೆಲ್ಲರೂ ತೇಜಸ್ವಿಗಳಾಗಿ ಕಾರ್ಯತತ್ಪರರಾದರು. ಬೆಳಗಿನ ಝೂವದಲ್ಲಿ ನಡೆಯುವ ಪ್ರಾರ್ಥನೆಯು, ಋಷ್ಯಾಶ್ರಮದ ನೆನಪನ್ನು ತಂದುಕೊಡಹತ್ತಿತು. ಛಾತ್ರಾಲಯದಲ್ಲಿ ಪವಿತ್ರವೂ ಪ್ರೇಮಮಯವೂ ಆದ ವಾತಾವರಣವುಂಟಾಯಿತು. ವಿದ್ಯಾರ್ಥಿಗಳ ಜೀವನದಲ್ಲಿ ಗುರೂಜಿಯವರು ಕ್ರಾಂತಿಯನ್ನೇ ಉಂಟುಮಾಡಿದರು ಅರಳುವ ಮೊಗ್ಗೆಗಳಂತೆ ನಲಿಯುವ ವಿದ್ಯಾರ್ಥಿವೃಂದವು ಛಾತ್ರಾಲಯದಲ್ಲೆಲ್ಲ ಆನಂದದ ನದಿಯನ್ನೇ ಹರಿಸಿತ್ತು.

ಸಾನೆ ಗುರೂಜಿಯೆಂದರೆ, ಜ್ಞಾನಾಮೃತವನ್ನೀಯುವ ಧರ್ಮಾರ್ಥ ಅಮೃತಕಲಶ. ಬೇಕಾದವರು ತಮ್ಮ ಶಕ್ತಿಯಿದ್ದಷ್ಟು ಅದನ್ನು ಸವಿದು ಆನಂದ ಪಡಬಹುದು. ಪ್ರೇಮಮೂರ್ತಿಗಳಾದ ಗುರೂಜಿಯವರು ಸರ್ವ ಸೇವೆಗೆ ಸಿದ್ಧರಾಗಿಯೇ ಕೂತಿದ್ದರು. ಯಾರೇ ಬೇನೆ ಬೀಳಲಿ ಅವರ ಶುಶ್ರೂಷೆಗೆ ಸಿದ್ಧ. ಎಲ್ಲಿಯಾದರೂ ಯಾರಾದರೂ ಹೊಲಸು ಮಾಡಿದರೆ, ಅದನ್ನು ತೆಗೆಯಲು ಅವರು ತತ್ಪರರು. ಒಬ್ಬ ವಿದ್ಯಾರ್ಥಿಯು ಕೋಣೆಯ ಬಾಗಿಲ ದಲ್ಲಿಯೇ ಶೌಚಮಾಡುತ್ತಿದ್ದನು. ಗುರೂಜಿಯು ಏನೂ ಗದ್ದಲವಿಲ್ಲದೆ ದಿನಾಲು ಅದನ್ನು ತೆಗೆಯಬೇಕು. ಕೊನೆಗೆ ವಿದ್ಯಾರ್ಥಿಯು ಲಜ್ಜಿತನಾಗಿ ತಪ್ಪು ಒಪ್ಪಿಕೊಂಡನು. ಒಮ್ಮೆ ಆಳುಮಗನು ಬೇನೆಬಿದ್ದನು. ಅವನನ್ನು ಕರೆತಂದು ತಮ್ಮ ಮಂಚದ ಮೇಲೆ ಮಲಗಿಸಿ, ತಮ್ಮ ತಮ್ಮನಂತೆಯೇ ಅವನ ಶುಶ್ರೂಷೆಯನ್ನು ಮಾಡಿದರು. ಕೊನೆಗೆ ಅವನು ಮೃತನಾದನು. ತಾವೇ ಬೆಂಕೆಯನ್ನು ಹಿಡಿದುಕೊಂಡು ಸ್ಮಶಾನಕ್ಕೆ ಹೋದರು. ಅವರು ವಿದ್ಯಾರ್ಥಿಗಳ ಮನಸ್ಸನ್ನೆಲ್ಲ ಪ್ರೇಮದಿಂದ ಜಯಿಸಿದರು. ಅವರಲ್ಲಿ ಸಮಾನತೆಯು ಬೇರೂರು ವಂತೆ ಮಾಡಿದರು. ಭೇದಭಾವವನ್ನು ಅಳಿದರು. ದೇಶಪ್ರೇಮವನ್ನು ಬಿತ್ತಿದರು. ವಿದ್ಯೆಯ ಉಪಾಸನೆಯನ್ನು ಮಾಡಿಸಿದರು. ಶಾರದೆಯ ಭಕ್ತಿಯನ್ನು ಕಲಿಸಿದರು. ವಿದ್ಯಾರ್ಥಿಗಳ ದೃಷ್ಟಿಯು ಕ್ಷಿತಿಜವನ್ನು ಮೀರಿ ಹರಿಯಲೆಂದು, ಛಾತ್ರಾಲಯದ ದೈನಿಕವು ಜನ್ಮತಾಳಿತು. ಗುರೂಜಿಯು ಸ್ವತಃ ಎಲ್ಲವನ್ನು ಬರೆಯುತ್ತಿದ್ದರು. ಸುಂದರವಾದ ಮುತ್ತಿನಂತಹ ಅಕ್ಷರ, ಪ್ರತಿಯೊಂದು ಸಂಚಿಕೆಯಲ್ಲಿ ಜ್ಞಾನ ಹಾಗೂ ವಿಜ್ಞಾನಗಳ ವಿಚಾರಪೂರಿತ ಲೇಖನ, ಸ್ಥಾನಿಕ ವೃತ್ತ, ವಿದ್ಯಾರ್ಥಿಗಳ ಸುಖದುಃಖ, ತಪ್ಪಿದವರಿಗೆ ಎಚ್ಚರಿಕೆ, ಕರ್ತೃತ್ವಶಾಲಿಗಳ ಕೌತುಕ, ಮೊದಲಾದವುಗಳು ಇರುತ್ತಿದ್ದವು. ಶಾಲೆಯಲ್ಲಿ ಕೂಡ, ವಿಷಯಗಳ ಟಿಪ್ಪಣಿಗಳನ್ನಷ್ಟೇ ಹೇಳದೆ, ವಿಷಯದ ಮೂಲದ ವರೆಗೆ ವಿದ್ಯಾರ್ಥಿಗಳ ಮನಸ್ಸನ್ನು ಎಳೆಯುತ್ತಿದ್ದರು. ಅದಕ್ಕೆ ಆನುಷಂಗಿಕವಾಗಿ, ವಿವಿಧ ವಿಷಯಗಳನ್ನು ಹೇಳುತ್ತಿದ್ದರು. ಹೀಗೆ ಸಾನೆ ಗುರೂಜಿಯವರು ಪ್ರೇಮದಿಂದ ವಿದ್ಯಾರ್ಥಿವೃಂದದಲ್ಲಿ ಅವರ ಮನಸ್ಸನ್ನು ಶುದ್ಧಗೊಳಿಸಿ, ಕ್ರಾಂತಿಯ, ದೇಶಪ್ರೇಮದ ಬೀಜಗಳನ್ನು ಬಿತ್ತಿ ಅವರ ಮನಸ್ಸನ್ನು ಅರಳಿಸಹತ್ತಿದರು.

## 'ವಿದ್ಯಾರ್ಥಿ' ಮಾಸಪತ್ರಿಕೆ

ಗುರೂಜಿಯವರ ಕೀರ್ತಿಸುಗಂಧವು ಖಾನದೇಶದಲ್ಲೆಲ್ಲ ಹರಡಿತ್ತು. ಅವರಿಗೆ ಕಾರ್ಯಕ್ಷೇತ್ರವು ತೀರ ಚಿಕ್ಕದೆನಿಸಹತ್ತಿತು. ಆದುದರಿಂದ 'ಛಾತ್ರಾಲಯ' ದೈನಿಕವು 'ವಿದ್ಯಾರ್ಥಿ' ಮಾಸಪತ್ರಿಕೆಯಾಗಿ ಪರಿಣಮಿಸಿತು. ಹರಿಭಾವು ಮೋಹನಿಯವರು ಪ್ರಕಾಶಕರಾದರು. ಗುರೂಜಿಯವರು ಸಂಪಾದಕರಾದರು. 'ವಿದ್ಯಾರ್ಥಿ' ಪತ್ರಿಕೆಯು ಖಾನದೇಶಕ್ಕೆ ಹುಚ್ಚು ಹಿಡಿಸಿತು. ಖಾನದೇಶವನ್ನು ಮೀರಿ ಮಹಾರಾಷ್ಟ್ರದಲ್ಲಿಯೂ ತನ್ನ ಪ್ರಭಾವವನ್ನು ಹರಡ ಹತ್ತಿತು. ವಿದ್ಯಾರ್ಥಿಗಳ ಶೀಲಸಂವರ್ಧನೆ ಮಾಡುವದಕ್ಕಾಗಿಯೂ, ಜ್ಞಾನ ವನ್ನು ಹೆಚ್ಚಿಸುವದಕ್ಕಾಗಿಯೂ, ದೇಶಪ್ರೇಮವನ್ನು ಹುಟ್ಟಿಸುವದಕ್ಕಾಗಿಯೂ ಗುರೂಜಿಯು ದಿನಾಲು ಬರೆಯಲುಪಕ್ರಮಿಸಿದರು. ೫೦ ಪುಟದ ಪತ್ರಿಕೆಯನ್ನು ತೆಗೆಯಬೇಕೆಂದು ಗೊತ್ತಾಯಿತು. ಆದರೆ ಗುರೂಜಿಯವರು ಅಷ್ಟಕ್ಕೆ ತೃಪ್ತರಾಗದೆ, ತಮ್ಮ ಸಂಬಳದ ಹಣವನ್ನು ವೆಚ್ಚಮಾಡುತ್ತ ೭೨ ಪುಟದ ಪತ್ರಿಕೆಯನ್ನು ಹೊರಡಿಸಹತ್ತಿದರು. ಇದನ್ನು ಕಂಡು ಸಂಗಡಿಗರು ಚಕಿತ ರಾದರು. ಅವರ ಲೆಕ್ಕಣಿಕೆಗೆ ಒಳ್ಳೇ ಯೌವ್ವನದ ಕಾಲ, ಮಿಂಚಿನಂತೆ ಅದು ತೇಜಸ್ವಿಯೂ ಚಪಲವೂ ಆಗಿದ್ದಿತು. ಅದರಲ್ಲಿ ಗಂಗೆಯ ಪಾವಿತ್ರ್ಯವು ಬಂದಿತ್ತು. ಭಾವನೆಯಿಂದ ತುಂಬಿತ್ತು. ಪ್ರಗಲ್ಭವಾದ ವಿಚಾರಗಳು ರಸವತ್ತಾಗಿ ವರ್ಣಿಸಲ್ಪಡಹತ್ತಿದವು. ತೇಜಸ್ವಿಯಾದ ವಾಙ್ಮಯಪ್ರವಾಹವು ಹರಿಯಹತ್ತಿತು. ಜನತೆಗೆ ಈ ಸಾಹಿತ್ಯವು ಹುಚ್ಚು ಹಿಡಿಸಿತು. 'ವಿದ್ಯಾರ್ಥಿ'ಯು ಪ್ರತಿಯೊಂದು ಮನೆಯಲ್ಲಿಯೂ ಸ್ವಾಗತಿಸಲ್ಪಡಹತ್ತಿತು. ವಿದ್ಯಾರ್ಥಿಗಳು ಈ ಮಾಸಿಕವನ್ನು ತರಿಸಲು ತಂದೆ-ತಾಯಿಗಳಿಗೆ ಆಗ್ರಹಪಡಿಸಹತ್ತಿದರು. ಈ ಬಗೆಗೆ ಒಬ್ಬ ವಿದ್ಯಾರ್ಥಿಯು ಮನೆಗೆ ಬರೆದ ಓಲೆಯನ್ನು ಇಲ್ಲಿ ಕೊಡುತ್ತೇವೆ.

"ತಾವು ಈ ಅಂಕನ್ನು ತರಿಸಿಕೊಳ್ಳಿರಿ. ಅದರ ಚಂದಾದಾರರಾಗಿರಿ. ಸಾನೆ ಗುರೂಜಿಯವರ ಸೊಗಸಿನ ಕಥೆಗಳು ಅದರಲ್ಲಿ ಬರುವವು. ಸುಂದರವಾದ ಹಾಗೂ ತೇಜಸ್ವಿಯಾದ ಚರಿತ್ರಗಳೂ ಅದರಲ್ಲಿವೆ. ವಿಜ್ಞಾನದ ಬರಹಗಳು ಬರುತ್ತಿವೆ. ವಿದ್ಯಾರ್ಥಿಗಳ ಬುದ್ಧಿಯು ಹರಿತವಾಗುವಂತಹ ಚರ್ಚೆಗಳಿವೆ ಇದರಲ್ಲಿ. ನಮ್ಮ ಶಾಲೆಯ ಕನ್ನಡಿಯೇ ಇದು. ನಮ್ಮ ಊರಿನಲ್ಲಿ ಐದು

ಜನರಾದರೂ ಇದರ ಚಂದಾದಾರರಾಗಬೇಕು. ನನ್ನ ಆಗ್ರಹವು ಇಷ್ಟೆ! ನನಗೆ ತಿನ್ನುಣ್ಣಲು ಕಡಿಮೆಯಾದರೂ ಚಿಂತೆಯಿಲ್ಲ. ತಾವು ಈ ಮಾಸಿಕ ಪುಸ್ತಕವನ್ನು ತರಿಸಲೇಬೇಕು.''

## ನಾವು ಸ್ವಾತಂತ್ರ್ಯದ ಸೈನಿಕರು

ಪರಕೀಯ ಸರಕಾರಕ್ಕೆ ಇದು ಸಹನವಾಗಲಿಲ್ಲ. ತೇಜಸ್ವಿಯಾದ ವಿಚಾರಗಳಿಂದ ತರುಣರನ್ನು ಪ್ರೇರಿಸುವ ಅವರನ್ನು ಕ್ರಾಂತಿಕಾರರನ್ನಾಗಿ ಮಾಡುವ ಈ ಮಾಸಿಕ ಪುಸ್ತಕವನ್ನು ಸರಕಾರವು ನಿಲ್ಲಿಸಿಬಿಟ್ಟಿತು. ಇದರಿಂದ ಗುರೂಜಿಯವರಿಗೆ ಆಹ್ವಾನವಿತ್ತಂತಾಗಿ, ಅವರ ಉತ್ಸಾಹವು ಇಮ್ಮಡಿಯಾಯಿತು. ಗುರೂಜಿಯು ತಮ್ಮ ವಿಚಾರಗಳನ್ನು ವ್ಯಾಖ್ಯಾನಗಳಿಂದ ಹರಡಹತ್ತಿದರು. ಅವರ ವಕ್ತೃತ್ವಕ್ಕೆ ಇದು ವಸಂತಕಾಲ, ಅವರ ವಾಕ್‌ಪ್ರವಾಹವು ಗಂಗೆಯಂತೆ ತುಂಬಿ ಹರಿಯಹತ್ತಿತು. ವಿಲಕ್ಷಣವಾದ ತೇಜಸ್ಸಿನಿಂದಲೂ ದೇಶಪ್ರೇಮದಿಂದಲೂ ತುಂಬಿತುಳುಕುತ್ತಿತ್ತು. ಇದೇ ಸಮಯದಲ್ಲಿಯೇ ೧೯೨೯ರಲ್ಲಿ ಪಂಡಿತಜಿಯವರು ಲಾಹೋರ ಕಾಂಗ್ರೆಸ್ಸಿನ ಅಧ್ಯಕ್ಷಸ್ಥಾನದಿಂದ ಸ್ವಾತಂತ್ರ್ಯದ ಘೋಷಣೆಯನ್ನು ಮಾಡಿದರು. ರಾವೀ ನದಿಯ ದಂಡೆಯಮೇಲೆ, ಮಹಾಯಜ್ಞವು ಪ್ರಾರಂಭವಾಯಿತು. ೧೯೩೦ನೇ ಇಸ್ವಿಯ ಸುಪ್ರಭಾತವಾಯಿತು. ಮಹಾತ್ಮರು ರಣಗರ್ಜನೆಯನ್ನು ಮಾಡಿ ದಾಂಡಿಯಾತ್ರೆಗೆ ಹೊರಟರು. ರಾಷ್ಟ್ರವನ್ನು ನಿರ್ಭಯಗೊಳಿಸುವದಕ್ಕಾಗಿ ಸ್ವತಃ ದಂಡನಾಯಕರಾಗಿ ಗಾಂಧೀಜಿಯವರು ರಣಕ್ಷೇತ್ರಕ್ಕೆ ನಡೆದಿದ್ದರು. ದೇಶದ ವಾತಾವರಣವು ಕಾಯಹತ್ತಿತ್ತು. ಖಾನದೇಶದ ಕಪ್ಪು ಭೂಮಿಯಲ್ಲಿಯೂ ಕೂಡ ಕ್ರಾಂತಿಕಾರಕ ವಿಚಾರಗಳು ಹರಡಹತ್ತಿದವು. ಶಾಲೆ, ಕಾಲೇಜಗಳು ಬಂದಾಗಹತ್ತಿದವು. ಹರಿಭಾವು ಮೋಹನಿಯವರು ಶಾಲೆಗೆ ಶರಣುಹೊಡೆದು ದಾಂಡೀಯಾತ್ರೆಯಲ್ಲಿ ಭಾಗ ವಹಿಸಿದ್ದರು. ಗುರೂಜಿಯಾದರೂ ಹಿಂದುಳಿಯುವದರಲ್ಲಿ ಅಷ್ಟೇಯಿತ್ತು. ಅವರು ೩ನೇ ಮಾರ್ಚಕ್ಕೆ ಮ್ಯಾಟ್ರಿಕ್ ಪರೀಕ್ಷೆಯ ಕೊನೆಯ ಪಾಠವನ್ನು ಮುಗಿಸಿದರು. ಶಾಲೆಯ ಋಣದಿಂದ ಮುಕ್ತರಾದರು. ವಿದ್ಯಾರ್ಥಿ ಜೀವನದಿಂದ ಅವರು ಹೊರಬೀಳುವವರಿದ್ದರು. ಅವರ ಅಪ್ಪಣೆಯನ್ನು ಕೋರಿದರು. ಛಾತ್ರಾಲಯದಲ್ಲಿ

ರಾತ್ರಿಯೆಲ್ಲ ಸುಮ್ಮನೆ ಮೂಕರಾಗಿ ತಿರುಗಾಡಿದರು. ಮಹಾಮನರಾದ ಗೋಖಲೆಯವರ ಅಡಿದಾವರೆಗಳಲ್ಲಿ ಪ್ರೇಮದ ಕಾಣಿಕೆಯನ್ನು ಅರ್ಪಿಸಿದರು. ಇಬ್ಬರೂ ಬಂಧುಗಳ ಕಂಠವು ಬಿಗಿದುಬಂದಿತು. ಆಗಲಿಕೆಯು ಅಸಹ್ಯ ವೇದನೆಯನ್ನು ಉಂಟುಮಾಡಿತು. ರಾಷ್ಟ್ರದ ಕರೆಯು ಇಬ್ಬರಿಗೂ ಉಚ್ಚ ಕರ್ತವ್ಯದ ಸಂದೇಶವನ್ನೀಯಿತು. ಗುರೂಜಿಯು ಕೆಂಪು ಮಶಿಯಿಂದ ದೈನಿಕದ ಕೊನೆಯ ಅಂಕನ್ನು ಹೊರಡಿಸಿದರು. ಶಾಲೆಯ ಹೊರಗಿನ ವಿಶಾಲ ವಾದ ಸಮಾಜದ ಮಹಾರಾಷ್ಟ್ರದ ಗುರುವಾಗಲು, ಛಾತ್ರಾಲಯದ ಹಾಗು ವಿದ್ಯಾಲಯದ ಮತ್ತು ಅಮಳನೇರದ ಅಪ್ಪಣೆಯನ್ನು ತೆಗೆದುಕೊಂಡರು. ಅವರ ಶಿಷ್ಯರಾದ ಉತ್ತಮ ಪಾಟೀಲ ಮತ್ತು ನಾಮದೇವರು ಹೊರಬೀಳಲು ಕುಣಿಯುತ್ತಿದ್ದರು. ೫-೬ ಜನ ತರುಣರನ್ನು ಕರೆದುಕೊಂಡು ಅವರು ಸಮರಾಂಗಣಕ್ಕೆ ಇಳಿದರು. "**ನಾವು ಸ್ವಾತಂತ್ರ್ಯದ ಸೈನಿಕರು, ನಾವು ನಿರ್ಭಯರು, ನಿರಂಕುಶರು; ಈ ರಾಕ್ಷಸೀ ಸರಕಾರವನ್ನು ನಾವು ಎಂದೂ ಜೀವಂತವಿಡುವದಿಲ್ಲ**" ಎಂದು ಕ್ರಾಂತಿಮಂತ್ರವನ್ನು ಘೋಷಿಸಿ ದಶದಿಕ್ಕುಗಳಲ್ಲಿಯೂ ಕ್ರಾಂತಿಕಾರಕ ವಾತಾವರಣವನ್ನು ನಿರ್ಮಿಸಿದರು. ರೇಲ್ವೆಗಳಲ್ಲಿಯೂ ಸಮಾಜದಲ್ಲಿಯೂ ಸ್ವಾತಂತ್ರ್ಯಯುದ್ಧಕ್ಕಾಗಿ ಹಣ ಕೂಡಿಸ ಹತ್ತಿದರು. ಎಲ್ಲೆಡೆಗಳಲ್ಲಿ ಸಭೆಗಳಾಗಹತ್ತಿದವು. ಗುರೂಜಿಯ ಗರ್ಜನೆ ಯಿಂದ ಖಾನದೇಶವೇ ಜಾಗೃತವಾಯಿತು. ತರುಣರು ಸತ್ಯಾಗ್ರಹಾಶ್ರಮ ವನ್ನು ತಂಡೋಪತಂಡವಾಗಿ ಸೇರಹತ್ತಿದರು. ಗುರೂಜಿಯು ಚರಖಾಮಂತ್ರ ವನ್ನು ಉಚ್ಚರಿಸಹತ್ತಿದರು. ತರುಣರೆಲ್ಲ ನೂಲಹತ್ತಿದರು. ಸಭೆಗಳಲ್ಲಿ ಹೊನ್ನಿನ ಮಳೆಯಾಗಹತ್ತಿತು. ಯಾರು ಉಂಗುರ ಕೊಡುವರು, ಯಾರು ಕೈಯಲ್ಲಿಯ ಪಾಟಲಿ ಕೊಡುವರು, ಕೆಲವರು ವಸ್ತುಗಳನ್ನು ಒಗೆಯುವರು, ಹಲವರು ಗಡಿಯಾರಗಳನ್ನೇ ಕೊಡುವರು, ಹೀಗೆ ಸ್ವಾತಂತ್ರ್ಯಸಮರಕ್ಕೆ ಹೊನ್ನಿನ ಹೊಳೆ ಹರಿಯಿತು. ಸಭೆಸಭೆಗಳಲ್ಲಿ ಗುರೂಜಿಯವರು ಕ್ರಾಂತಿಯ ಕಿಡಿಗಳನ್ನು ಕಾರುತ್ತ, ಜನರ ಅಂತಃಕರಣದಲ್ಲಿ ಕ್ರಾಂತಿಯ ದಾವಾನಲವನ್ನು ಹೊತ್ತಿಸಹತ್ತಿದರು. ಸರಕಾರವು ಅದೆಂತು ಸಹಿಸುವದು! ಬಂಧಿಸಲು ವಾರಂಟು ಹೊರಟಿತು. ಗುರೂಜಿಯವರು, ಅವರ ಕಣ್ಣುತಪ್ಪಿಸುತ್ತ ವಾಯುವೇಗದಿಂದ ಸಂಚರಿಸಹತ್ತಿದರು. ಅಸಂಖ್ಯಾತ ಸಭೆ ಕೂಡಿಸಿದರು

ಸ್ವಾತಂತ್ರ್ಯದ ಸಂದೇಶವನ್ನು ಬೀರಿದರು. ಮುಂದೇನು ಮಾಡಬೇಕು ಎಂಬುದನ್ನು ತಿಳಿಸಿದರು. ಅಮಳನೇರದ ಸಾರ್ವಜನಿಕ ಸಭೆಯಲ್ಲಿಯೇ ಬಂಧಿಸಲ್ಪಟ್ಟರು. ಇವರನ್ನು ಹಿಡಿಯಬೇಕಾದರೆ ಪೋಲೀಸರಿಗೆ ಹುಲಿಯನ್ನು ಹಿಡಿದಹಾಗಾಯಿತು. ಜನಕ್ಷೋಭವು ಬೆನ್ನುಹತ್ತಿತು. ಮೆರವಣಿಗೆ ತೆಗೆಯುವೆವು ಎಂದು ಜನರ ಹಟ. ಫೌಜದಾರನು ಬಹು ಬುದ್ಧಿವಂತಿಕೆಯಿಂದ ಅದನ್ನು ತಪ್ಪಿಸಿದನು. "ಈಗ ರಾತ್ರಿಯಾಗಿದೆ, ಬೆಳಿಗ್ಗೆ ತೆಗೆಯಿರಿ" ಎಂದು ಹೇಳಿ, ರಾತ್ರಿಯಲ್ಲಿಯೇ ಅವರನ್ನು "ಎರಂಡೋಲ"ಕ್ಕೆ ಕರೆದೊಯ್ದರು. ಅಲ್ಲಿ ವಿಚಾರಣೆ ನಡೆದು, ೧೫ ತಿಂಗಳ ಕಠಿಣ ಶಿಕ್ಷೆ ಹಾಗೂ ೨೦೦ ರೂ. ದಂಡ, ಇಲ್ಲವೆ ೩ ತಿಂಗಳ ಶಿಕ್ಷೆ ಎಂದು ವಿಧಿಸಿದರು. 'ಬ' ವರ್ಗವನ್ನು ನಿರಾಕರಿಸಿದ್ದರಿಂದ 'ಕ' ವರ್ಗವನ್ನು ಕೊಡಲಾಯಿತು. ಉತ್ತಮ ಪಾಟೀಲನು ಸ್ವಲ್ಪ ದಿನಗಳಲ್ಲಿಯೇ ಬಂದು ಇವರನ್ನು ಕೂಡಿಕೊಂಡನು. ಆಚಾರ್ಯ ರಬಡೆ, ಭಯ್ಯಾ ಕುಲಕರ್ಣಿ ಇವರೊಡನೆ ಇದ್ದರು. ಧುಳೆ ಜೇಲಿಗೆ ಕಳಿಸಲ್ಪಟ್ಟರು.

## ಪ್ರಾಂತಭಾರತಿಯ ಕಲ್ಪನೆ ಹಾಗು ಸಾಹಿತ್ಯ ನಿರ್ಮಾಣ

ಧುಳೆಯ ಜೇಲಿನಿಂದ ಅನೇಕ ಕೈದಿಗಳನ್ನು ತ್ರಿಚನಾಪಳ್ಳಿಗೆ ಕಳಿಸಿದರು. ಅದರಲ್ಲಿ ಗುರೂಜಿ, ಭಯ್ಯಾಜಿ, ಉತ್ತಮರಿದ್ದರು. ತ್ರಿಚನಾಪಳ್ಳಿಯ ತುರಂಗವು ಬಹು ದೊಡ್ಡದು. ಮೂರುಸಾವಿರದ ವರೆಗೆ ಕೈದಿಗಳು ಒಂದೆಡೆಯಲ್ಲಿರುತ್ತಾರೆ. ಅನೇಕ ಪ್ರಾಂತಗಳಲ್ಲಿಯ ರಾಜಕೀಯ ಕೈದಿಗಳು ಇಲ್ಲಿದ್ದರು. ಬಹುತರವಾಗಿ ಭಾರತದ ದರ್ಶನವು ರಾಜಕೀಯ ಮುಂದಾಳುಗಳಿಗಾದುದು ಜೇಲಿನಲ್ಲಿಯೇ! ಭಿನ್ನಭಿನ್ನ ಭಾಷೆಯ ಭಿನ್ನಭಿನ್ನ ಪ್ರಾಂತದ ಅನೇಕ ಜಾತಿಯ ಜನರೆಲ್ಲರೂ ಒಂದೆಡೆ ಬಹುದಿನ ಕೂಡಿದ್ದು ಸಂಕುಚಿತ ವೃತ್ತಿಗಳನ್ನೆಲ್ಲ ತೊರೆದು ನಾವು ಭಾರತೀಯರು ಎಂದು ವಿಚಾರಮಾಡಲು ಹಚ್ಚಿದ ಶ್ರೇಯವು, ಗಾಂಧೀಜಿಯವರ ಸತ್ಯಾಗ್ರಹಕ್ಕೆ ಇದೆ. ಭಾರತದ ವಿರಾಟದರ್ಶನವಾದುದು ಈ ಜೇಲುಗಳಲ್ಲಿಯೇ. ಗುರೂಜಿಯು ದಾಕ್ಷಿಣಾತ್ಯ ಭಾಷೆಗಳ ಪರಿಚಯವನ್ನು ಮಾಡಿಕೊಂಡುದು ಈ ಜೇಲಿನಲ್ಲಿಯೇ! ಈ ಮೊದಲು ಚಂದ್ರೋದಯ ಭಟ್ಟಾಚಾರ್ಯರಿಂದ (ತತ್ವಜ್ಞಾನ ಮಂದಿರದ ಮಿತ್ರರು) ಬಂಗಾಲಿಯನ್ನು ಕಲಿತಿದ್ದರು. ತ್ರಿಚನಾಪಳ್ಳಿಗೆ ಬಂದಮೇಲೆ,

ದ್ರಾವಿಡ ಭಾಷೆಗಳು ಕಿವಿಯಮೇಲೆ ಬೀಳಹತ್ತಿದವು. ತಮಿಳ ಭಾಷೆಯಲ್ಲಿಯ **'ಕುರುಳ್'** ಎಂಬ ಗ್ರಂಥವನ್ನು ವೇದಕ್ಕೆ ಸಮಾನವೆಂದು ಭಾವಿಸುತ್ತಾರೆ. ಗುರೂಜಿಯು ತಮಿಳು ಕಲಿತು, ಅದನ್ನು ಅನುವಾದ ಮಾಡಿದರು. ಧುಳೆಯಲ್ಲಿಯೇ ಲೇಖನವನ್ನು ಹುರುಪಿನಿಂದ ಪ್ರಾರಂಭಿಸಿದ್ದರು. ಕೆಲವು ಕವಿತೆ, ಕೆಲವು ನಾಟಕ, ವಿವಿಧ ನಿಬಂಧಗಳು ಧುಳೆಯಲ್ಲಿಯೇ ಜನ್ಮ ತಾಳಿದ್ದವು. ತ್ರಿಚನಾಪಳ್ಳಿಯಲ್ಲಿ ಆಚಾರ್ಯ ಭಾಗವತ ಹಾಗು ಗುರೂಜಿಯವರ ದೃಢ ಪರಿಚಯವಾಯಿತು ಗುರೂಜಿಯ ವಾಙ್ಮಯದ ಮೊದಲನೇ ವಾಚಕರು ಆಚಾರ್ಯ ಭಾಗವತರು 'ರಾಮಾಚಾ ಶೇಲಾ' 'ತೆ ಆಪಲೇ 'ಘರ' ಖರೀ ಸಂಸ್ಕೃತಿ' ಇತ್ಯಾದಿ ಲಲಿತ ಸಾಹಿತ್ಯವು ತ್ರಿಚನಾಪಳ್ಳಿಯಲ್ಲಿಯೇ ಬರೆಯಲ್ಪಟ್ಟಿತು. ಎಮಿಲಿಯ ಚಿಂತನಿಕೇಚದ ಭಾಷಾಂತರವೂ ಇಲ್ಲಿಯೇ ಮಾಡಲ್ಪಟ್ಟಿತು 'ಪತ್ರಿ'ಕಾವ್ಯದ ಅನೇಕ ಕವಿತೆಗಳೂ 'ಸತ್ಯಾಗ್ರಹಿ' ಖಂಡಕಾವ್ಯದ ಜನ್ಮವೂ ಈ ಸೆರೆಮನೆಯಲ್ಲಿಯೇ! ತಮಿಳ ಕೈದಿಗಳ ಸಲುವಾಗಿ ಗುರೂಜಿಯು ಇಂಗ್ಲೀಷಿನಲ್ಲಿ ಮಾತನಾಡುತ್ತಿದ್ದರು. ಭಯ್ಯಾಜಿ ಕುಲಕರ್ಣಿಯವರೊಡನೆ ಅನೇಕ ಇಂಗ್ಲೀಷ ಗ್ರಂಥಗಳನ್ನು ಗುರೂಜಿಯು ಓದಿದರು. ಚೀನ, ತುರ್ಕಸ್ತಾನ, ಜಪಾನ, ರಶಿಯಾ ಮೊದಲಾದ ದೇಶಗಳ ಸಾಮಾಜಿಕ ಜೀವನದ ಅಭ್ಯಾಸವನ್ನು ಇಲ್ಲಿಯೇ ಮಾಡಿದರು. ಈ ಜೇಲಿನಲ್ಲಿಯೂ ಅನೇಕ ಚಕಮಕಿಗಳು ನಡೆದವು. ಗುರೂಜಿಯು ಎಲ್ಲವನ್ನೂ ಶಾಂತರೀತಿಯಿಂದ ತೂಗಿಸಿಕೊಂಡು ಹೋದರು. ತಮ್ಮ ಉತ್ಕೃಷ್ಟ ಗುಣವನ್ನು ಪ್ರಕಾಶಿಸಿದರು. ಅರ್ಥಾತ್ "ಸಹಸ್ರಗುಣಮುತ್ಸೃಷ್ಟುಂ ಆದತ್ತೇ ಹಿ ರಸಂ ರವಿಃ" ಈ ನ್ಯಾಯದಿಂದ ಗುರೂಜಿಯವರ ಜ್ಞಾನವರ್ಧನೆಯು ನಡೆದೇ ಇದ್ದಿತು. ಅನೇಕ ಸಾರೆ ಗುರೂಜಿಯು ಇಲ್ಲಿ ಭಂಗೀಕಾರ್ಯವನ್ನು ಮಾಡಿದರು. ರಾಜಕೀಯ ಕೈದಿಗಳು, ಕ್ರಿಮಿನಲ್ ಕೈದಿಗಳೊಡನೆ, ಸಹಾನುಭೂತಿಯಿಂದ ವರ್ತಿಸಬೇಕೆಂಬ ಮಾತನ್ನು ಬಿಂಬಿಸಲು ವಿಶ್ವಪ್ರಯತ್ನವನ್ನು ಮಾಡಿದರು. ೩೧ರ ಮಾರ್ಚದಲ್ಲಿ ಗುರೂಜಿಯು ಹೊರಬಿದ್ದರು. ಇದೇ ಸುಮಾರಿಗೆ ಭಗತಸಿಂಗನನ್ನು ಗಲ್ಲಿಗೇರಿಸಿದ ವರ್ತಮಾನವು ಬಂದಿತು. **ಕೂಡಲೆ ಗುರೂಜಿಯು ಅಮಳನೇರಕ್ಕೆ ಬಂದು ನಿಷೇಧದ ಸಭೆ ಮಾಡಿದರು ಅಂದಿನ ಅವರ ಭಾಷಣವು ಬೆಂಕಿಯನ್ನೇ ಕಾರುವಂತಹದಿತ್ತು. ಸೆರೆಮನೆಯಿಂದ**

ಹೊರಬಿದ್ದು ಪ್ರೇಮ ಧರ್ಮದ ಪ್ರಚಾರ ಮಾಡುವೆನೆಂದು ಹೇಳಿದ ಗುರೂಜಿಯವರು, ಪ್ರವಾಹ ಪತಿತರಾದರು. ಅಂತರ ಭಾರತಿಯ ಚಿತ್ರವನ್ನು ತುರಂಗದಲ್ಲಿಯೇ ಮನಸ್ಸಿನಲ್ಲಿ ಚಿತ್ರಿಸಿದ್ದರು. ಆದರೆ ವಾತಾವರಣವು ಆ ಕಾರ್ಯ ಕೈಕೊಳ್ಳಲು ಅನುಕೂಲವಿರಲಿಲ್ಲ. ಪರಿಸ್ಥಿತಿಯ ಮೂಲಕ ಅವರ ಮನಸ್ಸು ಮತ್ತೆ ಪ್ರಕ್ಷುಬ್ಧವಾಯಿತು.

ಖಾನದೇಶವು ೧ ಕೋಟಿ ವಾರ ನೂಲನ್ನು ಕೊಡುವದು ಎಂದು ಗಾಂಧೀಜಿಗೆ ವಚನವಿತ್ತಿತು. ಪ್ರತಿಯೊಂದು ತಾಲೂಕಿನವರು ತಮ್ಮ ತಮ್ಮ ಪಾಲು ಕೊಡಲು ಮುಂದೆ ಬಂದರು. ಅಮಳನೇರ ತಾಲೂಕಿನಿಂದ ೨೦ ಲಕ್ಷ ವಾರ ನೂಲು ಕೊಡಲ್ಪಡುವದೆಂದು ಗುರೂಜಿಯು ಸಾರಿದರು. ವಿಶ್ವ ಪ್ರಯತ್ನಪಟ್ಟು ಅದನ್ನು ಸತ್ಯವಾಗಿ ಮಾಡಿ ತೋರಿಸಿದರು. ೩೦ರಲ್ಲಿ ಅತಿ ವೃಷ್ಟಿಯಾಗಿ ಖಾನದೇಶದ ಬೆಳೆಯೆಲ್ಲ ನೀರಲ್ಲಿ ಮುಳುಗಿತು. ಅಪಾರ ಹಾನಿಯಾಯಿತು. ಗುರೂಜಿಯವರು ೧೦೦–೧೫೦ ಹಳ್ಳಿಗಳನ್ನು ಸ್ವತಃ ಸಂಚರಿಸಿ ಅಂಕಿ ಸಂಖ್ಯೆಗಳನ್ನು ಕೂಡಿಸಿದರು. ಮೊದಮೊದಲು ರೈತರು ಬರುತ್ತಿರಲಿಲ್ಲ. ಗುರೂಜಿಯು ಚಿರಡಿಗೇಳುತ್ತಿದ್ದರು. ಹರಿಹಾಯುತ್ತಿದ್ದರು. ನಮ್ಮ ನೂರಾರು ವರ್ಷಗಳ ಪಾಪದ ಫಲವೇ ಇದು ಎಂದು ರೇಗುತ್ತಿದ್ದರು. ಡಾ. ಉತ್ತಮ ಪಾಟೀಲರ ಡಾಂಗರಿ ಎಂಬ ಊರಲ್ಲಿ ಆಶ್ರಮವನ್ನು ಪ್ರಾರಂಭಿಸಿದರು. ಮಣ್ಣಿನ ಪಾತ್ರೆಯಲ್ಲಿ ಉಣ್ಣುತ್ತಿದ್ದರು. ಮ್ಯಾಜಿಕ್‌ಲ್ಯಾಂಟರ್ನದ ಮುಖಾಂತರ ಪ್ರಚಾರ ಕೈಕೊಳ್ಳಬೇಕೆಂದು ನಿಶ್ಚಯಿಸಿ, ಅತ್ತೆಗೆ ಸಹಾಯವನ್ನು ಕೇಳಿದರು. ಅವರು ೩೦೦ ರೂ. ಗಳನ್ನು ಕಳಿಸಿದರು. ಕೆಲಸವಾಯಿತು. ಮದ್ಯಪಾನ ಪ್ರತಿಬಂಧ, ಒಕ್ಕಲ ತನದ ಸುಧಾರಣೆಗಳ ಮೇಲೆ ಚಿತ್ರಗಳನ್ನು ತೋರಿಸುತ್ತ ಊರೂರು ತಿರುಗ ಹತ್ತಿದರು.

೩೨ನೇ ಇಸ್ವಿಯು ಪ್ರಾರಂಭವಾಯಿತು. ಪುನಃ ರಣಗರ್ಜನೆಗೆ ಆರಂಭ ವಾಯಿತು. ಎಲ್ಲ ಕಡೆಗೂ ಬಂಧನಸತ್ರವೇ ಸತ್ರ. ಮುಂಬಯಿಯಲ್ಲಿ ಗಾಂಧೀಜಿ ಯವರು ಬಂಧಿಸಲ್ಪಟ್ಟರು. ರಣಕಹಳೆಯು ಊದಲ್ಪಟ್ಟಿತು. ಅಮಳ ನೇರದ ಸಾರ್ವಜನಿಕ ಸಭೆಯಲ್ಲಿ ಗುರೂಜಿಯವರು ಭಾಷಣಮಾಡಿದರು.

ಪೋಲಿಸರು ಹಿಡಿಯಲಿಲ್ಲ. ಸಭೆಯಿಂದ ಮನೆಗೆ ಬಂದರು. ಅಲ್ಲಿಯೂ ಜನ ಬೆನ್ನುಹತ್ತಿತು. ಮತ್ತೆ ಅಲ್ಲಿ ಮಾತನಾಡಿದರು. ಹತ್ತಿರದಲ್ಲಿಯ ಕೋಣೆಯಲ್ಲಿ ಪೋಲಿಸರು ಬಂದಿರುವರೆಂದು ತಿಳಿಯಿತು. ಆದರೆ ಗುರೂಜಿಯವರು ಪೋಲಿಸರ ಕಣ್ಣಿಗೆ ಇಂಗು ಹಚ್ಚುವ ಸಂಕಲ್ಪವನ್ನು ಮಾಡಿದರು. ರೈತರ ವೇಷದಲ್ಲಿ ಕಾಲಿಗೆ ಬುದ್ಧಿ ಹೇಳಿದರು. ಅನೇಕ ದಿನಗಳ ವರೆಗೆ ತಲೆತಪ್ಪಿಸಿ ಕೊಂಡು ಕಾರ್ಯಮಾಡಿದರು. ಕೊನೆಗೆ ಅಮಳನೇರದಲ್ಲಿ ಬಂಧಿಸಲ್ಪಟ್ಟರು. ೨ ವರ್ಷ ಕಠಿಣ ಶಿಕ್ಷೆಯು ವಿಧಿಸಲ್ಪಟ್ಟಿತು. ಯಥಾಪ್ರಕಾರವಾಗಿ ಕ ವರ್ಗವು ಕೊಡಲ್ಪಟ್ಟಿತು. ಮತ್ತೆ ಧುಳೇ ಜೇಲಿಗೆ ತರಲ್ಪಟ್ಟರು. ತಲೆ ತಪ್ಪಿಸಿಕೊಂಡು ಕಾರ್ಯಮಾಡಿದ ಮೂಲಕ, ವಿಶೇಷ ಎಚ್ಚರಿಕೆಗಳನ್ನು ಜೇಲ ಅಧಿಕಾರಿಗಳಿಗೆ ಕೊಡಲ್ಪಟ್ಟ ಮೂಲಕ, ಗುರೂಜಿಯ ಯೋಗಕ್ಷೇಮವನ್ನು ಬಹಳ ಜಾಗರೂಕತೆಯಿಂದ ನಡೆಯಿಸಿದರು.

## ವಿನೋಬಾ ಭಾವೆಯವರ ದರ್ಶನ

ಈ ಮೊದಲೇ ವಿನೋಬಾ ಭಾವೆಯವರು ಧುಳೆ ಜೇಲಿಗೆ ಬಂದಿದ್ದರು. ಇಬ್ಬರ ಭೆಟ್ಟಿಯೂ ಆಯಿತು. ಗುರೂಜಿಯವರು ಭಾವೆಯವರನ್ನು ಅತ್ಯಂತ ಪೂಜ್ಯ ಭಾವನೆಯಿಂದ ಕಾಣುತ್ತಿದ್ದರು. ಅವರ ಪ್ರತಿಯೊಂದು ಶಬ್ದವನ್ನು ಗುರೂಜಿಯವರು ಬರೆದಿಡುತ್ತಿದ್ದರು. ವಿನೋಬಾಜಿಯವರ ಪ್ರಸಿದ್ಧವಾದ ಗೀತಾ ಪ್ರವಚನವು ಇಲ್ಲಿಯೇ ಬರೆಯಲ್ಪಟ್ಟಿತು. ಗುರೂಜಿಯವರು ಶೀಘ್ರ ಲೇಖಕರಂತೆ ಅಕ್ಷರಶಃ ಎಲ್ಲವನ್ನೂ ಬರೆದಿಟ್ಟರು. ಗುರೂಜಿಗೆ ಚಕ್ಕಿ ಬೀಸಲು ಕೊಟ್ಟಿದ್ದರು. ಬೀಸಬೀಸುತ್ತ ಕವಿತೆಗಳು ಸಿದ್ಧವಾಗಹತ್ತಿದವು 'ಗೋಡ ಗೋಷ್ಟಿ'ಯ ಬಹುಭಾಗವು ಇಲ್ಲಿಯೇ ಬರೆಯಲ್ಪಟ್ಟಿತು. ಜೇಲರನೊಡನೆ ಅನೇಕಸಲ ಜಗಳಾಡುವ ಪ್ರಸಂಗ ಬಂದಿತು ಗುರೂಜಿಯು ಸ್ವಾಭಿಮಾನಿಯು. ಪ್ಯಾರೇಲಾಲಜಿ ಮತ್ತು ವಿನೋಬಾಜಿ ನಡುವೆ ಕೈಹಾಕಿ, ಶಾಂತಮಾಡು ತ್ತಿದ್ದರು. ವಿನೋಬಾಜಿಯವರು ಗುರೂಜಿಗಿಂತಲೂ ಮೊದಲೇ ಬಿಡಲ್ಪಟ್ಟರು. ಬೀಳ್ಕೊಡುವ ಮುಂದೆ ಇಬ್ಬರ ಕಣ್ಣುಗಳಲ್ಲಿಯೂ ನೀರು ಬಂದವು. ಕಂಠವು ಬಿಗಿದುಬಂದಿತು.

## ಸ್ಫೂರ್ತಿಗೆ ವಸಂತಕಾಲ

ಗುರೂಜಿಯನ್ನು ನಾಶಿಕ ಜೇಲಿಗೆ ಕಳಿಸಿದರು. ಇಲ್ಲಿಯೂ ಡೆಪ್ಯುಟಿ ಜೇಲರರೊಡನೆ ಜಗಳವಾದುದರಿಂದ ದಂಡಾಬೇಡಿಯ ಶಿಕ್ಷೆಯು ವಿಧಿಸಲ್ಪಟ್ಟಿತು. ಈ ಸಮಯದಲ್ಲಿ ಸ್ವಾಮಿ ಆನಂದರ ಸಹವಾಸವು ದೊರೆಯಿತು. ಸ್ವಾಮೀಜಿಯು ಗುರೂಜಿಗೆ ಲೇಖನಸಾಹಿತ್ಯವನ್ನು ಒದಗಿಸಹತ್ತಿದರು. ಅಂದ ಮೇಲೆ ಕೇಳುವದೇನು ? ರಾತ್ರಿಗಳೆಲ್ಲ ದಿವಸಗಳಾದವು. ಇವರ ಲೆಕ್ಕಣಿಕೆಗೆ ವಿಶ್ರಾಂತಿಯೇ ಇಲ್ಲ. ವಿಲಕ್ಷಣವಾದ ಪ್ರತಿಭೆಯು ಪ್ರಕಟವಾಗಹತ್ತಿತು. ಸುಂದರವಾದ ಅಕ್ಷರಗಳಿಂದ ಒಂದರಹಿಂದೊಂದು ವಹಿಗಳು ತುಂಬಹತ್ತಿದವು. '**ಶ್ಯಾಮಾಚಿ ಆಯಿ**' ಎಂಬ ಪವಿತ್ರ ಕಾದಂಬರಿಯು ನಾಸಿಕದ ಪುಣ್ಯಭೂಮಿಯಲ್ಲಿಯೇ ಜನ್ಮವನ್ನು ತಾಳಿತು. '**ಆಸ್ತಿಕ**' ಎಂಬ ಸುಂದರ ಅಭಿನವ ಕಾದಂಬರಿಯು ಇಲ್ಲಿಯೇ ಬರೆಯಲ್ಪಟ್ಟಿತು. **ಕ್ರಾಂತಿ, ಸತಿ, ನೀಳಾಪಕ್ಷಿ, ವಿಶ್ರಾಮ, ಧಡಪಡಣಾರಿ ಮುಲೆ, ಪ್ರಾಸಂಗಿಕ ಮನನ,** ಇತ್ಯಾದಿ ವಿವಿಧ ಗ್ರಂಥಗಳು ಬರೆಯಲ್ಪಟ್ಟವಲ್ಲದೆ, ಭಗಿನಿ ನಿವೇದಿತಾರ ಗ್ರಂಥವೂ ಅನುವಾದಿಸಲ್ಪಟ್ಟಿತು. '**ಪತ್ರಿ**'ಯಾದರೋ ಬೆಳೆಯುತ್ತಲೇ ನಡೆದಿತ್ತು. ಅವರ ಸ್ಫೂರ್ತಿಗೆ ವಸಂತಕಾಲ ಪ್ರಾಪ್ತವಾಗಿತ್ತು. ಅವರ ಲೆಕ್ಕಣಿಕೆಯು ಸಹಜಸೃಷ್ಟಿಯಂತೆ, ಅನೇಕ ಲೇಖನಗಳಿಗೆ ಜನ್ಮವೀಯಿತು. ಅವರ ಪ್ರತಿಭೆಯು ವಿವಿಧ ಮುಖವಾಗಿ ಹರಿಯಿತು. ನಡುನಡುವೆ ನಿರಾಶೆಯು ಅವರನ್ನು ವ್ಯಾಪಿಸುತ್ತಿದ್ದಿತು. ಸ್ವಾಮಿ ಆನಂದ ಹಾಗೂ ಪ್ಯಾರೆ.ಲಾಲರು, ಅವರ ಆಶೆಯನ್ನು ಪುನರುಜ್ಜೀವನಗೊಳಿಸಲು ಹೆಣಗುತ್ತಿದ್ದರು. ಜೀವನವನ್ನು ಮುಗಿಸಿಬಿಡಬೇಕೆಂದು ಅನೇಕ ಸಲ ಗುರೂಜಿಯ ಮನಸ್ಸಿನಲ್ಲಿ ಬರುತ್ತಿತ್ತು. ಪ್ಯಾರೇಲಾಲರು 'ಆತ್ಮಘಾತದ ಪ್ರವೃತ್ತಿ ಮತ್ತು ಅದರ ಮೇಲಿನ ಉಪಚಾರ' ಎಂಬ ಗ್ರಂಥವನ್ನು ಗುರೂಜಿಗೆ ಓದಲು ಕೊಟ್ಟರು. "ಒಂದು ಹೂವನ್ನು ಅರಳಿಸಲು ಸಾಧ್ಯವಾದರೆ ಸಾಕು; ಅದಕ್ಕಾಗಿ ಬದುಕುವೆ" ಎಂದರು ಗುರೂಜಿ. ಕೊನೆಗೆ ಗುರೂಜಿಯವರು ನಾಸಿಕದಿಂದ ಹೊರಬಿದ್ದರು.

ಪಾಲಗಡದಲ್ಲಿ ಅಣ್ಣನು ಹೊಸ ಮನೆಯನ್ನು ಕಟ್ಟಿಸಿದ್ದನು.

ಗುರೂಜಿಯು ಕೆಲ ದಿವಸ ಅಲ್ಲಿ ವಾಸಿಸಿದರು. ಆದರೆ, ಅಶಾಂತಿ, ಅಶಾಂತಿ, ಅಶಾಂತಿ. ಪುನಃ ಭ್ರಮಣವು ಪ್ರಾರಂಭವಾಯಿತು. ಗೀತೆಯ ಮೇಲೆ ಪ್ರವಚನಗಳನ್ನಿತ್ತರು. ಆದರೂ ಶಾಂತಿಯು ದೊರೆಯಲಿಲ್ಲ. ವಿನೋಬಾರವರ ಭೆಟ್ಟಿಯಾಯಿತು. ಇಬ್ಬರೂ ತಿರುಗಾಡಲು ಹೋದರು. ಬಹಳ ಹೊತ್ತು ಚರ್ಚಿಸಿದರು. ಗುರೂಜಿಯ ಶ್ರದ್ಧೆಯು ಮತ್ತೆ ಜಾಗೃತವಾಗಿರಬೇಕು.

೧೯೩೩ರಲ್ಲಿ ವೈಯ್ಯಕ್ತಿಕ ಸತ್ಯಾಗ್ರಹದಲ್ಲಿ ಮತ್ತೆ ೪ ತಿಂಗಳ ಶಿಕ್ಷೆಯಾಗಿ ಚಕ್ಕೀ ಬೀಸಲು ಧುಳೆಗೆ ಬಂದರು. ಈ ಸಲ **'ಕಲೆ ಎಂದರೆ ಏನು' 'ಜಗತ್ತಿನ ಇತಿಹಾಸ'** ಇತ್ಯಾದಿ ಗ್ರಂಥಗಳ ಅನುವಾದವನ್ನು ಮಾಡಿದರು. ಈ ಚಿಕ್ಕ ಅವಧಿಯ ಸೆರೆಮನೆಯ ವಾಸವು ಮುಗಿದ ನಂತರ ಗುರೂಜಿಯು ಹೊರಬಂದರು. ಖಾನದೇಶದಲ್ಲಿ ಕಾರ್ಯರಂಗಕ್ಕಿಳಿದರು. ಇಂತಹ ಕಾರ್ಯಕರ್ತರ ವಿಶ್ವಾಸದ ಮೇಲೆಯೇ ಕಾಂಗ್ರೆಸ್ ಅಧಿವೇಶನವನ್ನು ಹಳ್ಳಿಯಲ್ಲಿ ಕೂಡಿಸಬೇಕೆಂದು ನಿರ್ಧರಿಸಿ ಫೈಜಪೂರದಲ್ಲಿ ಕಾಂಗ್ರೆಸ್ಸನ್ನು ಕೂಡಿಸಿದರು. ಈ ಮೊದಲು ಗುರೂಜಿಗೆ ವಿನೋಬಾಜಿಯವರು ಯಾವದಾದರೊಂದು ಹಳ್ಳಿಯಲ್ಲಿ ವಾಸಮಾಡಿ ಕಾರ್ಯ ಮಾಡಬೇಕೆಂದು ಸೂಚಿಸಿ ಹಳ್ಳಿಯನ್ನೂ ಆರಿಸಿದ್ದರು. ಆದರೆ ಇಂತಹ ಮಠಗಳನ್ನು ಕಟ್ಟುವ ಕಾರ್ಯವು ಅವರಿಗೆ ಸಾಧಿಸಲಿಲ್ಲ. ಅಲ್ಲಿಂದ ಮೆಲ್ಲನೆ ಕಾಲ್ತೆಗೆದರು.

## ಫೈಜಪೂರ ಕಾಂಗ್ರೆಸ್

ಫೈಜಪೂರ ಕಾಂಗ್ರೆಸ್ಸು ಯಶಸ್ವಿಯಾಗಿ ನೆರವೇರಲು ಗುರೂಜಿಯ ಪರಿಶ್ರಮದ ಬಹುಭಾಗವು ಕಾರಣವೆಂದು ಹೇಳಬಹುದು. ಕಾಂಗ್ರೆಸ್ಸು ಅವರಿಗೆ ಪ್ರಿಯವಾದ ಖಾನದೇಶದ ಹಳ್ಳಿಯಲ್ಲಿ ಸೇರುವದಿತ್ತು. ಗುರೂಜಿಯು ತನ್ನ ದೇಹದ ಸ್ಥಿತಿಯನ್ನು ಕೂಡ ಲೆಕ್ಕಿಸಲಿಲ್ಲ. ಹಗಲೆನ್ನಲಿಲ್ಲ, ರಾತ್ರಿಯೆನ್ನಲಿಲ್ಲ, ಸುತ್ತುಮುತ್ತಲಿನ ಹಳ್ಳಿಗಳನ್ನೆಲ್ಲ ಜಾಗೃತಗೊಳಿಸಿದರು. ಜನತೆಯಲ್ಲಿ ಉತ್ಸಾಹವನ್ನು ತುಂಬಿದರು. ಜನತೆಯು ನೀವೇ ಸ್ವಾಗತಾಧ್ಯಕ್ಷರಾಗಬೇಕೆಂದಿತು. ಗುರೂಜಿಯು ಅದಕ್ಕೆ ಒಪ್ಪಲಿಲ್ಲ. ಒಂದುವೇಳೆ ಬಲವಂತಪಡಿಸಿದರೆ ಓಡಿಹೋಗುವೆನೆಂದೂ ಹೇಳಿದರು. ಫೈಜಪೂರಕ್ಕೆ ಸ್ವಾತಂತ್ರ್ಯ

ಜ್ಯೋತಿಯನ್ನು ತರುವ ಕಾರ್ಯವನ್ನು ಗುರೂಜಿಗೆ ಒಪ್ಪಿಸಿದರು. ಖಾನದೇಶದ ರೈತರ ಭಕ್ತಿಯು ಗುರೂಜಿಯ ಮೇಲೆ ಅಪಾರವಾಗಿದ್ದಿತು. ಕಾಲ್ನಡಿಗೆಯಿಂದ ಯಾತ್ರೆಯನ್ನು ಪ್ರಾರಂಭಿಸಿ, ಫೈಜಪೂರ ಕಾಂಗ್ರೆಸ್ಸು ಯಶಸ್ವಿಯಾಗುವಂತೆ, ಮಾಡಿದರು. ಇದರ ಫಲವು ಮುಂದೆ ದೊರೆಯಿತು ಅಧಿವೇಶನಾನಂತರ ಜರುಗಿದ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಪ್ರಚಂಡ ಜಯ ದೊರೆಯಿತು. ಇದರ ಯಶಸ್ಸಿನ ಬಹುಭಾಗವು ಗುರೂಜಿಗೆ ಸಲ್ಲಬೇಕು.

## ಐವತ್ತುಸಾವಿರ ರೈತರ ಸಭೆ

ಗುರೂಜಿಗೆ ಕಾಂಗ್ರೆಸ್ಸು ಪರಮ ದೈವತವಾಗಿದ್ದಿತು. ಮರಣಕಾಲಕ್ಕೂ ಕೂಡ ತಮ್ಮ ಬಾಯಿಯಿಂದ ರಾಮ, ಶಬ್ದದ ಬದಲು 'ಕಾಂಗ್ರೆಸ್ಸು' ಬರಬೇಕೆಂದು ಅವರು ಅಪೇಕ್ಷಿಸುತ್ತಿದ್ದರು. ಖಾನದೇಶದಲ್ಲಿ ೧ ಲಕ್ಷ ಜನರು ಕಾಂಗ್ರೆಸ್ ಸಭಾಸದರಾಗಬೇಕೆಂದು ೨೧ ದಿನದ ಉಪವಾಸವನ್ನೂ ಮಾಡಿದರು. ಆದರೆ ೧೯೩೭ನೇ ಇಸ್ವಿಯ ಕಾಂಗ್ರೆಸ್ ಸರಕಾರವಿರುವಾಗ ಒಂದು ವಿಲಕ್ಷಣ ಸಂಗತಿಯು ಜರುಗಿತು. ೧೯೩೮ರಲ್ಲಿ ಖಾನದೇಶದಲ್ಲಿ ಅತಿವೃಷ್ಟಿಯಿಂದ ರೈತರ ಬೆಳೆಗಳೆಲ್ಲ ನೀರಲ್ಲಿ ಮುಳುಗಿದವು. ಆ ವರ್ಷ ಹಪ್ತೆ ವಸೂಲಿ ಬಿಟ್ಟುಬಿಡಬೇಕೆಂದು ಗುರೂಜಿಯವರು ಸರಕಾರದ ಮುಂದೆ ತಮ್ಮ ಬೇಡಿಕೆಯನ್ನು ಮಂಡಿಸಿದರು. ಸರಕಾರವು ಕಿವಿಯಮೇಲೆಯೇ ಹಾಕಿಕೊಳ್ಳಲಿಲ್ಲ. ಈ ಸಮಯಕ್ಕೆ ಗುರೂಜಿಯವರು, 'ಕಾಂಗ್ರೆಸ್' ಎಂಬ ಪತ್ರಿಕೆಯನ್ನು ನಡೆಯಿಸುತ್ತಿದ್ದರು. ಹಳ್ಳಿಗಳಲ್ಲೆಲ್ಲ ಸಂಚರಿಸಿದರು. ೧೯೩೯ರ ಸ್ವಾತಂತ್ರ್ಯದ ದಿನ ಜಳಗಾವದಲ್ಲಿ ೫೦ ಸಾವಿರ ರೈತರ ಪ್ರಚಂಡ ಸಭೆಯು ಜರುಗಿತು. ಗಾಂಧೀಜಿಯವರಿಗೆ ಈ ಸಂಗತಿಯನ್ನು ತಿಳಿಸಲಾಯಿತು. ಗುರೂಜಿಯು ನ್ಯಾಯಕ್ಕಾಗಿ ಹೋರಾಡುತ್ತಿದ್ದರು. ಸಂಸ್ಥೆಗಿಂತಲೂ ನ್ಯಾಯವೇ ದೊಡ್ಡದು ಎಂಬುದು ಗುರೂಜಿಯ ವಾದ, ಆದರೆ ದೊಡ್ಡ ದೊಡ್ಡ ಮುಖಂಡರು ನಡುವೆ ಬಿದ್ದ ಮೂಲಕ ಗುರೂಜಿಯವರು ರೈತರ ಈ ಮಹಾಯಾತ್ರೆಯನ್ನು ತಡೆದು ನಿಲ್ಲಿಸಬೇಕಾಯಿತು. ಗುರೂಜಿಯವರ ಪ್ರಚಂಡ ಸಂಘಟನಾಶಕ್ತಿಯು ಮುಖಂಡರನ್ನು ನಡುಗಿಸಿತು. ವಿಚಾರಪರರನ್ನಾಗಿ ಮಾಡಿತು.

## ವೈಯ್ಯಕ್ತಿಕ ಸತ್ಯಾಗ್ರಹ

೧೯೩೯ರಲ್ಲಿ ಮಹಾಯುದ್ಧಕ್ಕೆ ಮೊದಲಾಯಿತು. ಜಗತ್ತಿನ ಪರಿಸ್ಥಿತಿಯೂ ಬದಲಾಗಿ ಹೋಯಿತು. ಗುರೂಜಿಯ 'ಕಾಂಗ್ರೆಸ್' ಪತ್ರವು ಬ್ರಿ. ಸರಕಾರದಿಂದ ನಿಲ್ಲಿಸಲ್ಪಟ್ಟಿತು. ಗಾಂಧೀಜಿಯವರು ಅತ್ಯಂತ ಕುಶಲತೆಯಿಂದ ಮೆಲ್ಲ ಮೆಲ್ಲನೆ ರಾಷ್ಟ್ರವನ್ನು ಕ್ರಾಂತಿಗಾಗಿ ಸಜ್ಜುಗೊಳಿಸಹತ್ತಿದ್ದರು. ವೈಯ್ಯಕ್ತಿಕ ಸತ್ಯಾಗ್ರಹವು ಪ್ರಾರಂಭವಾಯಿತು. ಗುರೂಜಿಯು ಮತ್ತೆ ಪ್ರವಾಸವನ್ನು ಕೈಕೊಂಡರು. ಕೊನೆಯ ಕ್ರಾಂತಿಯ ಭವ್ಯದರ್ಶನವು ಅವರಿಗೆ ಆಗಹತ್ತಿತು. ೧೯೪೦ರಲ್ಲಿ ಚಾಂದವಡದಲ್ಲಿ ನಾಶಿಕ ಜಿಲ್ಹಾ ಯುವಕ ಪರಿಷತ್ ನಡೆಯಿತು. ಗುರೂಜಿಯೇ ಅದರ ಜೀವವಾಗಿದ್ದರು. ಸೇವಾದಲದ ಸಂಘಟನೆಯ ಸಂದೇಶವನ್ನು ಘೋಷಿಸಿದರು. ಮುಂದಿನ ಯುದ್ಧದ ಸಿದ್ಧತೆಯೇ ಈ ಕರೆಯ ಗುಟ್ಟಾಗಿದ್ದಿತು. ಗುರೂಜಿಯವರು ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿದರು. ಆದರೆ ಪೇಣದಲ್ಲಿ ಅವ್ಥರನ್ನು ಬಂಧಿಸಿದರು. ಎಂಟು ದಿನ ನಾಸಿಕದ ಲಾಕಪ್ಪಿನಲ್ಲಿದ್ದರು. ಸೇವಾದಲದ ತತ್ವಜ್ಞಾನವು ಎಲ್ಲ ಕಡೆಗೆ ಪ್ರಸಾರವಾಗಬೇಕೆಂದು, **'ಶ್ಯಾಮನ ಪತ್ರಗಳು'** ಎಂಬ ಹೊತ್ತಿಗೆಯನ್ನು ಈ ಅಲ್ಪಾವಧಿಯಲ್ಲಿಯೇ ಬರೆದರು. ಶಿಕ್ಷಿಸಲ್ಪಟ್ಟ ನಂತರ ನಾಸಿಕ ಜೇಲಿಗೆ ಕಳಿಸಲ್ಪಟ್ಟರು. ಮುಂದೆ ಧುಳೆ ಜೇಲಿಗೆ ಕಳಿಸಲ್ಪಟ್ಟರು. ೧೯೪೨ರ ಆಗಸ್ಟ ಕ್ರಾಂತಿಯು ಪ್ರಾರಂಭವಾದಾಗ ಗುರೂಜಿಯು ಜೇಲಿನಲ್ಲಿಯೇ ಇದ್ದರು.

## ಅಗಸ್ಟ ಮಹಾಕ್ರಾಂತಿ

ನಮ್ಮೆಲ್ಲರ ಸುದೈವದಿಂದ ಸರಕಾರವು ಒಂದು ದೊಡ್ಡ ತಪ್ಪುಮಾಡಿತು. ಅಗಸ್ಟ ೭, ೮ನೆಯ ತಾರೀಖಿಗೆ ಕಾಂಗ್ರೆಸ್ಸು ಮಹಾಕ್ರಾಂತಿಯ ರಣಕಹಳೆಯನ್ನೂದಿತು. ೯ನೆಯ ಅಗಸ್ಟ ದಿವಸ ದೇಶದಲ್ಲೆಲ್ಲ ದೊಡ್ಡ ಪ್ರಮಾಣದಿಂದ ಬಂಧನಸತ್ರ ನಡೆಯಿತು. ಆದರೆ ೧೦ನೆಯ ತಾರೀಖಿನ ದಿನ ಸರಕಾರದ ದುರ್ಲಕ್ಷದಿಂದ ಗುರೂಜಿಯು ಜೇಲಿನಿಂದ ಹೊರಬಂದರು. ೧೯೪೩ರ ಎಪ್ರಿಲದ ವರೆಗೆ, ಈ ಹುಲಿಯು ಸರಕಾರಕ್ಕೆ ಚಳ್ಳಹಣ್ಣು ತಿನಿಸಿತು. 'ಮೂಷಕಮಹಾಲಿ'ನಲ್ಲಿ ಸಿಕ್ಕಿತು. ಅಲ್ಲಿಯ ವರೆಗೆ ಕ್ರಾಂತಿಕಾರಕ ಬರೆಹಗಳಿಂದ ಯುದ್ಧಜ್ವಾಲೆಯನ್ನು ಹಬ್ಬಿಸುತ್ತಿದ್ದರು. 'ಕ್ರಾಂತಿಯ ಮಾರ್ಗದಲ್ಲಿ'

ಎಂಬ ಗ್ರಂಥವನ್ನು ಕೇವಲ ೬೮ ತಾಸುಗಳಲ್ಲಿ ಅವರು ಬರೆದುಕೊಟ್ಟರು. ಅಜ್ಞಾತವಾಸದಲ್ಲಿರುವಾಗ ಜಯಪ್ರಕಾಶರಿಂದ ಮೊದಲುಮಾಡಿ ಒಬ್ಬ ಸಾದಾ ಸ್ವಯಂಸೇವಕನ ವರೆಗೆ ಎಲ್ಲರ ಸೇವೆ ಮಾಡಿದರು. ಎಲ್ಲರಿಗೂ ಅಡಿಗೆಯನ್ನು ಮಾಡಿ ಬಡಿಸುತ್ತಿದ್ದರು. ಮತ್ತು ಅವರ ಶುಶ್ರೂಷೆಯನ್ನು ಮಾಡುತ್ತಿದ್ದರು.

೧೯೪೩ರಿಂದ ೪೫ ಈ ಅವಧಿಯಲ್ಲಿ ಯರವಡಾ, ನಾಸಿಕ ಸೆರೆಮನೆಗಳಲ್ಲಿ ಸ್ಥಾನಬದ್ಧತೆಯಲ್ಲಿದ್ದರು. ಲೇಖನ ವಾಚನವು ಮೊದಲಿನಂತೆಯೇ ಸಾಗಿತ್ತು. ಆದರೆ ಹೊರಗಿನ ಸುದ್ದಿಗಳನ್ನು ಕೇಳಿ ಅಸ್ವಸ್ಥರಾಗುತ್ತಿದ್ದರು. ಚಳವಳಿಗೆ ದುಡ್ಡು ಕಡಿಮೆ ಬಿದ್ದಿದೆ ಎಂಬ ಸುದ್ದಿಯನ್ನು ಕೇಳಿ 'ಗಾಂಧೀಜಿಯ ಕಥೆಗಳು' ಎಂಬ ಗ್ರಂಥವನ್ನು ೨೪ ತಾಸುಗಳಲ್ಲಿ ಮುಗಿಸಿಕೊಟ್ಟು, ಇದನ್ನು ಮಾರಿಬಂದ ಹಣವನ್ನು ಶ್ರೀ ಅಚ್ಯುತ ಪಟವರ್ಧನರ ಕಡೆಗೆ ಕೊಡಬೇಕೆಂದು ಹೇಳಿದರು. ಅಮಳನೇರದ ಕೂಲಿಕಾರರು ಕಮ್ಯುನಿಸ್ಟರ ಮಬ್ಬಿಗೆ ಬಿದ್ದರು ಎಂಬ ಸುದ್ದಿಯನ್ನು ಕೇಳಿ, ನಾಸಿಕ ಜೇಲಿನಲ್ಲಿ ೨೧ ದಿವಸದ ಉಪವಾಸವನ್ನು ಕೈಕೊಂಡರು. ಅನೇಕ ಜನ ಕೂಲಿಕಾರರು ನಾವು ಗುರೂಜಿಯ ಅನುಯಾಯಿಗಳೇ ಇದ್ದೇವೆ ಎಂದು ಸಹಿ ಮಾಡಿ ಜೇಲಿಗೆ ಪತ್ರ ಕಳಿಸಿದರು. ಈ ಚಳವಳಿಯು ಕಾಂಗ್ರೆಸ್ಸಿನದಲ್ಲವೆಂದು ಹೇಳಲ್ಪಟ್ಟಿತು. ತತ್ವಚ್ಯುತಿಯಾಗಿದೆ, ಹಿಂಸೆಯು ಸಂಭವಿಸಿತು, ಇತ್ಯಾದಿ ಗೊಳ್ಳು ಆರೋಪಗಳನ್ನು ಕಾಂಗ್ರೆಸ್ಸಿನಲ್ಲಿಯ ಅತಿ ಗಾಂಧೀವಾದಿಗಳು ಮಾಡಹತ್ತಿದರು. ಗುರೂಜಿಯ ಸಾತ್ವಿಕ ಸಂತಾಪವು ಅನಾವರವಾಯಿತು. ಆದುದರಿಂದ ಹೊರಬಿದ್ದೊಡನೆಯೇ ಗುರೂಜಿಯು ೪೨ರ ಕ್ರಾಂತಿಯ ಸಮರ್ಥನವನ್ನು ಮಾಡುತ್ತ ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿದರು. ತರುಣರ ಬೆನ್ನು ಕಟ್ಟಿದರು. ಹುತಾತ್ಮರ ಗುಣ ಗೌರವವನ್ನು ಮಾಡಿದರು. ಜವಾಹರಲಾಲರು ತುರಂಗದಿಂದ ಹೊರಬಿದ್ದೊಡನೆಯೇ ತರುಣರನ್ನು ಎತ್ತಿಹಿಡಿದು ಕ್ರಾಂತಿಯನ್ನು ಸಮರ್ಥಿಸಿದೊಡನೆ, ಅತಿವಾದಿಗಳ ಕೂಗಾಟವು ಕುಗ್ಗಿತು.

## ವಿಠ್ಠಲಮಂದಿರ ಪ್ರವೇಶ

ಹೊರಬಂದ ನಂತರ ಕಾಂಗ್ರೆಸ್ಸು ಮತ್ತೆ ಅಧಿಕಾರಾರೂಢವಾಯಿತು. ಗುರೂಜಿಯು ಮನಸ್ಸಿನ ಮಂಡಿಗೆಗಳೆಲ್ಲ ಸತ್ಯವಾಗುವವೆಂದು ನೆನೆದಿದ್ದರು.

ಮಾನವನ ಹಾಗು ಸಮಾಜದ ವಿಕಾಸವು ವಾಯುವೇಗದಿಂದ ಎಂದೂ ಆಗ ದೆಂಬುದನ್ನು ಮರೆಯಕೂಡದು. ಅಸ್ಪೃಶ್ಯತೆಯು ಪೂರ್ಣವಾಗಿ ನಾಶವಾಗ ಬೇಕು. ಬಡ ರೈತರಿಗೆಲ್ಲ ಪುಕ್ಕಟೆಯಾಗಿ ಹೊಲಗಳು ದೊರೆಯಬೇಕು. ಆರ್ಥಿಕ ಸಮಾನತೆಯು ಉಂಟಾಗಬೇಕೆಂದು ಅವರಿಗೆ ಅನಿಸುತ್ತಿದ್ದಿತು. ಕಾಂಗ್ರೆಸ್ ಸರಕಾರ ಬಂದೊಡನೆ ಇವೆಲ್ಲವೂ ಕೈಗೂಡುವವೆಂದು ಅವರು ಭಾವಿಸಿದ್ದರು. ಮನಃಪರಿವರ್ತನವಾಗದೆ ಜನತೆಯ ಸರಕಾರವಾದರೂ ಒಮ್ಮೆಲೆ ಮಾಡುವ ದೆಂತು? ೧೯೪೭ರ ಪ್ರಾರಂಭದಲ್ಲಿ ಹರಿಜನರನ್ನು ಸಮಾನತೆಯಿಂದ ಸಮಾಜವು ನಡಿಯಿಸಿಕೊಳ್ಳಬೇಕೆಂದೂ ಉದಾರತೆಯಿಂದ ಅವರೊಡನೆ ವರ್ತಿಸಬೇಕೆಂದೂ ಅದರ ಪ್ರತೀಕವಾಗಿ, ಪಂಢರಪೂರದ ಶ್ರೀ ವಿಠ್ಠಲಮಂದಿರವು ಹರಿಜನರಿಗೆ ಮುಕ್ತದ್ವಾರವಾಗಬೇಕೆಂದೂ ಗುರೂಜಿಯು ಸಮಾಜದ ಮುಂದೆ ಬೇಡಿಕೆ ಯನ್ನು ಮಂಡಿಸಿದರು. ಇದು ಸಾಧಿಸದಿದ್ದರೆ ತಾವು ಬದುಕಿರಲು ನಿಷ್ಫಲ ವೆಂದು ಅವರಿಗೆ ಅನಿಸುತ್ತಿದ್ದಿತು. ಸೇನಾಪತಿ ಬಾಪಟ, ಅಚ್ಯುತ ಪಟವರ್ಧನ, ಎಸ್. ಎಮ್. ಜೋಸಿ, ಮೊದಲಾದವರು ಉಪೋಷಣೆಯನ್ನು ಕೈಕೊಳ್ಳುವ ದಕ್ಕಿಂತ ಮೊದಲು ಪ್ರಚಾರಮಾಡಿ ಸಮಾಜಕ್ಕೆ ವಿಚಾರಮಾಡಲು ಸಂಧಿಯನ್ನು ಕೊಡಬೇಕೆಂದು ಸೂಚಿಸಿದರು. ಅದರಂತೆ ಗುರೂಜಿಯವರು ಮಹಾರಾಷ್ಟ್ರದಲ್ಲೆಲ್ಲ ಸಂಚರಿಸಿ, ಪ್ರಚಾರ ಮಾಡಿದರು. ಆದರೂ ಅದರ ಪರಿಣಾಮವೇನೂ ಆಗಲಿಲ್ಲ. ಆದುದರಿಂದ ಗುರೂಜಿಯವರು, ಪಂಢರಪೂರ ದಲ್ಲಿ ಮೇ ತಿಂಗಳ ಕೊನೆಯಲ್ಲಿ ಉಪವಾಸವನ್ನು ಪ್ರಾರಂಭಿಸಿದ್ದ ಸಂಗತಿ ಯನ್ನು ಎಲ್ಲರೂ ಬಲ್ಲರು. ಪೂಜಾರಿಗಳ ಹೃದಯವು ಕೊನೆಗೆ ಕರಗಿತು. ಮಂದಿರದ ಬಾಗಿಲವು ತೆರೆಯಲ್ಪಟ್ಟಿತು. ಮುಂದೆ ಸರಕಾರವು ಮಂದಿರ ಪ್ರವೇಶದ ಕಾಯದೆಯನ್ನು ಮಾಡಿತು.

## ಜೀವನದಲ್ಲಿಯ ಬೆಳಕು ಮಾಯವಾಯಿತು

ಸ್ವಾತಂತ್ರ್ಯವು ಬಂದಿತು, ಆದರೆ ಭಾರತವು ಇಬ್ಭಾಗವಾಯಿತು. ನಿರಾಶ್ರಿತರ ಪ್ರಶ್ನೆಯು ತಲೆಯೆತ್ತಿತು. ಮಹಾತ್ಮರ ಅಮಾನುಷ ಕೊಲೆಯು ಸಂಭವಿಸಿತು. ಗುರೂಜಿಯ ಜೀವನ ಪ್ರಕಾಶವು ನಂದಿಹೋಯಿತು. ಮನುಷ್ಯತ್ವದ ಮೇಲಿನ ಅವರ ವಿಶ್ವಾಸವು ಹಾರಿಹೋಯಿತು. ಇಂತಹ

ನೀಚ ಕೃತ್ಯವನ್ನು ತಮ್ಮದೇ ಪ್ರಾಂತದಲ್ಲಿಯ ಒಬ್ಬ ತಲೆತಿರುಕನು ಮಾಡಿದ್ದನ್ನು ಕಂಡು ಅವರಿಗೆ ಅತ್ಯಂತ ದುಃಖವಾಯಿತು. ಮಹಾರಾಷ್ಟ್ರದಲ್ಲಿ ಮತ್ಸರಿಗಳ ಸಂಖ್ಯೆಯು ಹೆಚ್ಚಾಗಿದೆ. ಸಂಕುಚಿತ ರಾಜಕಾರಣ ಹಾಗು ಕ್ಷುದ್ರ ಮನೋವೃತ್ತಿಗಳ ಮೂಲಕವೇ ಈ ಕೊಲೆಯು ಸಂಭವಿಸಿತೆಂದು ಅವರಿಗೆ ಅನಿಸಹತ್ತಿತು. ಇಂತಹ ಅಸತ್ ಪ್ರವೃತ್ತಿಗಳೆಲ್ಲ ಮಣ್ಣುಗೂಡಬೇಕೆಂದೇ ಗುರೂಜಿಯವರು ಮತ್ತೆ ೨೧ ದಿನಗಳ ಉಪವಾಸವನ್ನು ಕೈಕೊಂಡರು. **'ಜಾತೀಯತೆಯನ್ನು ನಷ್ಟಪಡಿಸಿರಿ'** ಎಂಬ ಘೋಷಣೆಯು ಮಹಾರಾಷ್ಟ್ರದಲ್ಲೆಲ್ಲ ಪ್ರತಿಧ್ವನಿಗೈಯಿತು. ಗಾಂಧೀಜಿಯವರ ಕಾರ್ಯದ ನೆನಪಿಗಾಗಿ ಜನತೆ ಕರ್ತವ್ಯಪ್ರವೃತ್ತವಾಗಬೇಕೆಂಬ ಬಯಕೆಯಿಂದ **"ಕರ್ತವ್ಯ"** ಎಂಬ ದೈನಿಕವನ್ನು ಪ್ರಾರಂಭಿಸಿದರು. ಆದರೆ ಈ ಪ್ರಯತ್ನವು ಸಿದ್ಧಿಸಲಿಲ್ಲ. ೧೯೪೮ರ ಅಗಸ್ಟ ೧೫ಕ್ಕೆ **'ಸಾಧನಾ'** ಎಂಬ ಸಾಪ್ತಾಹಿಕವನ್ನು ಪ್ರಾರಂಭಿಸಿದರು. ಜನತೆಯಲ್ಲಿ ಸಮತೆ, ಶಾಂತಿಗಳನ್ನು ನಿರ್ಮಿಸುವುದೇ ಸಾಧನಾಪತ್ರಿಕೆಯ ಧ್ಯೇಯವೆಂದು ಸಾರಿದರು.

## ಸಮಾಜವಾದಿ ಪ್ರಜಾಪ್ರಭುತ್ವವೇ ಧ್ಯೇಯ

ಗುರೂಜಿಯವರ ಮನಸ್ಸು ಸಮಾಜವಾದದ ಕಡೆಗೆ ಪೂರ್ಣವಾಗಿ ಒಲಿದಿದ್ದಿತು. ಭಾರತವು ಶಾಂತಿ ಸುಖ ಸಮಾಧಾನಗಳನ್ನು ಹೊಂದಬೇಕಾದರೆ, ಸಮಾಜವಾದವೊಂದೇ ಉಪಾಯವೆಂದು ಅವರು ಭಾವಿಸಿದ್ದರು. ಆದ್ದರೆ, ಅವರು ಕಾಂಗ್ರೆಸ ಭಕ್ತರು. ಕೊನೆಯವರೆಗೂ ಸಮಾಜವಾದೀ ಪಕ್ಷದ ಸಭಾಸದರಾಗಲಿಲ್ಲ. ಅವರು ರಾಷ್ಟ್ರೀಯತ್ವಕ್ಕೆ ಪೋಷಕವಾದ ಚಳವಳಿಗಳನ್ನು ಪುರಸ್ಕರಿಸಿದರು. ಸೇವಾದಲಕ್ಕೆ ಬೆಂಬಲವನ್ನಿತ್ತರು. ಅವರ ಶಿಕ್ಷಣಕ್ಕಾಗಿ ಪ್ರಾಂತದ ಯಾವ ಮೂಲೆಗೂ ಹೋಗಲು ಅವರು ಸಿದ್ಧರಿದ್ದರು. ನಡುವೆ ಶಿಕ್ಷಕರು–ವಿದ್ಯಾರ್ಥಿಗಳು ರಾಜಕಾರಣದಲ್ಲಿ ಸೇರಬಾರದೆಂದು ವಿಧಿಸಿದ್ದನ್ನು ವಿರೋಧಿಸಿ ಆಂದೋಲನವನ್ನು ಹೂಡಿದರು. ಇವರ ಪ್ರಯತ್ನದಿಂದಲೇ ಸರಕಾರವು ತನ್ನ ಆಪ್ಪಣೆಯನ್ನು ಹಿಂದೆ ತೆಗೆದುಕೊಂಡಿತು. 'ಪ್ರಜಾಪ್ರಭುತ್ವಕ್ಕೆ ಶೋಭಿಸುವಂತೆ ಸಮಾಜವಾದಿ ಪಕ್ಷದ ಸಾಧನಗಳು ಇರಬೇಕು' ಎಂದು ಪ್ರತಿಪಾದಿಸುವ ಜಯಪ್ರಕಾಶ ನಾರಾಯಣರಿಗೆ ಇವರು ಯಾವಾಗಲೂ ಬೆಂಬಲವನ್ನೀಯುತ್ತಿದ್ದರು.

## ಅಂತರ ಭಾರತಿ

ನಮ್ಮ ಸಮಾಜವು ಯಾವುದೇ ಕಾರಣಗಳಿಂದ ವಿಭಾಗವಾಗಬಾರ ದೆಂಬುದೇ ಗುರೂಜಿಯ ಹೆಬ್ಬಯಕೆ. ಏಕರಾಷ್ಟ್ರೀಯತೆಯ ಭಕ್ತರಿಗೆಲ್ಲ ಇದೇ ಕನಸು ಕೇಳುವದು ಸ್ವಾಭಾವಿಕ. ನಾವು ಕೊನೆಗೆ ವಿಶ್ವಕುಟುಂಬವಾದಿ ಗಳಾಗಬೇಕಾಗಿದೆ, ಈ ದಿಶೆಯಿಂದಲೇ ಮುಂದೆ ಸಾಗಬೇಕೆಂಬುದೆ ಗುರೂಜಿಯ ಅಪೇಕ್ಷೆ. ಆದುದರಿಂದಲೇ ಜಾತೀಯತೆಯು ಸಮಾಜಕ್ಕೆ ಮಾರಕವಾಗಿ ಪರಿಣಮಿಸಿದೆ ಎಂದು ಅವರು ಘಂಟಾಘೋಷವಾಗಿ ಸಾರುತ್ತಿ ದ್ದರು. ಅದರಂತೆಯೇ ಪ್ರಾಂತೀಯತೆಯೂ ಮಿತಿಮೀರಿ ಬೆಳೆದು, ಭಾರತದ ಐಕ್ಯಕ್ಕೆ ಧಕ್ಕೆ ತರುವದೆಂದು ಅವರಿಗೆ ಅನಿಸುತಿತ್ತು. ಆದುದರಿಂದ ಸರ್ವ ಪ್ರಾಂತಗಳ ಸಂಸ್ಕೃತಿಯಲ್ಲಿ ಏಕತೆಯು ಪ್ರಕಟವಾಗಬೇಕು. ಸರ್ವ ಭಾಷೆಗಳ ಬಂಧುಭಗಿನಿಯರು ಪ್ರೇಮದಿಂದ ಒಂದಾಗಬೇಕು, ಪರಸ್ಪರರಲ್ಲಿ ಬಳಿಕೆಯು ನಡೆಯಬೇಕು. ಪ್ರಾಂತೀಯ ಸಂಕುಚಿತ ವಿದ್ವೇಷವು ನಷ್ಟವಾಗ ಬೇಕು ಎಂದು ೧೯೩೨ರಲ್ಲಿ ತ್ರಿಚನಾಪಳ್ಳಿಯ ಜೇಲಿನಿಂದಲೇ ಈ ಮಂತ್ರವನ್ನು ಜಪಿಸುತ್ತ ಹೊರಬಂದರು. ಅದಕ್ಕಾಗಿ ಪ್ರಯತ್ನಿಸುವ ಕಾಲವು ಬಂದಿದೆ ಎಂದು ತಿಳಿದು ಪ್ರಾಂತ ಭಾರತಿ ಇಲ್ಲವೆ ಆಂತರ ಭಾರತೀಯ ಕಲ್ಪನೆಯನ್ನು ಜನತೆಯ ಮುಂದಿಟ್ಟು ಅದನ್ನು ಕಾರ್ಯಕಾರಿ ಮಾಡಲು ಸಂಚರಿಸಹತ್ತಿದರು. ಕರ್ನಾಟಕ ಮಹಾರಾಷ್ಟ್ರಗಳಲ್ಲಿ ಈ ಕಲ್ಪನೆಗೆ ಒಳ್ಳೇ ಪುರಸ್ಕಾರದೊರಕಿತು. ಅವರ ಈ ಕನಸು ನನಸಾಗುವ ಭಾಗ್ಯವು ಅವರಿಗಿರಲಿಲ್ಲ. ಕಾಲನು ಅವರನ್ನು ಅವ್ಹಾನಿಸಿದನು.

## ಜೀವನ ಯಜ್ಞದ ಪರಿಸಮಾಪ್ತಿ

ಈ ಬಗೆಯಾಗಿ ಸರ್ವಾಂಗಸುಂದರವಾದ ಸತ್ಕಾರ್ಯ ಸಂಪನ್ನ ಜೀವನವನ್ನು ಸಾಗಿಸುತ್ತಿರುವ ಗುರೂಜಿಗೆ ದೇವರು ಏನು ಪ್ರೇರಣೆಮಾಡಿ ದನೋ ಆತನಿಗೆ ಗೊತ್ತು. ಜೀವನವನ್ನು ನಿರಾಶೆಯು ಆವರಿಸಿತು. ವಿಶ್ವ ದಲ್ಲಿಯ ದುಃಖವನ್ನು ನಾಶಮಾಡಲು ನಮ್ಮ ಪ್ರಯತ್ನವು ತೀರ ಅಪೂರ್ಣ ವಾದುದು. ಪ್ರಲಯದ ಮೇಘಗಳು ವಿಶ್ವದಲ್ಲಿ ಒಟ್ಟುಗೂಡುತ್ತಲಿವೆ. ನಾವು ಅವುಗಳನ್ನು ತಡೆಯಲಾರೆವು. ಅಂದಮೇಲೆ, ಅಗತಿಕ, ಅಸಹಾಯ

ಜೀವನದ ಮೋಹವಾದರೂ ಏತಕ್ಕೆ? ಮನುಷ್ಯರೇ ಮನುಷ್ಯರನ್ನು ಅಧಃ ಪಾತಕ್ಕೆ ಒಯ್ಯುಹತ್ತಿದ್ದಾರೆ. ಯಾರು ಸದ್ಭಾವನೆಯಿಂದ ತನ್ನ ಪ್ರಾಣವನ್ನು ಬಲಿಗೊಟ್ಟೊ, ಸಹಸ್ರಶೀರ್ಷನಾದ ಸಹಸ್ರಪಾದವುಳ್ಳ ಸಮಾಜರೂಪಿ ವಿರಾಟಪುರುಷನನ್ನು ಆನಂದದಿಂದ ಪೂಜಿಸಲು. ಪ್ರಾಮಾಣಿಕ ರೀತಿಯಿಂದ ಪರಿಶ್ರಮವನ್ನು ಮಾಡುತ್ತಿರುವರೋ ಅಂತಹರ ಸದ್ಧೇತುವಿನ ವಿಷಯ ವಾಗಿಯೂ ಒಳ್ಳೇ ಜನರು ಸಂಶಯ ತೆಗೆದುಕೊಳ್ಳುತ್ತಿರುವರು. ಅಮಂಗಲ ವಾದ ಗಾಳಿಬೀಸಿ ಮಂಗಲಮಯವಾದ ಪುಷ್ಪಗಳು ಕಳಚಿ ಬೀಳುತ್ತಿರು ವವು, ಇಂತಹ ಈ ಜಗತ್ತಿನಲ್ಲಿ ನಮ್ಮ ಕೈಯಿಂದ ಆಗುವದನ್ನು ಮಾಡಿ ದ್ದೇವೆ. ಕೊಡಲು ಶಕ್ಯವಿದ್ದುದನ್ನು ಕೊಟ್ಟಿದ್ದೇವೆ. "ಧರ್ಮಧ್ವಜವನ್ನು ಎತ್ತಿಹಿಡಿಯಿರಿ" ಎಂದು ಕೈಗಳನ್ನೆತ್ತಿ ವ್ಯಾಸಮಹರ್ಷಿಗಳು ಸಾರಿದರೂ ಯಾರೂ ಕೇಳಲಿಲ್ಲ. ನಮ್ಮಂತಹರ ಪಾಡೇನು ? ನಮ್ಮ ಜೀವನ ಯಜ್ಞದ ಪರಿಸಮಾಪ್ತಿಯನ್ನು ಮಾಡಬೇಕು, ಸರ್ವಾರ್ಪಣವು ಈಗಾಗಲೇ ಮಾಡ ಲ್ಪಟ್ಟಿದೆ. ಇನ್ನು ಈ ಜಡದೇಹಕ್ಕಾಗಿ ಜೀವಿಸುವದರಲ್ಲಿ ಅರ್ಥವಿಲ್ಲ" ಎಂದು ವಿಚಾರಮಾಡಿ, ಗುರೂಜಿಯವರು, ೧೯೫೦ನೇ ಇಸ್ವಿ ಜೂನ ೯ನೇ ತಾರೀಖಿನ ದಿನ ಶುಚಿರ್ಭೂತರಾಗಿ, ಪ್ರೇಮಪೂರ್ವಕವಾಗಿ ಎಲ್ಲರನ್ನೂ ಸ್ಮರಿಸುತ್ತ ಪರಮಾತ್ಮನ ಸಾನ್ನಿಧ್ಯವನ್ನು ಸೇರಲು ಆತುರರಾಗಿ, ಶಾಂತರೀತಿಯಿಂದ ವಿಷಪ್ರಾಶನವನ್ನು ಮಾಡಿದರು. ತಮ್ಮ ಅಂತ್ಯವಿಧಿಯ ಭಾರವು ಎರಡನೆ ಯವರ ಮೇಲೆ ಬೀಳಬಾರದೆಂದು ೩೦ ರೂಪಾಯಿಗಳನ್ನು 'ಕೊನೆಯ ವ್ಯವಸ್ಥೆಗಾಗಿ 'ಎಂದು ಬರೆದು ಒಂದು ಚೀಟಿಯೊಡನೆ, ಕಿಸೆಯಲ್ಲಿ ಇಟ್ಟಿದ್ದರು. ವಿಷವು ತನ್ನ ಪ್ರಭಾವವನ್ನು ಬೀರಿತು. ಜೂನ ೧೧ನೇ ದಿನ ಅವರ ಆತ್ಮವು ಹಾರಿಹೋಯಿತು. ಇಲ್ಲಿಗೆ ಗುರೂಜಿಯ ಕಥೆ ಮುಗಿಯಿತು.

**ಜಯ ಹಿಂದ**

---

# ಶ್ರದ್ಧಾಂಜಲಿ

## “ಅಮೃತಸ್ಯ ಪುತ್ರಾಃ” ಇದೇ ನಿಜವಾದ ಅವರ ಪದವಿ

ಸಾನೆ ಗುರೂಜಿಯ ಮೃತ್ಯುಲೇಖವನ್ನು ಬರೆಯುವ ಪ್ರಸಂಗವು ನನಗೆ ಬರುವದೆಂದು ಅನಿಸಿರಲಿಲ್ಲ. ನನಗಿಂತಲೂ ವಯಸ್ಸಿನಿಂದ ಚಿಕ್ಕವರು. ಶರೀರದಿಂದ ಬಲಿಷ್ಠರು. ಇದೇ ೫೦ ವರ್ಷವಾಗಿರಬೇಕು. ಆದರೆ ಇಷ್ಟರಲ್ಲಿಯೇ ಅವರು ಎಂತಹ ಪ್ರಚಂಡ ಕಾರ್ಯವನ್ನು ಮಾಡಿದ್ದರು! ಮಹಾರಾಷ್ಟ್ರದ ತರುಣರನ್ನೆಲ್ಲ ತಮ್ಮ ವಿಚಾರಗಳಿಂದ ವಶಪಡಿಸಿಕೊಂಡಿದ್ದರು. ಮಕ್ಕಳಿಗೆಲ್ಲ ತಮ್ಮ ಹುಚ್ಚು ಹಿಡಿಸಿದ್ದರು.

ರಾಮಕೃಷ್ಣ, ರವೀಂದ್ರನಾಥ, ಗಾಂಧಿ ಈ ಮೂವರೂ ಅವರ ಆದರ್ಶ ದೇವತೆಗಳು. ಮೂವರ ಗುಣಗಳೂ ಅವರಲ್ಲಿ ಅಂಶತಃ ಬಂದಿದ್ದವು. “ಮಕ್ಕಳಾಡಿಸುವಾಗ, ನಲಿವಾಗ ಉಣುವಾಗ, ಹಯಪಲ್ಲಕ್ಕಿಯೊಳ್ ಮೆರೆವಾಗ” ಸದಾಸರ್ವದಾ ಪರಮಾತ್ಮನ ಚಿಂತನವೇ ಚಿಂತನ, ಎರಡನೆಯ ವಿಷಯವೇ ಇಲ್ಲ. ಇಂತಹ ಮಾಲಿಕೆಯಲ್ಲಿಯ ಪುರುಷರಿವರು.

ಇವರ ದೇಹ ಬುದ್ಧಿಗಳು ರಾಜಕಾರಣಿಯವಲ್ಲ. ಆದರೆ, ಬಡವರ ತಳಮಳವು ಅವರನ್ನು ರಾಜಕಾರಣಕ್ಕೆ ಎಳೆಯಿತು. ಅದಕ್ಕಾಗಿಯೇ ಮಾತನಾಡುತ್ತಿದ್ದರು. ಬರೆಯುತ್ತಿದ್ದರು. ಈ ಕಳವಳವೇ ಅವರನ್ನು ಸಮಾಜವಾದಿಯನ್ನಾಗಿ ಮಾಡಿತು. ನಿಜವಾಗಿಯೂ ಅವರಿಗೆ ಸಮಾಜವಾದಿ ಎನ್ನುವದಕ್ಕಿಂತ; ಸಮಾಜ ಸೇವಕರೆಂದರೆ ಹೆಚ್ಚು ಸರಿಯಾಗುವದು. ಅವರ ವಿಶಾಲವಾದ ಅಂತಃಕರಣವು ಎಲ್ಲರ ಗುಣಗಳನ್ನು ಸಂಗ್ರಹಿಸುತಿತ್ತು. ಎಲ್ಲೆಲ್ಲಿ ಒಳ್ಳೆದಿದೆಯೋ ಅದನ್ನೆಲ್ಲ ಅರಸುವ ಮಧುಕರ ವೃತ್ತಿ ಇವರದು. ಪರ್ವತ ಪ್ರಾಯದಷ್ಟು ಸಾಹಿತ್ಯವನ್ನು ನಿರ್ಮಿಸಿದ್ದಾರೆ. ಆದರೂ ತಮ್ಮನ್ನು ಸಾಹಿತಿಗಳೆಂದು ಎಂದೂ ಅವರು ತಿಳಿಯುತ್ತಿದ್ದಿಲ್ಲ. ಬರೆಯದೆ, ಮಾತನಾಡದೆ ಜೀವನವನ್ನು ಸಾಗಿಸುವದು ಅಶಕ್ಯವಿದ್ದ ಮೂಲಕ ಬರೆಯುತ್ತಿದ್ದರು.

ಮಾತನಾಡುತ್ತಿದ್ದರು. ದೀನ ದರಿದ್ರರ ಕಳವಳವೇ ಅವರಿಂದ ಸಾಹಿತ್ಯವನ್ನು ನಿರ್ಮಿಸಿತು.

ತುಕಾರಾಮ ಮೊದಲಾದವರ ಮಾಲಿಕೆಯಲ್ಲಿ ಅವರನ್ನು ನಾನು ಎಣಿಸುವೆನು. ಅವರಿಗೆ ಯೋಗಿಗಳ ಸಮತೆಯು ಲಭಿಸಿರಲಿಲ್ಲ. ಆದರೆ ಅವರಲ್ಲಿ ಉತ್ಕಟ ಆರ್ತಭಕ್ತಿಯು ಇದ್ದಿತು. ಪರಪೀಡೆಗೊಳಿಸುವವರೇ ದ್ವೇಷಿಗಳು, ಎಂಬ ಮನೋಭೂಮಿಕೆಯಿದ್ದಿತು ಅವರಲ್ಲಿ. ಆದುದರಿಂದ ರಾಗದ್ವೇಷಗಳು ಪ್ರಬಲವಾಗಿದ್ದವು. ಆದರೆ ಅವೆಲ್ಲವೂ ದೇವರ ಸೇವೆಗಾಗಿ ಅರ್ಪಿತವಾಗಿದ್ದವು.

೩೨ನೇ ಇಸ್ವಿಯಲ್ಲಿ ಧುಳೇ ಜೇಲಿನಲ್ಲಿ ನಮ್ಮಿಬ್ಬರ ಪ್ರಥಮ ಪರಿಚಯವಾಯಿತು. ಈ ಮೊದಲಿನ ಭೆಟ್ಟಿಯಲ್ಲಿಯೇ ಗಾಢಮೈತ್ರಿಯು ಅನುಭವಕ್ಕೆ ಬಂದಿತು. ಇದಕ್ಕೆ ಯಾವ ಕಾರಣವೂ ಇರಲಿಲ್ಲ. ಇಂತಹ ಅನುಭವಗಳಿಂದ ಪೂರ್ವಜನ್ಮದ ಸಿದ್ಧಿಯಿದು ಎಂದು ತಿಳಿಯುತ್ತಿರುತ್ತೇನೆ. ನಮ್ಮಿಬ್ಬರ ಗೆಳೆತನವು ಬೆಳೆಯುತ್ತಲೇ ನಡೆಯಿತು. ಇದು ದೇವರ ಅನುಗ್ರಹವೆಂದು ನಾನು ಭಾವಿಸುವೆ.

ಅವರ ಸಾವಿನ ಬಗೆಗೆ ನನಗೆ ವಿಶ್ವಾಸ ಕೂಡಲೊಲ್ಲದು. ಅವರು ಇದೊಂದು ನಾಟಕವನ್ನು ಹೂಡಿದ್ದಾರೆ ಎನಿಸುವದು. " ಅಮೃತಸ್ಯ ಪುತ್ರಾಃ ಇದೇ ನಿಜವಾದ ಅವರ ಪದವಿ. "

೧೨—೬—೫೦ ವಿನೋಬಾ

× × × ×

ಗುರೂಜಿಯ ಬಗೆಗೆ ಇರುವ ಭಕ್ತಿಯನ್ನು ಕೃತಿಯಲ್ಲಿಳಿಸಿರಿ.

**ಸೇನಾಪತಿ ಬಾಪಟ**

× × × ×

ಅವರು ಹೊತ್ತಿಸಿದ ಪ್ರೇಮ ಜ್ಯೋತಿಯನ್ನು ಎಂದೂ ನೊಂದಿಸಬೇಡಿರಿ.

**ಆಚಾರ್ಯ ಭಾಗವತ**

೨

# ಚರಿತ್ರ ವಿಭಾಗ

ಶ್ರೀ ಸಾನೆ ಗುರೂಜಿಯವರು, ಶ್ರೀ ಶಿವಾಜಿ, ದೇಶಬಂಧು ದಾಸ, ಗೌತುಮ ಬುದ್ಧ, ವಿನ್ನೋಬಾ ಭಾವೆ ಮೊದಲಾದ ೧೦-೧೫ ಜನರ ಚರಿತ್ರಗಳನ್ನು ಬರೆದಿದ್ದು ಅದರಲ್ಲಿ ಕೆಳಗಿನವುಗಳನ್ನು ಆರಿಸಲಾಗಿದೆ. ಐತಿಹಾಸಿಕ ಪುರುಷರನ್ನು ನೋಡುವ ದೃಷ್ಟಿಯನ್ನೂ ವ್ಯಕ್ತಿ ಪರಿಚಯ ಮಾಡಿಕೊಡುವ ರೀತಿಯನ್ನೂ ಇಲ್ಲಿ ನೋಡಬಹುದು.

೧. ಶ್ರೀ ಶಿವರಾಯ

೨. ಶ್ರೀ ವಿನೋಬಾ ಭಾವೆ

# ಸ್ವರಾಜ್ಯ-ಸಂಸ್ಥಾಪಕ ಶ್ರೀ ಶಿವರಾಯ



ನಾವು ಸ್ವಾತಂತ್ರ್ಯಕ್ಕಾಗಿ ಧಡಪಡಿಸುತ್ತಿದ್ದೇವೆ. ಪ್ರಬಲ ಪರಕೀಯ ಶಕ್ತಿಯೊಡನೆ ಹೋರಾಡುತ್ತಿದ್ದೇವೆ. ನಡುನಡುವೆ ನಿರಾಶೆಯು ಆವರಿಸುತ್ತದೆ. ಇಂತಹ ಸಮಯದಲ್ಲಿ ಯಾರನ್ನು ನೆನೆಯಬೇಕು? ಯಾರಿಂದ ಸ್ಫೂರ್ತಿ ಪಡೆಯಬೇಕು? ಆ ಪ್ರೇರಕಶಕ್ತಿಯು ಯಾವುದು? ಧ್ಯೇಯಚ್ಯುತವಾಗದ ಧೀರತೆ ಹೇಗೆ ಬಂದೀತು? ಎಂತಹ ಆಪತ್ತು ಬಂದರೂ ಧ್ಯೇಯವನ್ನು ಮುಟ್ಟಿಯೇ ತೀರುವೆವೆಂಬ ಆತ್ಮವಿಶ್ವಾಸದ ಜ್ಯೋತಿಯನ್ನು ಹೊತ್ತಿಸುವವರಾರು? ನಮಗೆ ಬೆಳಕು ತೋರುವವರು ಯಾರಾದರೂ ಇರುವರೇ!

ಯಾರ ಭೂತಕಾಲವು ಉಜ್ವಲವಿದೆಯೋ ಅವರ ಭವಿಷ್ಯತ್ತೂ ಉಜ್ವಲವಾಗಿದೆ. ಭೂತಕಾಲವು ಅಮರವಾದ ಸಂದೇಶವನ್ನೀಯುತ್ತದೆ. ಭೂತಕಾಲದ ತ್ಯಾಗ, ಪರಾಕ್ರಮ, ಧ್ಯೇಯನಿಷ್ಠೆಗಳು ಸ್ಫೂರ್ತಿಯ ಸೆಲೆಗಳಾಗುವವು. ಮನುಷ್ಯ ಹಾಗೂ ಮಣ್ಣಿನ ಮೂರ್ತಿಗಳಲ್ಲಿಯ ಅಂತರವೇನು? ನಮ್ಮ ದೇಹವೂ ಮೃಣ್ಮಯವಲ್ಲವೇ! ಆದರೆ ಈ ಜಡದಲ್ಲಿ ಚೈತನ್ಯದ, ವಿಚಾರ-ವಿದ್ಯುತ್ತಿನ ಸಂಚಾರವಾದೊಡನೆಯೇ ಅದರಲ್ಲಿಯೇ ಕರ್ಮವೀರರಾದ ಮಾನವರು ಉದಯರಾಗುತ್ತಾರೆ. ಶಾಲಿವಾಹನನ ಕಥೆಯು ಇದನ್ನೇ ಹೇಳುವದಿಲ್ಲವೇ! ಮಣ್ಣಿನ ಬೊಂಬೆಗಳಿಂದ ವೀರರಾದ ಯೋದ್ಧರನ್ನು ನಿರ್ಮಿಸಿ, ಶಕ ಹೂಣರೊಡನೆ ಹೋರಾಡಿ ಸೋಲಿಸಿದನೆಂದು ಹೇಳುವದಿಲ್ಲವೇ? ಈ ಕಥೆಯ ಅರ್ಥವೇನು? ಮೃತಪ್ರಾಯವಾಗಿದ್ದ ಜನತೆಯಲ್ಲಿ ದಿವ್ಯತೇಜಸ್ಸನ್ನು ತುಂಬಿದನು. ಜನತೆಯ ಅಂತಃಕರಣದಲ್ಲಿ ವೀರವಿಚಾರಗಳನ್ನು ಬಿತ್ತಿದನು. ಅವರಿಂದ ವೀರಕರ್ಮಗಳನ್ನು ಮಾಡಿಸಿದನು. ಮೃತರಾಷ್ಟ್ರವು ಸತೇಜವಾಗಿ ನವಯುಗವನ್ನು ಪ್ರಾರಂಭಿಸಿತು. ಹೊಸ ಶಕವು ಸುರುವಾಯಿತು.

ಶಾಲಿವಾಹನನ ಪರಾಕ್ರಮದ ದ್ಯೋತಕವೆಂದೇ ಇಂದು ನಾವು ಯುಗಾದಿಯನ್ನು ಆಚರಿಸುತ್ತೇವೆ. ಆದರೆ ಇದು ತೀರ ಹಳೆಯ ಮಾತು.

ಆದರೆ ಶಾಲಿವಾಹನನ ನಂತರ ದಿವ್ಯಸ್ಫೂರ್ತಿಯನ್ನೀಯುವ ಪುಣ್ಯಪ್ರತಾಪಿಗಳಾರೂ ಮಹಾರಾಷ್ಟ್ರದಲ್ಲಿ ಜನಿಸಿಲ್ಲವೇ! ಪಾರತಂತ್ರ್ಯವನ್ನು ಕ್ಷಣವೂ ಕೂಡ ಸಹಿಸದ, ಧ್ಯೇಯಕ್ಕಾಗಿ ಮರಣವನ್ನೂ ಧಿಕ್ಕರಿಸುವ ತೇಜಸ್ವಿಗಳಾದ ಶಕಪುರುಷರಾರೂ ಹುಟ್ಟಲಿಲ್ಲವೇ! ಇಂತಹ ಮಹಾವಿಭೂತಿಗಳು ಯಾರಾದರೂ ನಮ್ಮೆದುರು ನಿಲ್ಲುವರೇ!

ಇದಕ್ಕೆ ಸಂಶಯವೇಕೆ? ಅಂತಹ ಮಹಾವಿಭೂತಿಗೆ ಮಹಾರಾಷ್ಟ್ರವು ಜನ್ಮಕೊಟ್ಟಿದೆ. ಆ ಮಹಾವಿಭೂತಿಯೇ ಮಹಾರಾಷ್ಟ್ರದ ಜಾಜ್ವಲ್ಯದೈವತವು. ಯಾವ ವಿಭೂತಿಯ ಹೆಸರಿನಿಂದ ಇಂದಿಗೂ ಮಹಾರಾಷ್ಟ್ರವು ಜಗತ್ತಿನಲ್ಲಿ ತಲೆಯೆತ್ತಿ ನಿಲ್ಲುವದೋ, ಯಾರು ಅಜ್ಞಾನಾಂಧಕಾರವನ್ನು ಕಳೆದು ರಾಷ್ಟ್ರಕ್ಕೆ ದಿವ್ಯಪ್ರಕಾಶವನ್ನು ಕೊಟ್ಟರೋ, ಶೃಂಖಲೆಗಳನ್ನೆಲ್ಲ ಹರಿದೊಗೆದು ಯಾರು ರಾಷ್ಟ್ರವನ್ನು ಸ್ವತಂತ್ರಗೊಳಿಸಿದರೋ ಆ ಮಹಾ ವಿಭೂತಿಯೇ **ಶ್ರೀ ಶಿವರಾಯ, "ಗೋಬ್ರಾಹ್ಮಣ ಪ್ರತಿಪಾಲಕನಾದ ಛತ್ರಪತಿ ಶಿವಾಜಿ ಮಹಾರಾಜ".**

ಶ್ರೀ ಶಿವಾಜಿಯ ಕಾಲದ ದೇಶದ ಪರಿಸ್ಥಿತಿಯನ್ನು ನೋಡಿದರೆ, ಎಂತಹ ಭೀಕರತೆಯದು! ಉತ್ತರಭಾರತವೆಲ್ಲ ಮೊಗಲರಿಂದ ಪಾದಾಕ್ರಾಂತವಾಗಿದೆ, ಭಾರತದ ರಾಜಮಹಾರಾಜರೆಲ್ಲ ಅವರ ಅಂಕಿತ; ಎಲ್ಲ ಕಡೆಗೂ ವೈದಿಕಧರ್ಮದ ಅವಹೇಳನ. ಗುಡಿಗುಂಡಾರಗಳೆಲ್ಲ ಮಣ್ಣುಗೂಡಿಸಲ್ಪಡುತ್ತಲಿವೆ. ಕುಲಗೆಡಿಸುವದಂತೂ ಭರದಿಂದ ಸಾಗಿದೆ ಎಲ್ಲೆಲ್ಲಿಯೂ ಜಹಗೀರದಾರರ ಸರದಾರರ ಅಧಿಕಾರ. ಜನತೆಯು ಹೌಹಾರಿದೆ. ಧರ್ಮಕ್ಕೆ ಉಳಿವಿಲ್ಲ. ತಿನ್ನಲು ಅನ್ನವಿಲ್ಲ!

ದಕ್ಷಿಣದಲ್ಲಿಯೂ ಇದೇ ಹಣೇಬರಹ. ವಿಜಯನಗರ ಸಾಮ್ರಾಜ್ಯವು ಮುಸಲ್ಮಾನರ ಹಾವಳಿಯನ್ನು ಎರಡುನೂರು ವರ್ಷ ತಡೆದಿದ್ದಿತು. ತಾಳೀಕೋಟೆಯ ಕಾಳೆಗದಲ್ಲಿ ಈ ರಕ್ಷಾಕವಚವು ಕಳಚಿ ಬಿದ್ದಿತು. ದಕ್ಷಿಣವೂ ಯವನಮಯವಾಯಿತು. ಐದು ಜನ ಬಾದಶಹರು ಆಳಹತ್ತಿದರು. ಆಯಾ ಸ್ಥಳಗಳಲ್ಲಿರುವ ಚಿಕ್ಕಪುಟ್ಟ ಜಹಗೀರದಾರರು ಯವನರ ಸೇವೆಯನ್ನೇ ಕೈಕೊಂಡರು. ಬಡಬಗ್ಗರ ದೈನ್ಯವನ್ನು ಕೇಳುವವರು ಉಳಿಯಲಿಲ್ಲ. ಅವರ ಕೈವಾರಿಗಳು ಕಾಣದಂತಾದರು. ಎಲ್ಲ ಕಡೆಗೂ ನಿರಾಶೆ. ಕಗ್ಗತ್ತಲೆ.

ಮುಸಲ್ಮಾನ ಅರಸರು ಜುಲುಮೆಯಿಂದ ಧರ್ಮಪ್ರಸಾರವನ್ನಂತೂ ಮಾಡುತ್ತಿದ್ದರು. ಆದರೆ ಹಿಂದೂಧರ್ಮದಲ್ಲಿ ಕೀಳು ಎಂದು ಎಣಿಸಲ್ಪಡುತ್ತಿದ್ದ ಲಕ್ಷಾಂತರ ಜನರು, ಕೀಳುತನವನ್ನು ಕಳೆದುಕೊಳ್ಳುವದಕ್ಕಾಗಿ, ಹೆಣ್ಣು ಹೊನ್ನಿನ ಆಶೆಗಾಗಿ ಮುಸಲ್ಮಾನ ಧರ್ಮವನ್ನು ಸ್ವೀಕರಿಸಹತ್ತಿದ್ದರು. ಇದಲ್ಲದೆ ವಿರಕ್ತರಾದ ಮುಸ್ಲಿಂ ಫಕೀರರು ಕೈಯಲ್ಲಿ ಕಂದೀಲುಗಳನ್ನು ಹಿಡಿದು ಕೊಂಡು ಬಾಯಿಯಲ್ಲಿ ಮುಸ್ಲಿಂ ಧಾರ್ಮಿಕ ಗೀತಗಳನ್ನು ಹಾಡುತ್ತ ಮುಸ್ಲಿಂ ಸಂದೇಶವನ್ನು ಬೀರಲು ಊರೂರು ಹೊರಟಿದ್ದರು. ಇಂತಹ ಸಮಯದಲ್ಲಿ ಹಿಂದೂ ಧರ್ಮದ ಸಂದೇಶವನ್ನು ಕೊಡುವವರಾರು ? ಕೇಳುವವರಾರು ?

ಧರ್ಮವು ರಸಾತಳಕ್ಕೆ ಇಳಿದಂತೆ, ಆರ್ಥಿಕ ಅವನತಿಯೂ ಆಗಿ ಅನ್ನಾನ್ನದೆಸೆಯು ರಾಷ್ಟ್ರದಲ್ಲಿ ಉತ್ಪನ್ನವಾಗಿದ್ದಿತು. ಎಲ್ಲಿ ಕಡೆಗೂ ಜುಲುಮೆ. ಧರ್ಮ-ಧರ್ಮಗಳಲ್ಲಿ ಬಡಿದಾಟ, ಜಾತಿಜಾತಿಗಳಲ್ಲಿ ಜಗಳಾಟ, ಶೈವ-ವೈಷ್ಣವರಲ್ಲಿ ಹೊಡೆದಾಟ. ಹೀಗಾಗಿ, ನಾವೆಲ್ಲರೂ ಭಾರತೀಯರು ಎಂಬ ಅರಿವು ಮಾಯವಾಗಿ ಹಿಂದೂಸಮಾಜವು ಜರ್ಜರಿತವಾಗಿತ್ತು. ಒಂದು ವಿಚಾರವಿಲ್ಲ. ಒಂದು ಧ್ಯೇಯವಿಲ್ಲ. ಜೀರ್ಣವಾದ ತರಗೆಲೆಯು ಬಿರುಗಾಳಿಗೆ ಎಲ್ಲೆಲ್ಲಿಯೂ ಹಾರಿಹೋಗುವಂತೆ ದೀನ, ದರಿದ್ರ, ದುರ್ಬಲವಾದ ಭಾರತೀಯರ ಗತಿಯು ಆಗಿದ್ದಿತು. ಜನತೆಯು ದೇವಾ! ರಕ್ಷಿಸು! ರಕ್ಷಿಸು! ಎಂದು ಗೋಳಿಡುವ ಕಾಲವದು.

ಅಮಾವಾಸ್ಯೆಯು ಸಮೀಪಿಸಿದಂತೆ, ಪ್ರಕಾಶಮಾನನಾದ ಚಂದ್ರನ ಉದಯವೂ ತೀರ ಹತ್ತಿರಬಂದಹಾಗೆ. ಭಾರತದಲ್ಲೆಲ್ಲ ಕಗ್ಗತ್ತಲೆಯು ಕವಿದಿದ್ದರೂ ಎಲ್ಲಿಯಾದರೂ ಪ್ರಕಾಶವು ಪ್ರಕಟವಾಗುವದೆಂದು ಜನತೆಗೆ ಅನಿಸಹತ್ತಿತು. ಆದರೆ ಈ ಪ್ರಕಾಶವು ಎಲ್ಲಿಂದ ಬರುವದು? ಎಲ್ಲಿ ಈ ಆಶಾಕಿರಣ ಹೊರಬೀಳುವದು ಎಂದು ಎದುರುನೋಡುತ್ತಿರುವಾಗ, ಮಹಾರಾಷ್ಟ್ರದಲ್ಲಿ ಈ ಕರ್ಮಜ್ಯೋತಿಯು ಉದಯವಾಯಿತು. ಭಾರತಕ್ಕೆ ಮಾರ್ಗದರ್ಶನ ಮಾಡಿದ ಮಹಾಶಕ್ತಿಯೂ ಇದೇ!

ಮುಸಲ್ಮಾನ ಧರ್ಮದಲ್ಲಿಯ 'ದೇವರು ಒಬ್ಬನೇ' ಎಂಬ ಕಲ್ಪನೆಯ ಪರಿಣಾಮವು ಆಗಹತ್ತಿತು. ಮಸೀದೆಯಲ್ಲಿ ಎಲ್ಲರೂ ಸಮಾನರು, ಎಲ್ಲರೂ ಅಣ್ಣತಮ್ಮಂದಿರು. ದೇವರು ಒಬ್ಬನೇ! ನಾವೆಲ್ಲರೂ ಬಂಧುಗಳು ಎಂಬ

ವಿಚಾರಗಳು ಅನೇಕ ಜಾತಿ–ಮತ–ಪಂಥಗಳಿಂದ, ೩೩ ಕೋಟಿ ದೇವತೆಗಳ ಕಲ್ಪನೆಯಿಂದ ಹಣ್ಣಾದ ಹಿಂದೂಸಮಾಜದ ಮೇಲೆ ಆಗದೇ ಇರಲಿಲ್ಲ.

ಇಂತಹ ಸಮಯದಲ್ಲಿ ಸಾಧುಸಂತರು ಮುಂದೆ ಬಂದರು. ಅವರು ಆ ಕಾಲದ ಸಂದೇಶವನ್ನು ತಿಳಿದುಕೊಂಡರು. ಅದನ್ನು ಜನತೆಯಲ್ಲಿ ಬೀರಿದರು. ಅವರು ಬ್ರಹ್ಮವಿದ್ಯೆಯ ಗುಪ್ತಭಂಡಾರವನ್ನು ಒಡೆದರು. ಸಂಸ್ಕೃತದಲ್ಲಿಯ ಧರ್ಮದ ಮರ್ಮವನ್ನು ಜನತೆಯ ಭಾಷೆಯಲ್ಲಿ ತಂದರು. ಸುಲಭ ಶೈಲಿಯ ಅಭಂಗಗಳನ್ನು ರಚಿಸಿದರು. ಅವುಗಳ ಮುಖಾಂತರ ಮಹಾರಾಷ್ಟ್ರವನ್ನು ಏಕಮುಖವಾಗಿ ಮಾಡಿದರು. ಭಾಗವತ ಧರ್ಮೀಯರಾದ ಸಂತರು ಮಹಾರಾಷ್ಟ್ರದ ಎದುರು ಶ್ರೀವಿಠ್ಠಲನನ್ನು ನಿಲ್ಲಿಸಿದರು. ಅನೇಕ ದೇವತೆಗಳು ಇರಬಹುದು. ಆದರೆ ಸರ್ವಾಂತರ್ಯಾಮಿಯಾದ ಸ್ವಾಮಿ ಒಬ್ಬನೇ. ಅವನೇ ವಿಠ್ಠಲನು ಎಂದು ಎಲ್ಲರ ಮನಸ್ಸನ್ನು ಒಂದೆಡೆ ಎಳೆದರು. ಮತ್ತು ಜನತೆಯಲ್ಲಿ ಐಕ್ಯತೆ ಉತ್ಪನ್ನ ಮಾಡುವದಕ್ಕಾಗಿ ಪಂಢರಿಯ **ವಾರಿಯನ್ನು** ಪ್ರಾರಂಭಿಸಿದರು. ಆಷಾಢ ಹಾಗೂ ಕಾರ್ತೀಕದ ವಾರಿಗಳಿಗೆ ಮೊದಲಾಯಿತು. ಆಯಾ ಸ್ಥಳಗಳಿಂದ ಮಹನೀಯರಾದ ಸಂತರೊಡನೆ, ಹರಿಯ ನಾಮಗರ್ಜನೆಯನ್ನು ಮಾಡುತ್ತ ಸಾವಿರಾರು ಜನ ಭಯಭಕ್ತಿಯಿಂದ ಬೆನ್ನುಹತ್ತಿದರು. ಚಂದ್ರಭಾಗೆಯ ಉಸುಬಿನ ಬೈಲಿನಲ್ಲಿ ಭಾರತದ ಐಕ್ಯತೆಯ ದರ್ಶನವಾಗಹತ್ತಿತು. ಇಟ್ಟಿಗೆಯ ಮೇಲೆ, ಸಮಚರಣನಾಗಿ, ಕಟಿತಟದ ಮೇಲೆ ಕೈ ಇಟ್ಟುಕೊಂಡ ಜಗತ್ಪಾಲಕನಾದ **ಶ್ರೀವಿಠ್ಠಲನ** ಎದುರಿನಲ್ಲಿ ಜನತೆ ಭೇದಭಾವವನ್ನು ಮರೆಯತೊಡಗಿತು. ಪಾಂಡುರಂಗನ ಅಧ್ಯಕ್ಷತೆಯಲ್ಲಿ ನವ ಮಹಾರಾಷ್ಟ್ರವು ನಿರ್ಮಾಣವಾಗಹತ್ತಿತು.

ಪಾಂಡುರಂಗನ ಭಕ್ತರು—ಅನೇಕ ಜಾತಿಯ ಜನರು—ಭಕ್ತಿಯಿಂದ ಒಬ್ಬರನ್ನೊಬ್ಬರು ಆಲಿಂಗಿಸುತ್ತಿದ್ದಾರೆ. ನಾಮಸ್ಮರಣೆಯಲ್ಲಿ ಮೈಮರೆಯುತ್ತಿದ್ದಾರೆ.

ಈ ಸುಂದರವಾದ ದೃಶ್ಯವನ್ನು ತುಕಾರಾಮ ಮಹಾರಾಜರು ಆನಂದಿತರಾಗಿ “ಈ ಐಕ್ಯದ ದೃಶ್ಯವು ಕಲ್ಲಿನಲ್ಲಿ ಸೆಲೆಯೊಡಿಸುವದು, ಕಠೋರ ಹೃದಯಗಳನ್ನು ಕರಗಿಸಿ ಬೆಣ್ಣೆಯಂತೆ ಮಾಡುವದು” ಎಂದು ವರ್ಣಿಸಿದ್ದಾರೆ.

ಭಾಗವತರಾದ ಸಂತರು ಜನತೆಯ ನುಡಿಯಲ್ಲಿಯೇ ಧರ್ಮೋಪದೇಶ ವನ್ನು ಮಾಡಿದರು. ಭೇದವನ್ನು ಕಡಿಮೆಮಾಡಿದರು. ಲಕ್ಷಾವಧಿ ಜನರನ್ನು ಒಂದೆಡೆ ತಂದು ಏಕರಾಷ್ಟ್ರೀಯತೆಯ ದರ್ಶನವನ್ನು ಮಾಡಿಸಿದರು. ಚಿನ್ನಕ್ಕೆ ಕುಂದಣ ಕೂಡಿಸಿದಂತೆ, "ತಾಯಿಯೇ! ವಿಶ್ವದ ಚಿಂತೆಯನ್ನೇ ಮಾಡುತ್ತಲಿರುವೆ" ಎಂದು ವಿಶ್ವದ ಹಿತವನ್ನೇ ಚಿಂತಿಸುತ್ತಿದ್ದ ಸಮರ್ಥ ರಾಮದಾಸರು, ಸಮಾಜಕ್ಕೆ ಬಲದ ವೀರಕರ್ಮದ ದೀಕ್ಷೆಯನ್ನು ಕೊಡಲು ಕಂಕಣಬದ್ಧರಾದರು. ೧೨ ವರ್ಷ ತಪವನ್ನಾಚರಿಸಿ, ೧೨ ವರ್ಷ ಭಾರತ ವನ್ನೆಲ್ಲ, ಸಂಚರಿಸಿ ದೀನ ದರಿದ್ರಳಾದ ಭಾರತ ಮಾತೆಯ ದರ್ಶನಗೈದ ಸಮರ್ಥರು, ಹಾಯ! ಹಾಯ್! ಎಂತಹ ದಾರುಣವಾದ ಪರಿಸ್ಥಿತಿಯಿದು! ತಿನ್ನಲು ಅನ್ನವಿಲ್ಲ! ತಲೆಯಲ್ಲಿ ವಿಚಾರವಿಲ್ಲ! ಮೈಯಲ್ಲಿ ಬಲವಿಲ್ಲ!!! ಅನ್ನ, ಅನ್ನ, ಅನ್ನವೆಂದು ಹಲುಬುತಿದೆ ಭಾರತ! ಏನು ಗತಿ ಎಂದು ಚಿಂತಾಮಗ್ನ ರಾಗುತ್ತಿದ್ದರು.

ಗಿರಿ ಕಂದರಗಳಿಂದಲೂ ಕೋಟೆ ಕೊತ್ತಳಗಳಿಂದಲೂ ತುಂಬಿದ ಮಹಾರಾಷ್ಟ್ರವೇ ಸ್ವರಾಜ್ಯ ಸ್ಥಾಪನೆ ಯೋಗ್ಯವಾಗಿದೆ ಎಂದು ಆಲೋಚಿಸಿ ಸಮರ್ಥರು ಅದೇ ತಮ್ಮ ಕರ್ಮ ಭೂಮಿಯೆಂದು ನಿಶ್ಚಯಿಸಿದರು. ಬಿದ್ದ ಜನತೆಯಲ್ಲಿ ಸುಪ್ತ ಶಕ್ತಿ ಇರುತ್ತದೆ, ಘರ್ಷಣದಿಂದ ಅದು ಹೊರಬೀಳು ವುದು ಎಂದು ಹೇಳಹತ್ತಿದರು. ''ಕಿಡಿಯಂತೂ ಹಾರಲಿ ಬೆಂಕಿ ತಾನೇ ಹೊತ್ತುವದು.'' ಎಂದು ಅವರ ಮತ.

ಭಾಗವತ ಧರ್ಮೀಯ ಸಂತರು ಐಕ್ಯವನ್ನು ಸಾಧಿಸಿದ್ದರು. ಉತ್ಕಟತೆ ಯನ್ನು ನಿರ್ಮಿಸಿದ್ದರು. ಸಮರ್ಥರು ಕರ್ಮದ ಸಂದೇಶವನ್ನು ಸಾರಲು ಮುಂದೆ ಬಂದರು. ಅವರು ಜನತೆಗೆ ಹೊಸ ದೈವತವನ್ನೆ ತೋರಿಸಿದರು ಕೋದಂಡಪಾಣಿಯಾದ ಪ್ರಭು **ಶ್ರೀ ರಾಮಚಂದ್ರನೇ ಆ ದೈವತ.** ಶ್ರೀ ರಾಮಚಂದ್ರನ ಉಪಾಸನೆಯ ಉಪದೇಶವನ್ನಿತ್ತರು. ಅದರಲ್ಲಿ ಒಂದು ಉದ್ದೇಶವಿದ್ದಿತು. ರಾಮನ ಅವತಾರವು ಯಾವುದಕ್ಕೋಸುಗ? ರಾವಣನ ಸಂಹಾರಕ್ಕಾಗಿ, ೩೩ ಕೋಟಿ ದೇವತೆಗಳ ಬಂಧವಿಮೋಚನೆಗಾಗಿ, ಅಂದಮೇಲೆ ರಾಮನು ಈಗ ಬರಲಾರನೇ? ಬರುವನು ಆದರೆ ನಾವು ಸಂಯಮಿಗಳಾಗ ಬೇಕು. ಗೊಡ್ಡು ಹರಟೆಯನ್ನು ಬಿಡಬೇಕು. ಧೈರ್ಯವನ್ನು ತಾಳಿ

ಸಾಹಸದ ಕಾರ್ಯಕ್ಕೆ ಕೈಯಿಕ್ಕಬೇಕು. ದೇವರು ಬರಲು ಸಿದ್ಧ. ಆದರೆ ಅವನು ನಮ್ಮಿಂದ ಸಾಹಸದ ಅಪೇಕ್ಷೆಯನ್ನು ಮಾಡುವನು. ನೀವು ಕೈ ಕಾಲುಗಳನ್ನು ಅಲುಗಾಡಿಸಿರಿ. ಏಳಿರಿ! ಗೋಪಾಲರು ಕೋಲನ್ನು ಅಲುಗಾಡಿಸಿದರೆ ಪ್ರಭುವು ಸಹಾಯ ನೀಡಲು ಸಿದ್ಧ.

ಸಮರ್ಥರು ರಾಮಚರಿತ್ರದ ಸಂದೇಶವನ್ನು ಕೊಟ್ಟರು. ಹನುಮಂತನ ಉಪಾಸನೆ ಪ್ರಾರಂಭಿಸಿದರು. ಬಲೋಪಾಸನೆಗೆ ಪ್ರಾರಂಭವಾಯಿತು. ಹೃದಯದಲ್ಲಿ ಐಕ್ಯವೂ! ಬಾಹುಗಳಲ್ಲಿ ಬಲವೂ ರಾಷ್ಟ್ರಕ್ಕೆ ಅವಶ್ಯವಲ್ಲವೆ? ಊರೂರಿಗೆ ಗರಡೀಮನೆಗಳು ತೆರೆಯಲ್ಪಟ್ಟು ಜನತೆ ಭುಜ ಚಪ್ಪರಿಸಹತ್ತಿತು. ಬಲಸಂವರ್ಧನೆಯೊಡನೆ ಸಂಘಟನೆಗೂ ಕೈಯಿಕ್ಕಿದರು. ಆದರೆ ಇದೆಲ್ಲವೂ ಹನುಮಂತನ ಬಲ. ಈ ಬಲವೆಲ್ಲ ರಾಮನ ಸೇವೆಗೆ. ಯಾರು ಮಹಾನ್ ಮುಖಂಡರೆಂದು ಜನತೆಯಿಂದ ಮನ್ನಿಸಲ್ಪಡುವರೊ ಅವರ ಚರಣದಲ್ಲಿ ಈ ಶಕ್ತಿಯನ್ನು ಅರ್ಪಿಸಿರಿ ಎಂದು ಸಮರ್ಥರು ಉಪದೇಶಿಸಹತ್ತಿದರು.

ಯುದ್ಧಕಾಂಡದ ಮೇಲೆ ಜೋರನ್ನು ಕೊಟ್ಟು ಸಮರ್ಥರು ವರ್ಣಿಸಹತ್ತಿದರು. ರಾಮನ ವೀರಶ್ರೀಯನ್ನು ವರ್ಣಿಸುವ ಈ ಯುದ್ಧಕಾಂಡವು ಮಹಾರಾಷ್ಟ್ರದಲ್ಲೆಲ್ಲ ಉದ್ಘೋಷಿಸಲ್ಪಡಹತ್ತಿತು. ಸೈರಾಷ್ಟ್ರವನ್ನು ಭೇದಿಸಿ ಜನರ ಅಂತಃಕರಣದಲ್ಲಿ ಶ್ರೀರಾಮ ಚರಿತೆಯು ವೀರರಸವನ್ನು ತುಂಬಿತು.

ಸಮರ್ಥರ ಸಂಘಟನೆಯು ಅದ್ಭುತವಾದುದು. ಸಂಯಮದ ಶಿಸ್ತಿನ ಪ್ರಚಾರವನ್ನು ಮಾಡುವದಕ್ಕಾಗಿ ತರುಣರ ಒಂದು ಸಂಘಟನೆಯನ್ನೇ ಪ್ರಾರಂಭಿಸಿದರು. 'ಬುದ್ಧಿವಂತರು, ತೇಜಸ್ವಿಗಳು ಆದ ತರುಣರನ್ನು ನೀವು ಕಂಡರೆ ನನ್ನ ಕಡೆಗೆ ಕಳುಹಿಸಿಕೊಡಿ' ಎಂದು ತಮ್ಮ ಶಿಷ್ಯರಿಗೆ ಬೋಧಿಸಿದರು. ಅವರ ದೈವವನ್ನು ತೆರೆಯುವವರು ನಾವು. ಅವರ ಮನಸ್ಸಿನ ಗೊಂದಲ ವನ್ನೆಲ್ಲ ನಾವು ಕಳೆಯುವೆವು. ಅವರಿಗೆ ಧ್ಯೇಯವನ್ನು ತೋರಿಸುವೆವು. ಎಂದು ತೇಜಸ್ವಿ ತರುಣರ ಮನಸ್ಸನ್ನು ತಮ್ಮ ಕಡೆಗೆ ಸೆಳೆದುಕೊಂಡರು. **ಮನಸ್ಸಿಗುಪದೇಶವೆಂಬ** ಗ್ರಂಥವನ್ನು ಬರೆದು ಚಿಕ್ಕ ಚಿಕ್ಕ ಪದ್ಯಗಳನ್ನು ಜನರಲ್ಲಿ ಹರಡಹತ್ತಿದರು. ಸಮರ್ಥರ ಶಿಷ್ಯರು ಈ ಶ್ಲೋಕಗಳನ್ನು ಅನ್ನುತ್ತ, ವೇದ ವಿಚಾರಗಳನ್ನು ಹರಡುತ್ತ ನಾಡಿನಲ್ಲೆಲ್ಲ ಫಕೀರರಂತೆ

ಹಬ್ಬಿದರು. "ನಾವು ಸ್ವತಂತ್ರರಾಗುವಾ, ಸ್ವಲ್ಪ ಸಾಹಸ; ಮಾಡೋಣ ಹೀನ ವಿಚಾರಗಳನ್ನು ತ್ಯಜಿಸೋಣ, ಉಜ್ವಲ ಭವಿಷ್ಯಕ್ಕಾಗಿ ಕಾಯೋಣ" ಎಂಬ ಸಮರ್ಥರ ಸಂದೇಶವನ್ನು ನಾಡಿನಲ್ಲೆಲ್ಲ ಬೀರಿದರು. ಇದರಿಂದ ಪ್ರಚಂಡ ಜಾಗ್ರತಿಯಾಯಿತು. ರಾಷ್ಟ್ರದಲ್ಲಿ ನವಶಕ್ತಿಯ ಸಂಚಾರ ವಾಯಿತು. ಆದರೆ ಈ ಜಾಗ್ರತಿಯನ್ನು ಸ್ವಾತಂತ್ರ್ಯಕ್ಕೆ ಉಪಯೋಗಿಸು ವವರಾರು? ಜನತೆಯ ಆಶಾ ಆಕಾಂಕ್ಷೆಗಳನ್ನು ಪೂರೈಸುವವರಾರು? ಪರಿಸ್ಥಿತಿಯಂತೂ ಪರಿಪಕ್ವವಾಗಿತ್ತು. ಯಾವನಾದರೂ ಒಬ್ಬ ಮಹಾ ಪುರುಷನು ಬರುವನೆಂದು ಎಲ್ಲರಿಗೂ ಅನಿಸಹತ್ತಿತು. ಚಳವಳಿಗಳ ಪ್ರಚಂಡ ತೆರೆಗಳು ಜನತೆಯ ಅಂತಃಕರಣವನ್ನು ಕೆರಳಿಸುತ್ತಿದ್ದವು. ತುಕಾರಾಮರ ಐಕ್ಯದ ಗರ್ಜನೆಯೂ ಸಮರ್ಥರ ಸಂಯಮದ ಸಂದೇಶವೂ ಜನತೆಯನ್ನು ಎಚ್ಚರಿಸುತ್ತಲಿದ್ದಿತು ಕವಿಗಳೂ ಲಾವಣಿಕಾರರೂ ಜನರಲ್ಲಿ ತಮ್ಮ ಕಾವ್ಯ ಗಳಿಂದ ಸ್ಫೂರ್ತಿಯನ್ನು ತುಂಬುತ್ತಿದ್ದರು. ಚಾಲನೆಯನ್ನು ಕೊಡುವ ಪ್ರತಾಪರವಿಯು ಉದಯವಾಗುವನೆಂಬ ಶ್ರದ್ಧೆಯು ಜನತೆಯಲ್ಲಿ ದೃಢ ವಾಗುತ್ತ ನಡೆದಿತ್ತು.

ತೆರೆಗಳಲ್ಲಿಯ ಶುಭ್ರವಾದ ಬುರುಗು ಉತ್ಪನ್ನವಾಗುತ್ತದೆ. ಜನತೆಯ ಹೃದಯದಲ್ಲಿಯ ವೇದನೆಯೆ ಮಹಾಪುರುಷರ ಜನ್ಮಕ್ಕೆ ಕಾರಣವಾಗುತ್ತದೆ. ಯೋಗ್ಯಕಾಲದ ನಿರೀಕ್ಷಣೆಯು ಮಾತ್ರ ಅವಶ್ಯ.

ಶಿವನೇರಿಯಲ್ಲಿ ಶಿವಾಜಿಯು ಜನ್ಮಿಸಿದನು. ೧೬೩೦ರ ಅಕ್ಷಯ ತೃತಿಯೆಯ ದಿನ ಅಕ್ಷಯಕೀರ್ತಿ **ಶಿವಛತ್ರಪತಿಯು** ಅವತರಿಸಿದನು. ಮಾತೆಯಾದ ಜಿಜಾಬಾಯಿಗೆ ದುಃಖದಲ್ಲಿಯೇ ಆನಂದ. ರಾಜಾ ಶಹಾಜಿ ದೂರದಲ್ಲಿದ್ದನು. ಶಹಾಜಿಯು ಆ ಕಾಲದ ಮಹಾಯೋದ್ಧನು. 'ಉತ್ತರ ದಲ್ಲಿ ಶಹಾಜಹಾನನು ದಕ್ಷಿಣದಲ್ಲಿ ಶಹಾಜಿ' ಎಂಬ ಗಾದೆಯು ಮನೆ ಮಾತಾಗಿದ್ದಿತು. ಆ ಕಾಲಕ್ಕೆ ದಿಲ್ಲಿಪತಿಯು ಸರದಾರನನ್ನು ಮುಲ್ಹೇರದ ಹತ್ತಿರ ಹೊಡೆದೋಡಿಸಿ ಚಿಕ್ಕ ಬಾಲಕನಾದ ನಿಜಾಮನನ್ನು ರಕ್ಷಿಸು ತ್ತಿದ್ದನು. ಆದರೆ ಮುಂದೆ ಶಹಾಜಿಯು ವಿಜಾಪುರಕ್ಕೆ ಬಂದನು ವಿಜಾಪುರದ ರಾಜನು ಶಹಾಜಿಗೆ ಮೊರೆಹೊಕ್ಕನು. ಶಹಾಜಿಯು ದಕ್ಷಿಣದಲ್ಲಿ ವಿಜಾಪುರದ ರಾಜ್ಯವನ್ನು ಬೆಳೆಯಿಸಿದನು. ಸ್ವತಂತ್ರ ಸಾಮ್ರಾಟನಂತೆ

ನಡೆಯುತ್ತ ದೊಡ್ಡ ದೊಡ್ಡ ದರ್ಬಾರಗಳನ್ನು ಕೂಡಿಸುತ್ತ ಕವಿಗಳಿಂದ ಹೊಗಳಿಸಿಕೊಳ್ಳುತ್ತ ಸ್ವತಂತ್ರ ರಾಜನಂತೆಯೆ ಇದ್ದನು. ಆದರೆ ವಿಜಾಪುರದ ಅರಸರ ಅಂಕಿತದಲ್ಲಿಯೆ ಅವನು ಬಾಳುತ್ತಿದ್ದ. ಈಗಲೂ ಕೂಡ ಸ್ವತಂತ್ರ ನಾಗಲು ಬಂಡು ಹೂಡಲು ಸಮರ್ಥನಾಗಿರಲಿಲ್ಲ.

ಆದರೆ ತನ್ನ ಮಗನು ಮಾತ್ರ ಸ್ವತಂತ್ರನಾಗಬೇಕೆಂದು ಅವನಿಗೆ ಅನಿಸುತ್ತಿರಬೇಕು. ಏಕೆಂದರೆ, ಪುಣೆಯ ಹತ್ತಿರವಿರುವ ಜಹಾಗೀರನ್ನು ಬಾಲ ಶಿವಾಜಿಗೆ ಕೊಟ್ಟನು. ದಾದೋಜಿ ಕೊಂಡದೇವನು ಅದರ ವ್ಯವಸ್ಥೆ ನೋಡುವಂತೆ ಮಾಡಿದನು. ಈ ಜಹಾಗೀರಿಯ ಸಲುವಾಗಿ ಶಿವಾಜಿಯ ಹೆಸರಿನಿಂದ ಒಂದು ಮುದ್ರೆಯನ್ನು ಕೊರೆಯಿಸಿ ಅದರಲ್ಲಿ '**ಪ್ರತಿಪಚ್ಚಂದ್ರ ರೇಖೇವ**' ಎಂಬ ಅಕ್ಷರಗಳನ್ನು ಕೆತ್ತಿಸಿದ್ದನು. ಬಿದಿಗಿಯ ಚಂದ್ರನಂತೆ ಶಿವಾಜಿಯ ಕೀರ್ತಿಯು ಹಬ್ಬಲೆಂಬುದೇ ಅವನ ಮನೋಭಿಲಾಷೆ. ಶಿವಾಜಿಯು ಸ್ವತಂತ್ರ ರಾಜನಾದರೆ ಖಂಡೋಬನಿಗೆ ಚಿನ್ನದ ನಾಣ್ಯದಿಂದ ಅಭಿಷೇಕ ಮಾಡಿಸುವೆನೆಂದು ಶಹಾಜಿಯು ಹರಕೆ ಹೊತ್ತಿದ್ದನು. ತಾನು ವಿಜಾಪುರದ ದರಬಾರದಲ್ಲಿಯೇ ಇದ್ದು, ಇತ್ತ ಶಿವಾಜಿಯನ್ನು ಬೆಳೆಯಗೊಡಬೇಕು ಇದರ ಸಂಶಯದ ಗಾಳಿಯೂ ಕೂಡ ಬಾದಶಹನಿಗೆ ಹತ್ತಬಾರದು ಎಂದು ಶಹಾಜಿಯು ಎಣಿಸಿರಬೇಕು. ಶಿವಾಜಿಯ ಶಕ್ತಿಯು ಬೆಳೆದು ಉತ್ತರದಿಂದ ಶಿವಾಜಿಯು ದಕ್ಷಿಣದಿಂದ ತಾನು ದಂಡೆತ್ತಿ ವಿಜಾಪುರವನ್ನು ನಡುವೆಯೇ ಹಿಚುಕಬೇಕೆಂದು ಅವನು ಲೆಕ್ಕ ಹಾಕಿರಬಹುದು. ದಕ್ಷಿಣದಲ್ಲಿಯ ರಾಜ್ಯವನ್ನು ಮುಂದೆ ಶಿವಾಜಿಯ ರಾಜ್ಯಕ್ಕೆ ಕೂಡಿಸಿ, ನರ್ಮದೆಯಿಂದ ಕನ್ಯಾಕುಮಾರಿಯ ವರೆಗೆ ಸ್ವತಂತ್ರ ಮರಾಠಾ ರಾಜ್ಯವನ್ನು ಹಬ್ಬಿಸಬೇಕೆಂಬ ವಿಚಾರವು ಶಹಾಜಿಯ ಮನಸ್ಸಿನಲ್ಲಿ ಇದ್ದಿಲ್ಲವೆಂದು ಯಾರು ಹೇಳಬಲ್ಲರು?

ಏನೇ ಇರಲಿ. ವಿಜಾಪುರದ ದರ್ಬಾರದ ಮಧ್ಯದಲ್ಲಿ ಕುರ್ನಿಸಾತ್ ಮಾಡಲೊಪ್ಪದ, ರಾಜಮಾರ್ಗದಲ್ಲಿ ಗೋವಧೆಮಾಡುವಂಥವರನ್ನು ದಂಡಿಸುವ ಬಾಲವೀರನು ಶಹಾಜಿಯಿಂದ ಬಹು ದೂರದಲ್ಲಿ ಜೀಜಾಬಾಯಿಯ ಪ್ರೇಮದ ಪವಿತ್ರ ತೇಜಸ್ವಿ ಸಾನ್ನಿಧ್ಯದಲ್ಲಿ ಬೆಳೆಯುತ್ತಲಿದ್ದನು. ರಾಮಾಯಣ ಮಹಾಭಾರತದ ಕಥೆಗಳನ್ನು ಆಲಿಸುತ್ತಿದ್ದನು. ಸಮರ್ಥರ ಪ್ರಚಾರಕರ ಸಂದೇಶವನ್ನು ಕುತೂಹಲದಿಂದ ಕೇಳುತ್ತಿದ್ದನು. ಸುತ್ತು

ಸುತ್ತಲಿನ ಪರಿಸ್ಥಿತಿಯನ್ನು ನಿರೀಕ್ಷಿಸುತ್ತಲಿದ್ದನು. ತರುಣ ಮಿತ್ರರೊಡನೆ ಗಂಭೀರವಾಗಿ ಆಲೋಚಿಸುತ್ತಿದ್ದನು. ಬಾಲ ಶಿವಾಜಿಯ ಎದುರಿನಲ್ಲಿ ಸ್ವಾತಂತ್ರ್ಯದ ದಿವ್ಯ ಧ್ಯೇಯವು ಒಡಮೂಡಿತು. ಆದರೆ ಅದನ್ನು ಕೃತಿಯಲ್ಲಿ ತರುವದೆಂತು? ರಾಮುನಿಗೆ ವಾನರರ ಸಹಾಯವಿದ್ದಿತು. ನನಗೆ ಮಾಡುವವ ರಾರು? ಬಡವರಾದ ಮಾವಳೇ ಜನರು ಮಾಡಬಹುದು! ಇನಾಮುದಾರರು, ಜಹಾಗೀರದಾರರು, ಜಮೀನದಾರರು ತನಗೆ ಸಹಾಯ ಮಾಡುವದು ಶಕ್ಯ ವಿಲ್ಲೆಂದು ಬಾಲ ಶಿವಾಜಿಯು ಕಂಡುಕೊಂಡನು. ಯಾರಿಗೆ ಉಣ್ಣಲು ಅನ್ನವಿಲ್ಲವೊ ಉಡಲು ಬಟ್ಟೆಯಿಲ್ಲವೊ ಅವರೇ ಮುಂದೆ ಬರುವರು. ಎಲ್ಲಿ ನೋಡಿದಲ್ಲಿ ನಾಡಗೌಡರ, ಗೌಡರ ರಾಜ್ಯ. ಇವರಾದರೊ ಬಾದಶಹರ ಹಂಗಿನಲ್ಲಿರುವವರು! ಇತ್ತ ಬಡ ಜನರನ್ನು ಸುಲಿಯುವವರು. ರೈತರ ಹೊಲ, ಫಲಭರಿತ ವೃಕ್ಷ, ಹುಲ್ಲು ಇವೆಲ್ಲವುಗಳಲ್ಲಿ ಇವರಿಗೆ ಅರ್ಧಪಾಲು. ಈ ಪರಿಸ್ಥಿತಿಯನ್ನು ಕಂಡು ಶಿವರಾಯನು ಸಂತಾಪಗೊಂಡನು. ವಿಜಾಪುರದ ಬಾದಶಹನ ವಿರುದ್ಧವಾಗಿಯೂ ಈ ನಾಡಗೌಡರ ವಿರುದ್ಧವಾಗಿಯೂ ಬಂಡು ಹೂಡುವದನ್ನು ನಿಶ್ಚಯಿಸಿದನು. ಬಂಡನ್ನು ಹೇಗೆ ಹೂಡಬೇಕು? ಹಣ ವನ್ನೆಲ್ಲಿಂದ ತರಬೇಕು? ಶಸ್ತ್ರಾಸ್ತ್ರಗಳನ್ನು ಹೇಗೆ ಸಂಗ್ರಹಿಸಬೇಕು? ಸೈನ್ಯವನ್ನು ಹೇಗೆ ಕಟ್ಟಬೇಕು, ಇವೇ ಮೊದಲಾದ ಸಮಸ್ಯೆಗಳು ಅವ ನೆದುರಿಗೆ ಇದ್ದವು. ಬಾಲ ಶಿವಾಜಿಯು ತನ್ನ ಸಂಗಡಿಗರೊಡನೆ ಗಂಭೀರವಾಗಿ ಈ ಪ್ರಶ್ನೆಗಳನ್ನು ಚರ್ಚಿಸುತ್ತಿದ್ದನು.

ಶಿವರಾಯನು ಅತ್ಯಂತ ನಿರಹಂಕಾರಿಯು. ಕೃಷ್ಣನು ಗೋಪಾಲ ರೊಡನೆ ಬೆರೆತಂತೆ, ಮಾವಳೇ ಜನರೊಡನೆ ಬೆರೆತು ಆಡುತ್ತಿದ್ದನು. ಗಿರಿಗಳನ್ನು ಏರುವದು, ದರಿ ಕಂದರಗಳನ್ನು ನಿರೀಕ್ಷಿಸುವದು, ಕುದುರೆ ಹತ್ತುವದು ದಾಂಡಪಟ್ಟಾ ಭಾಲೆ ಕತ್ತಿ ಕಠಾರಿಗಳನ್ನು ತಿರುವುವದು ಇದೇ ಅವನ ಆಟ. ತರುಣರ ಸಂಗಡ ಚಿಕ್ಕ ಸಣ್ಣ ಗುಂಪುಗಳನ್ನು ಮಾಡಿ ಹುಸಿ ಯುದ್ಧಗಳನ್ನು ಮಾಡುವದರಲ್ಲಿಯೆ ಅವನಿಗೆ ಆನಂದ. ಹೀಗೆ ಸಮಾನ ವಿಚಾರದ, ಸಮಾನ ಧ್ಯೇಯದ ತರುಣರ ತಂಡವು ಬೆಳೆಯಹತ್ತಿತು. ಪರಸ್ಪರರಲ್ಲಿ ಮಾತು ಕತೆಗಳಾಗಹತ್ತಿದವು. ತಂಡಗಳು ಬೆಳೆಯಹತ್ತಿದವು. ಕಾರ್ಯೋನ್ಮುಖ ರಾಗುವ ಸಮಯವನ್ನು ಕಾಯಹತ್ತಿದರು.

"ನಾನು ನಾಡಗೌಡರ ಹಾಗೂ ಗೌಡರ ಅಧಿಕಾರವನ್ನು ನಾಶಮಾಡುವದಕ್ಕಾಗಿಯೆ ಬಂದಿದ್ದೇನೆ" ಎಂಬ ಶಿವಾಜಿಯ ವೀರವಾಣಿಯು ಗಾಳಿಗುಂಟ ನಾಡಿನಲ್ಲೆಲ್ಲ ಹಬ್ಬಿತು. ಮಹಾರಾಷ್ಟ್ರದಲ್ಲಿಯ ಬಡವರೆಲ್ಲ ಗುಂಪುಕೂಡಹತ್ತಿದರು. ಶಿವಾಜಿಯು ಸರ್ವರನ್ನು ಬರಮಾಡಿಕೊಂಡ. ಬ್ರಾಹ್ಮಣ-ಪ್ರಭು ಮರಾಠಾ ಎಲ್ಲ ಜಾತಿಗಳಲ್ಲಿಯ ತೇಜಸ್ವಿ ನಿಶ್ಚಯಿ ತ್ಯಾಗಿ ಜನರನ್ನೆಲ್ಲ ಒಂದುಗೂಡಿಸಹತ್ತಿದ. ಮರಾಠಾರೆಂದರೆ ಕೇವಲ ಅಡ್ಡ ಹೆಸರಿನವರಲ್ಲ. ಮಹಾರಾಷ್ಟ್ರವು ನಿಜವಾಗಿಯೂ ಯಾರಿಗೆ ಮಾತೃಭೂಮಿ ಎನಿಸುವದೋ ಮಹಾರಾಷ್ಟ್ರದಲ್ಲಿಯ ದಾರುಣವಾದ ದುಃಖ ದಾರಿದ್ರ್ಯಗಳು ನಾಶವಾಗಬೇಕೆಂದು ಯಾರಿಗೆ ಅನಿಸುವದೋ ಅವರೇ ಮರಾಠರು. ಮುಸಲ್ಮಾನರು ಮಹಾರಾಷ್ಟ್ರೀಯರೊಡನೆ ಹೊಂದಿಕೊಂಡು ಇಲ್ಲಿಯೆ ಸುಖದಿಂದ ಬಾಳಲು ಬಯಸುತ್ತಿದ್ದರೆ ಅವರೂ ಮರಾಠರೇ ಎಂದು ಶಿವಾಜಿಯು ಮರಾಠಾ ಶಬ್ದದ ಉಪಯೋಗವನ್ನು ಅತ್ಯಂತ ವಿಶಾಲವಾಗಿ ಮಾಡಿದನು. ಶಿವಾಜಿಯ ಸೈನ್ಯದಲ್ಲಿಯೂ ಹತಗುಪಡೆಗಳಲ್ಲಿಯೂ ಮುಸಲ್ಮಾನರಿದ್ದರು. ಅಫಝುಲ್‌ಖಾನನ ಭೆಟ್ಟಿಗೆ ಹೋಗುವಾಗ ಇದ್ದ ಶಿವಾಜಿಯ ಸಂಗಡಿಗರಲ್ಲಿ ಒಬ್ಬ ಮುಸಲ್ಮಾನನೂ ಇದ್ದ. ಶಿವಾಜಿಯು ಕೇವಲ ಮುಸಲ್ಮಾನರ ವಿರುದ್ಧವಿರಲಿಲ್ಲ. ಅವನು ಅನ್ಯಾಯದ ವಿರುದ್ಧ ಹೋರಾಡುತ್ತಿದ್ದನು. ಜನತೆಯ ಸಂಸಾರವನ್ನು ಮಣ್ಣುಗೂಡಿಸುವವರ ವಿರುದ್ಧವಿದ್ದನು. ಅವನು ಅಫಝುಲ್‌ಖಾನನ್ನು ಸಂಹರಿಸಿದಂತೆಯೆ ಚಂದ್ರರಾಯನನ್ನು ಯಮಸದನಕ್ಕಟ್ಟಿದನು. ಅವನು ಜನತೆಯ ಕೈವಾರಿಯಾಗಿದ್ದನು. ಈ ಬಾದಶಾಹಿಗಳ ಪಾಶದಿಂದಲೂ ಸರ್ದಾರ ಜಹಗೀರದಾರರ ದಬ್ಬಾಳಿಕೆಯಿಂದಲೂ ಜನತೆಯನ್ನು ಮುಕ್ತಗೊಳಿಸುವದಕ್ಕಾಗಿಯೇ ಈ ಮಹಾ ಪುರುಷನ ಅವತಾರವಾಗಿದ್ದಿತು.

ಇಂದಿನ ಸಾವುಕಾರರೂ ಜಾಹಗೀರದಾರರೂ ಜಮೀನದಾರರೂ ಸರಕಾರದ ಬಾಲಬಡಿಯುವಂತೆ ಶಿವಾಜಿಯ ಕಾಲಕ್ಕಾದರೂ ಇದ್ದಿತು. ಆದರೆ ಸರಕಾರೀ ನವಕರರ ಸಾಹುಕಾರರ ಮಕ್ಕಳು ದೇಶಪ್ರೇಮದಿಂದ ಪ್ರೇರಿತರಾಗಿ ಹೇಗೆ ಸ್ವಾತಂತ್ರ್ಯಸಮರದಲ್ಲಿ ಸೇರುತ್ತಿದ್ದರೋ ಹಾಗೆ ಶಿವಾಜಿಯ ಸೈನ್ಯದಲ್ಲಿಯೂ ಇದ್ದಿತು. ವಿಜಾಪುರ ಬಾದಶಹನ ಸರದಾರರ ಮಕ್ಕಳು, ಶಿವಾಜಿಯ ಸೈನ್ಯದಲ್ಲಿಯ ಸೈನಿಕರು, ನಾವು ಮನೆತನಸ್ಥ ಕ್ಷತ್ರಿಯರು ಎಂದು

ಹೇಳಿಕೊಳ್ಳುವ ಜನರು ಶಿವಾಜಿಗೆ ಸೈನಿಕರಾಗಿ ಸಿಗುವದೆಂತು? ಬಹುಜನ ಸಮಾಜದಲ್ಲಿಯೇ ಜನ್ಮವೆತ್ತಿದ ನರವೀರ ತಾನಾಜಿ, ಏಸಾಜಿ, ಬಾಜಿ, ಫಸಲ್‌ಕರ ಮೊದಲಾದ ವೀರರು ದೊರೆತಿದ್ದರು. ತಾವು ಸೂರ್ಯ ಚಂದ್ರ ವಂಶಜರೆಂದು ಜಂಭ ಕೊಚ್ಚಿಕೊಳ್ಳುವವರಿವರಲ್ಲ. ಶಿವಾಜಿಯು ಜನತೆಯಲ್ಲಿ ಕ್ರಾಂತಿಯನ್ನುಂಟುಮಾಡಿದನು. ಈ ಕ್ರಾಂತಿಯನ್ನು ಹೇಗೆ ಮಾಡಿದನು, ಎಂಬುದೇ ಮಹತ್ವವಾದುದು. ಸುತ್ತುಮುತ್ತಲು ಅನೇಕ ಬಾದಶಹರು, ಮೇಲೆ ಮೊಗಲ್ ಸಾಮ್ರಾಜ್ಯ, ಕೆಳಗೆ ವಿಜಾಪುರದ ರಾಜ್ಯ, ಪೂರ್ವದಲ್ಲಿ ಗೋವಳಕೊಂಡ, ಪಶ್ಚಿಮದಲ್ಲಿ ಸಿದ್ಧೀ ಜನರು. ಹೀಗೆ ನಾಲ್ಕು ದಿಕ್ಕಿನಲ್ಲಿ ಶತ್ರುಗಳು ಕಾಯುತ್ತಿರುವಾಗ ಶಿವಾಜಿಯು ಕ್ರಾಂತಿಯನ್ನೆಬ್ಬಿಸಿದನು. ಅವನ ಮುಖ್ಯ ಬಲವಾವುದು? ಜನತೆಯೇ ಅಲ್ಲವೇ? ಈ ಜನಾರ್ದನನನ್ನು ಛತ್ರಪತಿಯು ಪೂಜಿಸಿದನು. ಈ ದರಿದ್ರನಾರಾಯಣನನ್ನು ಒಲಿಸಿಕೊಂಡನು. ಯಾರಿಗೆ ಮಹಾಜನ ಕ್ರಾಂತಿಯನ್ನುಂಟುಮಾಡಬೇಕಾಗಿದೆಯೋ ದುಷ್ಟರ ಅಧಿಕಾರವನ್ನು ನಾಶಗೊಳಿಸಬೇಕಾಗಿದೆಯೋ ಅವರು ಜನತೆಯ ಉಪಾಸನೆಯನ್ನು ಮಾಡಬೇಕೆಂಬ ಹೊಸ ಮಾರ್ಗಪ್ರವರ್ತಕನಾದನು. ಜನತೆಯ ಪ್ರಶ್ನೆಗಳನ್ನು ಕೈಯ್ಯಲ್ಲಿ ತೆಗೆದುಕೊಳ್ಳುವ ಸಂಕಲ್ಪ ಮಾಡಿ 'ಪ್ರಜೆಗಳ ಹುಲ್ಲುಕಡ್ಡಿಗೂ ಕೂಡ ಯಾರೂ ಕೈಹಚ್ಚಕೂಡದು. ಹೊಟ್ಟೆಯ ಮಕ್ಕಳಿಗಿಂತಲೂ ಹೆಚ್ಚು ಪ್ರೇಮದಿಂದ ಬೆಳೆಯಿಸಿದ ಜನತೆಯ ಗಿಡಗಂಟಿಗಳನ್ನು ಯಾರೂ ಮುಟ್ಟಕೂಡದು' ಎಂದು ಶಿವಾಜಿಯು ಕಟ್ಟಾಜ್ಞೆಯನ್ನು ವಿಧಿಸಿದನು. ಜನತೆ ಮಾವಿನ ವೃಕ್ಷಗಳನ್ನು ನೆಡಬೇಕು, ಈ ನಾಡಗೌಡರು ಅದರ ಫಲಗಳನ್ನು ಸವಿಯಬೇಕು! ಇದೆಲ್ಲಿಯ ನ್ಯಾಯ? ಈ ದುಷ್ಟಪದ್ಧತಿಯು ನಿಲ್ಲಲೇಬೇಕು ಎಂಬ ಪ್ರತಿಜ್ಞಾಬದ್ಧನಾದನು. ಜನತೆಯಲ್ಲಿ ಕೋಲ್ಮಿಂಚು ಹೊಡೆದಂತಾಯಿತು. ಇವನು ನಮ್ಮ ಹಿತಚಿಂತಕ, ಅವತಾರಿಪುರುಷ ಎಂದು ಜನತೆ ಇವನ ಬೆನ್ನುಹತ್ತಿತು. ಅವತಾರ ಶಬ್ದದ ಅರ್ಥವೇನು? ಅಹಂಕಾರದಿಂದ ಉಚ್ಚಸ್ಥಾನದಲ್ಲಿರದೆ ಕೆಳಗಿಳಿದು ಜನತೆಯಲ್ಲಿ ಬೆರೆಯುವದೇ, ಅವರ ಸುಖದುಃಖದಲ್ಲಿ ಸಮರಸನಾಗುವದೇ ಅವತಾರ. ಶಿವಾಜಿಯು ಜನತೆಯ ಸುಖದುಃಖಗಳಲ್ಲಿ ಬೆರೆತ ಮೂಲಕವೇ ಜನಾರ್ದನನ ವಿರಾಟಶಕ್ತಿಯ ದರ್ಶನ ಅವನಿಗಾಗಿ ಆ ಶಕ್ತಿಯೇ ಅವನಿಗೆ ಬೆಂಬಲವಾಗಿ ನಿಂತಿತು. ಶಿವಾಜಿಯು

ಜನತೆಯನ್ನು ಜಾಗ್ರತಗೊಳಿಸಿ ಅವರ ಸಹಾನುಭೂತಿಯನ್ನು ದೊರಕಿ
ಧ್ಯೇಯಕ್ಕಾಗಿ ಪ್ರಾಣಾರ್ಪಣೆ ಮಾಡುವ ವೀರವೃತ್ತಿಯನ್ನು ಬೆಳೆಸಿದನ
ಸಂತ ಹಾಗು ಸಮರ್ಥರ ಉಪದೇಶದಿಂದ, ತ್ಯಾಗ ಹಾಗೂ ಪುರುಷಾರ್ಥ
ಜ್ವಲಂತ ಭಾವನೆಯು ಜನತೆಯಲ್ಲಿ ಜಾಗ್ರತವಾಗಿತ್ತು. ಶಿವಾಜಿಯು ಸಂಕ
ದಲ್ಲಿ ಸ್ವತಃ ಮುಂದಾಗಿ ಮರಣದ ಭೀತಿಯನ್ನು ಜನರಿಂದ ಕಿತ್ತೊಗೆದನ
ಅಫಜುಲ್‌ಖಾನನ ಎದುರಿಗೆ ಸ್ವತಃ ಹೋಗಿನಿಂತನು. ಶಾಹಿಸ್ತೇಖಾನ
ಮೇಲೆ ತಾನೇ ಹಲ್ಲೆಯನ್ನು ಮಾಡಿದನು. ಆದುದರಿಂದಲೇ ಧ್ಯೇಯವಾ
ಗಳನ್ನು ನಿರ್ಮಿಸುವ ಸಾಮರ್ಥ್ಯವು ಅವನಿಗೆ ಬಂದಿತು.

ಶಸ್ತ್ರಾಸ್ತ್ರಗಳ ಹಾಗೂ ಧಾನ್ಯಸಂಗ್ರಹಕ್ಕೆ ಪ್ರಾರಂಭಿಸಿದನು. ಒಮ್ಮೊಮ್ಮೆ
ಸರಕಾರದ ಭಂಡಾರಗಳನ್ನು ಸೂರೆಗೊಂಡರೆ ಮತ್ತೊಮ್ಮೆ ಸಿರಿವಂತರ ಧನಕ
ಚಕ್ರ ತರುತ್ತಿದ್ದನು. ಮೊದಮೊದಲು ಹೀಗೆಯೇ ನಡೆಯಿತು. ಶಸ್ತ್ರಾಸ್ತ್ರಗಳ
ಕೂಡಹತ್ತಿದವು ಎಲ್ಲಕ್ಕೂ ಮಹತ್ವದ ಸಂಗತಿಯೆಂದರೆ, ಈ ಮಹಾ
ಪುರುಷನು ಹುಡುಕಿತೆಗೆದ ಕೂಟಯುದ್ಧ ( ಗನಿಮಿಕಾವಾ ). ಆನೆ ಕುದು
ತೋಫು ತುಬಾಕಿಗಳಿಂದ ಸುಸಜ್ಜಿತವಾದ ಮೊಗಲ ಹಾಗೂ ವಿಜಾಪುರ
ಬಾದಶಹರ ಸೈನ್ಯದೊಡನೆ ಹೋರಾಡುವ ಬಗೆ ಹೇಗೆ ? ಅಕಸ್ಮಾತ್ ಗುಡು
ನಂತೆ ಶತ್ರುಗಳನ್ನು ಮುತ್ತುವದು. ಮಿಂಚಿನಂತೆ ಶತ್ರುಗಳನ್ನು ನಾಶಗೊಳಿ
ಸುಲಿದುಕೊಂಡು ಮಾಯವಾಗುವದು. ಹೀಗೆ ಈ ಅಭಿನವ ಯುದ್ಧವನ್ನು
ಶಿವಾಜಿಯು ಕಂಡುಹಿಡಿದು ಅದನ್ನು ಯಶಸ್ವಿಯನ್ನಾಗಿ ಮಾಡಿತೋರಿಸಿದನು
ಈ ಕೂಟಯುದ್ಧಕ್ಕೆ ಜನತೆಯ ಸಹಕಾರವು ಪೂರ್ಣವಾಗಿ ಬೇಕಲ್ಲವೆ
ಶಿವಾಜಿಗಾದರೋ ಜನತೆಯು ಪೂರ್ಣವಾಗಿ ಬೆಂಬಲವನ್ನಿತ್ತಿತು. ಶತ್ರುಗಳ
ಸುದ್ದಿಯನ್ನು ಹೇಳುವವರು ಜನರು, ಧಾನ್ಯಗಳನ್ನೊದಗಿಸುವವರು ಜನರ
ಶಿವಾಜಿಯ ಸೈನ್ಯವನ್ನು ರಕ್ಷಿಸುವವರು ಜನರು, ಈ ಬಗೆಯಾಗಿ ಶಿವಾಜಿಯ
ಬಂಡು ಎಲ್ಲೆಡೆಯಲ್ಲಿಯೂ ಯಶಸ್ವಿಯಾಗುತ್ತ ಪ್ರಚಂಡವಾಗಿ ಬೆಳೆಯಿತು

ಆಯುಕಟ್ಟಿನ ಸ್ಥಳಗಳಲ್ಲಿರುವ ಗಿರಿ ದುರ್ಗಗಳನ್ನು ಕೈಯಲ್ಲಿಟ್ಟುಕೊಳ್ಳು
ವದು ಅಧಿಕಾರದ ಕೀಲಿಕೈಯಿದ್ದಂತೆ ಎಂಬ ಸಂಗತಿಯನ್ನು ಮನಗಂಡು
ಒಂದರಹಿಂದೊಂದು ದುರ್ಗಗಳನ್ನು ವಶಪಡಿಸಿಕೊಳ್ಳುತ್ತ ಶಿವಾಜಿ ಮುನ್ನಡ
ದನು ತೋರಣ ಕಿಲ್ಲೆಯನ್ನು ವಶಪಡಿಸಿಕೊಂಡು ಸ್ವಾತಂತ್ರ್ಯದತೋರಣವನ್ನು

ಕಟ್ಟಿ ಮಹಾರಾಷ್ಟ್ರದಲ್ಲೆಲ್ಲ ಮಿಂಚಿನಂತೆ ಸಂಚರಿಸಹತ್ತಿದನು. ತೇಜಸ್ವಿಯಾದ ಇತಿಹಾಸವನ್ನು ನಿರ್ಮಿಸಹತ್ತಿದನು. ರಾಷ್ಟ್ರದಲ್ಲೆಲ್ಲ ಜಗಪ್ರಸಿದ್ಧರಾದ ವೀರ ಮಹಾವೀರರು ಮಹಾಮುತ್ಸದ್ದಿಗಳು ಬೆಳಕಿಗೆ ಬಂದರು. **ಅಬಾಜಿ ಸೋನದೇವ,** ಸ್ಥಿರಾಸನನಾದ ಮಹಾವೀರ **ನೇತಾಜಿ,** ಆನೆಯೊಡನೆ ಹೋರಾಡುವ **ಏಸಾಜಿ,** ಕತ್ತರಿಸಿದ ಕೈಗೆ ಮುಂಡಾಸಸುತ್ತಿ ಹೋರಾಡುವ ರುಂಡ ಉರುಳಿದರೂ ಸ್ಫೂರ್ತಿಯುತನಾದ ಧಡದಿಂದಲೇ ಸಾವಿರಾರು ಸೈನಿಕರನ್ನು ನೆಲಕ್ಕುರುಳಿಸಿದ ವೀರಶಿರೋಮಣಿ **ಮುರಾರಜಿ** ಮತ್ತು ಪಾವನ ಖಿಂಡಿಯಿಂದ ಶಿವಾಜಿಯು ಸುಖರೂಪದಿಂದ ಪಾರಾಗಲೆಂಬ ಬುದ್ಧಿಯಿಂದ ಧಾರಾತೀರ್ಥದಲ್ಲಿ ಧುಮುಕಿ ತೋಫಿನ ಸಪ್ಪಳವನ್ನು ಕೇಳಿ 'ನನ್ನ ಕರ್ತವ್ಯವನ್ನು ನಾನು ಮಾಡಿದೆ' ಎಂದು ಪ್ರಾಣಬಿಡುವ **ವೀರಬಾಜಿ**—ಶಿವಬಾವೆ ಸ್ವಾತಂತ್ರ್ಯದ ರಾಮಾಯಣದಲ್ಲಿ ತನ್ನ ರಕ್ತದಿಂದ ಸುಂದರಕಾಂಡವನ್ನು ಯಾರು ಬರೆದರೋ, ತನ್ನ ಮುದ್ದುಮಗನ ಮದುವೆಯನ್ನು ಮುಂದೂಡಿ ಮೊದಲು ಕೊಂಡನಕಿಲ್ಲೆಯೊಡನೆ ಮದುವೆಯಾಗಲು ಯಾರು ಹೋದರೋ, ಮಧ್ಯರಾತ್ರಿಯಲ್ಲಿಯೇ ಉಡದ ಸಹಾಯದಿಂದ ಕೋಟೆಯನ್ನೇರಿ ಯುದ್ಧ ಮಾಡುತ್ತ—ಮಾಡುತ್ತ ಕೈ ಮುರಿದರೂ ಕೊನೆಯವರೆಗೂ ಶಿವಾಜಿಯನ್ನು ನೆನೆಯುತ್ತ ಯಾರು ರಣದಲ್ಲಿ ಬಿದ್ದರೋ ಅಂತಹ ಅತುಲ ಕೀರ್ತಿ ಅಮರ ಸ್ಫೂರ್ತಿ **ತಾನಾಜಿ** ಹಾಗೂ ನಾನು ಹಗ್ಗವನ್ನು ಯಾವಾಗಲೋ ಕೊಯ್ದು ಒಗೆದಿರುವೆ, ಓಡುವಿಯೆಲ್ಲಿ? ಎಂದು ಸಂದೇಶವೀಯುವ ತಾನಾಜಿಯ ಅಣ್ಣನಾದ **ಸೂರ್ಯಾಜಿ,** ತಾನಾಜಿಯ ಸೇಡನ್ನು ತೀರಿಸಿಕೊಳ್ಳುವ ಉದಯ ಭಾನುವಿಗೆ ಕಂಠಸ್ನಾನವನ್ನು ಮಾಡಿಸುವ ವೃದ್ಧ **ಸೇಲಾರ ಮಾಮಾ** ಸ್ವಲ್ಪ ಶಿಸ್ತನ್ನು ಮುರಿದುದಕ್ಕೆ ಶಿವಾಜಿಯು ಸಿಟ್ಟಾದನೆಂದು ಬಗೆದು ಪುನಃ ಶತ್ರುಗಳ ಮೇಲೆ ಏರಿ ಹೋಗಿ ಕಲಂಕವನ್ನು ಅಳಿಸಿಕೊಳ್ಳುವದಕ್ಕಾಗಿ ಧಾರಾತೀರ್ಥದಲ್ಲಿ ಬಿದ್ದ **ಪ್ರತಾಪರಾವ** ಗುರ್ಜರ—ಹೀಗೆ ಎಷ್ಟೊಂದು ಹೆಸರನ್ನು ಹೇಳಬೇಕು. ಎಷ್ಟು ಜ್ಞಾತಾಜ್ಞಾತ ವೀರರು? ಎಂತಹ ಬಲಿದಾನ? ಎಂತಹ ಆತ್ಮಾರ್ಪಣ?

ದಿಲ್ಲಿಯ ಬಿಡುಗಡೆ! ಎಂತಹ ಕಠಿಣ ಪ್ರಸಂಗವದು! ಎಂತಹ ಸಾಹಸ! ಸಂಭಾಜಿಯನ್ನು ಮಗನಂತೆ ಸಂರಕ್ಷಿಸುವ ಬ್ರಾಹ್ಮಣನ ಎಂತಹ

ಉದಾತ್ತತೆ! ದಿಲ್ಲಿಯಿಂದ ಶಿವಾಜಿಯು ಸುಖರೂಪವಾಗಿ ನಾಡಿಗೆ ಮರಳುತ್ತಾನೆ! ಕರೆತಂದವರಾರು? ಜನತಾ ಜನಾರ್ದನನಲ್ಲವೇ? ಈ ಮಹಾಪುರುಷನನ್ನು ಜನತೆಯು ರಕ್ಷಿಸಲಿಲ್ಲವೆ? ಬೂದಿಯನ್ನು ಬಡಿದು ಕೊಂಡ ಶಿವಾಜಿಯು ಎದುರಿಗೆ ನಿಂತಾಗ ಜೀಜಾತಾಯಿಯ ಅಂತಃಕರಣಕ್ಕೆ ಏನು ಅನಿಸಿರಬೇಕು! ಮರಳಿಬಂದ ಶಿವಾಜಿಯನ್ನು ಕಂಡು ಆವನ ಪರಿವಾರ ದಲ್ಲಿ ಎಂತಹ ಸ್ಫೂರ್ತಿಯು ಉದಿಸಿರಬೇಕು! ದೇಶದಲ್ಲೆಲ್ಲ ಎಂತಹ ಆನಂದವು ಉಕ್ಕೇರಿರಬೇಕು! ಎಷ್ಟು ಸಕ್ಕರೆ ಹಂಚಿರಬೇಕು! ಊಹೆಗೂ ಕೂಡ ಅಸಾಧ್ಯ!

ದಿಲ್ಲೀಪತಿಯ ಶಹನನ್ನು ವಿಜಾಪುರ ಬಾದಶಹನಿಗೆ ಕೊಟ್ಟು ಶಹಾಜಿಯನ್ನು ಬಿಡಿಸಿದ ನಂತರ ಕೆಲವು ದಿನಗಳ ಮೇಲೆ ಶಹಾಜಿಯ ಭೆಟ್ಟಿಗೆ ಬಂದನು. ಆ ಸಮಯದಲ್ಲಿ ಶಿವರಾಯನು ತೋರಿದ ಪಿತೃಭಕ್ತಿಯು ಅವರ್ಣನೀಯವಾದುದು! ವಿನಯಪೂರ್ವಕನಾಗಿ ತಂದೆಯ ಎದುರು ಹೋಗಿ ಚರಣಗಳ ಮೇಲೆ ಮಸ್ತಕವನ್ನಿಟ್ಟನು. ತಂದೆಯು ಪ್ರತಾಪಿಯಾದ ಮಗನನ್ನು ಬಿಗಿದಪ್ಪಿಕೊಂಡನು. ಎಂತಹ ಸುಮಧುರವಾದ ಪ್ರಸಂಗವದು!

ರಾಜ್ಯವು ಬೆಳೆಯುತ್ತ ನಡೆದಂತೆ ಸೈನ್ಯಬಲವು ಬಲಿಯಹತ್ತಿತು. ಅಶ್ವದಳವು ಸನ್ನದ್ಧವಾಗಿತ್ತು. ರಾಜದರ್ಬಾರಕ್ಕೆ ಯೋಗ್ಯವಾದ ದುರ್ಗಗಳು ತಲೆಯೆತ್ತಿದ್ದವು. ದುರ್ಗಗಳಲ್ಲಿ ಧಾನ್ಯ ಸಿಬಂದಿ ಶಸ್ತ್ರಾಸ್ತ್ರ ಮೊದಲಾದವುಗಳ ಸಂಗ್ರಹವು ಪರಿಪೂರ್ಣವಾಗಿದ್ದಿತು. ಸಮುದ್ರದ ಮಹತ್ವವನ್ನರಿತ ಶಿವಾಜಿ ಹಡಗುಪಡೆಯನ್ನು ಕಟ್ಟಿ ಸಮುದ್ರದಲ್ಲಿ ಕೋಟೆಯನ್ನು ಕಟ್ಟಿಸಿದನು. ಬ್ರಿಟಿಶರೂ ಕೂಡ ಅಚ್ಚರಿಪಡುವಂತಹ ಬಲಿಷ್ಠವಾದ ಹಡಗುಪಡೆಯನ್ನು ನಿರ್ಮಿಸಿದನು. ಶಿವಾಜಿಯ ಎಂತಹ ದೂರ ದೃಷ್ಟಿಯದು! ಮುಂಬೈಯಲ್ಲಿಯ ಪರದೇಶಿಯರ ವಖಾರಗಳನ್ನು ನೋಡಿ ಮುಂಧೋರಣಿಯಾದ ಶಿವಾಜಿಯು ಈ ಜಲಚರ ಪ್ರಾಣಿಗಳ ಶಕ್ತಿಯನ್ನರಿತನು. ವ್ಯಾಪಾರವೂ ವೈಭವವೂ ಬೇಕಾಗಿದ್ದರೆ ಸಮುದ್ರವು ರಾಜ್ಯದ ವಶದಲ್ಲಿರಬೇಕೆಂಬ ಸೂತ್ರವನ್ನು ಶಿವಾಜಿಯು ಹೇಳಿದನು. ಶಿವಾಜಿಯ ಬುದ್ಧಿಯು ಸ್ವತಂತ್ರವೂ ಅರ್ವಾಚೀನವೂ ಇದ್ದಿತೆಂಬುದರಲ್ಲಿ ಸಂಶಯವೇ ಇಲ್ಲ.

ರಾಜ್ಯವು ಬಲಿಷ್ಠವಾಗಿ ಉಳಿಯಬೇಕೆಂಬ ದೃಷ್ಟಿಯಿಂದ ಕೇವಲ ಸಂಬಳ ವನ್ನಷ್ಟೇ ಕೊಡಲು ಉಪಕ್ರಮಿಸಿದನು ಜಹಗೀರುಗಳನ್ನು ಕೊಡುವ ಪದ್ಧತಿಯನ್ನು ನಿಲ್ಲಿಸಿದನು. ಈ ಜಹಗೀರದಾರರು ಸ್ವತಂತ್ರ ವೃತ್ತಿಯವ ರಾಗಿ ವ್ಯಕ್ತಿ ಸ್ವಾರ್ಥನಿಷ್ಠರಾಗಿ ಮಧ್ಯವರ್ತಿ ಅಧಿಕಾರದ—ಕೇಂದ್ರವನ್ನು ದುರ್ಬಲಗೊಳಿಸುವರೆಂಬದನ್ನರಿತು ಈ ಜಹಗೀರಿಗಳನ್ನು ಕೊಡದಿರುವ ಪ್ರಘಾತವನ್ನು ಪ್ರಾರಂಭಿಸಿದ.

ಹೀಗೆ ರಾಜ್ಯವನ್ನು ಕಟ್ಟುತ್ತ ನಡೆದನು. ೧೬೭೪ರಲ್ಲಿ ರಾಜ್ಯಾಭಿಷೇಕದ ಮಂಗಲವಿಧಿ ನೆರವೇರಿತು. ಶಿವರಾಯನು ಛತ್ರಪತಿಯಾದನು. ಸಮರ್ಥರು ಆಶೀರ್ವದಿಸಿದರು. ಇಬ್ಬರ ಕಣ್ಣುಗಳಿಂದಲೂ ಆನಂದ ಬಾಷ್ಪಗಳು ಉದುರಿದವು. ಎಲ್ಲ ಮಹಾರಾಷ್ಟ್ರೀಯರ ಅಂತಃಕರಣವು ಉಕ್ಕಿಬಂದಿತು. ರಾಷ್ಟ್ರವೇ ಅಭಿನಂದನವನ್ನೀಯಿತು.

ಭಾರತೀಯ ಸಂಸ್ಕೃತಿಯಿಂದ ಉದ್ದೀಪಿತನಾದ ಶಿವಾಜಿಯು ಪ್ರಾಚೀನ ರಾಜಋಷಿಗಳ ಪರಂಪರೆಯನ್ನು ತೀಡಲು ಬಯಸುವದು ಸ್ವಾಭಾವಿಕ. ಅಷ್ಟಪ್ರಧಾನಪೂರ್ಣ ರಾಜ್ಯ ಪದ್ಧತಿಯನ್ನು ಪ್ರಾರಂಭಿಸಿದನು. ಆಡಳಿತೆಯ ಸೌಕರ್ಯಕ್ಕಾಗಿ ಬೇರೆ ಬೇರೆ ಖಾತೆಗಳನ್ನು ನಿರ್ಮಿಸಿ ಆಯಾ ವಿಷಯಗಳಲ್ಲಿ ತಜ್ಞರಾದ ಅಧಿಕಾರಿಗಳನ್ನು ನೇಮಿಸಿದನು. ಇದರಿಂದ ಗುಣದ ಬೆಲೆಯು ಹೆಚ್ಚಿತು. ರಾಜ್ಯವು ಬೆಳೆಯುತ್ತ ನಡೆಯಿತು. ಸ್ವತಂತ್ರ ರಾಜ್ಯದ ಪತ್ರ ವ್ಯವಹಾರವು ಪರಕೀಯರೊಡನೆ ಪ್ರಾರಂಭವಾಯಿತು. ನೂರಾರು ಪರಕೀಯ ಶಬ್ದಗಳು ಮರಾಠೀ ಭಾಷೆಯಲ್ಲಿ ಹೊಕ್ಕಿದ್ದವು. ಶಿವರಾಯನು ರಾಜ್ಯ ವ್ಯವಹಾರ ಕೋಶವನ್ನು ಸಿದ್ಧಪಡಿಸಿ ಪರಕೀಯ ಶಬ್ದಗಳಿಗೆಲ್ಲ ಪ್ರತಿ ಸಂಸ್ಕೃತ ಶಬ್ದಗಳನ್ನು ರೂಢಗೊಳಿಸಿದನು. ಸ್ವಕೀಯ ಶಬ್ದವಿದ್ದರೆ ಒಳಿತೇಯಾಯಿತು. ಹೊಸ ಕಲ್ಪನೆ ಇದ್ದು ಅದನ್ನು ವರ್ಣಿಸುವ ಪರಕೀಯ ಶಬ್ದವನ್ನೂ ಸ್ವಾಗತಿಸಿದನು. ಆದರೆ ಮನೆಮಾತುಗಳನ್ನು ಮುಳುಗಿಸಿ ಪರಕೀಯ ಶಬ್ದಗಳನ್ನು ಸ್ವೀಕರಿಸುವ ಮೋಹವನ್ನು ಕಿತ್ತೊಗೆದನು.

'ಕಾರ್ಯವು ಪರ್ವತದಷ್ಟಿದೆ' ಎಂದು ಚಿಂತಿಸುತ್ತಿದ್ದ ಸಮರ್ಥರು ಪಾಪಿಯಾದ ಔರಂಗಜೇಬನು ನಾಶವಾಗುವದನ್ನು ಸ್ವಾತಂತ್ರ್ಯದ ಸೂರ್ಯೋ

ದಯವನ್ನು ಕಂಡು, ಜನತೆಯಲ್ಲಿಯ ಜಾಗೃತಿ, ಕರ್ತವ್ಯದಕ್ಷತೆ, ಐಕ್ಯ, ತ್ಯಾಗ, ಶೌರ್ಯ, ಧೈರ್ಯ, ಶಿಸ್ತು, ಚಾರಿತ್ರ್ಯಗಳನ್ನು ನೋಡಿ, ಅವರ ಹೃದಯವು ಆನಂದದಿಂದ ತುಂಬಿಬಂದಿತು. ತನ್ನ ಧ್ಯೇಯಕ್ಕೆ ಮೂರ್ತ ಸ್ವರೂಪವನ್ನಿತ್ತ ಶಿವರಾಯನನ್ನು ಕುರಿತು ಗದ್ಗದಿತ ಕಂಠರಾಗಿ ತುಳಜಾ ಭವಾನಿಯ ಎದುರಿನಲ್ಲಿ ನಿಂತು, "**ತಾಯಿ ನಿನ್ನ ಮಗನನ್ನು ನೀನೆ ಬೆಳೆಯಿಸು. ನಿಜವಾಗಿಯೂ ದೇವರು ಕೊಟ್ಟ ವರವೇ ಶಿವಾಜಿಯು– ಅವನು ಪ್ರಕಾಶಮಾನವಾಗಲಿ**" ಎಂದು ಪ್ರಾರ್ಥಿಸಿದರು. ಇಂತಹ ದೈವೀ ಪುರುಷರು ವಿರಳವಲ್ಲವೆ? ಶಿವಾಜಿಯು ನಿಜವಾಗಿಯು ದೈವೀ ಪುರುಷ. ಒಂದು ವೇಳೆ ಆತನು ವಿರಕ್ತನಾಗಿದ್ದರೆ, ದೊಡ್ಡ ಭಗವದ್ಭಕ್ತನಾಗುತ್ತಿದ್ದ. ಒಮ್ಮೆ ಹಂಪಿಯ ಹತ್ತಿರದ ಅರಣ್ಯದಲ್ಲಿ ಶಿವಾಜಿಯು ಧ್ಯಾನಮಗ್ನನಾದನಂತೆ, ಜನತೆಯ ಕಳವಳವು ಅವನನ್ನು ಬಡಿದೆಬ್ಬಿಸಿತಂತೆ. ಇಂತಹ ರಾಜಋಷಿ ಶಿವಾಜಿಯು ಒಮ್ಮೆ ಸೆರೆಹಿಡಿದು ತಂದ ಯುವತಿಯನ್ನು ನೋಡಿ 'ತಾಯೀ ನಿನ್ನ ಹೊಟ್ಟೆಯಲ್ಲಿ ನಾನು ಹುಟ್ಟಿದ್ದರೆ ನಾನು ಎಷ್ಟು ಸುಂದರನಾಗುತ್ತಿದ್ದೆ' ಎಂದನಂತೆ. ಎಂತಹ ಉದ್ಗಾರವಿದು! ಇಂತಹ ಜಿತೇಂದ್ರಿಯನು ಸಾಮಾನ್ಯನಲ್ಲ. ಪುರುಷಸಿಂಹನು. ಮುಸಲ್ಮಾನ ಧರ್ಮದ ನಿಂದೆಯನ್ನು ಆವನು ಎಂದೂ ಮಾಡಲಿಲ್ಲ. ಕುರಾಣದ ಅಪಮಾನಗೊಳಿಸಲಿಲ್ಲ. ಮಶೀದೆ, ದರ್ಗಾಗಳಿಗೂ ದಾನವಿತ್ತನು. ಪರಧರ್ಮಿಯರ ಪ್ರೇಮ ಸಂಪಾದಿಸಿದನು. ಇಂತಹ ರಾಜರು ಇತಿಹಾಸದಲ್ಲಿ ವಿರಳ. ಆದುದರಿಂದಲೇ ಸಮರ್ಥರು ದೇವಿಯ ಮುಂದೆ ಮೇಲಿನಂತೆ ಪ್ರಾರ್ಥಿಸಿದರು.

ಈ ದಿವ್ಯ ಮೂರ್ತಿಯ ಕೀರ್ತಿಯು ಬೆಳೆಬೆಳೆಯುತ್ತಿರುವಾಗಲೇ ೧೬೮೦ರಲ್ಲಿ ಮಹಾರಾಷ್ಟ್ರದ ಈ ದಿವ್ಯಜ್ಯೋತಿಯು, ಸ್ಫೂರ್ತಿಯ ದೇವತೆಯು, ಸ್ವಾತಂತ್ರ್ಯದ ದಿವ್ಯತೇಜಸ್ಸು ಅಂತರ್ಧಾನವಾಯಿತು. ಆದರೆ ಶಿವಛತ್ರಪತಿಯ ಸ್ಫೂರ್ತಿಯು ಮಹಾರಾಷ್ಟ್ರದ ರೋಮ ರೋಮದಲ್ಲಿ ವ್ಯಾಪಿಸಿದೆ

ಮಹಾರಾಷ್ಟ್ರದ ಮೌನ ಗಿರಿದುರ್ಗಗಳು ಶಿವಾಜಿಯ ಸಂದೇಶವನ್ನು ಸಾರುತ್ತಲಿವೆ. ಬಡವರ ಪ್ರಶ್ನೆಯನ್ನು ಕೈಯ್ಯಲ್ಲಿ ತೆಗೆದುಕೊಳ್ಳಲು ಹೇಳುತ್ತಲಿವೆ. ರಾಷ್ಟ್ರಕ್ಕಾಗಿ ಪರಮಾವಧಿ ತ್ಯಾಗವನ್ನು ಮಾಡಿರಿ ಎಂದು

ಕೂಗುತ್ತಲಿವೆ. 'ಸಿಂಹಗಡದಲ್ಲಿ ನಾನು ಒಂದು ತಿಂಗಳು ಇರುವೆ. ಆದರೆ ಆ ಸ್ಫೂರ್ತಿಯು ವರ್ಷವೆಲ್ಲವೂ ನನಗೆ ಶಕ್ತಿಯನ್ನೀಯುವದು' ಎಂದು ಲೋಕಮಾನ್ಯರು ನಮಗೆ ಹೇಳುತ್ತಿದ್ದರು. ಅಂತಹ ರಾಯಗಡ, ಸಿಂಹಗಡ, ಮೊದಲಾದ ಸ್ಮೃತಿಗಳು ರಾಷ್ಟ್ರಕ್ಕೆ ಸ್ವಾತಂತ್ರ್ಯದ ಸಂದೇಶವನ್ನೀಯುತ್ತಲಿವೆ.

ಶಿವಛತ್ರಪತಿಯು ಹೋದನಂತರ ಸಂಭಾಜಿಯ ಕಾಲವು ಮುಗಿದ ನಂತರ ರಾಜಾರಾಮ ಮಹಾರಾಜನು ತಂಜಾವೂರಿನಲ್ಲಿದ್ದಾಗ ಔರಂಗ-ಜೇಬನು ದಂಡೆತ್ತಿಬಂದಾಗ ರಾಷ್ಟ್ರದಲ್ಲಿ ಯಾರಿದ್ದರು? ರಾಮಚಂದ್ರಪಂತ, ಸಂತಾಜಿ, ಧನಾಜಿ ಮೊದಲಾದ ವೀರರು ಹೋರಾಡಿ, ಔರಂಗಜೇಬನನ್ನು ದಣಿಸಲಿಲ್ಲವೇ? ಅವರಿಗೆ ಸ್ಫೂರ್ತಿ ಯಾವದು? ಶಿವಾಜಿಯ ಸಂದೇಶ ವಲ್ಲವೇ? ಆ ಸಂದೇಶವು ರಾಷ್ಟ್ರವನ್ನು ರಕ್ಷಿಸಲಿಲ್ಲವೇ? ಇಂದು ಆ ಶಿವಾಜಿಯ ಸಂದೇಶವು ನಮ್ಮಲ್ಲಿರುವ ಒಡಕುಗಳನ್ನೆಲ್ಲ ಜಿಸೆದು ಏಕರಾಷ್ಟ್ರೀ-ಯತೆಯನ್ನು ಮಾಡಲಾರದೇ?

ಸಂಭಾಜಿಯ ಕಾಲದಲ್ಲಿ ಕಗ್ಗತ್ತಲೆ ಕವಿದಾಗ ಸಮರ್ಥರು 'ಶಿವಾಜಿಯ ರೂಪವನ್ನು ಸ್ಮರಿಸಿರಿ, ಅವನ ಪ್ರತಾಪವನ್ನು ನೆನೆಯಿರಿ, ಅವನ ಆಚಾರ ಗಳಂತೆ ನಡೆಯಿರಿ, ಎಚ್ಚರಿಕೆ' ಎಂದು ಸಂದೇಶವನ್ನೀಯಲಿಲ್ಲವೆ? ಆ ಸಂದೇಶವು ಭಾರತಕ್ಕೆ ತ್ರಿಕಾಲದಲ್ಲಿ ಅನ್ವಯಿಸುವದು, ಅದನ್ನು ಅನುಸರಿಸಿದರೆ ನಮ್ಮ ಗಂಡಾಂತರಗಳೆಲ್ಲ ದೂರಾಗುವವು. ಒಣ ಹರಟೆ ಬಂದಾಗುವದು. ಜೀವನದಲ್ಲಿ ಪ್ರಖರತೆಯೂ ಆಳವಾದ ವಿಚಾರವೂ ಉದಾರ ಬುದ್ಧಿಯೂ ವ್ಯಾಪಕ ಹಾಗೂ ವಿಶಾಲದೃಷ್ಟಿಯೂ ಬರುವವು.

ಮಹಾರಾಷ್ಟ್ರದಲ್ಲಿ ರಾಮರಾಜ್ಯವು ಉದಯವಾಗಿತ್ತು 'ಹೌದು.' ರಾಮ ರಾಜ್ಯವು ಜನತೆಯ ಸಲುವಾಗಿ ಅಲ್ಲವೆ! ರಾಮಚಂದ್ರನ ಆದರ್ಶವನ್ನು ಸಮರ್ಥರು ದೇಶದ ಎದುರಿಗೆ ಇಟ್ಟಿದ್ದರು. ಶಿವಛತ್ರಪತಿಗೆ ಧ್ವಜದ ಚಿನ್ಹ ವಾಗಿ ಶ್ಯಾಟಿಯನ್ನು ಕೊಟ್ಟು ತ್ಯಾಗದ ಸನ್ಯಾಸದ ದೀಕ್ಷೆಯನ್ನಿತ್ತರು. ರಾಜನು ಪ್ರಜೆಗಳ ವಿಶ್ವಸ್ಥನು. ಭಂಡಾರವು ಪ್ರಜೆಗಳದು. ಪ್ರಜೆಗಳ ಕಲ್ಯಾಣಕ್ಕಾಗಿಯೇ ಅದು ವ್ಯಯವಾಗಬೇಕು. ಇದು ರಾಜನ ಕರ್ತವ್ಯ. ಇದು ರಾಮರಾಜ್ಯದ ಆದರ್ಶವಲ್ಲವೇ? ಇದನ್ನೇ ಆದರ್ಶವನ್ನಾಗಿ ಇಟ್ಟು

ಕೊಂಡ ಶಿವಪ್ರಭುವು ಜನತೆಯ ಸೇವೆಯಲ್ಲಿ ಮಗ್ನನಾದನು. ಅದರಲ್ಲಿಯೇ ಆನಂದಪಟ್ಟನು. 'ಸರ್ವೇಷಾಮವಿರೋಧೇನ ಬ್ರಹ್ಮಕರ್ಮ ಸಮಾರಭೇ' ಎಂಬ ಮಂತ್ರದ ಸಾರವನ್ನರಿತ ಶಿವಛತ್ರಪತಿಯು ಸ್ವಾತಂತ್ರ್ಯಕ್ಕೋಸುಗ, ರಾಷ್ಟ್ರನಿರ್ಮಾಣಕ್ಕೋಸುಗ ಶಕ್ಯವಿದ್ದ ಅವಿರೋಧವನ್ನು ನಿರ್ಮಾಣಮಾಡಿದನು. ಸರ್ವರನ್ನು ಒಂದೇ ಧ್ಯೇಯದತ್ತ ತಿರುಗಿಸಿದನು. ಸರ್ವರ ಸುಖ ದುಃಖಗಳಲ್ಲಿ ಸಮರಸನಾದನು. ಸರ್ವತ್ರದಲ್ಲಿ ನ್ಯಾಯವನ್ನು ಸ್ಥಾಪಿಸಲು ಹೆಣಗಿದನು. ಸಮರ್ಥರು ಇದೆಲ್ಲವನ್ನು ನೋಡಿ ಆನಂದದಿಂದ ಕುಣಿಯ ಹತ್ತಿದರು. 'ಇನ್ನು ಸ್ನಾನ ಸಂಧ್ಯಾದಿಗಳಲ್ಲಿ ತೊಡಗುವೆ. ಕಾರ್ಯವು ಮುಗಿಯಿತು' ಎಂದು ಉದ್ಗಾರ ತೆಗೆದರು.

ರಾಷ್ಟ್ರ ನಿರ್ಮಾಣಕ್ಕಾಗಿ ಶಿವಛತ್ರಪತಿಯು ತೋರಿದ ಮಾರ್ಗದಿಂದ ನಡೆದಾಗಲೇ ನಿಜವಾಗಿಯ ಈ ಶಿವಾಜಿಯು ಉತ್ಸವವನ್ನು ಮಾಡಿದಂತಾಗುವದು. ಅವನ ಉದಾತ್ತ ಗುಣಗಳು ರಾಷ್ಟ್ರಸೇವೆಯು ನಮ್ಮಲ್ಲಿ ಬಂದಾಗಲೇ ನಾವು ಋಣಮುಕ್ತರಾಗುವೆವು. ಶಿವಛತ್ರಪತಿಯೆಂದರೆ ಭಾರತದ ಅಮೃತ ಸಂಜೀವನಿಯು.

**ವಂದೇ ಮಾತರಂ**

---

# ವಿನೋಬಾ ಭಾವೆ



ಸೇವಾದಲದ ನನ್ನ ಪ್ರಿಯ ಸೈನಿಕರೇ,

ನಾನು ನಿಮಗೆ ಪ್ರತಿದಿವಸ ಆಧುನಿಕ ಭಾರತದಲ್ಲಿಯ ಓರ್ವ ದೊಡ್ಡ ವ್ಯಕ್ತಿಯ ಕಥೆ ಹೇಳುವೆ. ಇದು ನಿಮಗೆ ರುಚಿಸಿದಲ್ಲಿ ಪ್ರಾಚೀನ ಕಾಲದ ಹಾಗು ಮಧ್ಯಯುಗದ ಮಹಾವಿಭೂತಿಗಳ ಕಥೆ ಹೇಳುವೆ. ಇರಲಿ, ಇಂದಿನ ವಿಷಯವನ್ನಾರಂಭಿಸುವಾ.

ಇಂದು ನಿಮಗೆ ಪೂಜ್ಯ ವಿನೋಬಾಜಿ ಭಾವೆಯವರ ಪುಣ್ಯ ಕಥೆಯನ್ನು ಹೇಳುವೆ. ನಾನು ವಿನೋಬಾಜಿಯವರನ್ನು ಬಲ್ಲೆ. ನನ್ನ ಜೀವನದಲ್ಲಿ ಅವರು ಆಳವಾಗಿ ನೆಲೆಸಿದ್ದಾರೆ . ಅವರ ಬಗ್ಗೆ ನನ್ನಲ್ಲಿ ವಿಲಕ್ಷಣವಾದ ಭಕ್ತಿ ಭಾವವಿದೆ. ಅದನ್ನು ನಾನು ಶಬ್ದಗಳಿಂದ ಬಣ್ಣಿಸಲಾರೆ.

ಮಹಾತ್ಮಾಜಿಯವರು ೧೯೪೦ ರ ವೈಯ್ಯಕ್ತಿಕ ಸತ್ಯಾಗ್ರಹದ ಸಮಯಕ್ಕೆ ಮೊದಲನೆಯ ಸತ್ಯಾಗ್ರಹಿಯೆಂದು **ವಿನೋಬಾಜಿಯವರನ್ನು** ಆರಿಸಿದರು. ಆಗ ಮಾತ್ರ ಅವರು ಪ್ರಕಾಶಕ್ಕೆ ಬಂದರು. ಈ ಮೊದಲು ವಿನೋಬಾಜಿಯವರ ಪರಿಚಯವಿದ್ದವರು ವಿರಳ. ಆಗ ವಿನೋಬಾಜಿಯವರಾರು ? ಎಂದು ಜನರಲ್ಲಿ ಕುತೂಹಲವು ಹೆಚ್ಚಿತು. ಅವರ ವ್ಯಕ್ತಿತ್ವದ ಬಗ್ಗೆ ಕೆಲ ವಿಷಯುಗಳು ಪ್ರಕಟವಾದವು. ಆದರೆ ಅವರ ಅಲೌಕಿಕವಾದ ವ್ಯಕ್ತಿತ್ವದ ಪರಿಚಯ ಹೆಚ್ಚಾಗಿ ಯಾರಿಗೂ ಇಲ್ಲ. ಮಹಾರಾಷ್ಟ್ರಕ್ಕೆ ತುಂಬಾ ಅಭಿಮಾನವೆನಿಸುವ ವ್ಯಕ್ತಿಗಳ ಪಂಗ್ತಿಯಲ್ಲಿ ಇವರ ಹೆಸರು ಬರುತ್ತದೆ.

**ಪೂರ್ವಜರು : —**

ವಿನೋಬಾಜಿಯವರು ಯಾರು ? ಎಲ್ಲಿಯವರು ? ಇವರ ಮನೆಯ ಹೆಸರು 'ಭಾವೆ'. ಈ ಭಾವೆ ಮನೆತನದವರು ಮೂಲ ರತ್ನಾಗಿರಿ ಜಿಲ್ಲೆಯವರು. ಇವರ ಪೂರ್ವಜರು ಸಾತಾರಾ ಜಿಲ್ಲೆಯ 'ಲಿಂಬ' ಎಂಬ ಗ್ರಾಮಕ್ಕೆ ಬಂದರು. ಅಲ್ಲಿಂದ '**ವಾಯಿ**' ಗ್ರಾಮಕ್ಕೆ ತೆರಳಿದರು. 'ಲಿಂಬ' ಗ್ರಾಮ ದೇವತೆಯನ್ನು ವಾಯಿಯಲ್ಲಿ ಸ್ಥಾಪಿಸಿ ಅಲ್ಲಿ ಪೂಜೆ ಮಾಡಹತ್ತಿದರು.

ಅಲ್ಲಿ ಕೋಟೀಶ್ವರ ಎಂಬ ದೇವಾಲಯವನ್ನೂ ಕಟ್ಟಿದರು. ವಾಯೀ ಗ್ರಾಮವೇ ಅವರ ವಾಸಸ್ಥಾನವಾಯಿತು. ಇವರ ಇನ್ನೊಂದು ವಾಸಸ್ಥಳವು ಕುಲಾಬಾ ಜಿಲ್ಲೆಯಲ್ಲಿದೆ. ಪೇಣ ಗ್ರಾಮದಿಂದ ತುಸು ಅಂತರದ ಮೇಲೆ **ಗಾಗೋದೆ** ಎಂಬ ಗ್ರಾಮವಿದೆ. ಇವರ ಮನೆಮಾರು ಭೂಮಿಗಳು ಇಲ್ಲಿಯೇ ಇರುತ್ತವೆ.

## ಸನ್ಯಾಸವೃತ್ತಿಯ ಅಜ್ಜ

ಶಂಭೂರಾವ ಭಾವೆ ಇವರು ವಿನೋಬಾಜಿಯ ಅಜ್ಜ. ಅಜ್ಜಿಯ ಹೆಸರು ಗಂಗಾಬಾಯಿ. ವಿನೋಬಾಜಿಯವರಲ್ಲಿ ಇವರ ಬಹಳ ಗುಣಗಳು ಬಂದಿವೆ. ಶಂಭೂರಾಯರು ಸಂಸಾರದಲ್ಲಿ ಅಷ್ಟೊಂದು ಲಕ್ಷ್ಯವಿಲ್ಲದ ಸನ್ಯಾಸವೃತ್ತಿಯವರು. ಕೋಟೀಶ್ವರನ ಪೂಜೆಯ ಕಡೆಗೇ ಅವರ ಲಕ್ಷ್ಯ ಹೆಚ್ಚು. ಉತ್ಸವ, ಬ್ರಾಹ್ಮಣ ಭೋಜನ ಇವುಗಳಲ್ಲಿ ಅವರಿಗೆ ಬಹಳ ಉತ್ಸಾಹ. ಕೋಟೀಶ್ವರನ ಉತ್ಸವದಲ್ಲಿ ಒಂದು ದಿನ ಎಲ್ಲ ಜಾತಿಯವರಿಗೂ ಪ್ರವೇಶವಿತ್ತು. ಆ ದಿನಸ ಶಂಭೂರಾಯರು ಹರಿಜನರನ್ನು ಕರೆಯಿಸಿ ಪ್ರೇಮದಿಂದ ಮಂದಿರದಲ್ಲಿಯೇ ಊಟಕ್ಕೆ ಹಾಕುತ್ತಿದ್ದರು. ಆ ಸಮಯಕ್ಕೆ ಮಂದಿರದಲ್ಲಿ ಹರಿಜನರಿಗೆ ಊಟಕ್ಕೆ ಹಾಕುವದು ಸಾಹಸದ ಮಾತೇ ಆಗಿತ್ತು. ಒಮ್ಮೆ ಅತ್ಯುತ್ತಮ ಹಾಡುವ ಓರ್ವ ಮುಸಲ್ಮಾನ ಗವಾಯಿಯು ವಾಯಿಗೆ ಬಂದನು. ಈತನ ಗಾಯನವನ್ನು ದೇವಾಲಯದಲ್ಲಿಡಬೇಕೆಂದು ಶಂಭೂರಾಯರು ಗೊತ್ತುಮಾಡಿದರು. ಆತನೂ ಒಪ್ಪಿಕೊಂಡನು. ಮಹಾದೇವರ ಮುಂದೆ ಮುಸಲ್ಮಾನನ ಸಂಗೀತವು ಪ್ರತಿದಿನ ನಡೆಯಿತು. " ಇದೇನು ಶಂಭೂರಾಯರೇ ದೇವಾಲಯದಲ್ಲಿ ದೇವರ ಎದುರು ಮುಸಲ್ಮಾನ ರನ್ನೇಕೆ ಕೂಡಿಸುತ್ತೀರಿ? " ಎಂದು ಮುಂತಾಗಿ ಧರ್ಮ ಮಾರ್ತಾಂಡರು ಕೇಳಿದರು. " ದೇವರಲ್ಲಿ ಭೇದ ಬುದ್ಧಿ ಇರುವದೇ ? ಈತ ಹಿಂದು, ಈತ ಮುಸಲ್ಮಾನ ಎಂಬ ಭಾವನೆ ದೇವರಲ್ಲಿಲ್ಲ. ಎಲ್ಲರೂ ಆತನ ಮಕ್ಕಳೇ " ಎಂದು ಶಂಭೂರಾಯರು ಹೇಳಿದರು.

ಶಂಭೂರಾಯರ ಉಪವಾಸವ್ರತ, ನಿಯಮ ನಿತ್ಯಗಳು ನಡೆದೇ ಇದ್ದವು. ವಿನೋಬಾಜಿಯವರು ತಮ್ಮ ಬಾಲ್ಯದ ಸವಿ ನೆನಪನ್ನು ಒಮ್ಮೆ

ೀಳಿದ್ದುಂಟು— “ನನ್ನ ಅಜ್ಜನು ಚಾಂದ್ರಾಯಣ ವ್ರತವನ್ನು ಮಾಡು ತ್ತಿದ್ದನು. ಚಾಂದ್ರಾಯಣ ವ್ರತವೆಂದರೆ ಪ್ರತಿಪದೆಯ ದಿನ ಒಂದು ತುತ್ತು ಉಣ್ಣುವದು ದ್ವಿತಿಯಾ ಎರಡು ಹೀಗೆಯೇ ಹುಣ್ಣಿವೆಯ ವರೆಗೆ ಮಾಡಿ ಂದು ಹದಿನೈದು ತುತ್ತು ಉಣ್ಣುವದು ನಂತರ ಒಂದೊಂದು ತುತ್ತು ಡಿಮೆ ಮಾಡುತ್ತಾ ಅಮವಾಸ್ಯೆ ಒಂದೇ ತುತ್ತು ತೆಗೆದುಕೊಳ್ಳುವದು. ಂದ್ರೋದಯವಾದ ಮೇಲೆಯೇ ಪೂಜೆ ಮಾಡಿ ಆ ತುತ್ತು ಊಟ ಮಾಡು ದು. ಪೂಜೆಯ ಸಮಯಕ್ಕೆ ಅಜ್ಜನು ನಮ್ಮನ್ನು ಎಬ್ಬಿಸುತ್ತಿದ್ದನು. ಚಳಿ ೀಳುತ್ತಿತ್ತು. ಕಣ್ಣು ವರಿಸುತ್ತಾ ನಾವು ಏಳುತ್ತಿದ್ದೆವು. ಆತನ ಆರತಿಯನ್ನು ೋಡುತ್ತಿದ್ದೆವು. ಚಂದ್ರನನ್ನೂ ನೋಡುತ್ತಿದ್ದೆವು. ನನ್ನ ಅಜ್ಜನ ಪುಣ್ಯ ುತ್ತು ಪಾವಿತ್ರ್ಯಗಳು ತುಸುಮಟ್ಟಿಗೆ ನನ್ನಲ್ಲಿ ಬಂದಿವೆ. ಇದು ನನ್ನ ಅಜ್ಜನ ೊಡ್ಡ ದೇಣಿಗೆ. ನನ್ನ ಮೇಲೆ ಇದೊಂದು ಅಜ್ಜನ ಉಪಕಾರ.

ಶಂಭೂರಾಯರ ವಿರಕ್ತ ವೃತ್ತಿಯು ಅಳತೆಮೀರಿ ಬೆಳೆಯಿತು. ಧಾಬಳಿ ುನ್ನುಟ್ಟು ಕೋಟೀಶ್ವರನ ಮುಂದೆ ತಾಸುಗಟ್ಟಲೇ ಕೂಡ್ರುತ್ತಿದ್ದರು. ಾತ್ರಿಹಗಲೆನ್ನದೆ ಕೋಟೀಶ್ವರನ ಪಿಂಡದ ಹತ್ತರ ಮಾತನಾಡುತ್ತ ೂಡ್ರುತ್ತಿದ್ದರು. ಎಷ್ಟೋ ಸಲ ದೊಡ್ಡ ದನಿಯಲ್ಲಿ ಒದರಾಡುತ್ತಿದ್ದರು. ಗುತ್ತಿದ್ದರು. ಅನೇಕ ಸಲ ಅತ್ತದ್ದೂ ಉಂಟು. ಪ್ರೇಮದ ಭರದಲ್ಲಿ ಅವರು ೇವರನ್ನು “ಮಾದರಚೋದ” ಎಂಬ ಬೈಗಳಿಂದ ಸಂಬೋಧಿಸುತ್ತಿದ್ದರು. ೇವಾಲಯದ ಹೊರಬದಿಗೆ ನಿಂತವರಿಗೆ ಇದೆಲ್ಲ ಕೇಳಿಸುತ್ತಿತ್ತು. ಹೀಗೆಯೇ ವರ ಭಕ್ತಿ ಬೆಳೆಯುತ್ತ ನಡೆಯಿತು.

## ರ್ತೃತ್ವಶಾಲಿ ಅಜ್ಜಿ —

ಅಜ್ಜಿ ಗಂಗಾಬಾಯಿಯವರ ಸ್ವಭಾವವಾದರೂ ಸಾಮಾನ್ಯವಾಗಿರ ಲ್ಲ. ಇವರು ಕರ್ತೃತ್ವಶಾಲಿಗಳಿದ್ದು ಒಳ್ಳೇ ಸ್ವಾಭಿಮಾನಿಯಾಗಿದ್ದರು. ಮ್ಮ ಮನೆಯನ್ನು ಬಿಟ್ಟು ಅವರು ಬೇರೆಕಡೆಗೆ ಹೋಗುತ್ತಿರಲಿಲ್ಲ. ಕಳೆದ ನ್ನೆರಡು ವರುಷಗಳಲ್ಲಿ ನಾನು ಕೆಲಸವಿಲ್ಲದೆ ಯಾರಕಡೆಗೂ ಹೋಗಿಲ್ಲ. ಾಗೆ ಹೋಗಲಿಕ್ಕೆ ನನಗೇನು ಉದ್ಯೋಗವಿಲ್ಲವೇ ? ಎಂದು ಅವರು ಅಭಿಮಾನ ಂದ ಹೇಳುತ್ತಿದ್ದರು. ತಮ್ಮ ವಯಸ್ಸಿನ ೫೫ನೇ ವರುಷ ಇವರು ಓದು

ಬರಹವನ್ನು ಕಲಿತರು. "ನನಗೆ ಬರೆಯಲಿಕ್ಕೆ ಕಲಿಸು" ಎಂದು ಅವರು ತಮ್ಮ ಮಗನಾದ ಗೋವಿಂದನಿಗೆ ಒಮ್ಮೆ ಹೇಳಿದರಂತೆ. ಗೋವಿಂದನು ಅಡಿಗೆಮನೆಯ ಗೋಡೆಯ ಮೇಲೆ ದೊಡ್ಡ ಅಕ್ಷರಗಳನ್ನು ಬರೆದನು. ಆ ಮೂಲಾಕ್ಷರಗಳೆಲ್ಲ ಇನ್ನೂ ಗೋಡೆಯ ಮೇಲಿವೆ. ಅಡುಗೆ ಮಾಡುತ್ತಾ ಅಜ್ಜಿಯು ಅಕ್ಷರಗಳನ್ನು ಓದಿ ಪಾಠ ಮಾಡುತ್ತಿದ್ದರು. ಹೀಗೆ ಅವರು ಅಕ್ಷರಜ್ಞಾನಮಾಡಿಕೊಂಡು ಶಿವಲೀಲಾಮೃತ, ಪಾಂಡವ ಪ್ರತಾಪ, ಭಕ್ತಿ ವಿಜಯ ಮುಂತಾದ ಗ್ರಂಥಗಳನ್ನು ಓದುತ್ತಿದ್ದರು.

### ತಾಯಿ ತಂದೆಗಳು

ಶಂಭೂರಾಯರಿಗೆ—ನರಹರಿ, ಗೋಪಾಳ, ಗೋವಿಂದ ಎಂಬ ಮೂವರು ಮಕ್ಕಳು. ವಿನೋಬಾಜಿಯವರ ತಂದೆ **ನರಹರಿ**ಪಂತರು ಇವರು ಬಲು ಬುದ್ಧಿವಂತರು. ಮತ್ತು ಮಹತ್ವಾಕಾಂಕ್ಷಿಗಳು ಶಂಭೂರಾಯರು ಇಂಗ್ಲೀಷ ಶಿಕ್ಷಣಕ್ಕೆ ವಿರುದ್ಧವಿದ್ದುದರಿಂದ ಇವರು ಬಡೋದೆಯಲ್ಲಿ ಬೇಗನೇ ನೌಕರಿ ಹಿಡಿಯಬೇಕಾಯಿತು. ಸಾಂಗಲಿಯಲ್ಲಿಯ ಗೋಡಬೋಲೆ ಮನೆತನದವರು ಶಂಭೂರಾಯರ ಪರಮ ಮಿತ್ರರು. ಅವರಿಗೆ ಒಬ್ಬಳೇ ಮಗಳಿದ್ದಳು. ಅವರು ನರಹರಿಪಂತರಿಗೆ ತಮ್ಮ ಕನ್ಯೆಯನ್ನು ಕೊಟ್ಟು ಲಗ್ನಮಾಡಿದರು. ಅತ್ತೆಯ ಮನೆಯಲ್ಲಿ 'ರಖುಮಾಯಿ' ಎಂದು ಹೆಸರಿಟ್ಟರು.

ರಖುಮಾಯಿ ನರಹರಿಪಂತರು ಬಡೋದೆಯಲ್ಲಿ ವಾಸಿಸುತ್ತಿದ್ದರು. ಮದಿವೆ ಮುಂಜಿವೆ ಮುಂತಾದ ಕಾರ್ಯದ ಸಲುವಾಗಿ ಮತ್ತು ಬಾಣಂತಿತನದ ಸಲುವಾಗಿ ರಖುಮಾಯಿಯು ಗಾಗೋದೆ ಗ್ರಾಮಕ್ಕೆ ಹೋಗುತ್ತಿದರು ಇವರಿಗೆ ಐವರು ಮಕ್ಕಳು—**ವಿನೋಬಾ, ಬಾಳಕೋಬಾ, ಶಿವಾಜಿ** ಮತ್ತು **ದತ್ತ.** ಮತ್ತು **ಶಾಂತಾ** ಎಂಬ ಹೆಣ್ಣುಮಗಳು. ಇವರೆಲ್ಲರೂ ಗಾಗೋದೆ ಗ್ರಾಮದಲ್ಲಿಯೇ ಹುಟ್ಟಿದರು.

### ವಿನೋಬಾಜಿಯವರ ಬಾಲ್ಯ

ವಿನೋಬಾಜಿಯವರ ಬಾಲ್ಯವು ಹೆಚ್ಚಾಗಿ ಗಾಗೋದೆ ಗ್ರಾಮದಲ್ಲಿಯೇ ಹೋಯಿತು. ಇದು ವಿನೋಬಾಜಿಯವರ ಮೆಚ್ಚಿಗೆಯ ಊರು. ಈ

ಗ್ರಾಮದಲ್ಲಿ ಭಾವೆಯವರದೊಂದೇ ಬ್ರಾಹ್ಮಣರ ಮನೆತನ. ಇನ್ನುಳಿದ ೫೦–೬೦ ಮನೆತನಗಳು ಮರಾಠಾಜನರವು. ಈ ಊರಲ್ಲಿ ಒಂದು ಕೆರೆಯುಂಟು. ಊರ ಪಕ್ಕದಲ್ಲಿ ಒಂದು ಕೊಳ್ಳವಿದೆ. ಊರ ಸಮೀಪದಲ್ಲಿ ಒಂದು ಗುಡ್ಡವಿದ್ದು ಅದರ ಮೇಲ್ಬದಿಗೆ ಸಪಾಟಾದ ಮೈದಾನವಿದೆ. ಸುತ್ತಲೂ ಅರಣ್ಯವಿದೆ. ಹೀಗೆ ನಿಸರ್ಗಪೂರ್ಣವಾದ ಹಳ್ಳಿಯಿದು. ೧೯೩೫ರಲ್ಲಿ ವಿನೋಬಾಜಿಯವರಿಗೆ ಕಾಯಿಲೆಯಾದಾಗ್ಗೆ ಇಲ್ಲಿಯೇ ಎರಡು ತಿಂಗಳು ವಾಸಿಸಿದ್ದರು.

ವಿನೋಬಾಜಿಯವರ ಒಬ್ಬ ಕಕ್ಕಂದಿರು ಗಾಗೋದೆ ಗ್ರಾಮದಲ್ಲಿ ವಾಸಿಸುವರು. ಹೊಲಮನೆಯ ವ್ಯವಸ್ಥೆಯನ್ನು ನೋಡುವರು. ಬಹುದಿವಸ ಇವರಿಗೆ ಮಕ್ಕಳಿರಲಿಲ್ಲ. ಆದುದರಿಂದ ವಿನೋಬಾಜಿಯವರನ್ನೇ ತಮ್ಮ ಹತ್ತಿರ ಇಟ್ಟುಕೊಂಡಿದ್ದರು. ಇಲ್ಲಿಯೇ ವಿನೋಬಾಜಿಯರ ಅತ್ತೆಯ ಮಗನೂ ಇರುತ್ತಿದ್ದನು. ಆತನ ಹೆಸರು ಮಹಾದೇವ. ವಿನೋಬಾಜಿ ಮತ್ತು ಮಹಾದೇವ ಇವರು ಪ್ರೇಮದ ಗೆಳೆಯರಾದರು. ಚಿಕ್ಕಂದಿನಲ್ಲಿ ವಿನೋಬಾಜಿಯವರು ಪಕ್ಕದ ದನದ ಹಕ್ಕೆಯಲ್ಲಿ ಕುಳಿತು ವಿಚಾರಮಗ್ನ ರಾಗುತ್ತಿದ್ದರು.

## ಮನೆತನದಲ್ಲಿ ರಾಷ್ಟ್ರೀಯ ವಾತಾವರಣ

ಇವರ ಮನೆತನದ ವಾತಾವರಣ ಸಂಪೂರ್ಣವಾಗಿ ರಾಷ್ಟ್ರೀಯವಾಗಿತ್ತು. ೧೯೦೫ರಲ್ಲಿ ವಂಗಭಂಗ ಚಳವಳಿ ಪ್ರಾರಂಭವಾಯಿತು. ಅದರ ತೆರೆಗಳು ಗಾಗೋದೆಗೂ ಬಂದು ಅಪ್ಪಳಿಸಿದುವು. ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯ ಈ ಚತುರ್ಮುಖ ಕಾಂಗ್ರೆಸ್ಸಿನ ಸಂದೇಶವನ್ನು ಲೋಕಮಾನ್ಯರು ಮಹಾರಾಷ್ಟ್ರದಲ್ಲೆಲ್ಲ ಪ್ರಚಾರಮಾಡಿದರು. ಈ ಚಿಕ್ಕ ಗಾಗೋದಿ ಗ್ರಾಮದಲ್ಲಿ ಕೇಸರಿ, ಭಾಲಾ, ಕಾಳ, ರಾಷ್ಟ್ರಮತ, ಹಿಂದೂಮತ, ವಿಹಾರಿ ಇತ್ಯಾದಿ ರಾಷ್ಟ್ರೀಯ ವೃತ್ತಪತ್ರಗಳು ವಿನೋಬಾಜಿಯವರ ಮನೆಗೆ ಬರುತ್ತಲಿದ್ದವು. ಶಿವಾಜಿ ಉತ್ಸವ, ಗಣೇಶೋತ್ಸವಗಳು ನಡೆಯುತ್ತಿದ್ದವು. ಇದರ ಹೊರ್ತು ಮನೆಯಲ್ಲಿ ಎಷ್ಟೋ ಪುಸ್ತಕಗಳಿದ್ದವು. ಸಂತ ವಾಙ್ಮಯವೂ ಇದ್ದಿತು. ರಾಷ್ಟ್ರೀಯ ವಾಙ್ಮಯವಿದ್ದಿತು. ಮನೆಯಲ್ಲಿ ನಾನಾ ಬಗೆಯ ಚರ್ಚೆಗಳಾಗುತ್ತಲಿದ್ದವು. ಚಿಕ್ಕ ವಿನೋಬಾನ ಕಿವಿಯಮೇಲೆ

ಈ ಎಲ್ಲ ವಿಷಯಗಳು ಬೀಳುತ್ತಲಿದ್ದವು, ಈ ಚಿಕ್ಕ ಹುಡುಗನು, ಓದು ವದರಲ್ಲಿ ಮತ್ತು ಕೇಳಿದ ವಿಷಯಗಳ ಚಿಂತನದಲ್ಲಿ ಮಗ್ನನಾಗುತ್ತಲಿದ್ದನು. ಹತ್ತರದ ಅರಣ್ಯದಲ್ಲಿ ಆಗಾಗ್ಗೆ ಕ್ರಾಂತಿಕಾರರು ಸೇರುತ್ತಲಿದ್ದರು. ಬಾಲ ಮನಸ್ಸಿನ ವಿನೋಬಾಜಿಯ ಮೇಲೆ ಇದರ ಪರಿಣಾಮವಾಗದೇ ಹೇಗೆ ಬಿಟ್ಟೀತು ?

## ಬ್ರಹ್ಮಚಾರಿಯಾಗಿರುವ ಸಂಕಲ್ಪ

೧೮೯೫ರ ಕೊನೆಗೆ ಅವರ ಜನ್ಮವಾಗಿದೆ. ೧೨ ವರ್ಷದವರಿರು ವಾಗಲೇ ಅವರು ಬ್ರಹ್ಮಚರ್ಯದ ಸಂಕಲ್ಪವನ್ನು ಮಾಡಿದರು. ಅವರ ಕಣ್ಣೆದುರು ಶಂಕರಾಚಾರ್ಯ ರಾಮದಾಸ ಇತ್ಯಾದಿ ಪುರುಷರ ಆದರ್ಶವು ಹೊಳೆಯಿತು? ಅವರೆದುರು ದೇಶವಿದ್ದಿತೋ ಅಥವಾ ದೇವರೋ? ಏನೇ ಇರಲಿ. ಈ ಚಿಕ್ಕ ಬಾಲಕನು ಬ್ರಹ್ಮಚರ್ಯದ ಪ್ರತಿಜ್ಞೆಯನ್ನು ಮಾಡಿದನು. ಚಿಕ್ಕವರಿರುವಾಗ ನಾವೆಲ್ಲ ಹೀಗೆಯೇ ಪ್ರತಿಜ್ಞೆ ಮಾಡುತ್ತೇವೆ. ನಾವು ಎಂದಿಗೂ ಲಗ್ನವಾಗುವದಿಲ್ಲವೆಂದು ಹೇಳುತ್ತೇವೆ. ಆದರೆ ಕೋಟಿ ಜನರಲ್ಲಿ ಕೇವಲ ಒಬ್ಬನ ಸಂಕಲ್ಪವು ಮಾತ್ರ ಸಾಧಿಸುತ್ತದೆ. ವಿನೋಬಾಜಿ ಮತ್ತು ಮಹಾದೇವ ಇವರಿಬ್ಬರೂ ಆ ದಿನದ ಹಕ್ಕಿಯಲ್ಲಿ ಬ್ರಹ್ಮಚರ್ಯದ ಪ್ರತಿಜ್ಞೆ ತೆಗೆದುಕೊಂಡರು.

## ಕಸಬರಿಗೆಯ ಹೊಡೆತ:

ಇವರ ತಂದೆ ನರಹರಿಪಂತರ ಸ್ವಭಾವ ಸಿಟ್ಟಿನದು. ಅವರು ವಿನೋಬಾಗೆ ಅದೆಷ್ಟೋ ಸಲ ಕಪಾಳಮೋಕ್ಷ ಮಾಡುತ್ತಲಿದ್ದರು. ಆದರೆ ವಿನೋಬಾ ರವರು ಅವರಷ್ಟೇ ನಿಶ್ಚಯಿಗಳಿದ್ದರು. ಅವರು ಪೊಡೆತವನ್ನು ತಿನ್ನುತ್ತ ಲಿದ್ದರು. ಆದರೆ ತಮ್ಮ ಮಾರ್ಗದಿಂದ ಪರಾವೃತ್ತರಾಗುತ್ತಿರಲಿಲ್ಲ. ಒಮ್ಮೆ ಇವರ ತಾಯಿಯು ಚಿಕ್ಕಮಗುವನ್ನು ಎತ್ತಿಕೊಳ್ಳಲು ಹೇಳಿದರು. ವಿನೋಬಾಜಿಯವರು ತಂಗಿಯನ್ನು ಎತ್ತಿಕೊಳ್ಳಲಿಲ್ಲ. ತಾಯಿಯ ಆರೋಗ್ಯ ಸರಿ ಇದ್ದಿಲ್ಲ. ತಂದೆಗೆ ಸಿಟ್ಟು ಬಂತು. ಕಸಬರಿಗೆಯಿಂದ ಅವರು ವಿನೋಬಾಗೆ ಹೊಡೆದರು. ಆದರೆ ಬಾಲ ವಿನು ಅಳಲಿಲ್ಲ. ಒದರಾಡಲಿಲ್ಲ. ಹೊಡೆದು

ಹೊಡೆದು ತಂದೆಗೆ ದಣಿವಾಯಿತು. ವಿನೋಬಾಜಿಯು ತಂಗಿಯನ್ನು ಎತ್ತಿಕೊಳ್ಳದೇ ಹೊರಗೆ ಹೋದರು.

## ವಿದ್ಯಾರ್ಜನೆ

ಪ್ರಾಥಮಿಕ ಶಿಕ್ಷಣವನ್ನು ಮುಗಿಸಿ ವಿನೋಬಾಜಿಯರು ಇಂಗ್ಲೀಷ ಶಿಕ್ಷಣ ಪಡೆಯಲು ಬಡೋದೆಗೆ ಬಂದರು. ಇಂಗ್ಲೀಷ ಶಾಲೆಗೆ ಹೋಗಹತ್ತಿದರು. ಅವರಿಗೆ ಜ್ಞಾನದ ಹಸಿವು ಹೆಚ್ಚಾಗಿತ್ತು. ಬಡೋದೆಯಲ್ಲಿ ಅಪಾರ ಗ್ರಂಥಗಳುಳ್ಳ ಗ್ರಂಥಾಲಯವಿದೆ. ಗ್ರಂಥಗಳ ಮೇಲೆ ಗ್ರಂಥಗಳನ್ನು ಓದಿದರು. ಹಳೆಯ ಸಂತ ಜನರಾದ ಜ್ಞಾನದೇವ, ತುಕಾರಾಮ, ಏಕನಾಥ, ರಾಮದಾಸ, ವಾಮನ, ಮೋರೊಪಂತ -- ಈ ಎಲ್ಲವನ್ನು ಓದಿ ಮುಗಿಸಿದರು. ರಾಜವಾಡೇಯವರ ತೇಜಸ್ವೀ ಬರಹಕ್ಕೆ ವಿನೋಬಾಜಿಯವರು ಮುಗ್ಧರಾಗಿದ್ದರು, ಇತಿಹಾಸ, ತತ್ವಜ್ಞಾನ, ಗಣಿತ ಈ ವಿಷಯಗಳಲ್ಲಿ ಇವರಿಗೆ ಬಹಳ ಆಸ್ಥೆ. ಪಾಶ್ಚಿಮಾತ್ಯ ಗ್ರಂಥಕಾರರ ಅಭ್ಯಾಸವನ್ನೂ ಮಾಡಹತ್ತಿದರು. ಗಿಬನ್, ಕಾರ್ಲಾಯಿಲ್ ಇವೆಲ್ಲ ತಿರುವಿಹಾಕಿದರು. ಈ ಬಾಲಕನಿಗೆ ಜ್ಞಾನದ ಹಸಿವು ಬಹಳ ಆಗಿತ್ತು.

## ಊಟಕ್ಕೆ ಮಾತ್ರ ಮನೆ—

ತಂದೆಗೂ ವಿನೋಬಾಜಿಯವರಿಗೂ ಅಷ್ಟೊಂದು ಆಗುತ್ತಿರಲಿಲ್ಲ. ಕಾರಣ. ಅವರು ಕೇವಲ ಊಟ ಮತ್ತು ಮಲಗುವದಕ್ಕೆ ಮಾತ್ರ ಮನೆಗೆ ಹೋಗುತ್ತಲಿದ್ದರು. ಉಳಿದ ವೇಳೆಯನ್ನೆಲ್ಲ ಹೊರಗೇ ಕಳೆಯುವರು. ಅವರು ಒಂದು ಕೋಣೆ ಹಿಡಿದಿದ್ದರು. ಅಲ್ಲಿಯೇ ಇರುವರು, ಓದುವರು. ಮಗನು ಅಡ್ಡಹಾದಿ ಹಿಡಿದಿರುವನೆಂದು ಮನೆಯವರಿಗೆ ಸಂಶಯ ಬರಬಾರದೆಂದು, ಇವರು ಮನೆಯಲ್ಲಿಯೇ ಮಲಗುತ್ತಿದ್ದರು. ವಿನೋಬಾಜಿಯವರ ಗೆಳೆಯರ ಗುಂಪು ಇತ್ತು. ಮಿತ್ರರು ಬಹಳವಾಗಿ ಇವರನ್ನು ಪ್ರೀತಿಸುವರು. ಈಗ ವರ್ಧಾದಲ್ಲಿ ಬೇರೆ ಬೇರೆ ವಿಭಾಗಗಳಲ್ಲಿ ಕಾರ್ಯ ಮಾಡುತ್ತಿರುವವರೆಲ್ಲರೂ ಅವರ ಓರಿಗೆಯ ಮಿತ್ರರು. ಶ್ರೀ ವಾಳುಂಜಿಕರ, ಶ್ರೀ ಮೋಘೇ, ಶ್ರೀ ಗೋಪಾಳರಾವ ಕಾಳೆ, ಶ್ರೀ ಥೊತ್ರೆ ಇವರೆಲ್ಲ ವಿನೋಬಾಜಿಯವರ ಬಾಲ್ಯ ಸ್ನೇಹಿತರು.

ಈ ಗೆಳೆಯರು ವ್ಯರ್ಥವಾಗಿ ಹರಟೆಕೊಚ್ಚಲು ಒಂದೆಡೆ ಸೇರುತ್ತಿರಲಿಲ್ಲ. ಬೇರೆ ಬೇರೆ ವಿಷಯಗಳ ಬಗ್ಗೆ ಅವರು ಪುಸ್ತಕಗಳನ್ನು ಓದುತ್ತಿದ್ದರು. ಅವರು ಓದಿದ ಪುಸ್ತಕಗಳಲ್ಲಿಯ ವಿಚಾರಗಳನ್ನು ಪರಸ್ಪರರಿಗೆ ಹೇಳುತ್ತಲಿದ್ದರು. ಚರ್ಚೆ ಮಾಡುತ್ತಲಿದ್ದರು. ಚರ್ಚೆ ಮಾಡುವಾಗ್ಗೆ ವಿನೋಬಾಜಿಯವರೇ ಪ್ರಮುಖರಿರುತ್ತಿದ್ದರು. ಅವರು ಬಹಳ ಬುದ್ಧಿವಂತರಿದ್ದು ಎಲ್ಲ ವಿಷಯಗಳ ಬಗ್ಗೆ ಅವರ ಚರ್ಚೆ ನಡೆಯುತ್ತಲಿತ್ತು.

**ತಂದೆಯ ಇಚ್ಛೆ—**

ತಂದೆಗೆ ಈ ಬುದ್ಧಿವಂತ ಮಗನ ವಿಷಯವಾಗಿ ಬಹಳ ಆಶೆ ಆಕಾಂಕ್ಷೆಗಳಿದ್ದವು. ಇವರನ್ನು ಯುರೋಪಕ್ಕೆ ಕಳಿಸಬೇಕು, ಸಂಶೋಧಕರನ್ನು ಮಾಡಬೇಕು ಎಂಬ ವಿಚಾರಗಳು ಅವರ ಮನಸ್ಸಿನಲ್ಲಿ ಬರುತ್ತಲಿದ್ದವು. ಯುರೋಪಖಂಡದಲ್ಲಿ ನಡೆಯುವ ಭಾಷೆ ಫ್ರೆಂಚ್ ಆದಕಾರಣ ತಂದೆಯವರು ಫ್ರೆಂಚ ಕಲಿಯಲು ಒತ್ತಾಯ ಮಾಡಿದರು. ಆದರೆ ವಿನೋಬಾಜಿಗೆ ಸಂಸ್ಕೃತದ ಹಸಿವು ಬಹಳವಾಗಿತ್ತು. ಆದರೆ ಮಾಡುವದೇನು ? ಫ್ರೆಂಚ ತೆಗೆದುಕೊಳ್ಳಲೇ ಬೇಕಾಯಿತು. ಆದರೆ ಸಂಸ್ಕೃತ ಭಾಷೆಯ ಹಸಿವನ್ನು ಮನೆಯಲ್ಲಿಯೇ ಹಿಂಗಿಸಿಕೊಳ್ಳುತ್ತಲಿದ್ದರು.

**ಚಹಾ ಬಿಟ್ಟೆನೆಂದು ಹೇಳು ಅಂದರೆ ಬಾಗಿಲು ತೆರೆಯುವೆ –**

ಓರ್ವ ಗೆಳೆಯನಿಗೆ ಚಹಾದ ಚಟವು ಬಹಳವಾಗಿತ್ತು. ಒಂದು ದಿನ ಆತನು ಪಾಯಖಾನೆಗೆ ಹೋದಾಗ ವಿನೋಬಾಜಿಯವರು ಅದರ ಹೊರ ಚಿಲಕವನ್ನು ಹಾಕಿದರು. “ಚಹವೆಂದರೆ ನರಕವಿರುತ್ತದೆ. ಅದನ್ನು ಬಿಡುತ್ತಿದ್ದರೆ ಚಿಲಕವನ್ನು ತೆಗೆಯುವೆನು. ಇಲ್ಲವಾದರೆ ಅಲ್ಲಿಯೇ ನರಕದಲ್ಲಿ ಇರು.” ಎಂದರು. ಆಗ ಆ ಗೆಳೆಯನು ಒಳ್ಳೇ ವಿನಯದಿಂದ ಹೇಳಿದನು — “ಉದ್ಧಾರ ಮಾಡು ಮಹಾರಾಯಾ ಚಹವನ್ನು ಬಿಟ್ಟೆನು. ಆದರೆ ಈ ನರಕದಿಂದ ರಕ್ಷಿಸು” ಎಂದನು. ಚಿಲಕವು ತೆರೆಯಲ್ಪಟ್ಟಿತು.

**ಸಾಹೇಬನನ್ನೇ ಯಾಕೆ ಕತ್ತಿ ಒಗೆಯಲಿಲ್ಲ ?—**

ವಿನೋಬಾಜಿಯ ಓರ್ವ ಮಿತ್ರನು ದಕ್ಷಿಣೀ ಬ್ರಾಹ್ಮಣನಿದ್ದನು. ಬಡೋದೆಯಲ್ಲಿ ಹೊಲಗಳಿದವು. ಈ ಮಿತ್ರನು ನೋಡಲಿಕ್ಕೆ ಸದೃಢನೂ

ಸುಂದರನೂ ಇದ್ದನು. ಕುದುರೆಯ ಮೇಲೆ ಸ್ವಾರಿ ಮಾಡುತ್ತಲಿದ್ದನು. ಒಮ್ಮೆ ಈ ತೇಜಸ್ವಿಯು ತನ್ನ ಹೊಲಗಳ ಕಡೆಗೆ ಹೋದನು ಅಲ್ಲಿ ಒಬ್ಬ ಸಾಹೇಬನು ತಂಬೂ ಹೊಡೆದಿದ್ದ. ಈ ತರುಣನಿಗೆ ಬಹಳ ಸಿಟ್ಟು ಬಂದಿತು ಅಲ್ಲಿದ್ದ ನೌಕರನಿಗೆ ಈ ತಂಬುವನ್ನು ಕೂಡಲೇ ಕಿತ್ತು ಎಂದು ಹೇಳಿದನು. ಆದರೆ ಆ ನೌಕರನು "ಇದು ಕೆಂಪು ಸಾಹೇಬನ ತಂಬು ಇದೆ, ಮುನ್ನಡೆ ಸುಮ್ಮನೆ ಹೋಗು" ಎಂದು ಹೇಳಿದನು. "ಈ ಭೂಮಿಯು ನಮ್ಮದು ಸುಮ್ಮನೆ ತಂಬು ಕಿತ್ತಿಕೊಂಡು ಹೋಗು. ನಾಳಿನವರೆಗೆ ಈ ತಂಬು ಇಲ್ಲಿ ಇದ್ದರೆ ನಾನು ಅದನ್ನು ಕಿತ್ತಿ ಒಗೆಯುವೆನು." ಎಂದು ಹೇಳಿದನು. ಮರುದಿವಸ ಬಂದು ನೋಡುತ್ತಾನೆ ತಂಬು ಯಥಾಪ್ರಕಾರವಾಗಿ ಅಲ್ಲಿಯೇ ಇತ್ತು. ಆತನು ಆ ತಂಬು ಕಿತ್ತಿ ಒಗೆದು ಕುದುರೆಯ ಹತ್ತಿ ಮನೆಗೆ ಮರುಳಿದರು.

"ಏ ವಿನ್ಯಾ, ಇಂದು ಆ ಸಾಹೇಬನ ತಂಬು ಕಿತ್ತೊಗೆದನು." ಎಂದನು.

"ನೀನು ಕೇವಲ ಆ ತಂಬೂ ಮಾತ್ರ ಕಿತ್ತೊಗೆದಂತೆ ಕಾಣುತ್ತದೆ. ಆ ಸಾಹೇಬನನ್ನೇ ಯಾಕೆ ಕಿತ್ತೊಗೆಯಲಿಲ್ಲ?" ಎಂದು ವಿನೋಬಾಜಿ ಪ್ರಶ್ನಿಸಿದರು.

ಈ ಸಾಹೇಬನು ಮುಂದೆ ಫಿರ್ಯಾದೆಯನ್ನು ಮಾಡಿದನು. ಬಡೋದೆ ನಗರದಲ್ಲೆಲ್ಲ ಗೊಂದಲವೆದ್ದಿತು. ಕೊನೆಗೆ ಸಾಹೇಬನದೇ ಛವಿಹಿಂಡಲಾಯಿತು.

**ಅಡವಿಯಲ್ಲಿ ಶಿವಾಜಿ ಜಯಂತಿ :—**

ಇಂಗ್ಲೀಷ ಶಾಲೆಯಲ್ಲಿರುವಾಗ್ಗೆ ಒಮ್ಮೆ ಶಿವಾಜಿ ಜಯಂತಿಯ ಪ್ರಸಂಗವು ಬಂದಿತು. "ನಾವು ಶಿವಾಜಿ ಜಯಂತಿಯನ್ನು ಆಚರಿಸುವಾ" ಎಂದು ವಿನೋಬಾಜಿಯವರು ಮಿತ್ರರಿಗೆ ಹೇಳಿದರು. ಮಾಡೋಣ! ಆದರೆ ಎಲ್ಲಿ ಮತ್ತು ಹೇಗೆ ಆಚರಿಸುವದು?" ಎಂದು ಪ್ರಶ್ನಿಸಿದರು. "ನಾವು ಹೊರಗೆ ಹೋಗೋಣ, ಗುಡ್ಡದ ಅಧ್ಯಕ್ಷತೆಯ ಕೆಳಗೆ ನಿರಭ್ರವಾದ ಆಕಾಶದ ಕೆಳಗೆ, ಸ್ವತಂತ್ರವಾದ ಅರಣ್ಯದಲ್ಲಿ ಈ ಜಯಂತಿಯನ್ನು ಆಚರಿಸುವಾ. ಸ್ವಾತಂತ್ರ್ಯ ಸಂಸ್ಥಾಪಕ ಶಿವಾಜೀ ಮಹಾರಾಜರ ಉತ್ಸವವನ್ನು ಒಂದು

ದಿವಾಣಖಾನೆಯಲ್ಲಿ ಆಚರಿಸುವದು ಬೇಡ" ಎಂದು ವಿನೋಬಾಜಿಯವರು ಹೇಳಿದರು.

ಶಾಲೆಗೆ ರಜೆ ಇರಲಿಲ್ಲ. ಇತಿಹಾಸದ ತಾಸನ್ನು ತಪ್ಪಿಸಿ ಹೋಗುವದನ್ನು ನಿಶ್ಚೈಸಿ ಹೊರಬಿದ್ದು ಹೋದರು. ಹೊರಗಿನ ಗುಡ್ಡದ ಪವಿತ್ರ ವಾತಾವರಣದಲ್ಲಿ ಈ ಸ್ವಾತಂತ್ರ್ಯ ಭಕ್ತರು ಶಿವಾಜಿ ಜಯಂತಿಯನ್ನು ಆಚರಿಸಿದರು. "ನಾಳೆ ದಂಡವಾದರೆ ಏನು ಮಾಡಬೇಕು?" ಎಂದು ಮಿತ್ರರು ಕೇಳಿದರು.

"ನಾಲ್ಕು ನಾಲ್ಕು ಆಣೆಗಳನ್ನು ಸಂಗಡವೇ ತೆಗೆದುಕೊಂಡು ಹೋಗೋಣ. ದಂಡವೆಂದಕೂಡಲೇ ಮಾಸ್ತರರ ಮೈಮೇಲೆ ಒಗೆದು ಬಿಡುವಾ" ಎಂದು ವಿನೋಬಾಜಿಯವರು ಹೇಳಿದರು.

ಮರುದಿನ ಇತಿಹಾಸ ಶಿಕ್ಷಕರು ಸಿಟ್ಟಿಗೆದ್ದು "ನಿನ್ನೆ ನೀವು ಎಲ್ಲಿಗೆ ಹೋಗಿದ್ದಿರಿ" ಎಂದು ಕೇಳಿದರು

"ಶಿವಜಯಂತಿ ಆಚರಿಸಲಿಕ್ಕೆ ಹೋಗಿದ್ದೆವು"

"ಶಾಲೆಯಲ್ಲಿ ಆಚರಿಸಲಿಕ್ಕೆ ನಿಮಗೆ ಬರುತ್ತಿರಲಿಲ್ಲವೇನು?"

"ಇಲ್ಲಿ ಈ ಗುಲಾಮಖಾನೆಯಲ್ಲಿ ಶಿವಜಯಂತಿಯನ್ನು ಆಚರಿಸಲಿಕ್ಕೆ ಬರುವದೇ?"

"ನೀವು ಉದ್ಧಟರಿರುವಿರಿ. ನಿಮಗೆ ದಂಡವಾಡಲಿಕ್ಕೇ ಬೇಕು."

"ಇಗೋ ತೆಗೆದುಕೊಳ್ಳಿರಿ ದಂಡವನ್ನು, ನಾವು ತೆಗೆದುಕೊಂಡೇ ಬಂದಿದ್ದೇವೆ." ಹೀಗೆನ್ನುತ್ತ ಎಲ್ಲರೂ ದಂಡದ ಹಣವನ್ನು ಕೊಟ್ಟರು. ಶಿಕ್ಷಕನು ಸ್ತಬ್ಧನಾದನು.

## ವೈರಾಗ್ಯಮಯ ಜೀವನ:—

ಬಡೋದೆಯಲ್ಲಿ ಈ ಪ್ರಕಾರ ದಿವಸಗಳು ಹೋಗುತ್ತಲಿದ್ದವು. ಜ್ಞಾನದೇವತೆಯ ಉಪಾಸನೆಯೂ ನಡೆದಿತ್ತು. ಅವರು ಕಠೋರ ವ್ರತಗಳನ್ನು ಆಚರಿಸುತ್ತಲಿದ್ದರು. ಒಂದೇ ಕಂಬಳಿಯಮೇಲೆ ಮಲಗಿಕೊಳ್ಳುತ್ತಲಿದ್ದರು. ತಲೆಗಿಂಬು ಎಂದಿಗೂ ಇಟ್ಟುಕೊಳ್ಳುತ್ತಿರಲಿಲ್ಲ. ಕಾಲಲ್ಲಿ ಏನೂ ಹಾಕುತ್ತಿರಲಿಲ್ಲ. ಬೇಕಾದಷ್ಟು ಬೇಸಿಗೆಯು ಪ್ರಖರವಿದ್ದರೂ ಹಾಗೆಯೇ ತಿರುಗುತ್ತಿ

ದ್ದರು. ಸೀ ಪದಾರ್ಥಗಳನ್ನು ಮುಟ್ಟುತ್ತಿರಲಿಲ್ಲ. ತಂಗಿಯ ವಿವಾಹದಲ್ಲಿ ಕೂಡ ಅವರು ಸೀ ಪದಾರ್ಥ ಮುಟ್ಟಲಿಲ್ಲ. ಈ ವ್ರತಸ್ಥನು ಪತ್ರಾವಳಿಯಲ್ಲಿ ಅನ್ನ ರೊಟ್ಟಿಯನ್ನು ತಿಂದು ಹೊರಬೀಳುತ್ತಲಿದ್ದನು.

**ತಾಯಿಯಮೇಲಿನ ಪ್ರೇಮ:—**

ವಿನೋಬಾಜಿಯವರು ದೊಡ್ಡವರಾದಂತೆ ತಾಯಿಯ ಕಡೆಗೆ ಹೆಚ್ಚಿಚ್ಚಾಗಿ ಎಳೆಯಲ್ಪಟ್ಟರು. ತಾಯಿಯ ಮನಸ್ಸಿನಲ್ಲಿಯ ತಳಮಳವು ಅವರಿಗೆ ಕಾಣುತ್ತಲಿತ್ತು. ತಂದೆಗೆ ಗಿರಣಿ ಹಿಟ್ಟು ಸೇರುತ್ತಿರಲಿಲ್ಲವೆಂದು ತಾಯಿಯು ಮನೆಯಲ್ಲಿಯೇ ಬೀಸುತ್ತಿದ್ದರು ಮುಂದೆ ತಾಯಿಯು ಬೀಸುವಾಗ ವಿನೋಬಾಜಿಯವರು ಬೀಸಲು ಹಿಡಿಯುತ್ತಿದ್ದರು. ಒಮ್ಮೊಮ್ಮೆ ಇವ ರೊಬ್ಬರೇ ಬೀಸಿ ಇಡುತ್ತಿದ್ದರು. ತಾಯಿಯ ಸಂಗಡ ಅವರು ದೇವರು ಧರ್ಮ ಇತ್ಯಾದಿ ವಿಷಯಗಳನ್ನು ಚರ್ಚಿಸುತ್ತಲಿದ್ದರು. ಒಮ್ಮೆ ಇವರ ತಾಯಿಯು ''ವಿನ್ಯಾ ನೀನು ಗೀತಾ ಗೀತಾ ಎಂದು ಯಾವಾಗಲೂ ಹೇಳುತ್ತೀ? ನನಗೆ ಆ ಸಂಸ್ಕೃತ ಶ್ಲೋಕಗಳ ಅರ್ಥವಾಗುವದಿಲ್ಲ. ಮರಾಠಿಯ ಗೀತೆಯು ಇಲ್ಲವೇನು? ಇದ್ದರೆ ನನಗೆ ಒಂದು ತಂದುಕೊಡು'' ಎಂದು ಅಂದರು. ವಿನೋಬಾಜಿಯವರು ವಾಮನ ಪಂಡಿತರ ಸಮಶ್ಲೋಕದ ಪುಸ್ತಕವನ್ನು ತಂದು ತಾಯಿಗೆ ಕೊಟ್ಟರು. ಆದರೆ ಅದೂ ಸಹ ತಾಯಿಗೆ ತಿಳಿಯಲಿಲ್ಲ. ಆಗ ಗೀತೆಯನ್ನು ಸರಳವಾದ ಭಾಷೆಯಲ್ಲಿ ಸಮಶ್ಲೋಕ ಭಾಷಾಂತರ ಮಾಡಬೇಕೆಂದು ಸಂಕಲ್ಪಿಸಿದರು.

**ಗೃಹತ್ಯಾಗ:—**

ಹಾಯಸ್ಕೂಲ ಶಿಕ್ಷಣವನ್ನು ಮುಗಿಸಿ ವಿನೋಬಾಜಿಯವರು ಈಗ ಕಾಲೇಜದಲ್ಲಿದ್ದರು. ಮಹಾಯುದ್ಧವು ಪ್ರಾರಂಭವಾಗಿತ್ತು. ''ಗದರ'' ಚಳ ವಳಿ ಆ ವೇಳೆಯಲ್ಲಿ ನಡೆಯಿತು. ಗದರ ಎಂದರೆ "ಬಂಡು'' ಮಹಾರಾಷ್ಟ್ರದಲ್ಲಿ ಸಹ, ಹಲ ಕೆಲವರು ಶಸ್ತ್ರಾಸ್ತ್ರಗಳನ್ನು ಕೂಡಿಸಿದ್ದರು. ಸಮರ್ಥ ವಿದ್ಯಾಲಯದ ಶ್ರೀ ಪಿಂಗಳೆ ಇವರು ಈ ಚಳವಳಿಯಲ್ಲಿ ಬಿದ್ದಿದ್ದರು. ಮುಂದೆ ಇವರಿಗೆ ಗಲ್ಲಾಯಿತು. ದೇಶದ ಸ್ವಾತಂತ್ರ್ಯವು ವಿನೋಬಾರನ್ನು ಕೂಗುತ್ತಲಿತ್ತು.

ಬಂಗಾಲದಲ್ಲಿ ತರುಣರ ಮೇಲೆ ಅತ್ಯಾಚಾರ ನಡೆದಿತ್ತು. ಜ್ಯೋತಿನ್ ಮುಕರ್ಜಿಯವರಂಥ ತೇಜಸ್ವಿ ತರುಣರು ಟಾಗರ್ಟನ ಪತ್ತರ ಕಂದಕದ ಹೋರಾಟದಂತೆ ಹೋರಾಡುತಲಿದ್ದರು. ವಿನೋಬಾಜಿಯವರಿಗೆ ಸುಮ್ಮನೆ ಕೂಡದಂತಾಯಿತು. ಪರೀಕ್ಷೆಯ ಸಲುವಾಗಿ ಅವರು ಮುಂಬೈಗೆ ಹೊರಟರು. ಆದರೆ ಅವರು ಸುರತದಲ್ಲಿ ಇಳಿದು ಬಂಗಾಲಕ್ಕೆ ಹೋಗುವವರಿದ್ದರು. ಸುರತದಿಂದ ಅವರ ತಂದೆಗೆ ಕೆಳಗಿನ ನಾಲ್ಕು ಪಂಗ್ತಿಯಲ್ಲಿ ಪತ್ರವನ್ನು ಬರೆದರು.—

"ಮುಂಬೈಗೆ ಪರೀಕ್ಷೆಯ ಸಲುವಾಗಿ ನಾನು ಹೋಗುವದಿಲ್ಲ. ಬೇರೆ ಕಡೆಗೆ ಹೊರಟಿದ್ದೇನೆ. ನಾನು ಎಲ್ಲಿಯೇ ಹೋಗಲಿ ಎಲ್ಲಿಯೇ ಇರಲಿ ನನ್ನಿಂದ ಅನೈತಿಕ ಕೃತ್ಯಗಳು ಆಗಲಾರವು. ಇದು ನಿಮಗೆ ಮನದಟ್ಟಾಗಿದೆ."

ಈ ಪತ್ರವು ಚಿಕ್ಕದಿದ್ದರೂ ಅರ್ಥಗರ್ಭಿತವಾಗಿತ್ತು. ಅದು ೧೯೧೬ ನೇ ಇಸವಿಯ ಸಮಯವು. ಆಗ್ಗೆ ವಿನೋಬಾಜಿಯವರಿಗೆ ೨೦-೨೧ ವಯಸ್ಸಾಗಿರಬೇಕು. ತಾರುಣ್ಯದಲ್ಲಿ ಆವರು ಅದೇ ಕಾಲಿಟ್ಟಿದ್ದರು. ಅವರು ಬಂಗಾಲಕ್ಕೆ ಹೋದರು. ಅಲ್ಲಿಯ ಕ್ರಾಂತಿಕಾರಕ ಚಳವಳಿಯ ಪರೀಕ್ಷಣ ನಿರೀಕ್ಷಣ ವನ್ನು ಮಾಡಿದರು. ಆದರೆ ಅವರು ಅದರಿಂದ ಆಕರ್ಷಿಸಲ್ಪಡಲಿಲ್ಲ. ಅವರು ಮರುಳಿ ಹೊರಟರು. ಆದರೆ ಪುನಃ ಮನೆಗೆ ಹೋಗಲಿಲ್ಲ. ಮನೆಯ ತ್ಯಾಗ ವನ್ನು ಅವರು ಸಂಪೂರ್ಣವಾಗಿ ಮಾಡಿಯೇ ಬಿಟ್ಟರು.

**ಕಾಶೀವಾಸ—**

ಅವರು ಕಾಶೀಕ್ಷೇತ್ರಕ್ಕೆ ಬಂದರು. ಜ್ಞಾನ ವೈರಾಗ್ಯದ ಬೆಳೆ ಇರುವ ಗಂಗಾ ತಟಾಕಕ್ಕೆ ಬಂದರು. ಸಂಸ್ಕೃತ ಅಭ್ಯಾಸದ ತಮ್ಮ ಇಚ್ಛೆಯನ್ನು ಇಲ್ಲಿ ತೃಪ್ತಿಪಡಿಸಿಕೊಂಡರು. ಅನ್ನಛತ್ರದಲ್ಲಿ ಊಟಮಾಡುತ್ತಲಿದ್ದರು. ಹಗಲು ರಾತ್ರಿ ಜ್ಞಾನೋಪಾಸನೆಯಲ್ಲಿ ವೇಳೆ ಹಾಕುತ್ತಲಿದ್ದರು. ಇಲ್ಲಿ 'ಮೂರ್' ಸೆಂಟ್ರಲ್ ಲಾಯಬ್ರರಿ ಇರುತ್ತದೆ. ಅದರಲ್ಲಿ ಒಳ್ಳೇ ಪುಸ್ತಕಗಳನ್ನು ಆರಿಸಿ ಓದಿದರು. ಹೀಗೆ ಜ್ಞಾನೋಪಾಸನೆ ನಡೆದಾಗ ಆಯುಷ್ಯದಲ್ಲಿಯ ಕ್ರಾಂತಿಕಾರಕ ವೇಳೆಯು ಬಂದಿತು. ಗೀತಾಮಾತೆಯ, ಸಲುವಾಗಿ ಚಡಪಡಿ ಸುತ್ತಿರುವ ಈ ಬಾಲಕನಿಗೆ ಮಹಾ ಆಧಾರವು ದೊರೆಯಿತು.

**ಮಹಾತ್ಮರ ದರ್ಶನ:—**

ಬನಾರಸ ಹಿಂದೂ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭ ವಿತ್ತು. ಡಾ. ಆ್ಯನಿಬೆಜೆಂಟರ ಅಧ್ಯಕ್ಷತೆಯಲ್ಲಿ ಈ ಸಮಾರಂಭವು ನಡೆಯು ಲಿತ್ತು. ಪಂಡಿತ ಮದನಮೋಹನ ಮಾಲವಿಯವರು ಗಾಂಧೀಜೀಯವರಿಗೆ ಆಮಂತ್ರಣ ಕೊಟ್ಟಿದ್ದರು. ಗಾಂಧೀಜಿಯವರು ಇನ್ನೂ ಮಹಾತ್ಮರಾಗಿರಲಿಲ್ಲ. ಆಫ್ರಿಕೆಯಲ್ಲಿಯ ಸತ್ಯಾಗ್ರಹದ ಹೋರಾಟವನ್ನು ಯಶಸ್ವಿಯಾಗಿ ಮಾಡಿ ಕೊಂಡು ಅವರು ಹಿಂದುಸ್ತಾನಕ್ಕೆ ಬಂದಿದ್ದರು. "ಹಿಂದುಸ್ತಾನದಲ್ಲಿ ನೀವು ಏನಾದರೂ ಕಾರ್ಯ ಮಾಡುವ ಪೂರ್ವದಲ್ಲಿ ದೇಶದಲ್ಲೆಲ್ಲ ತಿರುಗಾಡಿರಿ, ದೇಶದ ನಾಡೀ ಪರಿಕ್ಷೆ ಮಾಡಿರಿ" ಎಂದು ಗೋಖಲೆಯವರು ಗಾಂಧೀಜಿ ಯವರಿಗೆ ಹೇಳಿದ್ದರು. ಗಾಂಧೀಜಿಯವರು ತಿರುಗುತ್ತಾ ತಿರುಗುತ್ತಾ ಶಾಂತಿನಿಕೇತನಕ್ಕೆ ಬಂದಿದ್ದರು. ಆಗ ಈ ಆಮಂತ್ರಣವು ಬಂದಿತ್ತು. ಗಾಂಧೀಜೀಯವರು ಆಗ ಮೈಯಲ್ಲಿ ಬಗಲಬಂಡಿಯನ್ನು ಹಾಕುತ್ತಲಿದ್ದರು. ತಲೆಯ ಮೇಲೆ ಕಾಠೇವಾಡಿ ಪದ್ಧತಿಯ ರುಮಾಲವಿರುತ್ತಲಿತ್ತು. ಧೋತರವನ್ನು ಉಡುತ್ತಲಿದ್ದರು.

ಈ ವೇಷದಲ್ಲಿಯೇ ಗಾಂಧೀಜೀಯವರು ವಿದ್ಯಾಲಯವನ್ನು ಪ್ರವೇಶಿ ಸಿದರು. ದ್ವಾರಪಾಲಕರು ಅವರನ್ನು ಒಳಗೆ ಬಿಡಲೊಲ್ಲರು. ಮಾಲವೀಯಜಿ ಯವರಿಗೆ ಇದು ತಿಳಿಯಿತು. ಅವರು ಓಡುತ್ತ ಬಂದು ಗಾಂಧೀಜೀಯವರನ್ನು ಕರೆದೊಯ್ದರು.

ಅಲ್ಲಿ ಗಾಂಧೀಜೀಯವರ ಇತಿಹಾಸಪ್ರಸಿದ್ಧ ಭಾಷಣವಾಯಿತು. ಮೈತುಂಬ ಆಭರಣಗಳನ್ನು ಹಾಕಿಕೊಂಡು ಕುಳಿತಿದ್ದ ರಾಜಮಹಾರಾಜರನ್ನು ಕಂಡು ಗಾಂಧೀಜೀಯವರಿಗೆ ಸಹನವಾಗಲಿಲ್ಲ. ಮಹಾತ್ಮರು ಹಿಂದಿಯಲ್ಲಿ ಭಾಷಣಮಾಡಿದರು.

"ನಾವು ಕಲಿಯುತ್ತೇವೆ. ಆದರೆ ನಮಗೆ ಬಡವರ ನೆನಪು ಇರುವ ದಿಲ್ಲ. ಈ ರಾಜಾ ಮಹಾರಾಜರು ಇಲ್ಲಿ ಮುತ್ತು ಮಾಣಿಕಗಳಿಂದ ಸುಶೋಭಿ ತರಾಗಿ ಕುಳಿತಿದ್ದಾರೆ. ಆದರೆ ಅವರ ಪ್ರಜೆಗಳು ಇಂದು ಉಪವಾಸ ಇರು ವರು. ಜನತೆಗೆ ಜ್ಞಾನವಿಲ್ಲ, ಅನ್ನವಿಲ್ಲ, ಉದ್ಯೋಗವಿಲ್ಲ ಮತ್ತು ಆರೋಗ್ಯ ವಿಲ್ಲ. ಹೊಲದ ತೆರಿಗೆ ಹೆಚ್ಚಿಸಲ್ಪಟ್ಟಿದೆ. ನಿಜವಾಗಿ ನೋಡಿದರೆ ಈ ಎಲ್ಲ

ಆಭರಣಗಳು ಬಡವರ ಸಂಸಾರವನ್ನು ಸುಖೀ ಮಾಡಲಿಕ್ಕೆ ಉಪಯೋಗಿಸಲ್ಪಡಬೇಕು. ಸುಖವಿಲಾಸಕ್ಕೆ ನಮಗೆ ಅಪ್ಪಣೆ ಇರುವದಿಲ್ಲ. ಇದು ಕಳವು ಎನಿಸುತ್ತದೆ. ನಾವು ಜನತೆಯ ವಿಶ್ವಸ್ತರಿರುವೆವು.''

ಇದನ್ನು ಕೇಳಿ ಡಾ. ಆ್ಯನಿಬೆಜಂಟರು ಕಕ್ಕಾವಿಕ್ಕಿಯಾದರು. ಅವರು ಮಹಾತ್ಮಾಜೀಯವರಿಗೆ ಭಾಷಣ ನಿಲ್ಲಿಸಲು ಹೇಳಿದರು.

**ಗಾಂಧೀಜೀಯವರ ಸಂಗಡ ಪತ್ರವ್ಯವಹಾರ:—**

ಆ ಸಮಯಕ್ಕೆ ವಿನೋಬಾಜಿಯವರು ಕಾಶಿಯಲ್ಲಿದ್ದರು. ಅವರಿಗೆ ಈ ಮಹಾಪುರುಷನ ದರ್ಶನವಾಯಿತು. ಈ ಮನುಷ್ಯನ ಹತ್ತರ ಎಲ್ಲರಲ್ಲಿಲ್ಲದ ಒಂದು ನಿರ್ಭಯವಾದ ತೇಜಸ್ಸು ಇರುವದೆಂದು ಅವರಿಗೆ ಎನಿಸಿತು ವಿನೋಬಾಜಿಯವರು ಗಾಂಧೀಜೀಯವರ ಸಂಗಡ ಪತ್ರವ್ಯವಹಾರ ಪ್ರಾರಂಭಿಸಿದರು. ಅನೇಕ ಪ್ರಶ್ನೋತ್ತರಗಳನ್ನು ಕೇಳಿದರು. ಮಹಾತ್ಮರು ಸಾಬರಮತಿಯ ಪವಿತ್ರ ತೀರದಲ್ಲಿ ತಮ್ಮ ಸತ್ಯಾಗ್ರಹ ಆಶ್ರಮವನ್ನು ಪ್ರಾರಂಭಿಸಿದ್ದರು. ಇದೇ ತೀರದಲ್ಲಿಯೇ ದಧೀಚಿ ಋಷಿಯು ತನ್ನ ಬಲಿದಾನ ಮಾಡಿ ಪವಿತ್ರ ಭೂಮಿಯನ್ನಾಗಿ ಮಾಡಿದ್ದನು. ಗಾಂಧೀಜೀಯವರು ವಿನೋಬಾಜಿಯವರನ್ನು ಆಶ್ರಮಕ್ಕೆ ಕರೆದರು. ವಿನೋಬಾಜಿಯವರು ಹೋಗುವದನ್ನು ನಿಶ್ಚಯಿಸಿದರು. ಜಗತ್ತಿನಲ್ಲಿ ಶಾಂತಿ, ಸಮತೆ, ಸ್ವಾತಂತ್ರ್ಯಗಳು ನೆಲೆಸಬೇಕೆಂದು ಎಲ್ಲ ಪ್ರಕಾರದ ಕಷ್ಟ ಮತ್ತು ಹಾಲಾಹಾಲ ಪ್ರಾಶನ ಮಾಡುವಂಥ ಈ ಪ್ರತ್ಯಕ್ಷ ಮಹಾದೇವನ ಹತ್ತರ ಬರಲು ವಿನೋಬಾಜಿಯವರು ಸಿದ್ಧರಾದರು.

**ಲೇಖಗಳ ಗಂಗಾರ್ಪಣ: —**

ಈ ಅವಧಿಯಲ್ಲಿ ವಿನೋಬಾಜಿಯವರು ಬಹಳ ವಿಷಯಗಳನ್ನು ಬರೆದಿದ್ದರು. ತಾವು ಬರೆದ ವಾಙ್ಮಯವನ್ನೆಲ್ಲ ಹರಿದು ಗಂಗಾಮಾತೆಗೆ ಅರ್ಪಿಸಿದರು. ತಮ್ಮ ಹತ್ತರವಿದ್ದ ಎಲ್ಲ ಪತ್ರವ್ಯವಹಾರವನ್ನೂ ಗಂಗಾನದಿಯಲ್ಲಿ ಚಲ್ಲಿದರು. ಅವರ ಹೊಸ ಆಯುಷ್ಯವು ಪ್ರಾರಂಭವಾಗುವಂತೆ ತೋರುತ್ತಲಿತ್ತು. ಪೂರ್ವದ ೨೨ ವರುಷ ಅವಧಿಯಲ್ಲಿಯ ಕೇವಲ

ಮಂಗಲಕಾರಕ ವಿಷಯಗಳನ್ನಷ್ಟೇ ಅವರು ಆಯ್ದುಕೊಂಡರು. ಆ ಅವಧಿಯಲ್ಲಿಯ ಜ್ಞಾನ, ವೈರಾಗ್ಯ, ಸ್ಫೂರ್ತಿ ಮುಂತಾದವುಗಳ ಸಂಚಯಗಳನ್ನು ಮಾತ್ರ ತಮ್ಮ ಸಂಗಡ ತೆಗೆದುಕೊಂಡು ಸಾಬರಮತಿಗೆ ಹೊರಡಲನುವಾದರು.

## ಹಿಮಾಲಯದಲ್ಲಿ ಹುಲಿಯ ಭೆಟ್ಟಿ:

ಇದೇ ಸಮಯಕ್ಕೆ ಅವರು ಒಮ್ಮೆ ಹಿಮಾಲಯಕ್ಕೆ ಹೋಗಿಬಂದರು. ಧೈರ್ಯದ ದಿವ್ಯ ಆದರ್ಶ ಹಾಗೂ ಶುಭ್ರ ಜ್ಞಾನದ ಪುರಾತನ ಋಷಿಯಾದ ಆ ಪ್ರಾಚೀನ ಪರ್ವತ ರಾಜನ ದರ್ಶನವನ್ನು ತೆಗೆದುಕೊಂಡರು. ಒಂದು ಹುಲಿಯ ಭೆಟ್ಟಿಯಾಯಿತು. ವಿನೋಬಾಜಿಯವರು ಅಡಗಿಕೊಂಡರು. ಹುಲಿಯು ಹೊರಟುಹೋಯಿತು. ನಂತರ ವಿನೋಬಾಜಿ ಹೊರಗೆ ಬಂದರು. ಈಗ್ಯೂ ಅವರು ಒಮ್ಮೊಮ್ಮೆ ಹೀಗೆ ಹೇಳುತ್ತಾರೆ— "ಮತ್ತೊಮ್ಮೆ ಹಿಮಾಲಯಕ್ಕೆ ಹೋಗಬೇಕೆಂದು ನನಗೆ ಎನಿಸುತ್ತದೆ. ಹಿಮಾಲಯ ನೋಡಬೇಕೆಂಬ ಉದ್ದೇಶದಿಂದ ಅಲ್ಲ. ಆದರೆ ಮತ್ತೊಮ್ಮೆ ಆ ಹುಲಿಯನ್ನು ಕಾಣಬೇಕೆಂಬ ಇಚ್ಛೆಯಿಂದ. ನಾನು ಈಗ ಅದರ ಎದುರು ನಿಂತು ಅದಕ್ಕೆ ಹೀಗೆ ಕೇಳಬಲ್ಲೆ "ತಿನ್ನುವಿದೆಯೋ? ಹಾಗಿದ್ದರೆ ನನ್ನನ್ನು ತಿನ್ನು, ಮೊದಲು ಓಡಿಹೋಗಿದ್ದೆ—ತಪ್ಪಿಸಿಕೊಂಡಿದ್ದೆ"

## ವಿನೋಬಾಜೀಯವರ ತಂದೆಗೆ ಮಹಾತ್ಮಾಜೀಯವರ ಪತ್ರ:

ಸುರತದಿಂದ ವಿನೋಬಾಜಿಯವರು ಹಿಂದಕ್ಕೆ ಬರೆದ ನಾಲ್ಕು ಪಂಕ್ತಿ ಪತ್ರದ ಹೊರತು ಬೇರೆ ಏನೂ ಮನೆಗೆ ಬರೆದಿರಲಿಲ್ಲ. ಮಹಾತ್ಮರಿಗೆ ಇದು ಸರಿದೋರಲಿಲ್ಲ. ಮನೆಯಲ್ಲಿ ತಂದೆ ತಾಯಿಗಳು ಚಿಂತೆಮಾಡುತ್ತಲಿರಬಹುದು. ಅವರಿಗೆ ಕ್ಷೇಮಸಮಾಚಾರ ತಿಳಿಸುವದು ಧರ್ಮವಾಗಿದೆ. ಅವರಿಗೆ ಏನೂ ತಿಳಿಸದಿರುವದೆಂದರೆ ಒಂದು ಬಗೆಯ ಹಿಂಸೆಮಾಡಿದಂತೆಯೇ. ಮಹಾತ್ಮರು ಅವರ ಮನೆಗೆ ಪತ್ರ ಬರೆದರು.

"ನಿಮ್ಮ ವಿನೋಬಾ ನನ್ನ ಹತ್ತರ ಇರುವರು. ಇಷ್ಟು ಚಿಕ್ಕ ವಯಸ್ಸಿನಲ್ಲಿ ನಿಮ್ಮ ಮಗನಿಗೆ ಬಹಳ ವೈರಾಗ್ಯ ಮತ್ತು ತೇಜಸ್ಸು ಪ್ರಾಪ್ತವಾಗಿದೆ. ಇಷ್ಟು ವೈರಾಗ್ಯವನ್ನು ಸಂಪಾದಿಸಲಿಕ್ಕೆ ನಾನು ಅನೇಕ ವರುಷ ಒದ್ದಾಡಬೇಕಾಯಿತು."

ಇದೇ ಪತ್ರದಲ್ಲಿ ಮೊದಲು ಇವರಿಗೆ "ವಿನೋಬಾ" ಎಂದು ಸಂಬೋಧನವಾಯಿತು. ಅವರ ಹೆಸರು ವಿನಾಯಕ. ಮಹಾತ್ಮರು ನಿನ್ನ 'ವಿನೋಬಾ' ಎಂದು ಪ್ರೇಮದಿಂದ ಬರೆದರು. ಅದೇ ಹೆಸರು ಈಗ ರೂಢಿಯಲ್ಲಿದೆ.

**ವಾಯಿಗೆ ವಿನೋಬರ ಆಗಮನ:—**

ವಾಯಿಯ ಪ್ರಾಜ್ಞಾ ಪಾಠಶಾಲೆಯ ಆಚಾರ್ಯರಾದ ನಾರಾಯಣ ಶಾಸ್ತ್ರಿ ಮರಾಠೆ ಇವರ ಕಡೆಗೆ ಹೋಗಿ ಶಂಕರ ಭಾಷ್ಯ ಓದಬೇಕೆಂದು ವಿನೋಬಾಜಿಯವರಿಗೆ ತೀವ್ರ ಇಚ್ಛೆಯಾಯಿತು ಮಹಾತ್ಮರ ಆಜ್ಞೆಯನ್ನು ಪಡೆದು ಅವರು ವಾಯಿಗೆ ಬಂದರು. ವಾಯಿಯಲ್ಲಿ ಅವರ ಮನೆಯಿತ್ತು ಮತ್ತು ಅಜ್ಜಿಯೂ ಇದ್ದಳು. ಅಧ್ಯಯನವು ಪ್ರಾರಂಭವಾಯಿತು. ಇದೇ ಸಮಯಕ್ಕೆ ಅವರು ಹೆಚ್ಚಾಗಿ ದೇಹದಂಡನೆಯನ್ನು ಮಾಡಿದರು. ಒಂದೇ ವಸ್ತ್ರಧಾರಣ ಮಾಡುತ್ತಲಿದ್ದರು. ರಾತ್ರಿ ಏನೂ ಹೊದ್ದುಕೊಳ್ಳುತ್ತಿದ್ದಿಲ್ಲ, ಮಳೆಯು ಬೀಳುತ್ತಲಿದ್ದರೂ ಗಂಗಾತೀರದ ಘಟ್ಟದ ಮೇಲೆಯೇ ಮಲಗಿಕೊಳ್ಳುವರು. ಒಮ್ಮೊಮ್ಮೆ ಏನೂ ತಿನ್ನುತ್ತಿರಲಿಲ್ಲ. ತಿನ್ನುವದರಲ್ಲಿಯೂ ಅನೇಕ ನಿಯಮ ನಿರ್ಬಂಧಗಳನ್ನು ಹಾಕಿಕೊಂಡರು. ಬಿಸಿಲಲ್ಲಿಯೇ ಯಾವಾಗಾದರೊಮ್ಮೆ ಹೋಗಿ ಕೂತ್ರುವರು ಈ ಪ್ರಕಾರ ಅವರ ಪ್ರಯೋಗಗಳು ನಡೆದವು. ಬೌದ್ಧಿಕ ತಪಶ್ಚರ್ಯವಂತೂ ನಡೆದೇ ಇತ್ತು.

**ಕಾಲ್ನಡಿಗೆಯಿಂದಲೇ ಮಹಾರಾಷ್ಟ್ರ ಪ್ರವಾಸ:—**

ಶಂಕರ ಭಾಷ್ಯವು ಮುಗಿಯಿತು. ಮಹಾರಾಷ್ಟ್ರ ಯಾತ್ರೆಗಾಗಿ ಕಾಲನಡಿಗೆಯಿಂದಲೇ ಹೊರಟರು. ಅವರು ಅಲ್ಲಿಯ ಕಿಲ್ಲೆ ಪವಿತ್ರ ತೀರ್ಥ ಮುಂತಾದವುಗಳನ್ನೆಲ್ಲ ಸಂದರ್ಶಿಸಿದರು. ಕೃಷ್ಣಾ ಗೋದಾವರಿ ಮತ್ತು ಭೀಮಾ ನದಿಗಳ ದಂಡೆಯ ಮೇಲೆ ತಿರುಗಾಡಿ ಪುಣೆಗೆ ಬಂದು ತಲುಪಿದರು.

**ಲೋಕಮಾನ್ಯರ ದರ್ಶನ:—**

ಲೋಕಮಾನ್ಯರ ಬಿಡುಗಡೆಯಾಗಿತ್ತು. ಸ್ವರಾಜ್ಯದ ಚಳವಳಿಯನ್ನು ಅವರು ಪ್ರಾರಂಭಿಸಿದ್ದರು. " ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು " ಎಂಬ

ಮಂತ್ರವನ್ನು ಅನ್ನಲಿಕ್ಕೆ ಕಲಿಸುತ್ತಿದ್ದರು. ವಿನೋಬಾಜಿಯವರು ಅವರಿಗೆ ಮೂರು ಪ್ರಶ್ನೆಗಳನ್ನು ಕೇಳಿದರು.

೧. ನೀವು ಸಂಪೂರ್ಣ ನಿರ್ಭಯರಾಗಿದ್ದಿರೇನು ?

೨. 'ಕಬೀರಾಚಾ ಬೀಜಕ' ಎಂಬ ವೇದಾಂತದ ಮೇಲಿನ ಗ್ರಂಥವನ್ನು ನೀವು ಓದಿರುವಿರೇನು ?

ಇನ್ನೂ ಒಂದು ಪ್ರಶ್ನೆ ಇತ್ತು "ಆ ಮಹಾಪುರುಷನು ಉತ್ತರ ಕೊಡದೆ ನನ್ನ ಕಡೆಗೆ ನೋಡಹತ್ತಿದನು. ಅವರ ಆ ನೋಟದಲ್ಲಿಯೇ ನನಗೆ ಉತ್ತರ ದೊರೆಯಿತು ನಾನು ಸಾಷ್ಟಾಂಗ ನಮಸ್ಕಾರ ಮಾಡಿ ಮರಳಿ ಬಂದೆನು''

**ಸಮ್ಯಕ್ ದೃಷ್ಟಿ ಬೇಕು:—**

ವಿನೋಬಾಜಿಯವರು ಮರಳಿ ಆಶ್ರಮಕ್ಕೆ ಬಂದರು. ಆದರೆ ಅವರ ಕಣ್ಣುಗಳು ಕೆಟ್ಟಿದ್ದವು. ಓದಲಿಕ್ಕೆ ಸಹ ಬರುತ್ತಿರಲಿಲ್ಲ. ಆದರೂ ಕನ್ನಡಕ ವನ್ನು ಉಪಯೋಗಿಸುತ್ತಿರಲಿಲ್ಲ. ಮಹಾತ್ಮರು ಕೊನೆಗೆ ಕನ್ನಡಕವನ್ನು ಹಾಕಿಕೊಳ್ಳಲು ಒತ್ತಾಯ ಮಾಡಿದರು. ಕನ್ನಡಕವು ಬಂದಿತು. ಕಣ್ಣಿನ ಈ ವಿಷಯವನ್ನು ಹೇಳುವಾಗ್ಗೆ ಹೊರಗಿನ ಕಣ್ಣುಗಳಂತೆಯೇ ಬುದ್ಧಿಯ ಕಣ್ಣು ಗಳು. ವಿಚಾರದ ಸ್ವಚ್ಛ ದೃಷ್ಟಿ ಇರದಿದ್ದರೆ ಜ್ಞಾನ ಚಕ್ಷುವು ಕುರುಡವಾಗಿದ್ದರೆ ನಮ್ಮ ಕಡೆಯಿಂದ ಎಷ್ಟು ಅಲ್ಲದ ಕೆಲಸವಾಗುತ್ತವೆಂಬುದು ಹೇಳಲಸಾಧ್ಯವು.

**ತಾಯಿಯು ಹೋದರೂ ಪ್ರೇಮದ ಹಸಿ ಇದೆ:—**

೧೯೧೮ ನೇ ಇಸವಿಯ ಮಧ್ಯದಲ್ಲಿ ವಿನೋಬಾಜಿಯವರ ತಾಯಿಯು ಸ್ವರ್ಗಸ್ಥರಾದರು. ಅವರಿಗೆ ಅನಾರೋಗ್ಯವಾದುದನ್ನು ಕೇಳಿದಾಗಲೇ ವಿನೋಬಾಜಿಯವರು ಬಡೋದೆಗೆ ಹೋದರು. ಆದರೆ ತಾಯಿಯು ಬದುಕ ಲಿಲ್ಲ. ತಾಯಿಯ ಶವದ ಹತ್ತಿರ ಅವರು ಕುಳಿತು ಗೀತಾಪಠಣ ಮಾಡಿ ಎದ್ದುಹೋದರು ತಾಯಿಯ ಮೇಲಿನ ಅವರ ಪ್ರೇಮ ಅಪಾರ. ತಾಯಿಯ ನೆನಪುಗಳನ್ನು ಅವರು ಅದೆಷ್ಟೋ ಸಲ ಹೇಳುತ್ತಾರೆ. "ನಾಟಕ ಸಿನೆಮಾ ಗಳನ್ನು ನೋಡಲಿಕ್ಕೆ ಆತನು ಓಡಿಹೋಗಿಲ್ಲವಷ್ಟೇ ? ಉತ್ತಮ ಕಾರ್ಯ ಮಾಡು ವವರ ಸಲುವಾಗಿ ಹೋಗಿದ್ದಾನೆ. ದೇಶದ ಮತ್ತು ದೇವರ ಕೆಲಸ ಮಾಡಲು

ಹೋಗಿದ್ದಾನೆ. ನನಗೆ ಆತನ ಬಗ್ಗೆ ಅಭಿಮಾನವೇ ಅನಿಸುತ್ತದೆ.'' ಎಂದು ಅವರ ತಾಯಿಯವರು ಅನ್ನುತ್ತಿದ್ದರಂತೆ.

ವಿನೋಬಾಜಿಯವರು ಸಾವಿರಾರು ಮನನೀಯ ವಿಚಾರಗಳನ್ನು ಬರೆದಿಟ್ಟಿರುವರು. ಒಂದೆಡೆಯಲ್ಲಿ ಅವರು ಹೀಗೆನ್ನುತ್ತಾರೆ— "ತಾಯಿಯು ಹೋದಳು. ಆದರೆ ತಾಯಿಯ ಪ್ರೇಮದ ಹಸಿಯು ನನಗೆ ಒಳಗಿನಿಂದ ದೊರೆಯುತ್ತಲಿದೆ. ಮಹಾತ್ಮರದೇ ಇದಕ್ಕೆ ಸಾಕ್ಷಿಯಲ್ಲವೇ?''

**ಸತ್ಯಾಗ್ರಹದ ಪ್ರಚಾರ :—**

ಪೋಲಿಸರಿಗೆ ಸ್ವೈರಾಚಾರ ಮಾಡಲು ಅಧಿಕಾರ ಕೊಡುವಂಥ ಮತ್ತು ಜನತೆಯ ವೈಯಕ್ತಿಕ ಸ್ವಾತಂತ್ರ್ಯವನ್ನು ನಷ್ಟಮಾಡುವಂಥ ರೌಲೆಟ ಕಾಯದೆಯನ್ನು ಸರಕಾರದವರು ಮಾಡಿದರು. ಜನತೆಯ ವಿರೋಧವನ್ನು ಲಕ್ಷಿಸಲಿಲ್ಲ. ಮಹಾತ್ಮರು ಸತ್ಯಾಗ್ರಹದ ಪ್ರಚಂಡ ಚಳವಳಿಯನ್ನು ಹೂಡಿದರು. ವಿನೋಬಾ ಆ ಸಮಯಕ್ಕೆ ಮತ್ತೊಮ್ಮೆ ತಮ್ಮ ಗಾಗೋದೆ ಗ್ರಾಮಕ್ಕೆ ಹೋದರು. ಪೇಣದಲ್ಲಿ ಭಾಷಣ ಮಾಡಿದರು ಗಾಗೋದೆಯಲ್ಲಿದ್ದ ಅವರ ಕಕ್ಕನ ಮಗನಾದ ರಘುನಾಥನನ್ನು ಸಾಬರಮತಿಗೆ ಕರೆದೊಯ್ದರು. ಈ ರಘುನಾಥನು ಮುಂದೆ ೧೯೫೪-೫೬ ರ ವರೆಗೆ ಆಶ್ರಮದಲ್ಲಿಯೇ ಇದ್ದನು.

**ವರ್ಧಾಕ್ಕೆ :—**

ಇತ್ತಕಡೆಯ ಯಾತ್ರೆಯನ್ನು ಮುಗಿಸಿ ವಿನೋಬಾಜಿಯವರು ಪುನಃ ಸಾಬರಮತಿಗೆ ಹೋದರು. ೧೯೧೯-೨೦ ನೇ ವರುಷ ಬಂದಿತು. ಲೋಕಮಾನ್ಯರು ಕಾಲವಶರಾದರು. ಅಸಹಕಾರ ಚಳವಳಿಯು ಪ್ರಾರಂಭವಾಯಿತು ರಾಷ್ಟ್ರೀಯತೆಗೆ ಉಕ್ಕು ಬಂದಿತ್ತು. ಅದು ಒಳ್ಳೇ ತೇಜಸ್ವಿಯಾಗಿ ಕಾಣುತ್ತಲಿತ್ತು. ವಕೀಲರು ತಮ್ಮ ವಕೀಲಿಯನ್ನು ಬಿಡಹತ್ತಿದರು. ವಿದ್ಯಾರ್ಥಿಗಳು ಶಾಲೆ ಕಾಲೇಜ ಬಿಡುತ್ತಲಿದ್ದರು. ಕೆಲವರು ತಮ್ಮ "ಸರ್" ಮುಂತಾದ ಪದವಿಗಳನ್ನು ಕಿತ್ತೊಗೆಯುತ್ತಲಿದ್ದರು. ವ್ಯಾಪಾರೀ ವರ್ಗದವರೂ ರಾಷ್ಟ್ರೀಯ ಕಾರ್ಯದಲ್ಲಿ ಬರಹತ್ತಿದರು. ಒಂದು ದಿವಸ ಸ್ವರ್ಗೀಯ ಜಮನಲಾಲ ಬಜಾಜರು ಆಶ್ರಮಕ್ಕೆ ಬಂದರು "ನನ್ನನ್ನು ಹತ್ತಿರ

ಕರೆದುಕೊಳ್ಳಿ. ಸ್ವಂತ ಮಗನೆಂದು ಭಾವಿಸಿರಿ.'' ಎಂದು ಮಹಾತ್ಮರಿಗೆ ಹೇಳಿದರು. ಮುಂದೆ ಜಮನಲಾಲರು ಮಹಾತ್ಮರ ಮಾನಸಪುತ್ರರಾದರು. ಒಮ್ಮೆ ಅವರು ಮಹಾತ್ಮಾಜೀಯವರಿಗೆ— '' ಮಹಾತ್ಮಾಜೀ, ಸಾಬರಮತಿ ಆಶ್ರಮದಲ್ಲಿ ಬಹಳ ಗದ್ದಲವಿದೆ. ವರ್ಧಾದಲ್ಲಿ ಇದರ ಒಂದು ಶಾಖೆಯನ್ನು ಪ್ರಾರಂಭಿಸಿರಿ.'' ಎಂದು ಕೇಳಿಕೊಂಡರು. ಅದರಂತೆ ಮುಂದೆ ವರ್ಧಾದಲ್ಲಿ ಶಾಖೆಯು ಪ್ರಾರಂಭವಾಯಿತು. ಅಂದಿನಿಂದ ವಿನೋಬಾ ವರ್ಧಾದವರಾದರು.

## ವರ್ಧಾದ ಸತ್ಯಾಗ್ರಹಾಶ್ರಮ: —

ವರ್ಧಾದಲ್ಲಿ ಕಳೆದ ೨೦–೨೨ ವರುಷ ವಿನೋಬಾಜಿಯವರ ಸೇವಾಮಯ ತಪಸ್ಸು ನಡೆದಿರುತ್ತದೆ. ಇದೇ ಅವರ ಪ್ರಯೋಗಶಾಲೆ. ಸಾವಿರಾರು ಜನರಿಗೆ ಅವರು ಸ್ಫೂರ್ತಿಯನ್ನಿತ್ತರು. '' ಮಹಾರಾಷ್ಟ್ರ ಧರ್ಮ '' ಎಂಬ ಮಾಸಿಕ ಪತ್ರವನ್ನು ಅವರು ಪ್ರಾರಂಭ ಮಾಡಿದರು. ಅದರ ನಾಲ್ಕೇ ಪ್ರತಿಗಳು ಹೊರಟವು. ಉಪನಿಷತ್ತಿನ ಮೇಲೆ ಅದರಲ್ಲಿ ಸುಂದರವಾದ ಲೇಖಗಳಿವೆ. ನಾಗಪುರದ ಸುಪ್ರಸಿದ್ಧ ಧ್ವಜಸತ್ಯಾಗ್ರಹವು ನಡೆದಿತ್ತು. ನಾಲ್ಕನೇ ಅಂಕಿನ ಕೊನೆಯ ಸ್ಫುಟದಲ್ಲಿ '' ಧರ್ಮಕ್ಷೇತ್ರೆ ನಾಗಪೂರೆ '' ಎಂಬ ಅತ್ಯಂತ ತೇಜಸ್ವೀ ಲೇಖವಿದೆ. ತ್ರಿವರ್ಣ ರಾಷ್ಟ್ರಧ್ವಜದ ಮೇಲೆ ಆ ಲೇಖವಿರುತ್ತದೆ. ನೀವು ಅದನ್ನು ಓದಬೇಕು. ಸೇವಾದಲದ ನಿಬಂಧಗಳಲ್ಲಿ ಅದಕ್ಕೆ ಮೊದಲ ಸ್ಥಾನವಿರಬೇಕು. ' ಮಹಾರಾಷ್ಟ್ರ ಧರ್ಮ ' ಮಾಸಿಕವು ಮುಂದೆ ಬಂದಾಯಿತು. ' ಮಹಾರಾಷ್ಟ್ರ ಧರ್ಮ 'ದ ಹೆಸರಿನ ಸಾಪ್ತಾಹಿಕವನ್ನು ಅವರು ಪ್ರಾರಂಭಿಸಿದರು. ಮಾಸಿಕದಲ್ಲಾಗಲೀ ಸಾಪ್ತಾಹಿಕದಲ್ಲಾಗಲೀ ಅವರು ಜಾಹೀರಾತು ಸ್ವೀಕರಿಸುತ್ತಿರಲಿಲ್ಲ. ಮತ್ತು ಎಲ್ಲ ಲೇಖನಗಳನ್ನು ವಿನೋಬಾಜಿಯವರೇ ಬರೆಯುತ್ತಲಿದ್ದರು. ಈ ಸಾಪ್ತಾಹಿಕದಲ್ಲಿ ತುಕಾರಾಮರ ಅಭಂಗ ಎಂಬ ವಿಭಾಗವಿತ್ತು. ಅದರಲ್ಲಿ ಆಯ್ದುಕೊಂಡ ಅಭಂಗ ಬರೆದು ಅದರ ಮೇಲೆ ಭಾಷ್ಯ ಬರೆದು ಸಮಾನಾರ್ಥಕ ಜ್ಞಾನೇಶ್ವರಿಯಲ್ಲಿಯ ಶ್ಲೋಕಗಳನ್ನು ಅವರು ಕೊಡುತ್ತಲಿದ್ದರು. ಈ ಪ್ರಕಾರ ಅದು ಬೋಧಪ್ರದವಾದದ್ದಾಗಿತ್ತು. ಈ ಸಾಪ್ತಾಹಿಕದೊಳಗಿಂದಲೇ ಆಯ್ದು ' ಮಧುಕರ ' ಎಂಬ ಪುಸ್ತಕ ಪ್ರಸಿದ್ಧವಾಗಿದೆ.

"ಮಹಾರಾಷ್ಟ್ರ ಧರ್ಮ" ಸಾಪ್ತಾಹಿಕದಲ್ಲಿ ಪ್ರಸಿದ್ಧವಾದ ಲೇಖನಗಳು ಪ್ರಾಣಮಯವಾದದ್ದಿರುತ್ತವೆ. ಬುದ್ಧಿಯ ಪ್ರಖರತೆ, ಸೂಕ್ಷ್ಮತೆ, ಭಾವನೆ, ತೇಜಸ್ವೀ ಶಬ್ದರಚನೆ, ಮುಂತಾದವುಗಳನ್ನು ಈ ಬರಹದಲ್ಲಿ ಕಾಣಬಹುದು ಮತ್ತು ಮಾಸಿಕದ ಭಾಷೆಗಿಂತ ಸಾಪ್ತಾಹಿಕ ಭಾಷೆಯು ಅತಿ ಸುಲಭ ಸುಂದರವಾಗಿದೆ ಮಾಸಿಕದ ಭಾಷೆಯು ಕೃತ್ರಿಮವಿರುವದಿಲ್ಲ. ಅನುಪ್ರಾಸಗಳು ಆಗಾಗ್ಗೆ ಬಂದಿವೆ. ಆಗ್ಗೆ ವಿನೋಬಾಜಿಯವರು ತರುಣರಿದ್ದರು.

**ಶಿಸ್ತಿನ ಭಕ್ತರು:—**

ನಾಗಪುರದ ಧ್ವಜ ಸತ್ಯಾಗ್ರಹದಲ್ಲಿ ವಿನೋಬಾಜಿಯವರೂ ಇದ್ದರು. ಅವರಿಗೆ ಶಿಕ್ಷೆಯಾಗಿತ್ತು. ಜೈಲಿನಲ್ಲಿದ್ದರು. ಆ ವೇಳೆಯ ಒಂದು ಪ್ರಸಂಗವಿದೆ. ಒಮ್ಮೆ ಸುಪರಿಂಟೆಂಡೆಂಟನು ಕೈದಿಗಳನ್ನು ನೋಡಲಿಕ್ಕೆ ಬಂದ. ಆಗ್ಗೆ ಎಲ್ಲ ಕೈದಿಗಳಿಗೆ ವಿಶಿಷ್ಟರೀತಿಯಲ್ಲಿ ಕೈ ಮುಂದೆ ಮಾಡಲು ಹುಕುಂ ಕೊಡಲಾಗಿತ್ತು. ಆದರೆ ಸುಪರಿಂಟೆಂಡೆಂಟ ಹೋದರೂ ಸಹ ವಿನೋಬಾಜಿಯವರು ಹಾಗೆಯೇ ನಿಂತರು. ಕೈ ಕೆಳಗೆ ಮಾಡಲಿಕ್ಕೆ ಹುಕುಮು ಎಲ್ಲಿದೆ? ಎಂದು ಅವರು ಅಂದರು!

**ಸುಶಿಕ್ಷಿತ ಬಂಡೆಗಳು:—**

೧೯೪೭ನೇ ಇಸ್ವಿಯ ಮಹಾತ್ಮರ ಉಪವಾಸದ ಸಮಯದ ಒಂದು ಅನುಭವವನ್ನು ವಿನೋಬಾಜಿಯವರು ಹೇಳಿದರು. ದಿಲ್ಲಿಯ ಸರ್ವಧರ್ಮ ಪರಿಷತ್ತು ಮುಗಿಸಿಕೊಂಡು ಅವರು ಮರುಳಿ ಬರುತ್ತಲಿದ್ದರು, ಉಗಿಬಂಡಿಯಲ್ಲಿ ಅವರಿಗೆ ಯಾರೋ ಒಬ್ಬರು ಪ್ರಶ್ನೆಮಾಡಿದರು "ಸದ್ಯಕ್ಕೆ ಮಹಾತ್ಮರು ಏನು ಮಾಡುತ್ತಲಿದ್ದಾರೆ?" ಆ ಪ್ರಶ್ನೆಯನ್ನು ಕೇಳಿ ವಿನೋಬಾಜಿಯವರಿಗೆ ಬಹಳ ಕೆಡಕೆನಿಸಿತು. ಪ್ರಶ್ನೆಕೇಳುವವನು ಬಹುಶಃ ಹಳ್ಳಿಗನಿರಬೇಕು, ಆತನು ಅಶಿಕ್ಷಿತನಿರಬೇಕು. ವರ್ತಮಾನಪತ್ರ ಓದದವನಿರಬೇಕು. ಖಾದೀಧಾರೀ ತಪಸ್ವೀ ಮೂರ್ತಿಯನ್ನು ನೋಡಿ ಇವರಿಗೆ ಮಹಾತ್ಮರ ಬಗ್ಗೆ ಗೊತ್ತಿರಬಹುದು ಎಂದು ಅವರಿಗೆ ಕಲ್ಪನೆಯಾಗಿರಬೇಕು. ವಿನೋಬಾಜಿಯವರು ಆತನ ಮೇಲೆ ರೇಗಿಗೇಳಲಿಲ್ಲ ಆದರೆ ಅವರು ನಮ್ಮಂಥ ಸುಶಿಕ್ಷಿತರ ಮೇಲೆ ಸಿಟ್ಟಿಗೆದ್ದರು. ಹಿಂದು ಮುಸಲ್ಮಾನ ಐಕ್ಯದ ಸಲುವಾಗಿ ಮಹಾತ್ಮರು

ಉಪವಾಸಮಾಡುತ್ತಲಿದ್ದರು. ಆದರೆ ಜನತೆಗೆ ಇವರ ಸುದ್ದಿಯೇ ಇಲ್ಲ. ಮಹಾತ್ಮರು ಅಗ್ನಿ ದಿವ್ಯವನ್ನು ಮಾಡುತ್ತಲಿದ್ದರು. ಆದರೆ ಆ ಅಗ್ನಿದಿವ್ಯದ ಸಂದೇಶವನ್ನು ಲಕ್ಷ್ಯಗಟ್ಟಲೇ ಹಳ್ಳಿಗಳಲ್ಲಿ ಯಾರು ತೆಗೆದುಕೊಂಡು ಹೋಗುವವರು? **ವಿದ್ಯುತ್ ಕೇಂದ್ರ** (ಶಕ್ತಿಗೃಹ)ದಲ್ಲಿ ಮಾತ್ರ ವಿದ್ಯುತ್ ಹುಟ್ಟಿದರೆ ನಡೆಯದು. ಅದು ತಂತಿಗಳ ಮೂಲಕ ಎಲ್ಲಕಡೆಗೆ ತಲುಪಲೇ ಬೇಕು. ಆಗ್ಗೆ ಮಾತ್ರ ಪ್ರಕಾಶವು ದೊರೆಯುತ್ತದೆ. ಕತ್ತಲೆಯು ಮಾಯವಾಗುತ್ತದೆ. ಪೂರ್ವಕಾಲದಲ್ಲಿ ಸಾಧು ಸಂತರು ಎಲ್ಲ ಕಡೆಯಲ್ಲಿ ಸಂಚರಿಸುತ್ತಲಿದ್ದರು. ನಾಮದ ಘೋಷಣೆಯನ್ನು ಮಾಡುತ್ತ ಎಲ್ಲೆಡೆಯಲ್ಲಿ ತಿರುಗಾಡುತ್ತಲಿದ್ದರು ಆದರೆ ಇಂದು ರಾಷ್ಟ್ರೀಯ ವಿಚಾರಗಳ ಘೋಷಣೆಯನ್ನು ಎಲ್ಲ ಕಡೆಗೆ ಯಾರು ಮುಟ್ಟಿಸುವವರು? ಮಹಾತ್ಮಾಜಿಯವರು ಐಕ್ಯ ಉಂಟಾಗಲೆಂದೂ ಭೇದ ಭಾವವು ದೂರಾಗಬೇಕೆಂದೂ ತಪಶ್ಚರ್ಯದ ಪಾವನ ಗಂಗೆಯನ್ನು ನಿರ್ಮಿಸುತ್ತಲಿದ್ದರು. ಆದರೆ ಈ ಗಂಗೆಯನ್ನು ಎಲ್ಲ ಕಡೆಗೆ ತಲುಪಿಸುವವರು? ಸಿಗಲು ಅಸಾಧ್ಯವಾದಂಥ ಅವರ ನೀರನ್ನು ಅತ್ತಿತ್ತ ಯಾರು ಹರಿಯುವಂತೆ ಮಾಡುವರು?

"ಇಂದಿನ ಈ ಸುಶಿಕ್ಷಿತರು ಸ್ವತಃ ಹಸಿಯಾಗುವದಿಲ್ಲ; ಒಳಗೆ ಹಸಿ ಹುಟ್ಟುವದಿಲ್ಲ. ಆದರೆ ಪ್ರವಾಹಕ್ಕೆ ಮಾತ್ರ ಅಡ್ಡಿಯನ್ನೊಡ್ಡುವರು. ಕಲ್ಲಿನಂತೆ ನಡುವೆ ಬಿದ್ದು ಅಡ್ಡೀ ಮಾಡುತ್ತಾರೆ. ಇಂದು ರಾಷ್ಟ್ರಕ್ಕೆ ಸಾವಿರಾರು ವೃತಸ್ಥ ಪ್ರಚಾರಕರ ಅವಶ್ಯಕತೆ ಇದೆ. ರಾಷ್ಟ್ರವು ಈ ಪ್ರಕಾರ ಬೇಡಿಕೆಯನ್ನು ಮುಂದೆಮಾಡಬೇಕು. ಮತ್ತು ಅದು ಪೂರೈಸಲ್ಪಡಬೇಕು. ನಮ್ಮ ಹಿಂದಿನ ಸಮರ್ಥರಿಗೆ ೧೧೦೦ ಮಠಗಳನ್ನು ವ್ಯವಸ್ಥಿತವಾಗಿ ಸಾಗಿಸಿಕೊಂಡು ಹೋಗಲು ಜನರು ಸಿಗುತ್ತಲಿದ್ದರೆ ಇಂದು ಯಾಕೆ ದೊರೆಯಬಾರದು? ನಾವು ಬಂಡೆಗಲ್ಲುಗಳಾಗಿರುತ್ತೇವೆಯೋ? ಇಂಥ ಜನರು ಸಿಗದಿರುವವರೆಗೆ ನಮ್ಮ ಯಾವ ಬಗೆಯ ಆಶೆಯೂ ಪೂರ್ತಿಯಾಗದು" ಎಂದು ವಿನೋಬಾಜಿಯವರು ಅನ್ನುತ್ತಾರೆ.

**ಬೀಡಿಯನ್ನು ಒಗೆದುಬಿಟ್ಟನು :—**

ಉಗಿಬಂಡಿಯಲ್ಲಿಯ ಪ್ರವಾಸದ ಮೋಜುಗಳನ್ನು ವಿನೋಬಾಜಿಯವರು ಯಾವಾಗಾದರೊಮ್ಮೆ ಹೇಳುತ್ತಾರೆ. ಒಮ್ಮೆ ಓರ್ವ ಗೃಹಸ್ಥನು ಇವರ

ಮುಂದೆಯೇ ಬೀಡಿಸೇದುತ್ತ ಕುಳಿತಿದ್ದನು. ಎಲ್ಲ ಹೊಗೆಯನ್ನು ಇವರ ಕಡೆಗೆ ಬಿಡುತ್ತಲಿದ್ದನು. ವಿನೋಬಾಜಿಯವರು ಅರಿವೆಯಿಂದ ಮೂಗು ಮುಚ್ಚಿಕೊಂಡಿದ್ದರು. ಆದರೆ ಆ ಮನುಷ್ಯನಿಗೆ ಏನೂ ಪರಿಣಾಮವಾಗಲಿಲ್ಲ. ಕೊನೆಗೆ ವಿನೋಬಾಜಿಯವರೇ ಆತನ ಕೈಯೊಳಗಿನ ಬೀಡಿಯನ್ನು ಕಸಿದು ಹೊರಗೆ ಒಗೆದರು. ಆ ಮನುಷ್ಯನು ತುಸು ಗುರ್‌ಗುರ್ ಮಾಡಹತ್ತಿದನು. "ಗಾಡಿಯಲ್ಲಿ ಬೀಡಿಸೇದುವ ಅಪ್ಪಣೆ ಇರುವದಿಲ್ಲ. ನಿಮಗೆ ಸೇದಬೇಕೇ ಆಗಿದ್ದರೆ ತುಸು ಜೀರೆ ಕಡೆಗೆ ಸರಿದು ಸೇದಬಹುದಿತ್ತು." ಎಂದು ಹೇಳಿದರು ವಿನೋಬಾ.

ಒಮ್ಮೆ ಗಾಡಿಯಲ್ಲಿ ಹೆಚ್ಚು ಸ್ಥಳವಿತ್ತೆಂದು ನೂಲು ತೆಗೆಯಲು ಪ್ರಾರಂಭಿಸಿದರು. ವಿನೋಬಾಜಿಯವರು ನೂಲಲಿಕ್ಕೆ ಪ್ರಾರಂಭಿಸಿದರೆಂದರೆ ಎಳೆಗಳು ಹರಿಯುವದಿಲ್ಲ. ಆದರೆ ಎಳೆಹರಿದರೆ ಅವರು ಅವುಗಳನ್ನು ಕೂಡಿಸುತ್ತಾರೆ. ಹಾಗೇ ಅದನ್ನು ಒಗೆಯುವದಿಲ್ಲ. ಅವರ ಹತ್ತರ ಬಿ. ಎ ಪಾಸಾದ ಓರ್ವ ತರುಣನು ಕುಳಿತಿದ್ದನು. ಆತನು ವಿನೋಬಾಜಿಯವರಿಗೆ—"ಹೀಗೆ ಹರಿದ ಎಳೆಯನ್ನು ಕೂಡಿಸುವದರಲ್ಲಿ ವ್ಯರ್ಥ ವೇಳೆಯು ಹೋಗುತ್ತದೆ. ಅದೇ ವೇಳೆಯಲ್ಲಿ ಹೆಚ್ಚು ನೂಲು ತೆಗೆಯಲಿಕ್ಕೆ ಆಗುವದಿಲ್ಲವೇ ?" ಎಂದು ಕೇಳಿದನು.

"ಆದರೆ ಈ ವೇಳೆಯನ್ನಾದರೂ ವ್ಯರ್ಥವಾಗಿ ಯಾಕೆ ಕಳೆಯಬೇಕು" ಎಂದು ವಿನೋಬಾಜಿಯವರ ಪ್ರಶ್ನೆ.

"ನಾವು ಯಾವದೊಂದು ಉದ್ಯೋಗದಲ್ಲಿಯೂ ಸ್ವಲ್ಪ ಸವಕಳಿ (ವೇಸ್ಟೇಜ)ಯೆಂದು ಗೃಹೀತ ಹಿಡಿಯುವೆವೋ ? ಇಲ್ಲವೋ ?"

"ನೂರಕ್ಕೆ ಎಷ್ಟು ಸವಕಳಿ ನೀವು ಹಿಡಿಯುವಿರಿ ?"

"ನೂರಕ್ಕೆ ಐದರಷ್ಟಾದರೂ ಹಿಡಿಯಬೇಕು"

"ನೂರಕ್ಕೆ ಐದರಷ್ಟು ವೇಸ್ಟೇಜ ಎಲ್ಲ ಕಡೆಯಲ್ಲಿಯೂ ಹಿಡಿದರೆ ಎಷ್ಟು ಭಯಂಕರವಾಗಬಹುದು? ಇದರ ವಿಚಾರ ಮಾಡಿರಿ. ನಿಮ್ಮ ಆಯುಷ್ಯದಲ್ಲಿಯ ಐದು ವರ್ಷಗಳನ್ನು ನೀವು ವ್ಯರ್ಥವಾಗಿ ಕಳೆಯಲು ಸಿದ್ಧರಿರುವಿರೋ ? ಹಿಂದುಸ್ಥಾನದಲ್ಲಿಯ ಸಾಗುವಳಿಯಾಗುವ ಭೂಮಿಯಲ್ಲಿ ನೂರಕ್ಕೆ ಐದರಷ್ಟು

ಜಿತ ಮಾಡಿದರೆ ಏನಾಗಬಹುದು? ಹಿಂದುಸ್ತಾನದಲ್ಲಿ ನಾಲ್ವತ್ತುಕೋಟಿ ಜನರಿರುವರು ಅವರಲ್ಲಿ ನೂರಕ್ಕೆ ೫ರಷ್ಟು ಅಂದರೆ ಎರಡುಕೋಟಿ ಜನರು ಸತ್ತರೂ ಪರವಾ ಇಲ್ಲವೇ? ಗೆಳೆಯಾ! ನಾವು ಯಾವದನ್ನೂ ವ್ಯರ್ಥ ಕಳೆಯಬಾರದೆಂದು ಪ್ರಯತ್ನಮಾಡಲಿಕ್ಕೆ ಬೇಕು. ಅನಿರ್ವಾಹಪಕ್ಷಕ್ಕೆ ಹೋದರೆ ಉಪಾಯವಿಲ್ಲ.''

ವಿನೋಬಾಜಿಯವರು ಆ ತರುಣನ ಮೇಲೆ ಪ್ರಶ್ನೆಗಳ ಸುರಿಮಳೆ ಮಾಡಿದರು. ಆತನು ದಿಙ್ಮೂಢನಾದನು!

**ವೈಕೋಮದ ಸತ್ಯಾಗ್ರಹ:—**

ವರ್ಧಾದ ಸತ್ಯಾಗ್ರಹಾಶ್ರಮದಲ್ಲಿ ತಪಶ್ಚರ್ಯವು ನಡೆದಿತ್ತು. ತ್ರಾವಣಕೋರದಲ್ಲಿ ವೈಕೋಮು ಎಂಬ ಗ್ರಾಮದಲ್ಲಿ ಹರಿಜನ ಸತ್ಯಾಗ್ರಹವು ಪ್ರಾರಂಭವಾಯಿತು. ಮಂದಿರದ ಎದುರು ಹಾಯುತ್ತಿರುವ ಬೀದಿಯ ಮೇಲೆ ತಿರುಗಾಡಲು ಸಹ ಹರಿಜನರಿಗೆ ಪ್ರತಿಬಂಧವಿತ್ತು. ವಿನೋಬಾಜಿಯವರು ಈ ಸತ್ಯಾಗ್ರಹದಲ್ಲಿ ಭಾಗವಹಿಸಲು ಹೊರಟರು. ಸತ್ಯಾಗ್ರಹ ಮುಗಿಸಿಕೊಂಡು ಅವರು ಮರಳಿಬಂದರು.

**''ಸೋಽಹಂ''ದ ಗರ್ಜನೆ ಮಾಡುವ ಸಮುದ್ರ:—**

ಅದೇ ಸಮಯದ ಒಂದು ಅನುಭವವನ್ನು ಅವರು ಹೇಳುತ್ತಾರೆ. ಮಾರ್ಗದಲ್ಲಿ ಮಿತ್ರನ ಮನೆಯಲ್ಲಿ ಇಳಿದುಕೊಂಡರು. ಅಲ್ಲಿ ಸಮುದ್ರವಿತ್ತು. ಸಂಜೆ ಅವರು ಸಮುದ್ರಕ್ಕೆ ತಿರುಗಾಡಲಿಕ್ಕೆ ಹೋದರು. ದೊಡ್ಡ ತೆರೆಗಳು ದಂಡೆಗೆ ಅಪ್ಪಳಿಸುತ್ತಲಿದ್ದವು. ಅವರು ವಿಚಾರವನ್ನು ಮಾಡಿದರು. ಈ ಸಮುದ್ರವು 'ಸೋಽಹಂ'ದ ಗರ್ಜನೆ ಮಾಡುವಂತೆಯೂ ತಾನೇ ಬ್ರಹ್ಮನಿರುವೆನೆಂದು ಅದು ಹೇಳುತ್ತಿರುವಂತೆಯೂ ಇವರಿಗೆ ಭಾಸವಾಯಿತು. 'ಮಾಮನುಸ್ಮರ–ಯುದ್ಧ್ಯಚ' ನನ್ನನ್ನು ಸ್ಮರಿಸು ಮತ್ತು ಹೋರಾಡುತ್ತ ಹೋಗು! ಎಂದು ಅದು ಹೇಳುತ್ತಿರುವಂತೆ ಕಂಡಿತು. ವಿನೋಬಾಜಿಯವರಿಗೆ ಸಮಾಧಿ ಹತ್ತಿದಂತಾಯ್ತು. ಅವರು ಎಲ್ಲವನ್ನು ಮರೆತರು. ಅವರ ಮಿತ್ರನು ಕೈಯಲ್ಲಿ ಹಾಲು ಹಿಡಿದುಕೊಂಡು ಅವರನ್ನು ಹುಡುಕುತ್ತ ಅಲ್ಲಿಗೆ ಬಂದು

"ಇವನ್ನು ತೆಗೆದುಕೊಳ್ಳಿ, ಉಪಹಾರ ಮಾಡಿರಿ" ಎಂದು ಹೇಳಿದಾಗಲೇ ಅವರಿಗೆ ಎಚ್ಚರ. "ನನಗೆ ಕೂಡಲೇ ಆಕಾಶದಿಂದ ಕೆಳಗೆ ಬಿದ್ದಂತಾಯಿತು. ಉಚ್ಚ ವಿಚಾರದಿಂದ ಕೂಡಲೆ ತಿನ್ನುಣ್ಣುವ ಕೆಳಗಿನ ವಿಚಾರಕ್ಕೆ ಬಂದೆನು." ಎಂದರು.

## ವಿನೋಬಾಜಿ ಪ್ರಖರತೆ ಮತ್ತು ತೀವ್ರತೆ ತರಬಹುದು:—

ಅದು ೧೯೧೫ರ ಸಮಯ ಇರಬೇಕು. ಸಾಬರಮತಿ ಆಶ್ರಮದಲ್ಲಿ ಆಶ್ರಮದ ವಿರುದ್ಧ ಒಂದು ಸಂಗತಿ ಘಟಿಸಿತ್ತು. ಮಹಾತ್ಮರ ಆರೋಗ್ಯವು ಸರಿಯಾಗಿರಲಿಲ್ಲ. ಅವರು ಏಳು ದಿವಸ ಉಪವಾಸವನ್ನು ಪ್ರಾರಂಭಿಸಿದ್ದರು. ಆಗ ಅವರು ವಿನೋಬಾಜಿಯವರನ್ನು ಸಾಬರಮತಿಗೆ ಕರೆಯಿಸಿಕೊಂಡಿದ್ದರು. ಆ ಸಮಯಕ್ಕೆ ವಿನೋಬಾಜಿಯವರ ತಮ್ಮನು ಬಾಳಕೋಬಾ ಅಲ್ಲಿಯೇ ಇದ್ದರು. ಆತನಿಗೆ ಅವನ ಕಕ್ಕನ ಮಗನು ಅಂದನು - "ಮಹಾತ್ಮರು ವಿನೋಬಾಜಿಯವರನ್ನು ಯಾಕೆ ಕರೆದಿರುವರು?" ಬಾಳಕೋಬಾ ಇವರು ಪ್ರತ್ಯುತ್ತರವಾಗಿ— "ಆಶ್ರಮದಲ್ಲಿ ತುಸು ಕಠೋರತೆ ಮತ್ತು ಪ್ರಖರತೆಯು ಬರಬೇಕೆಂದೂ ಇವುಗಳನ್ನು ವಿನೋಬಾಜಿಯವರು ತರಬಲ್ಲರೆಂದೂ ಗಾಂಧೀಜೀಯವರಿಗೆ ಆತ್ಮವಿಶ್ವಾಸವಿದೆ. ಆದುದರಿಂದ ಅವರನ್ನು ಕರೆಸಿರುವರು" ಎಂದು ಅಂದರು.

## ಕಣ್ಣೀರು ಒಂದೇ ಸವನೆ ಸುರಿಯುತ್ತಲಿತ್ತು:—

ವರ್ಧಾ ಆಶ್ರಮದಲ್ಲಿ ಉತ್ಸವ ಸಮಾರಂಭಗಳು ಎಂದಿಗೂ ಆಗುತ್ತಿರಲಿಲ್ಲ. ವಿನೋಬಾಜಿಯವರ ಕಡೆಗೆ ಬಂದರು. "ನಾಳೆ ರಾಮನವಮಿ ಇರುತ್ತದೆ ಅದನ್ನು ನಾವು ಆಚರಿಸೋಣ" ಎಂದರು.

"ಅಡ್ಡಿಯಿಲ್ಲ! ಹೇಗೆ ಪಾಲಿಸುವವರು?

"ನಾವು ಹದಿನೈದು ನಿಮಿಷ ನೂಲು ತೆಗೆಯಬಹುದು?"

"ಒಳ್ಳೇದು"

ರಾಮನವಮಿ ಬಂದಿತು ಮಧ್ಯಾನ್ನ ಎಲ್ಲರೂ ನೂಲು ತೆಗೆಯಲು ಕುಳಿತರು. ಅಲ್ಲಿ ಗಂಭೀರವಾದ ಶಾಂತತೆ ಇತ್ತು. ವಿನೋಬಾಜಿಯವರೂ ನೂಲು

ತೆಗೆಯುತ್ತಲಿದ್ದರು. ಆದರೆ ಕಣ್ಣಲ್ಲಿ ನೀರು ಒಂದೇ ಸವನೆ ಸುರಿಯುತ್ತಲಿತ್ತು. ಕೈ ನೂಲು ತೆಗೆಯುತ್ತಲಿತ್ತು. ಕಣ್ಣುಗಳಿಂದ ಅಶ್ರುಗಳು ಹೊರಸೂಸುತ್ತಲಿದ್ದವು. ಪ್ರಭು ರಾಮಚಂದ್ರನ ಅನಂತ ಸ್ಮರಣೆಗಳು ಅವರಿಗೆ ಆಗುತ್ತಲಿದ್ದವೇ? ಸೀತಾದೇವಿ, ಲಕ್ಷ್ಮಣ, ಭರತ, ಮಾರುತಿ, ಜಟಾಯು, ಶಬರಿ, ಗುಹ, ಅಹಲ್ಯಾ, ವಿಭೀಷಣ ಮತ್ತು ಸೇತುಬಂಧನದ ಸಮಯಕ್ಕೆ ಉಸುಬಿನ ಕಣಗಳಿಂದ ನೆರವಾಗುತ್ತಲಿದ್ದ ಇಣಚಿ ಈ ಎಲ್ಲ ವಿಷಯಗಳ ಸ್ಮರಣೆಯು ಆಗುತ್ತಲಿತ್ತೇ? ಅವರ ಕಣ್ಮುಂದೆ ವಾಲ್ಮೀಕಿ ಬಂದರೆ? ತುಳಸೀದಾಸ ಬಂದರೆ? ಕಬೀರ ಬಂದರೆ? ರಾಮದಾಸ ಬಂದರೆ? ರಾಮನಾಮದ ಉಚ್ಚಾರದಿಂದ ಇಲ್ಲಿಯ ವರೆಗೆ ಕೋಟ್ಯಾವಧಿ ಜೀವಿಗಳ ಜೀವನದಲ್ಲಿಯ ಹಾಲಾಹಾಲವು ಶಾಂತವಾಗಿದೆ. ಈ ನಾಮದಿಂದ ಬಂಡೆಗಲ್ಲು ಸಹ ಉದ್ಧಾರವಾಯಿತು. ವಿನೋಬಾಜಿಯವರ ಅಶ್ರುಗಳ ಮುಖಾಂತರ ಯಾವ ರಾಮಾಯಣವು ಹರಿಯುತ್ತಲಿತ್ತು? ಯಾವ ಭಾವನೆಯು ಅವರ ಹೃದಯದಲ್ಲಿರಬೇಕು? ಸಿಂಧೂ ನದಿ ಪ್ರವಾಹ ಪ್ರಮಾಣವಾದ, ಸಂತ ಜನರ ಮನಸ್ಸಿನಲ್ಲಿ ಯಾರು ಹೊಕ್ಕು ನೋಡಬಲ್ಲರು? ಅದೇನೇ ಇರಲಿ. ಆದರೆ ಅದು ಉದಾತ್ತ ಮತ್ತು ಪವಿತ್ರ ದೃಶ್ಯವಿತ್ತು. ಈ ರೀತಿ ರಾಮಜನ್ಮವನ್ನು ಬಯಸುವವರೆಷ್ಟುಜನ?

**ಸಿಂದೀ ಗಿಡ ಕಡಿಯು ಹೊರಟದ್ದು :—**

ಎಲ್ಲ ಸತ್ಯಾಗ್ರಹದಲ್ಲಿ ವಿನೋಬಾಜಿಯವರು ಇದ್ದೇ ಇರುವರು. ೧೯೩೦ನೇ ವರುಷದ ಸತ್ಯಾಗ್ರಹನಂತೂ ಅತಿ ಪ್ರಚಂಡವಾದದ್ದು. ಆಗ್ಗೆ ವಿನೋಬಾಜಿಯವರು ಹದನಾದ ಕೊಡಲಿಯನ್ನು ತೆಗೆದುಕೊಂಡು ಶಿಂದೀಗಿಡ ಕಡಿಯಲಿಕ್ಕೆ ಹೋಗುತ್ತಿದ್ದರು ಅವರ ಸ್ಫೂರ್ತಿಯು ಅಲೌಕಿಕವಾದದ್ದಿತ್ತು.

**ಅಹಿಂಸಾಮಯ ಯುದ್ಧದಲ್ಲಿ ಎಲ್ಲರಿಗೂ ಆಸ್ಪದ:—**

೧೯೩೧ ರಲ್ಲಿ ಸತ್ಯಾಗ್ರಹವು ನಿಲ್ಲಿಸಲ್ಪಟ್ಟಿತು. ಖಾನದೇಶದಲ್ಲಿ ಎಲ್ಲ ಸತ್ಯಾಗ್ರಹಿಗಳ ಸಮ್ಮೇಲನವು ಸೇರಿತ್ತು. ವಿನೊಬಾಜಿಯವರು ಅದರ ಅಧ್ಯಕ್ಷರಾಗಿದ್ದರು. ಅಲ್ಲಿ ಅವರ ಅತಿ ರಮ್ಯವಾದ ಭಾಷಣವು ಆಯಿತು—

“ಮಹಾತ್ಮರ ಸತ್ಯಾಗ್ರಹವು ಎಲ್ಲರನ್ನೂ ಕೂಗುತ್ತಲಿದೆ. ಸ್ತ್ರೀಯರು, ಪುರುಷರು, ಚಿಕ್ಕವರು, ಮುದುಕರು, ಎಲ್ಲ ಜನರಿಗೂ ಇದರಲ್ಲಿ ಆಸ್ಪದವಿದೆ. ನಿಜವಾಗಿ ಎಲ್ಲರೂ ಭಾಗ ತೆಗೆದುಕೊಂಡಿದ್ದರು. **ರಾಮನಾಮದಂತೆ ಸತ್ಯಾಗ್ರಹವನ್ನು ಎಲ್ಲರೂ ಸ್ವೀಕರಿಸುವರು.**

ಸೈನಿಕರ ಯುದ್ಧದಲ್ಲಿ ಕೇವಲ ನಿಶ್ಚಿತ ಜನರಿಗೇ ಭಾಗ ತೆಗೆದುಕೊಳ್ಳಲಿಕ್ಕೆ ಬರುತ್ತದೆ. ಆದರೆ ದೇಶದೊಳಗಿನ ಎಲ್ಲ ಜನರೂ ಹೋರಾಡಿ ದೊರಕಿಸಿದ ಸ್ವರಾಜ್ಯವು ಬಹಳ ಬೆಲೆಯುಳ್ಳದ್ದಿರುತ್ತದೆ. ಎಲ್ಲರೂ ಕೂಡಿ ದೊರಕಿಸಿದ್ದನ್ನು ಎಲ್ಲರೂ ಕೂಡಿ ಉಳಿಸಿಕೊಳ್ಳಬಲ್ಲರು. ಈ ಸ್ವರಾಜ್ಯ ದೊರಕಿಸುವದರಲ್ಲಿ ನಾನೂ ಭಾಗ ತೆಗೆದುಕೊಂಡಿರುವನೆಂದು ಎಲ್ಲರಿಗೂ ಸಮಾಧಾನವೆನಿಸುತ್ತದೆ. ಸತ್ಯಾಗ್ರಹದ ಅಹಿಂಸಾಮಯ ಚಳವಳಿಯು ಎಲ್ಲ ರಾಷ್ಟ್ರಗಳಿಗೂ ಸ್ಪರ್ಶಮಾಡುತ್ತಲಿದೆ. ಮಹಾತ್ಮರ ಮಾರ್ಗವು ಎಲ್ಲ ಆತ್ಮಗಳನ್ನು ಜಾಗೃತಮಾಡುವದಿರುತ್ತದೆ. ಎಲ್ಲರಿಗೂ ಪ್ರೇರಣೆ ಕೊಡತಕ್ಕ ಮಾರ್ಗವಿದೆ.

**ಈ ಧ್ವಜವು ಕೆಳಗಿಳಿಯಕೂಡದು:—**

೧೯೩೨ ರಲ್ಲಿ ಪುನಃ ದೇಶದಲ್ಲಿ ಸತ್ಯಾಗ್ರಹವು ಪ್ರಾರಂಭವಾಯಿತು. ಆ ಸಮಯಕ್ಕೆ ಧುಳೆಯ ಪೇಟೆಯಲ್ಲಿ ಅವರ ಭಾಷಣವಾಯಿತು “ಸ್ವರಾಜ್ಯದ ಸಲುವಾಗಿ ಪ್ರಾಣಕೊಡಬೇಕಾಗುತ್ತದೆ. ನಾವು ಪರರ ಪ್ರಾಣವನ್ನು ತೆಗೆದುಕೊಳ್ಳಬೇಕಾಗಿಲ್ಲ. ಆದರೆ ನಾವೇ ಕೊಡಬೇಕಾಗುತ್ತದೆ. ಲಾಠಿ ಹೊಡೆತದ ಮುಂದೆ ತಲೆಒಡ್ಡಬೇಕಾಗುತ್ತದೆ. ಸ್ವಾತಂತ್ರ್ಯದೇವತೆಯ ಎದುರು ಟೆಂಗಿನ ಕಾಯಿಯನ್ನು ಒಡೆಯಬೇಕಾಗುತ್ತದೆ. ಇನ್ನು ಮುಂದೆ ನಾವು ಗುಲಾಮಗಿರಿಯಲ್ಲಿ ಇರುವ ಇಚ್ಛೆ ಇಲ್ಲವಲ್ಲವೇ ? ನಾವು ಸ್ವತಂತ್ರ ನಾಗರಿಕರಾಗಬೇಕೆಂದು ನಿರ್ಧರಿಸಿದ್ದೇವೆ. ಇಲ್ಲಿ ನಿಲ್ಲಿಸಿದ ಧ್ವಜವನ್ನು ನಾವು ಕೆಳಗಿಳಿಸಕೂಡದು. ರಾಷ್ಟ್ರವು ತ್ಯಾಗದ ಅಪೇಕ್ಷೆಯನ್ನು ಮಾಡುತ್ತದೆ. ನೀವು ಅದನ್ನು ಪೂರ್ಣ ಮಾಡಿರಿ.

**ಬಡವರು ನಿಮ್ಮನ್ನು ಸವತೆಕಾಯಿಯಂತೆ ತಿನ್ನಬಹುದು:—**

ಅದೇ ದಿವಸ ಧುಳೆಯಲ್ಲಿ ವ್ಯಾಪಾರೀ ಜನರನ್ನುದ್ದೇಶಿಸಿ ಅವರ ಭಾಷಣವಾಯಿತು. ಅದು ಅಪೂರ್ವವಾದುದಿತ್ತು.

"ವ್ಯಾಪಾರೀ ಬಂಧುಗಳೇ, ದೇಶದಲ್ಲಿ ಹೊಸಗಾಳಿಯು ಬೀಸುತ್ತಲಿದೆ. ಜಗತ್ತಿನಲ್ಲಿ ನಡೆಯುತ್ತಲಿರುವ ಸ್ಥಿತ್ಯಂತರಗಳನ್ನು ನೋಡಿರಿ. ರಶಿಯದಲ್ಲಿ ಏನಾಗಿರುವದು ನೋಡಿರಿ. ನಮ್ಮ ದೇಶದಲ್ಲಿ ರಕ್ತಪಾತದ ಪ್ರಸಂಗ ಬಾರದಿರಲಿ. ಬಡವ ಮತ್ತು ಶ್ರೀಮಂತರ ನಡುವೆ ಬಡಿದಾಟವಾಗದಿರಲಿ. ಆದರೆ ಹೀಗಾಗಬಾರದೆಂದು ನಿಮ್ಮ ಇಚ್ಛೆ ಇದ್ದರೆ ಶ್ರೀಮಂತರಾದ ನೀವು ತ್ಯಾಗ ಮಾಡಲಿಕ್ಕೇ ಬೇಕು. ಇಂದು ಮಹಾತ್ಮರು ಮಧ್ಯಸ್ತಿಕೆಯನ್ನು ವಹಿಸಲು ಸಿದ್ಧರಿರುವರು. ಅವರು ವಿರೋಧೀ ಭೂಮಿಕೆಯನ್ನು ತಡೆದು ಹಿಡಿದಿರುವರು. ಆದರೆ ನೀವು ಅವರ ಮಾತನ್ನು ಕೇಳದಿದ್ದರೆ? ಕ್ರಾಂತಿಯ ಪ್ರಚಂಡ ತೆರೆಗಳು ಒಂದರಮೇಲೊಂದು ಬರುತ್ತವೆ, ಬಡವರ ಅಂತ್ಯವನ್ನು ನೋಡಬೇಡಿರಿ. ಹಿಂದೀ ಸಂಸ್ಕೃತಿಯು ನಮಗೆ ಸಮಾಧಾನದ ಪಾಠವನ್ನು ಹಾಕಿಕೊಟ್ಟಿದೆ. ಆದರೆ ಇಂಥ ಸಮಾಧಾನದ ಜನರನ್ನು ಸಹ ನೀವು ಯೋಗ್ಯರೀತಿಯಿಂದ ನೋಡದಿದ್ದರೆ ಈ ಜನರು ರುದ್ರರೂಪವನ್ನು ಧಾರಣ ಮಾಡಬಹುದು. ಮತ್ತು ಅವರು ನಿಮ್ಮನ್ನು ಸವತೆಕಾಯಿಯಂತೆ ಕಡಕಡ ತಿಂದುಬಿಡಬಹುದು, ಎಂಬುದನ್ನು ನಾನು ನಿಮಗೆ ಅತಿ ಸ್ಪಷ್ಟವಾಗಿ ಹೇಳುತ್ತೇನೆ. ಹಾಗಾಗಬಾರದೆಂದು ನಿಮ್ಮ ಇಚ್ಛೆ ಇದ್ದರೆ ಉಳಿದ ದೇಶಗಳಲ್ಲಿಯಕಿಂತ ಬೇರೆ ಮಾರ್ಗದಿಂದ ಈ ಪ್ರಶ್ನೆಯನ್ನು ಬಿಡಿಸಬೇಕೆಂದಿದ್ದರೆ ಮಹಾತ್ಮರ ಉಪದೇಶವನ್ನು ಕೇಳಿರಿ.

**ಅವಶ್ಯವಿದ್ದ ಹಿಟ್ಟನ್ನು ಪೂರೈಸುವೆವು:—**

ವಿನೋಬಾಜಿಯವರು ಧುಳೆಯಿಂದ ಜಳಗಾವಕ್ಕೆ ಬಂದರು. ಅಲ್ಲಿ ಅವರು ಕೈದು ಮಾಡಲ್ಪಟ್ಟರು. ಅವರಿಗೆ ಶಿಕ್ಷೆಯಾಯಿತು. ಧುಳೆ ಜೇಲಿಗೆ ಕರೆದೊಯ್ಯಲ್ಪಟ್ಟರು. ಧುಳೆಯ ಜೇಲು ಸಂಪೂರ್ಣ ರಾಷ್ಟ್ರೀಯ ಆಶ್ರಮದಂತೆಯೇ ಆಯಿತು. ಹೊಸದಾಗಿ ಬಂದ ಸತ್ಯಾಗ್ರಹಿಗಳಿಗೆ ಜೇಲರ ಚಕ್ಕೀ ಕೊಡುತ್ತಲಿದ್ದನು. ಇವನು ಮುದುಕ ಅಥವಾ ಇವನು ಅಶಕ್ತ—ಎಂಬುದರ ಕಡೆಗೆ ವಿಶೇಷ ಲಕ್ಷ್ಯವೀಯುತ್ತಿರಲಿಲ್ಲ. ಕೊನೆಗೆ ವಿನೋಬಾಜಿಯವರು ಜೇಲರಿಗೆ ಹೀಗೆಂದರು—

“ನಾವು ಬೀಸುವದಕ್ಕಾಗಿ ನಮ್ಮ ಸ್ವಯಂಸೇವಕರನ್ನು ಕೊಡುತ್ತೇವೆ. ಮತ್ತು ಅವರು ಸಂಪೂರ್ಣ ಜೇಲಿಗೆ ಸಾಕಾಗುವಷ್ಟು ಹಿಟ್ಟನ್ನು ಕೊಡುವರು.” ಮತ್ತು ಅದರಂತೆ ನಿರ್ಧರಿಸಲಾಯಿತು. ಎಷ್ಟೋ ಜನರು ಆನಂದದಿಂದ ಸ್ವಯಂಸೇವಕರಾದರು. ಮತ್ತು ಹಾಡುತ್ತ ಬೀಸುತ್ತಲಿದ್ದರು. ವಿನೋಬಾಜಿಯುವರು ದಿನಾಲು ಅಲ್ಲಿಗೆ ಬರುವರು ಮತ್ತು ಧೈರ್ಯ ಕೊಡುವರು. ಸವಿಮಾತುಗಳನ್ನು ಆಡುವರು.

**ವಿನೋಬಾಜಿಯುವರು ಸ್ವತಃ ಬೀಸಹತ್ತಿದರು:—**

“ವಿನೋಬಾಜಿಯುವರಿಗೆ ‘ನೀವು ಬೀಸಿರಿ’ ಎಂದು ಹೇಳುವದರಲ್ಲಿ ಏನು ಹೋಗುತ್ತದೆ? ಸ್ವತಃ ಓದುತ್ತ ಮತ್ತು ನೂಲುತ್ತ ಕೂಡ್ರುವರು.” ಎಂದು ಯಾರೋ ಒಬ್ಬರು ಅಂದರು. ಅದು ವಿನೋಬಾಜಿಯುವರ ಕಿವಿಯುವರೆಗೆ ತಲುಪಿತು. ಮತ್ತು ಮರುದಿವಸದಿಂದಲೆ ಬೀಸಲಿಕ್ಕೆ ಬಂದರು. ಸಾವಕಾಶವಾಗಿ ೨೧ ಪೌಂಡಿನ ವರೆಗೆ ಬೀಸಿಕೊಡಹತ್ತಿದರು. ಮೊದಲು ಅವರ ಕೈಗೆ ಗುಳ್ಳೆಗಳೆದ್ದವು. ಆದರೆ ಮುಂದೆ ರೂಢಿ ಬಿದ್ದಿತು.

**ಪ್ರಶ್ನೆ ನಿರ್ಣಯವಾಗುವವರೆಗೆ ಉಪವಾಸ ಹೇಗೆ ಬಿಡಲಿ? :—**

ಒಮ್ಮೆ ಚಕ್ಕಿ ಬರಾಕದಲ್ಲಿ ಅಧಿಕಾರಿಗಳ ಸಂಗಡ ಬಡಿದಾಟವಾಯಿತು. ಅಲಾರ್ಮ ಗಂಟೆಯು ಗಣ ಗಣ ಶಬ್ದ ಮಾಡಹತ್ತಿತು ಹತ್ಯಾರಿ ಪೋಲೀಸರು ಓಡುತ್ತ ಬಂದರು ಕೊನೆಗೆ ಶಾಂತವಾಯಿತು. ಆದರೆ ನಾವೆಲ್ಲ ಉಪವಾಸ ಪ್ರಾರಂಭಿಸಿದೆವು. ಅತ್ತ ವಿನೋಬಾಜಿಯುವರೂ ಅನ್ನ ಸ್ವೀಕರಿಸಿದ್ದಿಲ್ಲ ಆದರೆ ಆ ಪ್ರಶ್ನೆ ಬಿಡಬಹುದೆಂದು ನಮಗೆ ತೋರಹತ್ತಿತು. ಮತ್ತು ನಾವೆಲ್ಲ ಉಪವಾಸ ಬಿಟ್ಟೆವು, ಆದರೆ ವಿನೋಬಾಜಿಯುವರು ಅನ್ನ ತೆಗೆದುಕೊಳ್ಳಲಿಲ್ಲ. ಅವರು ಹೀಗೆ ಹೇಳಿದರು— “ನಾನು ಎಂದೂ ಉಪವಾಸ ಮಾಡುವದಿಲ್ಲ, ಏಕಾದಶಿ ಮಾಡುವದಿಲ್ಲ, ಶಿವರಾತ್ರಿ ಇಲ್ಲ, ದಿನಾಲು ನಾನು ಎಣಿಸಿ ಉಣ್ಣುತ್ತೇನೆ. ಕಳೆದ ಹನ್ನೆರಡು ವರುಷಗಳಲ್ಲಿ ನಾನು ಉಪವಾಸ ಮಾಡಿಲ್ಲ. ಇಂದು ಮಾಡಿದ್ದೇನೆ. ಈ ಪ್ರಶ್ನೆಯ ನಿರ್ಣಯ ಸರಿಯಾಗಿ ಆಗದೇ ಊಟವನ್ನು ಹೇಗೆ ಮಾಡಲಿ?” ಕೊನೆಗೆ ಪ್ರಶ್ನೆಯ ನಿರ್ಣಯವಾದ ನಂತರವೇ ಅವರು ಅನ್ನ ಸ್ವೀಕರಿಸಿದರು.

## ಗೀತೆಯ ಮೇಲಿನ ಪ್ರವಚನ :—

ಧುಳೆ ಜೇಲಿನಲ್ಲಿಯ ಎಲ್ಲಕ್ಕೂ ಮಹತ್ವದ ವಿಷಯವೆಂದರೆ ವಿನೋಬಾಜಿಯವರ ಗೀತೆಯ ಮೇಲಿನ ಪ್ರವಚನವು. ಪ್ರತಿ ರವಿವಾರ ಒಂದು ಅಧ್ಯಾಯದ ಮೇಲೆ ಪ್ರವಚನ. ಹೀಗೆ ಹದಿನೆಂಟು ರವಿವಾರಗಳಲ್ಲಿ ಅದನ್ನು ಮುಗಿಸಿದರು. ಅದೊಂದು ಅಪೂರ್ವ ಹಬ್ಬವಾಯಿತು. ಅಮೃತದ ಧಾರೆಯು ಹರಿದಂತೆ ಆಗುತ್ತಲಿತ್ತು. ಗೀತೆಯೆಂದರೆ ವಿನೋಬಾಜಿಯವರ ಪ್ರಾಣ. "ತಾಯಿಯ ಹಾಲಿನಿಂದ ನಾನು ರಕ್ಷಿಸಲ್ಪಟ್ಟಿರುವೆನು. ಆದಕ್ಕೂ ಹೆಚ್ಚಾಗಿ ಗೀತೆಯ ಹಾಲಿನಿಂದ ಪೋಷಿಸಲ್ಪಟ್ಟಿದ್ದೇನೆ. ನಾನು ಯಾವಾಗಲೂ ಗೀತಾ ಸಮುದ್ರದಲ್ಲಿಯೇ ಮುಳುಗಿರುವೆನು. ಒಮ್ಮೊಮ್ಮೆ ದಂಡೆಯಮೇಲೆ ಆಡುವೆನು. ಒಮ್ಮೊಮ್ಮೆ ಅದರ ಆಳವಾದ ನೀರಲ್ಲಿ ಮುಳುಗುವೆನು. ಗೀತೆಯ ಮೇಲೆ ಮಾತಾಡಬೇಕಾದರೆ ಪೂರ್ವ ಸಿದ್ಧತೆ ಮಾಡಬೇಕಾಗುವದಿಲ್ಲ. ಅದು ಹೃದಯದಲ್ಲಿ ತುಂಬಿರುತ್ತದೆ." ಎಂದು ಅವರು ಅನ್ನುತ್ತಾರೆ.

## ಗೀತಾಯಿಯ ಜನ್ಮ :—

ವಿನೋಬಾಜಿಯವರ ತಾಯಿಯು ಗೀತಾ ಓದಬೇಕೆಂದು ತಳಮಳಿಸುತ್ತಿದ್ದರೆಂಬುದನ್ನು ಈ ಮೊದಲು ಹೇಳಲಾಗಿದೆ ಅವರ ಮನದಲ್ಲಿ ಯಾವಾಗಲೂ ಈ ಮಾತು ಇರುತ್ತಲಿತ್ತು. ಮಕ್ಕಳಿಗೆ ಸ್ತ್ರೀಯರಿಗೆ ಹಳ್ಳಿಗರಿಗೆ ತಿಳಿಯುವಂತೆ ಗೀತೆಯ ಭಾಷಾಂತರ ಮಾಡುವ ಇಚ್ಛೆಯು ಅವರಿಗೆ ಇತ್ತು. ಹನ್ನೆರಡು ವರುಷ ಈ ವಿಚಾರವು ತಿರುಗುತ್ತಲಿತ್ತು. ಒಮ್ಮೆ ಅವರು ಪ್ರವಚನ ಹೇಳುವಾಗ್ಗೆ ಹೀಗೆಂದರು—"ಗೀತೆಯ ಗಾಂಭೀರ್ಯವು ಕಡಿಮೆಯಾಗದೇ ಎಷ್ಟು ಸರಳ ಶೈಲಿಯಲ್ಲಿ ಅದನ್ನು ಬರೆಯಲು ಸಾಧ್ಯವೋ ಅಷ್ಟು ಸರಳವಾದ ಭಾಷೆಯಲ್ಲಿ ಬರೆಯುವ ಇಚ್ಛೆ ಇತ್ತು. ಪ್ರತಿದಿವಸ ಪ್ರಾರ್ಥನೆಯಾದ ಕೂಡಲೇ ನಾನು ಭಾಷಾಂತರವನ್ನು ಪ್ರಾರಂಭಿಸುತ್ತಿದ್ದೆನು. ಭಾಷಾಂತರ ಮಾಡಿದ್ದನ್ನು ಆಶ್ರಮದಲ್ಲಿಯ ಚಿಕ್ಕ ಹುಡಿಗೆಯರಿಗೆ ಓದಲಿಕ್ಕೆ ಕೊಡುತ್ತಲಿದ್ದೆ. ಅವರಿಗೆ ಚನ್ನಾಗಿ ತಿಳಿಯುತ್ತಲಿದ್ದರೆ ಮಾತ್ರ ಭಾಷಾಂತರವನ್ನು ಒಪ್ಪುತ್ತಿದ್ದೆ. ಒಮ್ಮೆ "ಯಜ್ಞ ಶಿಷ್ಟಾಮೃತ ಭುಜೊ" ಇದರ ಭಾಷಾಂತರವನ್ನು 'ಯಜ್ಞ ಶಿಷ್ಟದ ಖಾತೆ' ಎಂದು ಮಾಡಿದ್ದೆನು.

ಆದರೆ ಹುಡಿಗೆಯರು 'ಯಜ್ಞ ಶಿಷ್ಟ-ಯಜ್ಞ ವಶಿಷ್ಟ' ಹೀಗೆ ಉಚ್ಚರಿಸ ಹತ್ತಿದರು ಕೂಡಲೇ ಅವರಲ್ಲಿ ನಾನು ಬದಲು ಮಾಡಿದೆನು—"ಯಜ್ಞದಲ್ಲಿ ಉಳಿದುದನ್ನು ತಿನ್ನುವದು' ಈ ಶಬ್ದ ಹಾಕಿದೆನು.

ಗೀತಾಯಿಯು ರಚನೆಯ ಪೂರ್ವದಲ್ಲಿ ಅವರು ಆದರ ವ್ಯಾಕರಣವನ್ನು ನಿರ್ಧರಿಸಿದ್ದರು. ವ್ಯಾಕರಣದ ಚಿಕ್ಕ ಪುಟ್ಟ ವಿಷಯುಗಳನ್ನೆಲ್ಲ ಅವರು ಆಳವಾಗಿ ಅಭ್ಯಾಸಮಾಡಿದ್ದರು. ಒಮ್ಮೆ ಕಾರವಾರ ಕಡೆಯ ಓರ್ವ ಗೃಹಸ್ಥನು ಅದರಲ್ಲಿಯ ತಪ್ಪು ತೋರಿಸಿದನು. ಕೂಡಲೇ ವಿನೋಬಾಜಿ ಯುವರು ಮುಂದಿನ ಆವೃತ್ತಿಯಲ್ಲಿ ಅದನ್ನು ತಿದ್ದಿದರು. ವ್ಯಾಕರಣ ದೃಷ್ಟಿ ಯಿಂದ ಸಹ ಈ ಗೀತಾಯಿಯು ಅತಿ ಶುದ್ಧ ಹಾಗೂ ನಿರ್ದೋಷಿಯಾದದ್ದು ಇರುತ್ತದೆ.

**ಮಾಂಸ ತಿನ್ನಬೇಡಿರೆಂಬ ಪ್ರಚಾರ :—**

ಜೇಲಿನಲ್ಲಿಯ ಕೈದಿಗಳಿಗೆ ಉಪದೇಶ ಮಾಡುವದಕ್ಕಾಗಿ ಪ್ರತಿ ರವಿವಾರ ಹೊರಗಿನಿಂದ ಆಯಾ ಧರ್ಮದವರು ಬರುತ್ತಲಿದ್ದರು. ಧುಳೇ ಜೇಲಿನಲ್ಲಿ ವಿನೋಬಾಜಿಯುವರು ಕೈದಿಗಳಿಗೆ ಉಪದೇಶಪರ ಮಾತುಗಳನ್ನು ಹೇಳುತ್ತ ಲಿದ್ದರು. ಜೇಲಿನಲ್ಲಿ ಮಾಂಸ ತಿನ್ನುವವರಿಗೆ ರವಿವಾರ ಮಾಂಸ ದೊರೆ ಯುತ್ತದೆ. ವಿನೋಬಾಜಿಯುವರು ಹೀಗೆ ಹೇಳುತ್ತಲಿದ್ದರು—"ಉತ್ಕೃಷ್ಟ ಬೆಲ್ಲ ದೊರೆಯುತ್ತದೆ, ಅದನ್ನು ಸ್ವೀಕರಿಸಿರಿ. ಮಾಂಸ ಯಾಕೆ ತೆಗೆದುಕೊಳ್ಳು ವಿರಿ? ಮಾಂಸ ತಿನ್ನುವದು ಮನುಷ್ಯರಿಗೆ ಶೋಭಿಸುವದಿಲ್ಲ. ಮತ್ತು ಇಲ್ಲಿ ಮಾಂಸ ತಿನ್ನದವರಿಗೆ ಬೆಲ್ಲ ರೊಟ್ಟಿಯು ದೊರೆತೇ ದೊರೆಯುತ್ತದೆ" ವಿನೋಬಾಜಿಯುವರ ಉಪದೇಶದಿಂದ ಎಷ್ಟೋ ಕೈದಿಗಳು ಮಾಂಸ ತೆಗೆದು ಕೊಳ್ಳುವದನ್ನು ಬಿಟ್ಟರು.

**ನಾನು ಭೂಮಿಗಳನ್ನು ಹಂಚಿಕೊಡುವೆನು:—**

ವಿನೋಬಾಜಿಯುವರು ಒಂದು ಸಲ ಮಾತನಾಡುತ್ತ ಹೀಗೆಂದರು— "ಹಳ್ಳಿಗಳಲ್ಲಿಯ ಭೂಮಿಗಳು ಜಮೀನದಾರರ ಮತ್ತು ಸಾಹುಕಾರರ ಕೈ ಸೇರಿವೆ. ನಾನು ಒಂದು ಮರ್ಯಾದೆಯನ್ನು ನಿಶ್ಚಯಿಸಿರುವೆನು. ಪ್ರತ್ಯೇಕ

ಮನುಷ್ಯನ ಹತ್ತಿರ ಎಷ್ಟು ಭೂಮಿ ಇರಬೇಕೆಂಬುದನ್ನು ನಾವು ಒಮ್ಮೆ ನಿರ್ಧರಿಸುವಾ. ೨೦ ಅಥವಾ ೨೫ ಎಕರೆ ಎಂದು ಗೊತ್ತುಮಾಡುವಾ. ಇದಕ್ಕಿಂತ ಹೆಚ್ಚಿಗೆ ಇದ್ದ! ಭೂಮಿಯನ್ನು ತೆಗೆದುಕೊಂಡುಬಿಡಬೇಕು. ಮತ್ತು ಭೂಮಿ ಕಡಿಮೆ ಇದ್ದವರಲ್ಲಿ ಅಥವಾ ಏನೂ ಭೂಮಿ ಇಲ್ಲದವರಲ್ಲಿ ಇದನ್ನು ಹಂಚಿ ಬಿಡಬೇಕು.''

## ಮೊದಲು ನೀವು ಹೊಟ್ಟೆತುಂಬ ಊಟಮಾಡಿರಿ:—

ವಿನೋಬಾಜಿಯವರು ಒಮ್ಮೆ ಒಂದು ಹಳ್ಳಿಯಲ್ಲಿ ಭಾಷಣ ಮಾಡುತ್ತ ಹೀಗೆಂದರು— ''ಸಾಲವನ್ನು ತೀರಿಸುವದಿಲ್ಲವೆಂದು ಅನ್ನಬೇಡಿರಿ. ಆದರೆ ನಿನ್ನ ಸಾಲವನ್ನು ತೀರಿಸುವದಕ್ಕಾಗಿ ನಾವು ಜೀವಂತ ಉಳಿಯಬೇಕಾಗಿದೆ ಎಂದು ಸಾವುಕಾರರಿಗೆ ಹೇಳಿರಿ. ಆದುದರಿಂದ ನನಗೆ ಹೊಟ್ಟೆತುಂಬ ಅನ್ನ ಕೊಡು. ನಿನ್ನ ಸಾಲವನ್ನು ತೀರಿಸುವದಕ್ಕಾಗಿ ನಾನು ಸತ್ತರೂ ನನ್ನ ಮಕ್ಕಳು ಜೀವಂತ ಇರಬೇಕು. ಆದುದರಿಂದ ಅವರಿಗೂ ಸಹ ತುಸು ಹಾಲು ತುಪ್ಪ ಕೊಡಲಿಕ್ಕೆ ಅವರಿಗೆ ಹೇಳುತ್ತ ಹೋಗಿರಿ. ನೀವು ಮೊದಲು ಹೊಟ್ಟೆ ತುಂಬಾ ಊಟಮಾಡಿರಿ. ಗಟ್ಟಿಮುಟ್ಟಯಾಗಿ ಬಾಳಿರಿ.''

## ಮಂತ್ರಿಗಳು ರಾಜೀನಾಮೆ ಕೊಡಬೇಕು:—

ಅತಿವೃಷ್ಟಿಯಿಂದ ಮಧ್ಯಪ್ರಾಂತದ ಬೆಳೆ ಹಾಳಾಗಿದ್ದವು. ಎಲ್ಲೆಡೆಯಲ್ಲಿ ರೈತರ ಸಭೆಗಳು ಸೇರುತ್ತಲಿದ್ದವು. ತೆರಿಗೆಯನ್ನು ಸೂಟ ಬಿಡಬೇಕೆಂದು ಚಳವಳಿಯು ಪ್ರಾರಂಭವಾಗಿತ್ತು. ವರ್ಧಾತಹಸೀಲದ ಪರಿಷತ್ತು ಸೇರಿತ್ತು. ವಿನೋಬಾಜಿಯವರು ಅಧ್ಯಕ್ಷರಾಗಿದ್ದರು. ಅವರು ಹೀಗೆಂದರು. ''ನಾನು ಗಣಿತಶಾಸ್ತ್ರ ಬಲ್ಲವನಿರುವೆನು. ಅಡ್ಡಾಡಲಿಕ್ಕೆ ಹೋದಾಗ್ಗೆ ನಾನು ಹತ್ತಿಯ ಅಟ್ಟೆ ಎಣಿಸುತ್ತಿರುವೆನು. ಮಳೆಯಾದ ಮೇಲೆ ಎಷ್ಟು ಉದುರಿಹೋದವು ಮತ್ತು ಗಿಡದ ಮೇಲೆ ಎಷ್ಟು ಉಳಿದವು ಇದು ನನಗೆ ಗೊತ್ತಿದೆ. ಕಾಂಗ್ರೆಸ ಮಂತ್ರಿಗಳಿಗೆ ರೈತರ ಕಷ್ಟಗಳನ್ನು ದೂರ ಮಾಡುವುದು ಸಾಧ್ಯವಿರದಿದ್ದರೆ ಅವರು ನೆಟ್ಟಗೆ ರಾಜಿನಾಮೆಯನ್ನು ಕೊಟ್ಟು ಹೊರಬೀಳಬೇಕು.''

**ಖಾದಿಯ ಮಹತ್ವ:—**

"ಖಾದಿಯಿಂದ ಎರಡು ತುತ್ತು ಅನ್ನ ಸಿಗುತ್ತದೆ. ಖಾದಿಯು ಮಾತಾಡುತ್ತಿದೆ. ಪ್ರಚಾರಮಾಡುತ್ತದೆ. ಈ ಖಾದಿಯ ಉದ್ಯೋಗವನ್ನು ಯಾರು ಕೊಟ್ಟರು? ಗಾಂಧಿಯ ಜನರು, ಕಾಂಗ್ರೆಸದ ಜನರು ಇದನ್ನು ಕೊಟ್ಟರೆಂದು ಹಳ್ಳಿಗರಿಗೆ ತಿಳಿಯುತ್ತದೆ. ಕಾಂಗ್ರೆಸ್ ಅಂದರೇನು, ಗಾಂಧಿ ಅಂದರೇನು, ಸ್ವರಾಜ್ಯವೆಂದರೇನು, ಚಳವಳಿ ಎಂದರೇನು ಮುಂತಾದ ಎಲ್ಲ ವಿಷಯಗಳು ಈ ಖಾದಿಯ ಮುಖಾಂತರ ಅವರ ಕಿವಿಯ ಮೇಲೆ ಬೀಳುತ್ತವೆ. ಖಾದಿಯು ಸ್ವಾತಂತ್ರ್ಯದ ತೃಷ್ಣೆಯನ್ನು ಹೆಚ್ಚಿಸುತ್ತದೆ ಸ್ವಾಭಿಮಾನವನ್ನು ಜಾಗೃತವಾಗಿಡುತ್ತದೆ. ಮತ್ತು ಹೊಸ ವಿಚಾರಗಳನ್ನು ಕೊಡುತ್ತದೆ." ಎಂದು ಒಬ್ಬನಿಗೆ ಉತ್ತರವಿತ್ತರು.

**ಮನುಷ್ಯನಲ್ಲಿ ಯಾವ ವೃತ್ತಿ ಹೆಚ್ಚು ತೀವ್ರವಾಗಿರುತ್ತದೆ?:—**

ಒಮ್ಮೆ ಜಯಪ್ರಕಾಶರು ಇವರ ಕಡೆಗೆ ಬಂದರು. ಇವರಿಬ್ಬರಲ್ಲಿ ಬಹಳ ವಾದವಿವಾದವಾಯಿತು. ವಿನೋಬಾಜಿಯವರು ಹೀಗೆಂದರು "ನಿಮ್ಮ ತತ್ವಜ್ಞಾನದಲ್ಲಿ ದೇವರಿರಲಿಕ್ಕಿಲ್ಲ. ನನ್ನ ತತ್ವಜ್ಞಾನದಲ್ಲಿರಬಹುದು. ಆದರೆ ಈ ದೇವರನ್ನು ನಾವು ತುಸು ದೂರ ಇರಿಸುವಾ. ದೇವರ ಕೆಳಗೆ ಎರಡನೇ ವಸ್ತುವನ್ನು ಮನ್ನಿಸ (ನಾವು) ಬೇಕಾದರೆ ಅದು ಬುದ್ಧಿಯಿರುತ್ತದೆ ನಾನು ನಿಮಗೊಂದು ಪ್ರಶ್ನೆ ಕೇಳುತ್ತೇನೆ. ಅದಕ್ಕೆ ನನ್ನ ಬುದ್ಧಿಗೆ ಸರಿಯೆನಿಸುವಂತೆ ಉತ್ತರ ಕೊಡಿರಿ. ಮನುಷ್ಯನಲ್ಲಿ ಹಿಂಸೆಯ ಪ್ರವೃತ್ತಿ ಹೆಚ್ಚಾಗಿರುವದೋ ಅಹಿಂಸೆಯ ಪ್ರವೃತ್ತಿ ಅಧಿಕವಾಗಿರುವದೋ? ಮನುಷ್ಯನ ಎಲ್ಲ ಜೀವನವನ್ನು ನೋಡಿ ನನಗೆ ಉತ್ತರ ಕೊಡಿರಿ."

"ಮನುಷ್ಯನಿಗೆ ನಾವು ಅಹಿಂಸಕನೆಂದೇ ಹೇಳಬೇಕಾಗುತ್ತದೆ. ಅಹಿಂಸೆಯ ವೃತ್ತಿಯೇ ಅವನಲ್ಲಿ ಹೆಚ್ಚಾಗಿರುತ್ತದೆಂದು ಅನ್ನಲೇಬೇಕಾಗುತ್ತದೆ." ಎಂದು ಜಯಪ್ರಕಾಶರು ಉತ್ತರವಿತ್ತರು.

"ಆ ಪ್ರವೃತ್ತಿಯ ಆಧಾರ ತೆಗೆದುಕೊಂಡೇ ಮಹಾತ್ಮರು ಸಾಗಲಿಚ್ಛಿಸುತ್ತಾರೆ. ಈ ಪ್ರವೃತ್ತಿಯು ಜಾಗೃತವಾಗಬಹುದೆಂದು ಅವರಿಗೆ ತೋರುತ್ತದೆ." ಎಂದು ವಿನೋಬಾ ಉತ್ತರವಿತ್ತರು.

## ಹಿಂದೂ ಮುಸಲ್ಮಾನ ಐಕ್ಯದ ಮೂರ್ತಿಯು:—

ವಿನೋಬಾಜಿಯವರಿಗೆ ಹಿಂದೂ ಧರ್ಮದ ಮೇಲೆ ಬಹಳ ಪ್ರೇಮ. ಆದರೆ ಉಳಿದ ಎಲ್ಲ ಧರ್ಮಗಳ ಬಗ್ಗೆ ಅವರಿಗೆ ಅತಿಶಯ ಆದರವಿದೆ. ಎರಡನೇ ಧರ್ಮದ ಸಲುವಾಗಿ ಆದರ ತೋರಿಸುವವನು ನಿಜವಾಗಿ ಸ್ವಧರ್ಮಪೂಜಕನು. ವಿನೋಬಾಜಿಯವರು ಅನೇಕ ಧರ್ಮಗಳನ್ನು ಕುರಿತು ಅಭ್ಯಾಸ ಮಾಡಿರುವರು. ಮುಸಲ್ಮಾನ ಧರ್ಮದ ಅಭ್ಯಾಸವನ್ನೂ ಅವರು ಮಾಡಿರುವರು. ನಾವು ಹಿಂದೂ ಮುಸಲ್ಮಾನರು ನೆರೆಹೊರೆಯವರಾಗಿ ವಾಸಿಸುತ್ತೇವೆ. ಪರಸ್ಪರರ ಧರ್ಮದ, ಸಂಸ್ಕೃತಿಯ ಅಭ್ಯಾಸವನ್ನು ನಾವು ಸಹಾನುಭೂತಿಯಿಂದ ಮಾಡಬೇಕು ವಿನೋಬಾಜಿಯವರು ಮೂಲ ಅರಬೀ ಭಾಷೆಯಲ್ಲಿಯೇ ಕುರಾನವನ್ನು ಓದಿರುವರು. ಅದರಲ್ಲಿಯ ಎಷ್ಟೋ ಸುಂದರ ಶ್ಲೋಕಗಳನ್ನು ಮುಖಪಾಠ ಮಾಡಿದ್ದಾರೆ ಒಮ್ಮೆ ಮಹಾತ್ಮರು ಮೌ. ಅಬುಲ್ ಕಲಂ ಅಝಾದರ ಸಂಗಡ ಕುರಾನವನ್ನು ಅನ್ನಲಿಕ್ಕೆ ವಿನೋಬಾಜಿಯವರಿಗೆ ಹೇಳಿದರು. ವಿನೋಬಾಜಿಯವರು ಆ ಕುರಾನವನ್ನು ಮುಖಪಾಠವಾಗಿ ಅನ್ನಲಿಕ್ಕೆ ಹತ್ತಿದರು. ಅರಬೀ ಭಾಷೆಯು ಕೇಳಲಿಕ್ಕೆ ಅತಿ ಸುಂದರವಾಗಿರುವದು. ಮೌಲಾನಾ ಸಾಹೇಬರು ಪ್ರಸನ್ನರಾದರು ಅದರಲ್ಲಿಯ ಒಂದು ಉಚ್ಚಾರದಲ್ಲಿಯೂ ಸಹ ವಿನೋಬಾ ತಪ್ಪು ಮಾಡಲಿಲ್ಲ

" ಮುಸಲ್ಮಾನರೆಂದರೇನು ಕೆಟ್ಟ ಜನರೇ ? ಒಂದು ವೇಳೆ ಪರಮೇಶ್ವರನೇ ಎಲ್ಲ ಮುಸಲ್ಮಾನರನ್ನು ಕೆಟ್ಟವರನ್ನಾಗಿಯೆ ಮಾಡಿ ಹುಟ್ಟಿಸಿದ್ದರೆ ಆ ಪರಮೇಶ್ವರನಿಗೆ ಸಹ ಬೆಲೆ ಇರುವದಿಲ್ಲ. ನಾವು ಮುಸಲ್ಮಾನರಲ್ಲಿ ಹೋಗುವದಿಲ್ಲ. ಕೂಡುವದಿಲ್ಲ. ಅವರ ಸಂಗಡ ಗೆಳೆತನ ಮಾಡುವದಿಲ್ಲ. ಬೇರೆಯಾಗಿ ಉಳಿಯುವೆವು. ಇದು ಯೋಗ್ಯವಾದುದು ಅಲ್ಲ, ಮುಸಲ್ಮಾನರೂ ಒಳ್ಳೆಯವರಿರುವರು ಕಳೆದ ಮಹಾಯುದ್ಧದಲ್ಲಿ ತುರ್ಕಸ್ತಾನ ರಾಷ್ಟ್ರ ಒಂದೇ ಯುದ್ಧ ಕೈದಿಗಳನ್ನು ಒಳ್ಳೇ ರೀತಿಯಿಂದ ನಡೆಸಿಕೊಂಡಿರುವದೆಂದು ಸರ್ವ ಯುರೋಪ ಖಂಡವು ಪ್ರಶಂಸೆ ಮಾಡುತ್ತಲಿದೆ."

ಒಬ್ಬನು— " ಶತ್ರು ಎಂದ ಕೂಡಲೇ ಆತನನ್ನು ಕೊಂದುಬಿಡಬೇಕೆಂದು ಕುರಾನದಲ್ಲಿಲ್ಲವೆ ? " ಎಂದು ಕೇಳಿದನು.

ವಿನೋಬಾಜಿಯವರು ಹೀಗೆಂದರು— "ಮೇಲಿಂದ ಮೇಲೆ ಮೋಸ ಮಾಡುತ್ತಿರುವಂಥ ಜ್ಯೂ ಜನರ ಬಗ್ಗೆ ಈ ವಾಕ್ಯಗಳು ಕುರಾನದಲ್ಲಿವೆ. ಜ್ಯೂ ಜನರ ಸಂಗಡ ಪೈಗಂಬರರು ಎಷ್ಟೋ ಸರಳ ರೀತಿಯಿಂದ ನಡೆದು ಕೊಳ್ಳಲು ಯತ್ನಿಸಿದರು. ಆದರೆ ಮಹಮ್ಮದನ ಶತ್ರುಗಳು ಮಕ್ಕೆಯಿಂದ ಮದೀನಾಕ್ಕೆ ಬಂದಾಗ ಮದೀನಾದಲ್ಲಿದ್ದ ಜ್ಯೂ ಜನರು ಒಳಗಿಂದೊಳಗೇ ಕಾರಸ್ಥಾನವನ್ನು ಮಾಡಿದರು. ಇಂಥ ಸಮಯದಲ್ಲಿ ಏನು ಮಾಡಬೇಕು? ಇಂದಿನ ರಾಷ್ಟ್ರಗಳು ಇಂಥ ಪರಿಸ್ಥಿತಿಯಲ್ಲಿ ಏನು ಮಾಡುತ್ತವೆ? ಮಹಮ್ಮದ ಪೈಗಂಬರರು ಕೇವಲ ಧರ್ಮಸ್ಥಾಪಕರಿರಲಿಲ್ಲ. ಅವರು ರಾಷ್ಟ್ರದ ಕಾರಭಾರ ವನ್ನು ಮಾಡಬೇಕಾಗಿತ್ತು. ವೈಯಕ್ತಿಕ ಜೀವನದಲ್ಲಿ ಅವರು ಎಲ್ಲರನ್ನು ಕ್ಷಮೆ ಮಾಡಿರುವರು. ಕುರಾನದಲ್ಲಿಯ ಕೆಲ ವಾಕ್ಯಗಳ ಅರ್ಥವು ಆ ಕಾಲದ ಬಗ್ಗೆ ಮಾತ್ರ ಸಂಬಂಧಿಸಿದ್ದಿರುತ್ತದೆ. ನಮ್ಮ ವೇದಗಳಲ್ಲಿ ಶತ್ರುಗಳು ಹಾಳಾಗಿ ಹೋಗಲೆಂದು ನಾವು ಅನ್ನುವದಿಲ್ಲವೆ? "ಯೋ ಸ್ಮಾನ್ ದ್ವೇಷ್ಟಿ, ಯಂ ಚ ವಯಂ ದ್ವಿಷ್ಮಃ ಜಹಿ" ಅಂದರೆ ನಮ್ಮೊಡನೆ ದ್ವೇಷ ಮಾಡುವವ ರನ್ನು ಮತ್ತು ನಾವು ದ್ವೇಷಿಸುವವರನ್ನು ಎಲೈ ದೇವರೇ ಕೊಂದುಬಿಡು ಎಂದು ನಮ್ಮ ಮಂತ್ರಗಳಲ್ಲಿರುವದಿಲ್ಲವೇ?"

ಕೊನೆಗೆ ವಿನೋಬಾಜಿಯವರು ಗಂಭೀರವಾಗಿ ಹೀಗೆಂದರು — "ಪರ ಧರ್ಮಗಳ ಅಭ್ಯಾಸವನ್ನು ಅತ್ಯಂತ ಸಹಾನುಭೂತಿಪೂರ್ವಕ ಮಾಡಬೇಕಾಗು ತ್ತದೆ., ಓರ್ವ ಪಾಶ್ಚಿಮಾತ್ಯ ಪಂಡಿತನು ವೇದಗಳ ಅಭ್ಯಾಸ ಮಾಡುತ್ತ ಲಿದ್ದನು. ಆತನು ಒಂದೆಡೆಯಲ್ಲಿ ಹೀಗೆ ಬರೆದಿರುವನು— "ವೇದಕಾಲದ ಜನರು ಸೋಮರಸದ ಸಂಗಡ ಗೋಮಾಂಸವನ್ನು ತಿನ್ನುತ್ತಿದ್ದರು." ವೇದ ದಲ್ಲಿ ಕೆಳಗಿನ ವಾಕ್ಯಗಳಿವೆ.

"ಗೋಭಿಃ ಸೇವೇತ್ ಸೋಮಂ"

ಆತನು "ಗೋಭಿ" ಇದರ ಅರ್ಥವನ್ನು ಆಕಳ ಮಾಂಸವೆಂದು ಮಾಡಿ ದನು. ಆದರೆ ವೇದಗಳ ಮೇಲೆ ಭಾಷ್ಯ ಬರೆದ ಸಾಯಣಾಚಾರ್ಯರು "ಗೋಭಿ" ಎಂದರೆ ಆಕಳ ಹಾಲು ಸಹ ಎಂದು ಅರ್ಥಮಾಡಿರುವರು. ಆಕಳ

ಹಾಲು ಮಿಶ್ರ ಮಾಡಿ ಸೋಮರಸ ತೆಗೆದುಕೊಳ್ಳುವರು ಹೀಗೆ ಪರಿಸ್ಥಿತಿಯು ಇದೆ. ನಾವು ಯಾವ ದೃಷ್ಟಿಯಿಂದ ನೋಡುವೆವೋ ಆ ಪ್ರಕಾರ ಅರ್ಥ ಹೊರಡುತ್ತದೆ.''

**ಬಿಳಿ ಛಾಯೆಯ ಜನರಿಗಿಂತ ಶ್ರಮಜೀವಿಗಳೇ ಹೆಚ್ಚು ಸ್ವಚ್ಛ:—**

ಒಂದು ಸಭೆಯಲ್ಲಿ ವಿನೋಬಾಜಿಯವರು ಹೀಗೆಂದರು— "ನೀವು ಶ್ರಮಜೀವಿಗಳೆಂದರೆ ಹೊಲಸು ಜನರೆಂದು ತಿಳಿಯುವಿರಿ. ಅವರ ಅರಿವೆಗಳು ಧೂಳದಿಂದ ಕೂಡಿದ್ದು, ಮೈಗೆ ಹಚ್ಚಲು ಸಬಕಾರವಿಲ್ಲ. ಹೀಗಿರುವದರಿಂದ ನೀವು ಅವರನ್ನು ನೋಡಿ ಮೂಗು ಮುರಿಯುವಿರಲ್ಲವೆ? ಆದರೆ ಅಂತಃ ಶುದ್ಧಿಗೆ ಹೆಚ್ಚು ಮಹತ್ವವಿದೆ. ನಿಮ್ಮ ಶರೀರ ಸ್ವಚ್ಛವಿರಬಹುದು ಆದರೆ ನಿಮ್ಮ ಅಂತಃಕರಣವು ಹೊಲಸು ಇರುತ್ತದೆ. ಆದರೆ ಶ್ರಮಜೀವಿಗಳ ಅಂತಃ ಕರಣವು ಶುದ್ಧವಿರುತ್ತದೆ. ಅದೇ ಹೆಚ್ಚು ಮೇಲು!!

**ಚಿಕ್ಕ ತಮ್ಮನೇ ಮೊದಲು ಏಳಲಿ :—**

ಧುಳೆಯಲ್ಲಿ ಒಂದು ದಿವಾಣಖಾನೆಯಲ್ಲಿ ಸಭೆ ಸೇರಿತ್ತು. ವಿನೋಬಾಜಿ ಯವರು ಪ್ರಶ್ನೆಗಳಿಗೆ ಉತ್ತರವೀಯುತ್ತಲಿದ್ದರು. ಓರ್ವ ವಕೀಲನು ಹೀಗೆ ಪ್ರಶ್ನೆಮಾಡಿದನು "ಕೆಲ ಜನರು ಕೇವಲ ಬ್ರಾಹ್ಮಣೇತರರಿರುವರೆಂದೇ ಮತಾಧಿ ಕಾರ ಕೊಡಬೇಕೆ? ಅವರ ಯೋಗ್ಯಾಯೋಗ್ಯತೆಯನ್ನು ನೋಡಬೇಡವೆ?'' ಅದಕ್ಕೆ ವಿನೋಬಾಜಿಯವರು ಹೀಗೆ ಮರು ಮಾತಾಡಿದರು. ಎಲ್ಲರಲ್ಲಿ ಹಿಂದುಳಿದವರು ಮೊದಲು ಮುಂದೆ ಬರಲಿ. ಹಿಂದುಳಿದವರು ಬಿದ್ದಿರುವರು— ಅವರು ಮೊದಲು ಏಳಲಿ. ನೀವು ಬ್ರಾಹ್ಮಣರು ಇಲ್ಲಿಯವರೆಗೆ ಮುಖಂಡತ್ವ ವನ್ನು ವಹಿಸಿದ್ದೀರಿ. ಈಗ ಅವರು ಮುಂದೆ ಬರಲಿ. ನೀವು ಅವರಿಗೆ ನೆರವಾಗಿರಿ. ನಿಮ್ಮಲ್ಲಿರುವ ಜ್ಞಾನ ಅವರಿಗೆ ಕೊಡಿರಿ. ಅವರೇ ಕಾರ್ಯ ಮಾಡಲಿ. ಅವರಿಗೆ ಸಮಾಧಾನ ಬೇಡವೇ? ಅವರು ಮುಂದೆ ಬರಬೇಡವೇ?

**ಇದು ನನ್ನದು, ಇವ ನನ್ನವ, ನನ್ನ ಆಪ್ತ—ನನ್ನ ಜಾತಿಯವ ಎಂದು ನೋಡುವದು ಬೇಡ. ನಮ್ಮ ಹತ್ತರವಿದ್ದ ಜನರ ದೋಷಗಳನ್ನು ನೋಡ**

ಬೇಕು ಮತ್ತು ನಮ್ಮಿಂದ ದೂರ ಇದ್ದವರ ಗುಣಗಳನ್ನು ಎಣಿಸಬೇಕು. ಈ ಪ್ರಕಾರದ ದೃಷ್ಟಿಕೋಣ ಇದ್ದರೇನೇ ಈ ಮಹಾದೇಶದ ಉದ್ಧಾರವಾಗುತ್ತದೆ''

**ಮೂರ್ತಿಮಂತ ಸಮಭಾವನೆಯವರು: —**

ವಿನೋಬಾಜಿಯವರದು ಹೀಗೆ ಸಮದೃಷ್ಟಿ ಇರುತ್ತದೆ. ಹಿಂದೂ — ಮುಸಲ್ಮಾನ, ಬ್ರಾಹ್ಮಣ—ಬ್ರಾಹ್ಮಣೇತರ ಸ್ಪೃಶ್ಯಾಸ್ಪೃಶ್ಯ ಈ ಭೇದವು ಅವರಿಗೆ ಸಹನವಾಗುವದಿಲ್ಲ. ಹರಿಜನರ ಬಗ್ಗೆ ಅವರಲ್ಲೆಷ್ಟು ಪ್ರೇಮವಿದೆ! ಒಬ್ಬ ಹರಿಜನ ಹುಡುಗನು ಯಾವಾಗಲೂ ಅವರ ಸಂಗಡ ಇರುತ್ತಾನೆ. ಅವನು ಮದ್ರಾಸ ಕಡೆಯವನಿದ್ದಾನೆ. ಆತನ ಹೆಸರು ಸತ್ಯನ್. ಈಗ ಆತನು ಸಂಸ್ಕೃತ ಓದುತ್ತಾನೆ.

ಹರಿಜನರಿಗೆ ಪ್ರವೇಶವಿಲ್ಲದ ಮಂದಿರಗಳಲ್ಲಿ ಅವರು ಪ್ರವೇಶಿಸುತ್ತಿರಲಿಲ್ಲ. ಅಲ್ಲಿ ಪ್ರವಚನಗಳನ್ನು ಮಾಡುತ್ತಿರಲಿಲ್ಲ. ಒಮ್ಮೆ ಓರ್ವ ಸನಾತನಿ– "ನಾವು ಚೋಖಾಮೇಳಾಗೆ ಪವಿತ್ರನೆಂದು ತಿಳಿಯುವದಿಲ್ಲವೇ'' ಎಂದು ಕೇಳಿದರು. ಅದಕ್ಕೆ ಪ್ರತಿಯಾಗಿ ವಿನೋಬಾಜಿಯವರು "ನಿಮ್ಮ ದೇವಾಲಯಗಳಲ್ಲಿ ಪ್ರವೇಶ ದೊರೆಯಬೇಕಾದಲ್ಲಿ ಹರಿಜನರು ಚೋಖಾಮೇಳಾನ ಯೋಗ್ಯತೆಯವರಾಗಿ ಬರಬೇಕಾಗುವದು. ಆದರೆ ನೀವು?" ಎಂದರು. ಮಹಾತ್ಮರು ಹರಿಜನರ ಬಗ್ಗೆ ಉಪವಾಸ ಮಾಡಿದಾಗ್ಗೆ ವಿನೋಬಾಜಿಯವರು ವರ್ಧಾದ ಹತ್ತಿರ ಇರುವ ನಾಲವಾಡಿ ಗ್ರಾಮದ ಹರಿಜನ ವಸತಿಯಲ್ಲಿ ಹೋಗಿ ವಾಸಿಸ ಹತ್ತಿದರು. ವಿನೋಬಾಜಿಯವರೆಂದರೆ ಮೂರ್ತಿಮಂತ ಸಮಭಾವನೆಯವರು

**ಚಿಕ್ಕ ಮಕ್ಕಳಿಗೆ ಹೇಗೆ ಕಲಿಸಬೇಕು? :—**

ಚಿಕ್ಕ ಮಕ್ಕಳಿಗೆ ಹೇಗೆ ಶಿಕ್ಷಣ ಕೊಡಬೇಕೆಂಬ ಬಗ್ಗೆ ಆಪ್ಟೆ ಗುರೂಜಿಯವರು ವಿನೋಬಾಜಿಯವರಿಗೆ ಪ್ರಶ್ನೆ ಮಾಡಿದರು. ವಿನೋಬಾಜಿಯವರು ಹೀಗೆ ಹೇಳಿದರು. "ನಾನು ಚಿಕ್ಕ ಮಕ್ಕಳಿಗೆ ಮೊದಲು ಅಕ್ಷರಹಾಕಿಕೊಡುವದಿಲ್ಲ. ಅವರಿಗೆ ಮೊದಲು ಚಿತ್ರಕಲೆಯನ್ನು ಕಲಿಸುವೆನು. ಗೆರೆ, ವರ್ತುಳ, ಬೇರೆ ಬೇರೆ ಪ್ರಕಾರದ ಆಕಾರ ಆಕೃತಿಗಳನ್ನು ತೆಗೆಯಲು ಹಚ್ಚುವೆನು.

ಅದರ ಜೊತೆಗೆ ಸರಳವಾದ ಸುಂದರವಾದ ಹಾಡುಗಳನ್ನು, ಸರಳವಾದ ಕವಿತೆಗಳನ್ನು, ಅಭಂಗಗಳನ್ನು, ಸಂಸ್ಕೃತ ವಚನಗಳನ್ನು ಮುಖಪಾಠ ಮಾಡಲಿಕ್ಕೆ ಹಚ್ಚುವೆನು. ಇನ್ನೊ ನಗುತ್ತ ಕೆಲೆಯುತ್ತ ಕಲಿಸುವೆನು. ಅದರಲ್ಲಿ ಜುಲುಮೆ ಇರುವದೆಂದು ಭಾಸವಾಗಕೂಡದು. 'ಸತ್ಯಂವದ, ಧರ್ಮಂಚರ,' 'ಮಾತೃ ದೇವೋ ಭವ,' 'ಪಿತೃ ದೇವೋ ಭವ,' ಇಂಥ ಸುಲಭ ಸಂಸ್ಕೃತ ವಚನಗಳನ್ನು ಆತನು ಸಹಜ ಸುಲಭವಾಗಿ ಪಾಠಮಾಡಬಲ್ಲನು. ನಂತರ ನಾನ ಮುಖಪಾಠ ಮಾಡಿದ ವಿಷಯಗಳು ಇದ್ದ ಪುಸ್ತಕಗಳನ್ನು ಆತನೆದುರು ಕೊಡುವೆನು. ಮತ್ತು ಮುಖಪಾಠ ಮಾಡಿದ್ದನ್ನು ಅಸ್ಮುತ್ತ ಅವನು ಪುಸ್ತಕ ನೋಡಬಲ್ಲ. ಬೇರೆ ಬೇರೆ ಲಿಪಿಗಳನ್ನು ನಾನು ಇದೇ ರೀತಿಯಾಗಿ ಕಲಿತೆನು. ತಮಿಳು, ತೆಲಗು, ಕನ್ನಡ, ಬಂಗಾಲಿ ಮುಂತಾದ ಭಾಷೆಗಳಲ್ಲಿ ಅಚ್ಚಾದ ಸಂಸ್ಕೃತ ಗೀತೆಯನ್ನು ನಾನು ತರಿಸಿದೆನು ಕನ್ನಡ ಗೀತೆಯಲ್ಲಿ ಸಹ ಧರ್ಮಕ್ಷೇತ್ರೆ ಕುರುಕ್ಷೇತ್ರೆಯೇ ಇರುವದು. ಇದು ಕನ್ನಡ—'ಮ' ಕನ್ನಡ 'ಥ' ಎಂದು ನಾನು ಕಲಿತೆನು."

## ಇತಿಹಾಸ ಭೂಗೋಲಗಳನ್ನು ಹೇಗೆ ಕಲಿಸಬೇಕು? :—

ಮಾತಾಡುತ್ತ ಇತಿಹಾಸ ಭೂಗೋಲಗಳ ವಿಷಯ ಹೊರಟಿತು. ಅದಕ್ಕೆ ಅವರು ಹೀಗೆಂದರು—"ಚಿಕ್ಕ ಮಕ್ಕಳಿಗೆ ಕಥಾರೂಪವಾಗಿ ಇತಿಹಾಸ ಹೇಳಬೇಕು. ಎಲ್ಲ ದೇಶಗಳ ಕಥೆಗಳನ್ನು ತೆಗೆದುಕೊಳ್ಳಬೇಕು ಇಡೀ ಜಗತ್ತಿನ ನಾಗರಿಕನು ಆತನಾಗಲಿ. ರಾಮ, ಕೃಷ್ಣ, ಬುದ್ಧ, ಅಶೋಕ ಇವರ ಸಂಗಡ ಸಾಕ್ರೇಟೀಸ, ಕ್ರೈಸ್ತ, ಕನ್‌ಫ್ಯೂಶಿಯಸ್, ಮಹಮ್ಮದ ಈ ಕಥೆಗಳನ್ನು ಹೇಳಬೇಕು. ಹುಡುಗರು ದೊಡ್ಡವರಾದ ಹಾಗೆ ಅವರಿಗೆ ಇತಿಹಾಸದಲ್ಲಿ ಯಾವ ಪ್ರಕಾರದ ಪ್ರಚಂಡ ತೆರೆಗಳು ಏಳುತ್ತವೆಯೆಂಬುದನ್ನೂ ತಿಳಿಸಿ ಹೇಳಬೇಕು. ಕ್ರಿ. ಶ. ಪೂರ್ವದಲ್ಲಿ ಐದನೇ ಅಥವಾ ಆರನೇ ಶತಕದಲ್ಲಿ ಎಲ್ಲ ಜಗತ್ತಿನಲ್ಲಿ—ಪ್ರಚಂಡವಾಗಿ ವೈಚಾರಿಕ ತೆರೆಗಳು ಎದ್ದಿದ್ದವು. ಗ್ರೀಸ ದೇಶದಲ್ಲಿ ಸಾಕ್ರೇಟೀಸ, ಪ್ಲೇಟೊ ಮುಂತಾದ ತತ್ವಜ್ಞಾನಿಗಳು ಹುಟ್ಟಿದರು. ಅದೇ ಸಮಯಕ್ಕೆ ಚೀನದಲ್ಲಿ ಲಾಓತ್ಸೀ, ಕನ್‌ಫ್ಯೂಶಿಯಸ್ ಆಗಿ ಹೋದರು. ಹಿಂದುಸ್ತಾನದಲ್ಲಿ ಬುದ್ಧ ಮಹಾವೀರರು ಜನ್ಮಿಸಿದರು.

ಈ ಪ್ರಕಾರವಾಗಿ ಈ ಪ್ರಚಂಡ ತೆರೆಗಳು ಎದ್ದವು. ಯುರೋಪದಲ್ಲಿ ಧರ್ಮ ಸುಧಾರಣೆ ನಡೆಯಿತು. ಪೋಪರ ವಿರುದ್ಧ ಬಂಡು ಪ್ರಾರಂಭವಾಯಿತು. ಬಾಯಬಲ್ಲು ಜನತೆಯ ಭಾಷೆಯಲ್ಲಿ ಪ್ರಚಾರದಲ್ಲಿ ಬರಹತ್ತಿತು. ಅದೇ ಸಮಯಕ್ಕೆ ಹಿಂದುಸ್ತಾನದಲ್ಲಿಯೂ ಸಂತಜನರ ಚಳವಳಿಯು ಪ್ರಾರಂಭ ವಾಯಿತು. ಸಂಸ್ಕೃತದಲ್ಲಿಯ ಜ್ಞಾನವು ಜನತೆಯ ಭಾಷೆಯಲ್ಲಿ ಬರಹತ್ತಿತು. ಈ ತೆರೆಗಳು ಒಮ್ಮೊಮ್ಮೆ ಇನ್ನೂರು-ಮುನ್ನೂರು ವರ್ಷ ಬಾಳುತ್ತಲಿದ್ದವು. ಈ ಪ್ರಕಾರ ವ್ಯಾಪಕತೆಯನ್ನು ನೋಡಬೇಕು.

"ಇನ್ನು ಭೂಗೋಲವಂತೂ ಅತಿ ಸುಂದರ ವಿಷಯವು. ಪೃಥ್ವಿಯ ಹೊಟ್ಟೆಯಲ್ಲಿ ಸೇರುವ ವಿಷಯವು. ನಾನು ಭೂಗೋಲವನ್ನು ಅತಿ ರುಚಿ ಕಟ್ಟಾಗಿ ಮಾಡಿ ಹೇಳಬಲ್ಲೆ. ಈ ಪೇರಲ ಗಿಡಗಳು ಇಲ್ಲಿಯೇ ಯಾಕೆ ಬೆಳೆಯುತ್ತವೆ? ದ್ರಾಕ್ಷೆಗಳು ಅಫಗಾನಿಸ್ತಾನದಲ್ಲಿಯೇ ಯಾಕೆ ಹುಟ್ಟು ತ್ತವೆ? ಹತ್ತಿ ವಿಶಿಷ್ಟ ಸ್ಥಳಗಳಲ್ಲಿಯೇ ಯಾಕೆ ಬೆಳೆಯುತ್ತದೆ? ಎಷ್ಟು ಮೋಜಿನ ವಿಷಯಗಳಿವೆ? ಗಾಳಿಮಳೆಗಳ ಲೀಲೆ ತಿಳಿಸಿ ಹೇಳಬೇಕು. ಗುಡ್ಡಗಳ ಉತ್ಪತ್ತಿ ಹೇಗಾಗುತ್ತದೆ, ದಿವಸ ರಾತ್ರಿಗಳು ಹೇಗೆ ಉಂಟಾಗು ತ್ತವೆ. ಇವೆಲ್ಲ ರಮ್ಯವಾಗಿವೆ.

**ಆಶ್ರಮವು ಹೇಗಿರಬೇಕು? :—**

ವಿನೋಬಾಜಿಯವರು ಅನೇಕ ಪ್ರಶ್ನೆಗಳ ಅಭ್ಯಾಸ ಮತ್ತು ವಿಚಾರ ಮಾಡಿರುವರು. ಮತ್ತು ಆಶ್ರಮದ ಸಂಚಾಲಕನು ಎಲ್ಲ ಪ್ರಶ್ನೆಗಳ ಆಳವಾದ ಅಭ್ಯಾಸ ಮಾಡಿರಬೇಕು. ಒಮ್ಮೆ ಅವರು ಹೀಗೆಂದರು—"ಪ್ರಾಚೀನಕಾಲ ದಲ್ಲಿಯ ಅರಸರು ಆಗಾಗ್ಗೆ ಋಷಿಗಳ ಆಶ್ರಮದಲ್ಲಿ ಹೋಗುತ್ತಲಿದ್ದರು. ಋಷಿಗಳು ಅಲ್ಲಿ ವಿಚಾರ ಮಾಡುತ್ತಲಿದ್ದರು. ಎಲ್ಲ ಸಾಮಾಜಿಕ ರಾಜಕೀಯ ವಿಷಯಗಳ ಮಂಥನವು ಅಲ್ಲಿಯೇ ಆಗುತ್ತಲಿತ್ತು. ಬೇರೆ ಬೇರೆ ಋಷಿಗಳು ಕೂಡುತ್ತಿದ್ದರು. ವಿಚಾರ ವಿನಿಮಯಮಾಡುತ್ತಲಿದ್ದರು. ಇಂಥ ಆಶ್ರಮ ಗಳೊಳಗಿಂದ ಅರಸರು ಹೊಸ ವಿಚಾರ, ಹೊಸ ದೃಷ್ಟಿಕೋಣವನ್ನು ತೆಗೆದು ಕೊಳ್ಳುತ್ತಿದ್ದರು. ಪಾವಿತ್ರ್ಯವನ್ನು ಸಹ ಪಡೆದುಕೊಂಡು ಹೋಗುತ್ತಿದ್ದರು. ಆಶ್ರಮವೆಂದರೆ ಜ್ಞಾನ ವಿಜ್ಞಾನ, ಸಂಯಮ, ಉದ್ಯೋಗ, ಪ್ರಯೋಗ ಮತ್ತು ಕರ್ಮ ಇವುಗಳ ಸ್ಥಾನವು. ಆಶ್ರಮದಲ್ಲಿ ಹೋದರೆ ಆನಂದ

ಉಂಟಾಗಬೇಕು. ಊರ ಹೊರಗಿನ ದೇವಾಲಯಕ್ಕೆ ಹೋದಾಗ್ಗೆ ಮನಸ್ಸಿಗೆ ಸುಪ್ರಸನ್ನತೆ ಮತ್ತು ಶಾಂತವೆನಿಸುವಂತೆ ಆಶ್ರಮಕ್ಕೆ ಹೋದರೂ ಎನಿಸಬೇಕು. ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿರುವ ಮನುಷ್ಯನಿಗೆ, ಇಲ್ಲಿ ಆನಂದ, ಉಲ್ಲಾಸ ದೊರೆಯಬೇಕು. ಸ್ಫೂರ್ತಿ ದೊರೆಯಬೇಕು ಹೊಸ ದೃಷ್ಟಿ ಕೋನ ದೊರೆಯಬೇಕು. ಇದು ಇಂಥ ಪವಿತ್ರಸ್ಥಾನವಿದೆ. ಇಲ್ಲಿಯ ವಾತಾವರಣವನ್ನು ತೆಗೆದುಕೊಂಡು ಹೋಗಿ ಸಂಸಾರವನ್ನು ಹೆಚ್ಚು ಸುಂದರ ಮತ್ತು ತೇಜಸ್ವಿಯಾಗಿ ಮಾಡಬೇಕು.''

ಮತ್ತು ವಿನೋಬಾಜಿಯವರು ಹೀಗೆಯೇ ಇರುವರು. ಎಷ್ಟೋ ಜನರು ಅವರ ಕಡೆಗೆ ಬರುತ್ತಾರೆ. ನಾನಾ ಪ್ರಕಾರದ ಪ್ರಶ್ನೆಗಳನ್ನು ಕೇಳುತ್ತಾರೆ. ರಾಜನೀತಿಯ ಪ್ರಶ್ನೆ, ವೈವಾಹಿಕ ಪ್ರಶ್ನೆ, ಶಿಕ್ಷಣ ಸಂಬಂಧದ ಪ್ರಶ್ನೆ, ಉದ್ಯೋಗದ ಬಗ್ಗೆ, ಧರ್ಮ ಮತ್ತು ತತ್ವಜ್ಞಾನ, ಕಲಾ ಮತ್ತು ಸಾಹಿತ್ಯ ಹಿಂಸಾ-ಅಹಿಂಸಾ, ಗಾಂಧೀವಾದ–ಸಮಾಜವಾದ ಈ ಪ್ರಕಾರದ ನೂರಾರು ಪ್ರಶ್ನೆಗಳು ಅವರಿಗೆ ಕೇಳಲ್ಪಡುತ್ತವೆ. ಅದಕ್ಕೆ ವಿನೋಬಾಜಿಯವರು ಶಾಂತವಾಗಿ ಉತ್ತರ ಕೊಡುತ್ತಾರೆ.

## ಪ್ರಯೋಗದ ಮೂಲಸ್ಥಾನ:—

ವಿನೋಬಾಜಿಯವರ ಹತ್ತಿರ ಸೇವಕರ ಸೈನ್ಯವೇ ಇದೆ. ಈ ಬುದ್ಧಿವಂತ ತರುಣರು ವಿನೋಬಾಜಿಯವರಿಂದ ಸ್ಫೂರ್ತಿ ದೊರಕಿಸಿ ಪ್ರಯೋಗ ಮಾಡುತ್ತಿರುವರು. ತಕಲಿಯ ಮೇಲೆ ಹೆಚ್ಚು ನೂಲು ಹೇಗೆ ಹೊರಡಬಹುದೆಂದು ಪ್ರಯೋಗ ಪ್ರಾರಂಭಿಸಿದರು. ಮತ್ತು ಯುಕ್ತಿ ದೊರೆಯಿತು. ವೇಗವು ಹೇಗೆ ಬೆಳೆಯಬೇಕು. ಮತ್ತು ಹೇಗೆ ಸುತ್ತಬೇಕು. ಇದರ ಹೊಸ ಶಾಸ್ತ್ರವೇ ಹೊರಟಿತು ಭಾವು ಪಾನಸೆ ಮತ್ತು ಸತ್ಯನ್ ಮೊದಲಾದ ತರುಣರು ಒಂದು ತಾಸಿನಲ್ಲಿ ತಕಲಿಯ ಮೇಲೆ ನಾಲ್ಕು ನೂರು ಎಳೆ ತೆಗೆಯಲು ಪ್ರಾರಂಭಿಸಿದರು. ಚರಕದಷ್ಟೇ ನೂಲು. ಅಲ್ಲದೇ ತಕಲಿ ತೀರ ಹಗುರಾದ ವಸ್ತು. ಕಿಸೆಯಲ್ಲಿ ಹಾಕಲಿಕ್ಕೆ ಸಾಧ್ಯವಿದೆ ವಿನೋಬಾಜಿಯವರು ಇದಕ್ಕೆ ವಸ್ತ್ರಪೂರ್ಣವೆನ್ನುವರು. ಚರಕದಲ್ಲಿಯೂ ಹೊಸ ಶೋಧಗಳು ಆಗಹತ್ತಿದವು. ಸತ್ಯನ್ನನು ಚರಕದಲ್ಲಿ ಸುಧಾರಣೆ ಮಾಡಿದನು. ಮಗನನ ಚರಕವೆಂಬುದು ಹೊರಟಿತು.

ಆದರೆ ಈ ಸ್ಫೂರ್ತಿಯು ಎಲ್ಲಿಂದ ಬರುತ್ತದೆ?— ಈ ಸ್ಫೂರ್ತಿಯ ದೊಡ್ಡ ಅಖಂಡ ಸೆಲೆಯೆಂದರೆ ವಿನೋಬಾಜಿಯವರೇ.

**ಮಹಾತ್ಮರು ಆಕರ್ಷಿಸಲ್ಪಟ್ಟದ್ದೇಕೆ? ಃ—**

ಮಹಾತ್ಮರು ಗುಜರಾತ ಬಿಟ್ಟು ವರ್ಧಾಕ್ಕೆ ಬಂದದ್ದೇಕೆ? ಮುಂದೆ ಸೇವಾಗ್ರಾಮಕ್ಕೆ ಬಂದ ಕಾರಣವೇನು? ೧೯೩೦ ರಲ್ಲಿ ಮಹಾತ್ಮರು ದಾಂಡಿ ಯಾತ್ರೆಗೆ ಹೊರಡುವಾಗ ಸ್ವರಾಜ್ಯ ದೊರಕಿಸಿಕೊಂಡಲ್ಲಿ ಆಶ್ರಮಕ್ಕೆ ಮರಳಿ ಬರುವೆನೆಂದು ಪ್ರತಿಜ್ಞೆ ಮಾಡಿದ್ದರು. ಮುಂದೆ ಸಾಬರಮತಿಯ ಈ ಐತಿಹಾಸಿಕ ಆಶ್ರಮವನ್ನು ಅವರು ಹರಿಜನರ ಸಲುವಾಗಿ ಕೊಟ್ಟುಬಿಟ್ಟರು. ಅಂದಬಳಿಕ ಇನ್ನು ಇರಬೇಕೆಲ್ಲಿ? ಗುಜರಾಥ ವಿದ್ಯಾಪೀಠವು ನಿಂತಿತ್ತು. ಈ ವಿದ್ಯಾಪೀಠ ದಿಂದಲೇ ಮುಂದೆ ಗ್ರಾಮಸೇವಕರು ದೊರೆಯಬಹುದೆಂಬ ಆಶೆಯಿಂದ ಈ ವಿದ್ಯಾಪೀಠವನ್ನು ಮಹಾತ್ಮರು ಪ್ರಾರಂಭಿಸಿದ್ದರು. ಗ್ರಾಮಸೇವಕರು ಎಲ್ಲಿ ದೊರೆಯಬಹುದು? ಗ್ರಾಮೋದ್ಯೋಗಗಳ ಬೇರೆ ಬೇರೆ ಪ್ರಯೋಗ ಮಾಡುವ ದಿತ್ತು. ಇದಕ್ಕಾಗಿ ಸಾಕಷ್ಟು ಜನರು ದೊರೆಯುವರೆಲ್ಲಿ? ಅವರ ಲಕ್ಷ್ಯವು ವಿನೋಬಾಜಿಯವರ ಕಡೆಗೆ ಹೊರಳಿತು. ಸ್ವರ್ಗೀಯ ಜಮನಲಾಲರೂ ಅಲ್ಲಿಯೇ ಇದ್ದರು. ಅಲ್ಲದೇ ವರ್ಧೆಯು ಮಧ್ಯವರ್ತಿ ಸ್ಥಳವು. ಎಲ್ಲರಿಗೂ ಭೆಟ್ಟಿ ಯಾಗಲಿಕ್ಕೆ ಸುಲಭವಾದದ್ದು. ಅಲ್ಲಿಯ ಮುಖ್ಯ ವೈಶಿಷ್ಟ್ಯವೆಂದರೆ ಅಲ್ಲಿದ್ದ ವ್ರತಸ್ಥ ಸೇವಕರ ಗುಂಪು.

**ಸೇವಾಮಯ ಮಿತ್ರಮಂಡಲಃ—**

ವಿನೋಬಾಜಿಯವರ ತಮ್ಮಂದಿರು ಮತ್ತು ಅವರ ಎಲ್ಲ ಮಿತ್ರರು ಇಂದು ಅವರ ಸಂಗಡವೇ ಇರುತ್ತಾರೆ. ಶ್ರೀ ಮೋಘೇಜಿ, ಶ್ರೀ ಬಾಳೂಜಿ ಕರಜಿ, ಶ್ರೀ ಗೋಪಾಳರಾವ ಕಾಳೆ, ಶ್ರೀ ಧೋತ್ರೇಜಿ ಇವರೆಲ್ಲರೂ ವಿನೋಬಾಜಿಯವರ ಬಡೋದೆಯ ಮಿತ್ರರು. ಇವರು ಎಷ್ಟೋ ದಿವಸಗಳಿಂದ ಸೇವಾಕಾರ್ಯ ಮಾಡುತ್ತಲೇ ಇರುವರು. ಹಿಂದುಸ್ಥಾನದಲ್ಲಿ ಮಹಾರೋಗದ ಪರಿಹಾರದ ಸಲುವಾಗಿ ಕೇವಲ ಮಿಶನರಿ ಜನರು ಆಸ್ಪತ್ರೆಯನ್ನು ತೆರೆದಿರುವರು. ನಾವೇನು ಮಾಡುತ್ತಲಿರುವೆವು? ಆದರೆ ವಿನೋಬಾಜಿಯವರ ಮಿತ್ರರಾದ

ಶ್ರೀ ಪ್ರಭಾಕರಜೀಯವರು ಮಹಾರೋಗಿ ಜನರ ಸೇವೆಯ ಸಲುವಾಗಿ ಸಿದ್ಧರಾದರು. ಮತ್ತು ವರ್ಧಾದ ಹತ್ತಿರ ಮಹಾರೋಗಿಗಳ ಸಲುವಾಗಿ ಒಂದು ಸುಂದರ ಮತ್ತು ಆದರ್ಶ ರುಗ್ಣಾಲಯವನ್ನು ನಡೆಸುತ್ತಲಿರುವರು. ಶ್ರೀ ವಾಳುಂಜಕರಜೀಯವರು ಚರ್ಮಾಲಯ ಪ್ರಾರಂಭಿಸಿದರು. ದನಕರುಗಳು ಸಾಯುತ್ತವೆ, ಅವುಗಳ ತೊಗಲು ಹೇಗೆ ತೆಗೆಯಬೇಕು, ಚರಬಿಯನ್ನು ಹೇಗೆ ತೆಗೆಯಬೇಕು, ಎಲುವಿನಿಂದ ಗೊಬ್ಬರ ಹೇಗೆ ಮಾಡಬೇಕು? ಇವೆಲ್ಲವುಗಳನ್ನು ತೋರಿಸುವದರ ಸಲುವಾಗಿ ಅವರು ಆದರ್ಶ ಚರ್ಮಾಲಯವನ್ನು ಪ್ರಾರಂಭಿಸಿರುವರು—ಈ ಪ್ರಕಾರ ವಿನೋಬಾಜಿಯವರ ಮಿತ್ರರು ರಾಷ್ಟ್ರಸಂವರ್ಧಕ ಮತ್ತು ರಾಷ್ಟ್ರೋದ್ಧಾರದ ಕಾರ್ಯಗಳಲ್ಲಿ ಮಗ್ನರಾಗಿರುವರು ನಿರ್ವಿಕಾರ ಬುದ್ಧಿಯಿಂದ ಇವರು ಕೆಲಸಮಾಡುತ್ತಲಿರುವರು. ಅಲ್ಲದೆ ಅದು ಶಾಸ್ತ್ರಶುದ್ಧವೂ ಇರುತ್ತದೆ. ಇದೇ ಮಹಾತ್ಮರ ಆಕರ್ಷಣದ ಕಾರಣ.

ವಿನೋಬಾಜಿಯವರು ನೋಡಲಿಕ್ಕೆ ಕಠೋರರಾಗಿ ಕಂಡರೂ ಸ್ವಭಾವತಃ ಹಾಗಿರುವದಿಲ್ಲ ಹತ್ತಿರಿರುವ ಮಕ್ಕಳ ಸಂಗಡ ಅವರೆಷ್ಟು ಪ್ರೇಮದಿಂದ ವರ್ತಿಸುತ್ತಾರೆ? ಈ ಚಿಕ್ಕಮಕ್ಕಳು ಆಶ್ರಮದಲ್ಲಿಯೇ ದೊಡ್ಡವರಾದರು. ವಲ್ಲಭನು ವಿನೋಬಾಜಿಯವರ ಪಟ್ಟ ಶಿಷ್ಯನು. ವಲ್ಲಭನನ್ನು ಅವರೇ ಬೆಳಸಿ ಶಿಕ್ಷಣ ಕೊಟ್ಟರು. ವಲ್ಲಭನು ಇಂದು ವೇದಗಳನ್ನು ಓದುತ್ತಾನೆ ಉಪನಿಷತ್ತು ತಿಳಿದುಕೊಂಡಿದ್ದಾನೆ. ಸುಂದರವಾಗಿ ಚರ್ಚೆ ಮಾಡುತ್ತಾನೆ. ಯಾವದೇ ಕೆಲಸವನ್ನು ಕೊಟ್ಟರೂ ವ್ಯವಸ್ಥಿತವಾಗಿ ಮಾಡುತ್ತಾನೆ. ವಿನೋಬಾಜಿಯವರು ಆಯಾ ಹುಡುಗರಿಗೆ ಯೋಗ್ಯವಾದಷ್ಟೇ ವಿಷಯಗಳನ್ನು ಹೇಳುತ್ತಾರೆ. ಶ್ರೀ ಅಣ್ಣಾಸಾಹೇಬ ದಾಸ್ತಾನೆಯವರ ಮಗ ದತ್ತೋಬನು ಆಶ್ರಮದಲ್ಲಿಯೇ ಬೆಳೆದನು. ಆತನ ಹತ್ತಿರ ವಿನೋಬರು ಶಂಕರ ಭಾಷ್ಯವನ್ನು ಓದುತ್ತಾರೆ. ವಿನೋಬಾಜಿಯವರು ತಮ್ಮ ಸುತ್ತಲಿರುವ ಮಕ್ಕಳಿಗೆ ಕರ್ಮಶೀಲರನ್ನಾಗಿ ಮಾಡಿರುವರಲ್ಲದೇ ವಿಚಾರಶೀಲರನ್ನಾಗಿಯೂ ಮಾಡಿರುತ್ತಾರೆ.

ವಿನೋಬಾಜಿಯವರೆಂದರೆ ಆಶ್ರಮದ ತಂದೆ ತಾಯಿಗಳು. ಯಾವಾಗಾದರೊಮ್ಮೆ ಕಠೋರರಾಗುತ್ತಾರೆ. ಒಮ್ಮೊಮ್ಮೆ ಸಿಟ್ಟಿಗೇಳುತ್ತಾರೆ. ಆದರೆ ತಾಯಿಯ ಪ್ರೇಮದ ಹೃದಯವು ಅವರಲ್ಲಿದೆ.

**ಒಲೆ ತೆಗೆದುಕೊಂಡು ನನ್ನ ಬಳಿಗೇ ಬಂದರು:—**

ನಾನು ತುಸು ಸಂಕೋಚವೃತ್ತಿಯವ. ದೂರದಲ್ಲಿಯೇ ಇರುವವ. ಒಮ್ಮೆ ವಿನೋಬಾಜಿಯವರ ಸಂಗಡ ಇದ್ದೆನು. ಬೆಳಗಿನ ಪ್ರಾರ್ಥನೆಯಾಯಿತು. ಬಹಳ ಚಳಿ ಬಿದ್ದಿತ್ತು. ಮನೆಯ ಯಜಮಾನನು ಒಲೆಯನ್ನು ಹೊತ್ತಿಸಿ ವಿನೋಬಾಜಿಯವರ ಹತ್ತಿರ ಇಟ್ಟನು. ವಿನೋಬಾಜಿಯವರು ಕಾಸಿಕೊಳ್ಳುತ್ತಲಿದ್ದರು. ನಾನು ದೂರದಲ್ಲಿ ಕುಳಿತಿದ್ದೆನು. ನಾನು ಅವರ ಹತ್ತಿರ ಹೋಗದಿದ್ದುದನ್ನು ನೋಡಿ, ಅವರೇ ಒಲೆಯನ್ನೆತ್ತಿಕೊಂಡು ನನ್ನ ಹತ್ತಿರ ಬಂದು "ಪರ್ವತವು ಮುಹಮ್ಮದನ ಕಡೆಗೆ ಬಾರದಿದ್ದರೆ, ಮುಹಮ್ಮದನೇ ಪರ್ವತದ ಕಡೆಗೆ ಹೋಗಬೇಕಾಗುತ್ತದೆ." ಎಂದೆನ್ನುತ್ತ ನಕ್ಕರು. ನನಗೆ ತುಸು ನಾಚಿಕೆ ಎನಿಸಿತು.

**ಜನತಾ ಎಂದರೆ ಜನಾರ್ದನ:—**

"ದೇವರ ಸಲುವಾಗಿ ಎಲ್ಲಿಯಾದರೂ ಒಂದು ಶಾಂತಸ್ಥಳದಲ್ಲಿ ಕೂಡ ಬೇಕೆನಿಸುತ್ತದೆ." ಎಂದು ಅವರಿಗೆ ಒಮ್ಮೆ ನಾನು ಬರೆದನು. ಅವರು ಅದಕ್ಕೆ ಉತ್ತರ ಬರೆದರು— "ಎಲ್ಲಿಗೆ ಹೋಗುವಿರಿ? ತೀರ್ಥಗಳ ಪಾವಿತ್ರ್ಯವೂ ಉಳಿದಿಲ್ಲ. ಮತ್ತು ದೇವರು ಎಲ್ಲ ಕಡೆಯಲ್ಲಿಯೂ ಇಲ್ಲವೇನು? ನಮ್ಮ ನೆರೆ ಹೊರೆಯ ಜನರೆಂದರೇನೇ ಪರಮೇಶ್ವರ ಎಂದು ನನ್ನ ಭಾವನೆ ಇರದಿದ್ದರೆ ನಾನೆಂದೋ ಹಿಮಾಲಯಕ್ಕೆ ಹೋಗುತ್ತಲಿದ್ದೆ."

**ನಂದಾದೀಪವೇ ಲೇಸು:—**

"ಪೂರ್ವಖಾನದೇಶದಲ್ಲಿ ಈ ಸಲ ಹತ್ತು ಸಾವಿರ ಸದಸ್ಯರನ್ನು ಮಾಡುವ ಸಂಕಲ್ಪ ಮಾಡಿದ್ದೇನೆ." ಎಂದು ವಿನೋಬಾಜಿಯವರಿಗೆ ಫೈಜಪೂರ ಕಾಂಗ್ರೆಸದ ವೇಳೆಗೆ ಬರೆದೆನು. ಆ ಸಮಯಕ್ಕೆ ಹೆಚ್ಚಾಗಿ ಯಾರೂ ಸಭಾಸದರನ್ನು ಮಾಡುತ್ತಿರಲಿಲ್ಲ. ಮಹಾರಾಷ್ಟ್ರದ ಒಂದು ಜಿಲ್ಲೆಯಲ್ಲಿ ಹತ್ತು ಸಾವಿರ ಸದಸ್ಯರನ್ನು ಮಾಡುವದೆಂದರೆ ಅದೊಂದು ಹೊಸ ಪ್ರಸಂಗವೇ

ಆಗಿತ್ತು. ಮುಂದೆ ಕಾಂಗ್ರೆಸ ಮಂತ್ರಿಮಂಡಲವು ಅಸ್ತಿತ್ವದಲ್ಲಿ ಬಂದ ಮೇಲೆ ಇಪ್ಪತ್ತು ಇಪ್ಪತ್ತೈದು ಸಾವಿರ ಸದಸ್ಯರನ್ನು ಒಂದೊಂದು ಜಿಲ್ಲೆಗಳು ಮಾಡ ಹತ್ತಿದವು. ವಿನೋಬಾಜಿಯವರು ನನಗೆ ಆಗ್ಗೆ ಕಾಗದ ಬರೆದರು— "ನಿಮ್ಮ ಎಲ್ಲ ಕೆಲಸವು ವಿದ್ಯುತ್ ದೀಪದಂತೆ. ಮನಸ್ಸಿನಲ್ಲಿ ಬಂದಾಗ್ಗೆ ಬೇಕಾದಷ್ಟು ಕೆಲಸ ಮಾಡುವಿರಿ. ಇಲ್ಲವಾದರೆ ಏನೂ ಇಲ್ಲ. ಸತತ ಮತ್ತು ಸುಸ್ಥಿರ ಕೆಲಸ ಬೇಕು. ವಿದ್ಯುತ್ ದೀಪವು ಕ್ಷಣಮಾತ್ರ ಇರುತ್ತದೆ. ಮುಂದೆ ಕಗ್ಗತ್ತಲೆ ಬೀಳುತ್ತದೆ. ಇದಕ್ಕಿಂತ ನಂದಾದೀಪವೇ ಲೇಸ.."

**ಸ್ವಂತ ದೋಷದ ತಿಳುವಳಿಕೆ:—**

ವಿನೋಬಾಜಿಯವರಿಗೆ ಅಹಂಕಾರವಿಲ್ಲ. ಪಶ್ಚಿಮ ಖಾನದೇಶದ ಖಾದೀ ಧಾರಿಗಳ ಸಮ್ಮೇಲನವಿತ್ತು. ಪೂರ್ವ ಖಾನದೇಶದ ಅದೆಷ್ಟೋ ಜನರು ಬಂದಿದ್ದರು. ಅದರಲ್ಲಿ ಜಳಗಾವದ ಹತ್ತರ ಇರುವ ಅಸೋದೆ ಗ್ರಾಮದ **ಶ್ರೀ ಚಾವದಾಸ ಭಾವು** ಇವರೂ ಇದ್ದರು. ಇವರು ಬಹಳ ಭಾವನಾಪ್ರಧಾನರು. ವಿನೋಬಾಜಿಯವರ ಸಂಗಡ ಅವರು ಮಾತಾಡುತ್ತಲಿದ್ದರು. ವಿನೋಬಾಜಿಯವರು ತುಸು ರೇಗಿಗೆದ್ದು ಹೀಗೆ ಹೇಳಿದರು "ಚರಖೆಯ ಮೇಲೆ ಚನ್ನಾಗಿ ಗತಿ ಇರುವದಿಲ್ಲ ತಕಲಿಯ ಮೇಲೆ ಇರುವದಿಲ್ಲ. ಅದನ್ನಾದರೂ ಮೊದಲು ಸಾಧ್ಯಮಾಡಿಕೊಳ್ಳಿರಿ. ವ್ಯರ್ಥವಾಗಿ ಉಳಿದ ಗೊಂದಲದಲ್ಲಿ ಯಾಕೆ ಬೀಳುತ್ತೀರಿ?" ಶ್ರೀ ಚಾವದಾಸ ಭಾವು ಇವರಿಗೆ ಬಹಳ ಕೆಡಕೆನಿಸಿತು. ಅವರು ಹೊರಟುಹೋದರು. ನಂತರ ಇದು ವಿನೋಬಾಜಿಯವರಿಗೆ ಹೊಳೆದಾಗ ಅವರು ಬಹಳ ವಿಷಾದಪಟ್ಟರು. ಬೆಳಗಿನ ಪ್ರಾರ್ಥನೆಯ ಸಮಯಕ್ಕೆ— ಶ್ರೀ ಚಾವದಾಸ ಭಾವು ಇವರ ಘಟನೆಯ ಉಲ್ಲೇಖವನ್ನು ಮಾಡಿದರು. "ನಾನು ತುಸು ಸಿಟ್ಟಿನಲ್ಲಿ ಮಾತಾಡಿದೆನು. ಆ ಸದ್ಗೃಹಸ್ಥನು ಒಮ್ಮೆಲೆ ಎದ್ದು ಹೋಗುವನೆಂದು ನನಗೆ ಭಾಸವಾಗಲಿಲ್ಲ. ಆದರೆ ಆದ ಪ್ರಕಾರವು ಹೀಗಿದೆ. ಸಿಟ್ಟು ತುಸು ಇದ್ದರೂ ಸಹ ಅದು ಕೆಡಕು. ಕೂಡಲೆ ನಾವು ಕುರುಡರಾಗುತ್ತೇವೆ. ಕೂಡಲೇ ತಪ್ಪು ದಾರೀ ಹಿಡಿಯುತ್ತೇವೆ. ಅದಿರಲಿ. ನಾವೆಲ್ಲರೂ ಮನುಷ್ಯರೇ. ತಪ್ಪುಗಳು ಆಗತಕ್ಕವುಗಳೇ. ಅದನ್ನು ಆ ಪ್ರಭುವು ಹೊಟ್ಟೆಯಲ್ಲಿ ಹಾಕಿಕೊಳ್ಳುವನು"

ಆ ಸಮಯದ ವಿನೋಬಾಜಿಯವರ ಕಂಪಿತ ಧ್ವನಿ ಮತ್ತು ಕರುಣ ಶಬ್ದಗಳನ್ನು ಮರೆಯಲು ಸಾಧ್ಯವಿಲ್ಲ.

**ಹಳ್ಳಿಗಳಲ್ಲಿ ಪ್ರಚಾರ ಹೇಗೆ ಮಾಡಬೇಕು:—**

೧೯೩೨ ನೇ ಇಸವಿಯಲ್ಲಿ ಧುಳೆ ಜೇಲಿನಲ್ಲಿದ್ದಾಗ್ಗೆ ಒಂದು ದಿವಸ ಖಾಸ ದೇಶದಲ್ಲಿ ಹೇಗೆ ಕೆಲಸ ಮಾಡಬೇಕು ಎಂಬ ಬಗ್ಗೆ ಚರ್ಚೆಯು ಪ್ರಾರಂಭ ವಾಯಿತು. ಆಗ ಶ್ರೀ ಅಣ್ಣಾಸಾಹೇಬ ದಾಸ್ತಾನೆ ಅವರು— "ಯೋಜನೆ ಯನ್ನು ಕಾಗದದ ಮೇಲೆ ಬರೆಯಿರಿ" ಎಂದು ಅಂದರು. ಅದಕ್ಕೆ ವಿನೋಬಾ ಜಿಯವರು ಹೀಗೆಂದರು "ಕಾಗದದ ಮೇಲೆ ಬೇಡ ಆ ಯೋಜನೆಯು ಕಾಗದದ ಮೇಲೆಯೇ ಉಳಿಯಬಹುದು. ಕೇವಲ ಬರೆಯುವದು ಬೇಡ. ಕಾರ್ಯಮಾಡಲುದ್ಯುಕ್ತರಾಗಿರಿ. ಅದರಿಂದ ತಂತಾನೇ ನಿಮ್ಮ ಕಾರ್ಯಕ್ಕೆ ಮೂರ್ತ ಸ್ವರೂಪ ಪ್ರಾಪ್ತವಾಗುವದು. ತಾಲೂಕಿಗೆ ಕನಿಷ್ಟ ಹತ್ತು ಕಾರ್ಯಕರ್ತರಾದರೂ ಬೇಕು. ಒಬ್ಬೊಬ್ಬನ ಕಡೆಗೆ ೨೦–೨೫ ಹಳ್ಳಿಗಳು ಬೇಕು. ತಿಂಗಳಲ್ಲಿ ಒಮ್ಮೆ ಯಾದರೂ ಪ್ರಚಾರಕನು ಆ ಹಳ್ಳಿಗಳಿಗೆ ಭೆಟ್ಟಿಯಾಗಬೇಕು. ಆಯಾ ಹಳ್ಳಿ ಗಳ ಗೆಜೆಟ್ಟನ್ನು ಆ ಕಾರ್ಯಕರ್ತರು ಸಿದ್ಧಮಾಡಬೇಕು. ಹಳ್ಳಿಯ ಜನಸಂಖ್ಯೆ ಎಷ್ಟಿದೆ? ಉದ್ಯೋಗ ಧಂದೆ ಯಾವು ಇರುತ್ತವೆ? ಹೊರಗಿನಿಂದ ಯಾವ ವಸ್ತುಗಳು ಬರುತ್ತವೆ? ಹೊಲದ ತೆರಿಗೆ ಎಷ್ಟಿದೆ? ಸಾಲವೆಷ್ಟಿದೆ? ಶಾಲೆ ಇರುತ್ತದೆಯೋ? ಭಾವಿ ಇರುತ್ತದೆಯೋ? ಪಕ್ಷ ಉಪಪಕ್ಷಗಳು ಹಳ್ಳಿ ಯಲ್ಲಿರುತ್ತವೆಯೋ? ಗುಂಡಾ ಜನರ ತೊಂದರೆಯು ಎಷ್ಟರ ಮಟ್ಟಿಗೆ ಆಗು ತ್ತದೆ? ಜಾತಿ ಜಾತಿಗಳಲ್ಲಿ ಪ್ರೇಮ ಇರುವದೇ? ಹರಿಜನರ ಸ್ಥಿತಿ ಹೇಗಿದೆ? ಈ ಎಲ್ಲ ವಿಷಯಗಳನ್ನು ಕೂಡಿಸಬೇಕು. ಯಾವ ಪಕ್ಷಕ್ಕೂ ಸಂಬಂಧಿಸಿ ದವನಾಗಿರಬಾರದು. ಹಳ್ಳಿಗರ ಸಂಗಡ ಮಾತಾಡಬೇಕು. ಒಬ್ಬನಿಗಾದರೂ ನೂಲಲಿಕ್ಕೆ ಕಲಿಸುವೆನು, ಒಬ್ಬನಿಗಾದರೂ ಎರಡಕ್ಷರ ಕಲಿಸುವೆನು, ಒಬ್ಬನಿ ಗಾದರೂ ಆಕಳ ಹಾಲಿನ ಸೇವನೆಯನ್ನು ಮಾಡಲಿಕ್ಕೆ ಹಚ್ಚುವೆನು, ಒಬ್ಬ ನನ್ನಾದರೂ ಖಾದಿಧಾರಿಯನ್ನಾಗಿ ಮಾಡುವೆನು ಎಂಬ ಸಂಕಲ್ಪವನ್ನು ಕಾರ್ಯಕರ್ತರು ಮಾಡಬೇಕು. ತನ್ನ ಕ್ಷೇತ್ರದಲ್ಲಿರುವ ಹಳ್ಳಿಗಳಿಗೆ ಮೇಲಿಂದ ಮೇಲೆ ಭೆಟ್ಟಿಯನ್ನು ಕೊಡಬೇಕು. ಅವರ ಪರಿಚಯವನ್ನು ಹೆಚ್ಚಾಗಿ

ಬೆಳೆಸಬೇಕು. ಅವರಿಗೆ ಹೊಸ ವಿಚಾರ ತಿಳಿಸಬೇಕು. ಪ್ರೇಮ ಬೆಳೆಸಬೇಕು. ತನ್ನ ಮಿತ್ರ ವರ್ಗದ ಸಂಖ್ಯೆ ಬೆಳೆಸುತ್ತಾ ಹೋಗಬೇಕು. ೧೯೩೦ನೇ ಇಸವಿಯಲ್ಲಿ ವರ್‍ಹಾಡ ಒಂದು ತಹಶೀಲದಿಂದ ನೂರು ನೂರಾ ಐವತ್ತು ಸ್ತ್ರೀಯರು ತುರಂಗಕ್ಕೆ ಹೋದರು. ಇದು ಪ್ರಚಾರದ ಪರಿಣಾಮವಲ್ಲದೆ ಮತ್ತೇನು? ಇದು ಸೇವಾಮಯ ಮತ್ತು ಪ್ರೇಮಮಯ ಸೇವೆಯ ಪರಿಣಾಮವು. ಆಶ್ರಮದ ಪ್ರಚಾರಕನು ಒಮ್ಮೆ ಒಂದು ಹಳ್ಳಿಗೆ ಹೋಗಿದ್ದನು. ಅಲ್ಲಿ ಕಾಲರಾ ಇತ್ತು. ಕಾಲರಾ ಹೋಗಬೇಕೆಂದು ಜನರು ಕುರಿಯ ಮೆರವಣಿಗೆಯನ್ನು ತೆಗೆದು ಅದನ್ನು ಹುಗಿಯುವವರಿದ್ದರು. ಹೊರಗೆ ಒಂದು ದೊಡ್ಡ ತಗ್ಗು ತೆಗೆದಿದ್ದರು. ಪ್ರಚಾರಕರು ಬೇಕಾದಷ್ಟು ಹೇಳಿದರೂ ಕುರಿಯನ್ನು ಕೊಲ್ಲುವದರಿಂದೇನು ಪ್ರಯೋಜನ? ಎಂದು ನಾನಾ ಬಗೆಯಾಗಿ ತಿಳಿಸಿ ಹೇಳಿದರು. ಇದು ಕಾಲರಾ ಜಂತುವಿನ ಪರಿಣಾಮ ಇರುತ್ತದೆ. ನೀರು ಕಾಸಿ ಕುಡಿಯಿರಿ, ಎಂದರೆ ಕೇಳುವವರಾರು? ಕೊನೆಗೆ ಆ ಪ್ರಚಾರಕನು ಆ ತಗ್ಗಿನಲ್ಲಿ ತಾನೇ ಹೋಗಿ ಕುಳಿತನು. ಮೆರವಣಿಗೆಯು ಅಲ್ಲಿಯೇ ಬಂದಿತು. ಆ ಪ್ರಚಾರಕನು ತಗ್ಗಿನಲ್ಲಿ ರಾಮನಾಮೋಚ್ಚಾರ ಮಾಡುತ್ತ ಕುಳಿತಿದ್ದನು. ಜನಸಮೂಹಕ್ಕೆ ಆತನು "ನನ್ನನ್ನು ಹುಗಿದುಬಿಡಿರಿ, ಕಾಲರಾ ಎಂದೆಂದಿಗೂ ಬರುವದಿಲ್ಲ;" ಎಂದನು. ಆತನ ಈ ಮರಣಾಂತಿಕ ನಿಷ್ಠೆಯನ್ನು, ನೋಡಿ, ಜನರ ಮನಸ್ಸು ಕರಗಿತು. ಈ ಸಂಪ್ರದಾಯ ಬಂದಾಯಿತು. ಈ ಪ್ರಕಾರದ ಸಜೀವ ಉತ್ಕೃಷ್ಟ ಪ್ರಚಾರ ಬೇಕು. ಒಂದೊಂದು ಹಳ್ಳಿಯಲ್ಲಿ ಸ್ವಂತ ವಿಚಾರದ ಮನುಷ್ಯರನ್ನು ಹುಡುಕಿಡುತ್ತ ಹೋಗಬೇಕು ಹಳ್ಳಿಗೊಬ್ಬರಾದರೂ ಇಂಥ ವಿಭೀಷಣರು ಬೇಕು ಅಂದರೆ ರಾಮನ ಕೆಲಸವು ಸಾಧ್ಯವಾಗುವದು. ಪ್ರತಿಯೊಬ್ಬ ಕಾರ್ಯಕರ್ತನಿಗೆ ತನ್ನ ಹಿಂದೆ ಹತ್ತು ಜನರಿರುವರೆಂಬ ಭರವಸೆ ಇರಬೇಕು ತಾನೊಬ್ಬನೆಂದರೆ ಹತ್ತು ಜನರು, ೫೫ ಜನರು, ೧೦೦ ಜನರು, ಎಂಬ ವಿಶ್ವಾಸ ಬೇಕು. ಒಂದು ಜಿಲ್ಲೆಯಲ್ಲಿ ಒಂದು ನೂರು ಕಾರ್ಯಕರ್ತರಿರುವರೆಂದು ಗ್ರಹಿಸುವಾ. ಮತ್ತು ಪ್ರತಿಯೊಬ್ಬ ಕಾರ್ಯಕರ್ತನ ಹಿಂದೆ ಒಂದು ನೂರು ಜನರ ಬೆಂಬಲವಿದ್ದರೆ ಹತ್ತುಸಾವಿರ ಸತ್ಯಾಗ್ರಹಿಗಳ ಅಖಂಡ ಸೇವೆಯು ಸಿದ್ಧವಾಗಿ ನಿಲ್ಲುತ್ತದೆ. ಇದು ನಿಜವಲ್ಲವೇ! ಈ ಪ್ರಕಾರವಾಗಿ ಕಾಂಗ್ರೆಸದ ಪ್ರಚಾರ, ಖಾದಿಯ ಪ್ರಚಾರ, ಮತ್ತು ಉಳಿದ ವಿಷಯಗಳ ಪ್ರಚಾರ

ಮಾಡುತ್ತ ಹೋಗಬೇಕು. ವಾತಾವರಣದಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸ ಬೇಕು.

## ಧರ್ಮವನ್ನು ಬಹಿರಂಗವಾಗಿ ಕಲಿಸಿರಿ:—

ಪರಧರ್ಮದ ಮುಂದೆ ಪ್ರಚಾರ ಮಾಡಲಿಕ್ಕೆ ಬಾರದೇ ಇದ್ದ ಧರ್ಮ ದಲ್ಲಿ ಏನಾದರೂ ಕುಂದು ಕೊರತೆ ಇರಬಹುದೆಂದು ವಿನೋಬಾಜಿಯವರು ಒಮ್ಮೆ ಹೇಳಿದರು. ನನ್ನ ಧರ್ಮವನ್ನು ಎಲ್ಲರೆದುರು ಹೇಳಲಿಕ್ಕೆ ನನಗೆ ಸಂಕೋಚವೆನಿಸಕೂಡದು. ನಿಜವಾದ ಧರ್ಮವು ಎಲ್ಲ ಮಾನವರಿಗೂ ಯೋಗ್ಯ ವೆನಿಸುವದು ನಮ್ಮ ಧರ್ಮವು ಸಂಕುಚಿತವಿದ್ದರೆ ಮಾತ್ರ ನಾವು ಅದನ್ನು ಒಳಗೇ ಪ್ರಚಾರ ಮಾಡಬೇಕಾಗುವದು. ಉದಾರ ಮತ್ತು ಉನ್ನತ ವಿಚಾರ ಗಳಿರುವ ಧರ್ಮವನ್ನು ಎಲ್ಲಿ ಬೇಕಾದಲ್ಲಿ ಹೇಳಲಿಕ್ಕೆ ಏನು ಅಭ್ಯಂತರವು? ಯಾರು ಬೇಕಾದವರು ಕೇಳಲಿಕ್ಕೆ ಏನು ಅಡ್ಡಿ ಇದೆ?

## ನಾನು ಕಲಾಪೂಜಕನಿದ್ದೇನೆ:—

ಒಮ್ಮೆ ಓರ್ವ ರಸಿಕನು ವಿನೋಬಾಜಿಯವರ ಕಡೆಗೆ ಬಂದು ಒಂದು ಸುಂದರ ಚಿತ್ರವನ್ನು ಅವರಿಗೆ ತೋರಿಸಹತ್ತಿದನು. ವಿನೋಬಾಜಿಯವರು ತುಸು ನೋಡಿದರು. ಆ ಗೃಹಸ್ಥನು ಹೀಗೆಂದನು "ನಿಮಗೆ ಕಲೆಯಲ್ಲಿ ರುಚಿಯಿಲ್ಲವೆ? ಇಲ್ಲಿ ನೋಡಿರಿ ಹಸರು ಬಣ್ಣ. ಇದು ಗುಲಾಬಿ," ಇದಕ್ಕೆ ವಿನೋಬಾಜಿಯವರು 'ನನ್ನ ಸಂಗಡ ನಡೆಯಿರಿ, ನನ್ನ ಕಲೋಪಾಸನೆ ಯನ್ನು ನಿಮಗೆ ತೋರಿಸುತ್ತೇನೆ" ಎಂದರು. ಅವರಿಬ್ಬರೂ ಹೊರಟರು. ವಿನೋಬಾಜಿಯವರು ಹರಿಜನ ವಸತಿಯ ಕಡೆಗೆ ಹೊರಳಿದರು. ವಿನೋಬಾಜಿ ಯವರು- "ನನ್ನ ಕಲಾಮಂದಿರವು ಇತ್ತ ಕಡೆಗೆ ಇದೆ" ಎಂದರು. ಹರಿ ಜನರ ವಸತಿಯು ಬಂದಿತು. ಅಲ್ಲಿ ಹರಿಜನ ನಿಃಸತ್ವ ಮತ್ತು ಅಶಕ್ತ ಮಕ್ಕ ಳಿದ್ದರು. ವಿನೋಬಾಜಿಯವರು ಆ ಕಲಾಪೂಜಕನಿಗೆ ಹೀಗೆಂದರು—"ನೀನು ಆ ಚಿತ್ರವನ್ನು ಐವತ್ತು ರೂಪಾಯಿ ಕೊಟ್ಟು ಕೊಂಡಿರುವಿರಿ ಅದರ ಬದಲು ಈ ಚಿಕ್ಕಮಕ್ಕಳಿಗೆ ಐವತ್ತು ರೂಪಾಯಿಯ ಹಾಲು ಕುಡಿಸಿದ್ದರೆ ಈ ಮಕ್ಕಳ ಮುಖದ ಮೇಲೆ ಗುಲಾಬಿ ಬಣ್ಣವು ಹೊಳೆಯುತ್ತಿತ್ತು. ಈ ದೇವರ ಚಿತ್ರವು

ಸ್ಪರ್ಧ ಹೋಗುತ್ತಲಿದೆ. ಮತ್ತು ನಿರ್ಜೀವ ಚಿತ್ರಗಳನ್ನು ನೀವು ಮನೆಯಲ್ಲಿಡುತ್ತೀರಿ. ನಾನು ರಸಿಕನಿರುವೆನಲ್ಲವೆ? ಇದು ನನ್ನ ಕಲೋಪಾಸನೆಯು. ಈ ಬಡವರ ಮುಖವನ್ನು ಅರಳಿಸುವದೇ ನನ್ನ ಕಲೆಯು.

**ಹಿಂದೀ ಪ್ರಚಾರಃ**

ರಾಷ್ಟ್ರಭಾಷೆಯ ಪ್ರಚಾರವು ಅತ್ಯವಶ್ಯವಾಗಿದೆ ಎಲ್ಲರಿಗೂ ತಿಳಿಯು ವಂಥ ಹಿಂದೀ ನಮಗೆ ಮಾತಾಡಲಿಕ್ಕೆ ಬರಬೇಕು. ಒಮ್ಮೆ ಮಲಬಾರ ಕಡೆ ಯುವನೊಬ್ಬನು ವಿನೋಬಾಜಿಯವರ ಕಡೆಗೆ ಬಂದನು. ತಾನು ಯಾವ ಕೆಲಸವನ್ನು ಕೈಕೊಳ್ಳಬೇಕೆಂಬ ಬಗ್ಗೆ ಸಲಹೆ ಕೇಳಿಕೊಂಡು ಹೋಗಲು ಆತನು ಬಂದಿದ್ದನು. ವಿನೋಬಾಜಿಯವರು ಆತನ ಸಂಗಡ ಹಿಂದೀ ಮಾತಾಡಹತ್ತಿದರು. ಅದು ಅವನಿಗೆ ತಿಳಿಯಲಿಲ್ಲ. ಆಗ್ಗೆ ವಿನೋಬಾಜಿಯವರು "ಇನ್ನೂ ನಿನಗೆ ಹಿಂದೀ ತಿಳಿಯುವದಿಲ್ಲ. ಆದುದರಿಂದ ಮೊದಲು ಹಿಂದೀ ಕಲಿಯಲು ಪ್ರಾರಂಭಿಸು" ಆ ಮನುಷ್ಯನ ಮೇಲೆ ವಿನೋಬಾಜಿಯವರ ಶಬ್ದದ ವಿಲಕ್ಷಣ ಪರಿಣಾಮವಾಯಿತು. ಆತ ಹಿಂದೀ ಕಲಿಯ ಹತ್ತಿದ. ಮುಂದೆ ಹಿಂದೀ ಪ್ರಚಾರದಲ್ಲಿಯೇ ಕಾರ್ಯ ಮಾಡಹತ್ತಿದ. ಆತನು ಒಂದು ಆಶ್ರಮವನ್ನು ಪ್ರಾರಂಭಿಸಿ ಅದಕ್ಕೆ "ವಿನೋಬಾಶ್ರಮ" ಎಂದು ಹೆಸರಿಟ್ಟಿರುವನು.

**ತೂಕ ಹೆಚ್ಚಿಸಿದರುಃ—**

ವಿನೋಬಾಜಿಯವರ ಪ್ರಕೃತಿ ಅಶಕ್ತವಾಯಿತು. ಶ್ರೀ ಜಮುನಲಾಲರು ಒಮ್ಮೆ ಮಹಾತ್ಮರಿಗೆ 'ನೀವು ಇನ್ನು ವಿನೋಬಾಜಿಯವರ ಆರೋಗ್ಯದ ಕಡೆಗೆ ಲಕ್ಷ್ಯಕೊಡಿರಿ" ಎಂದು ಹೇಳಿದರು. ಕೊನೆಗೆ ಮಹಾತ್ಮರು ವಿನೋಬರಿಗೆ ಹೀಗೆ ಹೇಳಿದರು – "ಇದು ನೋಡು, ನಿನ್ನನ್ನು ನನ್ನ ಅಧೀನದಲ್ಲಿ ತೆಗೆದುಕೊಳ್ಳಬೇಕಾಗಿ ಬಂತು. ಇಲ್ಲವಾದರೆ ನಿನ್ನ ಪ್ರಕೃತಿ ಸುಧಾರಿಸಲಾರದು."

"ಮೂರು ತಿಂಗಳು ಅವಧಿಯನ್ನು ಕೊಡಿರಿ." ಎಂದು ವಿನೋಬಾಜಿಯವರು ಹೇಳಿದರು ಆವರು ಆರೋಗ್ಯ ಸುಧಾರಿಸಿಕೊಳ್ಳಲು ಲಕ್ಷ್ಯವೀಯ ಹತ್ತಿದರು. ಬಹಳ ತಿರುಗಾಡಹತ್ತಿದರು. ಬಿಸಿಲಲ್ಲಿ ಆಗಿಯಹತ್ತಿದರು.

ಟೊಮೆಟೊ ಮುಂತಾದವುಗಳನ್ನು ಸಾಕಷ್ಟು ತಿನ್ನಹತ್ತಿದರು. ಮತ್ತು ೨-೩ ತಿಂಗಳಲ್ಲಿ ಅವರ ತೂಕವು ಸಾಧಾರಣ ೨೦ ಪೌಂಡು ಬೆಳೆದು ೧೦೫ ಪೌಂಡು ಆಯಿತು. ನಾನು ಭೆಟ್ಟಿಯಾಗಲಿಕ್ಕೆ ಹೋದಾಗ್ಗೆ— "ನಾನು ಈಗ ಮಲ್ಲನಾಗಿಲ್ಲವೆ ?" ಎಂದು ಕೇಳಿದರು.

## ಹತ್ತರದ ಜನತೆಯು ಉಪವಾಸವಿದ್ದಾಗ್ಗೆ ನೀವೇನು ಮಾಡುತ್ತಿರುವಿರಿ ?

ಒಮ್ಮೆ ಜಮುನಲಾಲರು ಪ್ರಾರ್ಥನಾ ಸಮಯಕ್ಕೆ ವಿನೋಬಾಜಿಯವರ ಕಡೆಗೆ ಬಂದರು. ಪ್ರಾರ್ಥನೆಯ ನಂತರ ಏನಾದರೂ ನಾಲ್ಕು ಶಬ್ದ ಹೇಳಿರೆಂದು ಒತ್ತಾಯ ಮಾಡಹತ್ತಿದರು. ಆ ಸಮಯಕ್ಕೆ ವಿನೋಬಾಜಿಯವರು ಪವನಾರ ಗ್ರಾಮದಲ್ಲಿದ್ದರು. ಮುನ್ನಾ ದಿವಸ ವಿನೋಬಾಜಿಯವರು ಅದೇ ಗ್ರಾಮದಲ್ಲಿ ಕೆಲವು ಉಪವಾಸಿ ಜನರನ್ನು ಪ್ರತ್ಯಕ್ಷ ನೋಡಿದ್ದರು. ವಿನೋಬಾಜಿ ಅವರು ಅವರ ಬಗ್ಗೆಯೇ ಮಾತನಾಡಿದರು ಮತ್ತು ಬಹಳ ಕಠೋರವಾಗಿ ಹೇಳಿದರು. "ನಿಮ್ಮ ಹತ್ತರಿರುವ ಹಳ್ಳಿಯ ಜನರು ಇತ್ತ ಉಪವಾಸ ಸಾಯುತ್ತಲಿರುವರು, ನೀವೇನು ಮಾಡುತ್ತಲಿರುವಿರಿ ? ನಾನೇನು ನಿಮಗೆ ಹೇಳಲಿ ?" ಎಂದು ಮುಂತಾಗಿ ಬಹಳ ಮಾತಾಡಿದರು.

ಮತ್ತು ವಿನೋಬಾಜಿಯವರು ಅದೇ ಗ್ರಾಮದಲ್ಲಿ ಉದ್ಯೋಗ ಮಂದಿರವನ್ನು ಪ್ರಾರಂಭಿಸಿದರು. ಊರೊಳಗಿನ ನಿರುದ್ಯೋಗಿಗಳು ಅಲ್ಲಿ ಬಂದು ನೂತರೆ, ಕೂಲಿದೊರೆಯುವಂತೆ ವ್ಯವಸ್ಥೆ ಮಾಡಲಾಗಿತ್ತು. ಹುಡುಗರು ಬರಹತ್ತಿದರು. ವಿನೋಬಾಜಿಯವರು ಅವರೊಡನೆ ಸಮರಸವಾಗುತ್ತಿದ್ದರು. ಮೊದಲು ಬಲಗೈಯಿಂದ, ನಂತರ ಎರಡೂ ಕೈಯಿಂದ ನೂಲಲಿಕ್ಕೆ ಕಲಿಸುತ್ತಲಿದ್ದರು. ಅವರ ಸಂಗಡ ಅತಿ ಪ್ರೇಮದಿಂದ ಮಾತಾಡುತ್ತಲಿದ್ದರು. ಅವರ ಮನೆಯ ವಿಷಯಗಳನ್ನು ಕೇಳುತ್ತಲಿದ್ದರು. ಆ ದೃಶ್ಯವು ಬಹು ರಮ್ಯವಾಗಿ ಕಾಣುತ್ತಿತ್ತು.

## ಅಜಾತ ಶತ್ರು: —

ಶ್ರೀಮಂತರಂತೆ ಬಡವರೂ ವಿನೋಬಾಜಿಯವರ ಕಡೆಗೆ ಬರುತ್ತಾರೆ. ಸುತ್ತಲಿನ ಹಳ್ಳಿಯ ಒಕ್ಕಲಿಗರೂ ಬರುತ್ತಾರೆ. ಒಮ್ಮೊಮ್ಮೆ ಬಡ ರೈತರು

ಬಂದು ಒಳ್ಳೇ ರೇಗಿಗೆದ್ದು ಮಾತಾಡುತ್ತಾರೆ. ಮನಃಪೂರ್ವಕವಾಗಿ ರೈತರಲ್ಲಿ ಕೆಲಸ ಮಾಡುವ ಓರ್ವ ಕಾರ್ಯಕರ್ತನು ಅವರ ಕಡೆಗೆ ಬಂದಿದ್ದನು. ಆತನು ಬಲು ರೊಚ್ಚಿಗೆದ್ದು ಮಾತಾಡುತ್ತಿದ್ದನು. "ಈ ಎಲ್ಲ ಜಮೀನದಾರಿ ಪದ್ಧತಿಯನ್ನು ನಷ್ಟ ಮಾಡಲೇಬೇಕು. ಇದು ಸರ್ಪವಿರುತ್ತದೆ'' ಅದಕ್ಕೆ ವಿನೋಬಾಜಿಯವರು ಹೀಗೆ ಹೇಳಿದರು "ನಾವು ಸರ್ಪದಲ್ಲಿಯ ವಿಷವನ್ನು ತೆಗೆದುಬಿಡುವಾ, ಅಂದರಾಯಿತಲ್ಲವೆ? ಅದನ್ನು ನಾವು ಯಾಕೆ ಕೊಲ್ಲಬೇಕು? ಜುಲುಮೆ ಮಾಡುವ ಅವರ ಶಕ್ತಿಯನ್ನು ತೆಗೆದುಹಾಕಿಬಿಡುವಾ. ಜುಲುಮೆ ಮಾಡುವ ಅವರ ಸಾಧನಗಳನ್ನು ಅವರಿಂದ ದೂರದಲ್ಲಿರಿಸುವಾ.''

## ಹಳ್ಳಿಯ ಲಗ್ನವು ಎಲ್ಲರದಿರಬೇಕು :—

ಒಮ್ಮೆ ಅವರು ಹಳ್ಳಿಯಲ್ಲಿ ಹೀಗೆ ಹೇಳಿದರು "ಹಳ್ಳಿಯಲ್ಲಿ ಶ್ರೀಮಂತನು ತನ್ನ ಮನೆಯ ಲಗ್ನವನ್ನು ಒಳ್ಳೇ ಜೋರಾಗಿ ಮಾಡುವನು. ಬಡವರಿಗೂ ಹೀಗೆ ಮಾಡಬೇಕೆಂದೆನಿಸಿ ಸಾಲ ತೆಗೆಯುವರು. ಹಳ್ಳಿಯಲ್ಲಿ ಯಾರ ಮನೆಯಲ್ಲಿ ಲಗ್ನವಿದ್ದರೂ ಅದನ್ನು ಇಡೀ ಹಳ್ಳಿಯವರೇ ಮಾಡಬೇಕು. ಅಂದರೆ ಎಲ್ಲರ ಲಗ್ನಗಳು ಯೋಗ್ಯ ರೀತಿಯಿಂದ ನಡೆಯುವವು. ಕನಿಷ್ಟ ಆ ಸಮಯಕ್ಕಾದರೂ ಇಡೀ ಹಳ್ಳಿಯು ಒಂದು ಕುಟುಂಬದಂತೆ ಆಗಬೇಕು ಎಲ್ಲ ಹಳ್ಳಿಗರಿಗೆ ಅದು ಆನಂದದ ದಿವಸವಾಗಬೇಕು."

## ಆಶ್ರಮದಲ್ಲಿ ಹಿಂಸೆಯಿಲ್ಲ:—

ಆಶ್ರಮದಲ್ಲಿ ಎಲ್ಲೆಡೆಯಲ್ಲಿಯೂ ನಿರ್ಭಯತೆ ಇರುತ್ತದೆ. ಹಾವು, ಚೇಳು, ಯಾರೂ ಕೊಲ್ಲುವದಿಲ್ಲ. ಬೇಕಾದ ಹಾಗೆ ಅವುಗಳನ್ನು ಹಿಡಿದು ದೂರಬಿಟ್ಟು ಬರುತ್ತಾರೆ. ನಾನೊಮ್ಮೆ ಅಲ್ಲಿ ಹೋಗಿದ್ದೆ. ಅಂಕೆಯುಳ್ಳ ಒಂದು ಕೃಷ್ಣಸರ್ಪವು ಪಂಜರದಲ್ಲಿತ್ತು. ಆದರೆ ಅದನ್ನು ಬೇಗನೆ ಬಿಟ್ಟು ಬರತಕ್ಕವರಿದ್ದರು. ವರ್ಧಾದಲ್ಲಿ ಮೊದಲು ಮಹಿಲಾಶ್ರಮ, ಕನ್ಯಾಶ್ರಮಗಳಿದ್ದವು. ಅಲ್ಲಿಯ ಹುಡುಗೆಯರು ಸಹ ಚೇಳಿನ ಬಾಲವನ್ನು ಹಿಡಿದು ಹೊಲದಲ್ಲಿ ಬಿಟ್ಟುಬರುತ್ತಿದ್ದರು. ಈ ಪ್ರಕಾರದ ನಿರ್ಭಯತೆ ಅಲ್ಲಿ ಇರುತ್ತದೆ.

## ಮೊದಲನೇ ಸತ್ಯಾಗ್ರಹಿ :—

ಇಂಥ ವಿನೋಬಾಜಿಯವರನ್ನು ಮಹಾತ್ಮರು ೧೯೪೦ರಲ್ಲಿ ಮೊದಲನೇ ಸತ್ಯಾಗ್ರಹಿ ಎಂದು ಜಾಹೀರ ಮಾಡಿದರು. ಮಹಾತ್ಮರ ಸರ್ವಾಂಗೀಣ ಸಾಧನಗಳಲ್ಲಿ ವಿನೋಬಾಜಿ ಅವರಷ್ಟು ಯಾರು ಸಮರಸರಾಗಿರುವರು? ಇವರ ಬಗ್ಗೆ ಸ್ವರ್ಗೀಯ ಮಹಾದೇವಭಾಯಿಯವರು ಹೀಗೆ ಬರೆದಿದ್ದಾರೆ. "ಜೀವನದಲ್ಲಿ ಉತ್ತರೋತ್ತರ ವಿಕಾಸವಾಗುತ್ತಿರುವಂಥ ವ್ಯಕ್ತಿಯೆಂದರೆ ಮಹಾತ್ಮರನ್ನು ಹೊರ್ತುಪಡಿಸಿದರೆ ಆ ಸ್ಥಾನವು ವಿನೋಬಾಜಿಯವರಿಗೆ ದೊರೆಯುತ್ತದೆ. ನಿಜವಾಗಿಯೂ ವಿನೋಬಾಜಿಯವರು ಪರಿಣತ ಪ್ರಜ್ಞ ರಾಗುತ್ತ ನಡೆದಿದ್ದಾರೆ. ೧೯೩೦ಕ್ಕಿಂತ ಮೊದಲು ಅವರು ಹೆಚ್ಚಾಗಿ ಮಾತಾಡುತ್ತಿದ್ದಿಲ್ಲ. ಹೆಚ್ಚಾಗಿ ಬೇರೆ ಕಡೆಗೆ ಹೋಗುತ್ತಿದ್ದಿಲ್ಲ. ಆವರೆ ೧೯೩೨ರಲ್ಲಿ ಧುಳೆ ಜಿಲ್ಹೆಯಲ್ಲಿ ಬಂದರು. ಅವರು ಗೀತೆಯ ಮೇಲೆ ಪ್ರವಚನ ಮಾಡಿದರು. ಬಹಳ ಜನರ ಸಂಗಡ ಮಾತಾಡಿದರು ವಾದವಿವಾದಗಳಾಗುತ್ತಲಿದ್ದವು. ಪ್ರಶ್ನೋತ್ತರಗಳಾಗುತ್ತಲಿದ್ದವು. ಜನರಲ್ಲಿರುವ ವಿಚಾರದ ಹಸಿವನ್ನು ಅವರು ಕಂಡುಕೊಂಡರು. ೧೯೩೭ರಲ್ಲಿ ಶ್ರೀ ಲಕ್ಷ್ಮೀನಾರಾಯಣ ಮಂದಿರದಲ್ಲಿ ಹೊಸ ಗ್ರಂಥಾಲಯ ಪ್ರಾರಂಭಿಸುವಾಗ್ಗೆ ಅವರು ಮಾಡಿದ ಪ್ರವಚನದಲ್ಲಿ "ಧುಳೆ ಜೇಲವಾಸದಿಂದ ನನ್ನಲ್ಲಿ ಬಹಳ ವ್ಯತ್ಯಾಸ ಉಂಟಾಗಿದೆ. ವಿಚಾರ ಪ್ರಚಾರದ ಅವಶ್ಯಕತೆಯಿದೆ. ವಿಚಾರವನ್ನು ಯಾರ ಮೇಲೂ ಜುಲುಮೆಯಿಂದ ಹೇರಕೂಡದು. ಅಥವಾ ತಮ್ಮ ವಿಚಾರಗಳನ್ನು ಏನೂ ಪ್ರಚಾರ ಮಾಡದೆ ಸತ್ಯವು ತನ್ ತಾನೇ ಹೊರಬೀಳುವದೆಂದು ಅನ್ನಕೂಡದು. ಆಗ್ರಹವನ್ನು ಹಿಡಿಯದೆ ತಮ್ಮ ವಿಚಾರಗಳನ್ನು ಪಸರಿಸುತ್ತ ಹೋಗಬೇಕು." ಎಂದರು ವಿನೋಬಾಜಿಯವರಲ್ಲಿ ಪ್ರಗತಿಯಾಗುತ್ತ ನಡೆದಿದೆ. ಅವರಲ್ಲಿ ಮೊದಲಿನಷ್ಟು ಕಠೋರ ಸ್ವಭಾವ ಉಳಿದಿಲ್ಲ. ಅವರು ಹೆಚ್ಚೆಚ್ಚು ಪ್ರೇಮಮೂರ್ತಿ ಆಗಹತ್ತಿದ್ದಾರೆ. ಮಾವಿನ ಹಣ್ಣು ಹೆಚ್ಚೆಚ್ಚು ಮಧುರವಾಗಹತ್ತಿದೆ. ವಿನೋಬಾಜಿಯವರ ಆಳವಾದ ವಿದ್ವತ್ತೆ, ಪ್ರಖರವಾದ ಬುದ್ಧಿಮತ್ತೆ, ಅಪೂರ್ವ ಸ್ಮರಣಶಕ್ತಿ, ಅವರ ಧ್ಯೇಯ ನಿಷ್ಠತೆ, ಅವರ ಕಠಿಣ ವೈರಾಗ್ಯ, ಅವರ ಸೇವಾವೃತ್ತಿ, ಅವರ ಈಶ್ವರ

ಪರಾಯಣತೆ, ಅವರ ಸಾಧುತ್ವ, ಅವರ ತಪಶ್ಚರ್ಯೆ ಅವರ ಅಖಂಡ ಇಚ್ಛಾ ಶಕ್ತಿ, ಅವರ ನಿಯಮಿತತನ, ಮತ್ತು ಸುವ್ಯವಸ್ಥಿತತನ, ಅವರ ಅನಾಸಕ್ತಿ, ಅವರ ನಮ್ರತೆ, ಅವರ ನಿರ್ಭಯತೆ, ಅವರ ಭೇದಾತೀತ ವೃತ್ತಿ, ಯಾವುದರ ವರ್ಣನೆಯನ್ನು ನಾನು ಮಾಡಲಿ? ಅವರ ಸದ್ಗುಣಗಳನ್ನು ಎಷ್ಟು ಬಣ್ಣಿಸಿ ಹೇಳಲಿ?

ಆದುದರಿಂದ ಅವರು ಮೊದಲನೇ ಸತ್ಯಾಗ್ರಹಿಯಾದರು. ಮಹಾತ್ಮರು ಇವರನ್ನು ಮೊದಲನೇ ಸತ್ಯಾಗ್ರಹಿ ಎಂದು ಆರಿಸಿದಾಗ್ಗೆ ಇವರು ಬಡೋದೆ ಯಲ್ಲಿರುವ ತಮ್ಮ ತಂದೆಗೆ ಕಾಗದ ಬರೆದರು. "ನಿಮ್ಮ ಕೃಪೆಯ ಮತ್ತು ಆಶೀರ್ವಾದದ ಫಲವಿದು." ಎಂದು ಬರೆದಿದ್ದರು.

## ಜ್ಞಾನ, ಭಕ್ತಿ ಮತ್ತು ಕರ್ಮ :—

ವಿನೋಬಾಜಿಯವರು ಎಷ್ಟೋ ಮನನೀಯ ವಚನಗಳನ್ನು ಬರೆದಿಟ್ಟಿದ್ದಾರೆ. ಒಂದೆಡೆಯಲ್ಲಿ ಅವರು ಹೀಗೆ ಬರೆದಿರುವರು. "ಜ್ಞಾನದಿಂದಲೇ ಎಲ್ಲವನ್ನು ಸಾಧಿಸಬಲ್ಲೆನೆಂಬ ಅಹಂಕಾರ ಇತ್ತು. ಜ್ಞಾನದಿಂದಲೇ ಶುದ್ಧನಾಗಬಹುದೆಂದು ಎನಿಸುತ್ತಲಿತ್ತು. ಆದರೆ ಯಶ ಪ್ರಾಪ್ತವಾಗಲಿಲ್ಲ..ನಂತರ ಒಂದೇ ಸವನೇ ಕರ್ಮದಲ್ಲಿ ತತ್ಪರವಾಗುವದು ಮತ್ತು ಅದರಲ್ಲಿಯೇ ಮನಸ್ಸನ್ನು ತೊಡಗಿಸುವದನ್ನು ಪ್ರಾರಂಭಿಸಿದೆನು. ಆದರೆ ಕರ್ಮದಿಂದಲೂ ಚಿತ್ತದ ಮೇಲೆ ಇರುವ ಸೂಕ್ಷ್ಮ ಹೊಲಸು ಹೋಗುವದೆಂದೆನಿಸಲಿಲ್ಲ. ಕೊನೆಗೆ ಭಕ್ತಿಯ ಆಧಾರವನ್ನು ಹಿಡಿದುಕೊಂಡೇ ಆಶಾಕಿರಣಗಳು ಕಾಣ ಹತ್ತಿದವು. ಈ ವಚನವನ್ನು ನಾನು ಸ್ಮರಣಶಕ್ತಿಯಿಂದ ಹೇಳುತ್ತೇನೆ." ಇದೇ ವಿನೋಬಾಜಿಯವರ ತತ್ವಜ್ಞಾನವಿರುವದು. ಇದೇ ಗೀತೆಯ ತತ್ವಜ್ಞಾನವು. ಕರ್ಮಜ್ಞಾನ ಭಕ್ತಿ ಇವುಗಳನ್ನು ಕೂಡಿಸಿರಿ.

೧೯೪೨ರಲ್ಲಿ ಕೈದಾಗುವ ಸಮಯಕ್ಕೆ ಆಶ್ರಮವಾಸಿಗಳು—ಕಾರ್ಯಕ್ರಮವೇನು? ತಾವೇನು ಮಾಡಬೇಕು?— ಎಂದು ಮುಂತಾಗಿ ಕೇಳಿದರು. ಅದಕ್ಕೆ ವಿನೋಬಾಜಿಯವರು ಹೀಗೆ ಹೇಳಿದರು "ನೀವು ಸ್ವತಂತ್ರರಿರುವಿರಿ' ಎಂದು ಜನತೆಗೆ ಹೇಳುತ್ತಾ ನಡೆಯಿರಿ. ರಾಮನಾಮದಂತೆ ಈ ಮಂತ್ರವನ್ನು ಎಲ್ಲರಲ್ಲಿಯೂ ಪ್ರಚಾರ ಮಾಡಿರಿ. ನಡೆಯಿರಿ.!"

ಧುಳೆ ಜೇಲಿನಲ್ಲಿದ್ದಾಗ್ಗೆ, ಅವರು ನನಗೊಂದು ಸುಂದರ ಪತ್ರ ಬರೆದಿರುವರು. ಅದನ್ನು ಮುಚ್ಚಿಡಲು ಸಾಧ್ಯವಿಲ್ಲ. ನಿಮ್ಮೆದುರು ಇಡುತ್ತೇನೆ.

ಪವನಾರ ೧೨-೨-೪೧

ಶ್ರೀ ಗುರೂಜಿ,

ನೀವಿನ್ನೂ ಮಂದಿರದಲ್ಲಿಯೇ ಇರುವಿರೆಂದು ತಿಳಿಯುತ್ತೇನೆ. ಅದೇನಾಗುವದೆಂಬುವದನ್ನು ನೋಡುವಾ. ನಿಮ್ಮ ಸ್ಮರಣೆಯು ಅದೆಷ್ಟು ಸಲ ಮತ್ತು ಎಷ್ಟು ತೀವ್ರತೆಯಿಂದಾಗುತ್ತದೆಂಬುದನ್ನು ಶಬ್ದಗಳಿಂದ ಹೇಗೆ ಬರೆಯಲಿ? ಮತ್ತು ಹಾಗೆ ಬರೆಯುವದರ ಅವಶ್ಯಕತೆಯಾದರೂ ಏನು? ನನ್ನ ಶಬ್ದದಲ್ಲಿ ಇಷ್ಟೊಂದು ಶಕ್ತಿಯಾದರೂ ಎಲ್ಲಿಂದ ಬರುವದು? ನನ್ನ ನಿಮ್ಮ ಹೃದಯಗಳು ಏಕರೂಪವಿರುತ್ತವೆ. ನಾವು ಅನೇಕ ಜನ್ಮದ ಸಹವಾಸಿಗಳಿರಬೇಕು. ಯಾವ ಭೇದವೂ-ಕಲ್ಪನೆಯದಿರಲಿ, ವೇಳೆಯದಿರಲಿ, ಅಥವಾ ಸ್ಥಳದ್ದಿರಲಿ, ನಮ್ಮನ್ನು ಬೇರೆ ಮಾಡಲಾರದು. ಅಂದಬಳಿಕ ಭೆಟ್ಟಿಯ ತಳಮಳವೇಕೆ? ಆದರೂ ಒಮ್ಮೊಮ್ಮೆ ಆ ತಳಮಳ ಉಂಟಾಗಬಾರದೆಂಬುದು ಮಾತ್ರ ನಿಜ. ಮತ್ತು ಇದೇ ನನ್ನ ಮನುಷ್ಯತ್ವ. ದುರ್ಬಲವಿದ್ದರೂ ಸರಳವಿರುತ್ತದೆ. ಪ್ರೇಮಳ ಮತ್ತು ಪ್ರಾಂಜಲವಿರುತ್ತದೆ.

ಆದರೆ ಅದರಲ್ಲಿಯ ದುರ್ಬಲತೆಯನ್ನು ನಾನು ತೆಗೆದುಹಾಕಬಯಸುತ್ತೇನೆ. ಅದನ್ನು ಬೆಳೆಸುವ ಇಚ್ಛೆ ಇಲ್ಲ. ಆದುದರಿಂದ ಅಂತರ್ ವೃತ್ತಿಯಿಂದ ಅವಶ್ಯವಿದ್ದಾಗ್ಗೆ ನಿಮ್ಮ ಕಡೆಗೆ ಬಂದು ಹೋಗುತ್ತೇನೆ. ಮತ್ತು ಹೊರಗಿನ ಭೆಟ್ಟಿಯ ಆಕಾಂಕ್ಷೆಯನ್ನು ದೂರ ಮಾಡುತ್ತೇನೆ.

ನಿಮ್ಮ ಮತ್ತು ನನ್ನ ಬಾಹ್ಯಪ್ರವೃತ್ತಿಯ ಏಕರೂಪತೆಯಾಗುವ ಕಾಲವು ಒಮ್ಮೆ ಬರಬಹುದೆಂದು ನನ್ನ ಆಶೆ. ಈ ಸೃಷ್ಟಿಯು ಮಿಥ್ಯಾ ಇರುತ್ತದೆನ್ನುವ ಶಂಕರಾಚಾರ್ಯರ ವಿಚಾರದವರ ಬಗ್ಗೆ ಈಗ ಕೆಲವರಿಗೆ ಸಿಟ್ಟು ಬರುತ್ತದೆ ಆದರೆ ನನ್ನ ಮಟ್ಟಿಗೆ ಹೇಳುವದೆಂದರೆ ಆ ವಸ್ತುವು ನನ್ನ ಕಣ್ಣಿಗೆ ಸ್ಪಷ್ಟವಾಗಿ ಕಾಣುತ್ತದೆ. ಈ ಹೊರಗಿನ ಎಲ್ಲ ಜಗತ್ತು ದೇಹ ಸಮೇತವಾಗಿ

ಕರಗಿಹೋಗಿದೆ. ಆಕಾರವು ಇರುವದಿಲ್ಲ. ಅನಾಕಾರವೂ ಇರುವದಿಲ್ಲ. ನಾನೊಬ್ಬನೇ ಇದ್ದು ಹೊರಗೂ ಹೋಗಿಬರುವಂತೆ ನನ್ನ ಅನುಭವಕ್ಕೆ ಬಂದಿದೆ. ಈ ನಾಲ್ಕು ಪುಸ್ತಕಗಳನ್ನಾದರೂ ಯಾಕೆ ಬರೆದೆನು ? ದೇವರೇ ಬಲ್ಲ !

ವಿನೋಬಾನ ಸಪ್ರೇಮ ಪ್ರಣಾಮ

ವಿನೋಬಾಜಿಯವರ ಆಧ್ಯಾತ್ಮಿಕ ವೃತ್ತಿ ಅವರ ಪ್ರೇಮಳ ಮತ್ತು ಸರಳ ಸ್ವಭಾವವು ಈ ಪತ್ರದಲ್ಲಿ ಪ್ರಕಟವಾಗಿದೆ ಈ ಪತ್ರವನ್ನು ಓದಿ ನಾನು ಸದ್ಗದಿತನಾಗಿದ್ದೆನು. ಅವರು ಬೇರೊಂದು ಪತ್ರದಲ್ಲಿ ಹೀಗೆ ಬರೆದಿದ್ದರು – ಚೈತನ್ಯಮಯ ಆತ್ಮಕ್ಕೆ ಚೈತನ್ಯಮಯ ಭೆಟ್ಟಿಯೇ ಶೋಭಿಸುತ್ತದೆ.

**ಆಕಾಶದರ್ಶನ: —**

ವಿನೋಬಾಜಿಯವರಿಗೆ ಆಕಾಶದರ್ಶನವು ಬಹಳ ಸೇರುತ್ತದೆ. ಆಕಾಶದ ಕಡೆಗೆ ನೋಡುತ್ತ ಮಲಗಿಕೊಳ್ಳುವದು, ಆಕಾಶದ ಕಡೆಗೆ ನೋಡುತ್ತ ಏಳುವದು, ಆಕಾಶದ ವ್ಯಾಪಕತೆ, ಮತ್ತು ವಿಶಾಲತ್ವವನ್ನು ಸವಿಯುತ್ತಿರುವದೇ ಅವರ ಸ್ವಭಾವ. ಅವರ ಮನಸ್ಸಿನಲ್ಲಿ ಅದಕ್ಕೆಷ್ಟು ಬೆಲೆ ಇರಬಹುದು ?

**ಹೇಗೆ ಕಾಣುತ್ತಾರೆ ಮತ್ತು ಹೇಗೆ ನೋಡುತ್ತಾರೆ: —**

ವಿನೋಬಾಜಿ ಬಹಳ ಎತ್ತರ ಇರುವರು. ನೀಲ ಬಣ್ಣದವರಿರುವರು. ಮೂಗು ಸರಳವಾಗಿರುತ್ತದೆ. ಭಾಲಪ್ರದೇಶವು ಎತ್ತರವಿರುತ್ತದೆ. ತುಸು ನೀಳವಾದ ಕೈಗಳು. ಧೋತರವನ್ನುಡುವರು. ಮೈಮೇಲೆ ಒಂದು ಅರಿವೆಯ ತುಂಡು ಇರುತ್ತದೆ. ಒಮ್ಮೊಮ್ಮೆ ಅದೂ ಇರುವದಿಲ್ಲ. ಮಾತಾಡುವಾಗ್ಗೆ ಎಷ್ಟೋ ಸಲ ಬಲಗೈಯನ್ನು ಎಡ ಹೆಗಲಿಗೆ ಅಥವಾ ಎದೆಗೆ ಹಚ್ಚಿ ಹಿಡಿಯುವರು. ಭಾಷಣ ಮಾಡುವಾಗ್ಗೆ ಬಲು ಸಾವಕಾಶವಾಗಿ ಪ್ರಾರಂಭಿಸುತ್ತಾರೆ. ಆದರೆ ಮುಂದೆ ಧ್ವನಿಯು ಬಹಳ ದೊಡ್ಡದಾಗುತ್ತದೆ. ವ್ಯಾಖ್ಯಾನದಲ್ಲಿ ಅಭಂಗ ಇತ್ಯಾದಿಗಳು ಹೊರಬೀಳುತ್ತವೆ. ವಿನೋಬಾಜಿಯವರ ಕಂಠವು ಚನ್ನಾಗಿರುತ್ತದೆ. ಅವರು ಅನ್ನುತ್ತಿರುವ ಅಭಂಗವನ್ನು ಯಾವಾಗಲೂ ಕೇಳು

ತ್ತಲೇ ಇರಬೇಕೆಂದು ಎನಿಸುತ್ತದೆ. ಅವರು ಏಕರೂಪಕತೆಯನ್ನು ಮಾಡು ತ್ತಾರೆ. ಒಮ್ಮೊಮ್ಮೆ ಬಹಳ ಸ್ಫೂರ್ತಿದಾಯಕವಾಗಿ ಮಾತಾಡುತ್ತಾರೆ. ವಿನೋಬಾಜಿಯವರ ವಾಣಿಯು ನನ್ನ ಕಿವಿಯಲ್ಲಿ ಧ್ವನಿಸುತ್ತಲಿದೆ. ಅವರ ಮುದ್ರೆಯು ನನ್ನ ಕಣ್ಣ ಮುಂದೆ ಇರುತ್ತದೆ. ಅವರ ಸುಂದರ ನಗುವಿನ ನೆನ ಪಾಗುತ್ತದೆ. ಅವರು ಬೆನ್ನಮೇಲೆ ಕೈಯಾಡಿಸುವದು ನೆನಪಾಗುತ್ತದೆ. ಅವರ ವಿಷಯಕ್ಕೆ ಎಷ್ಟೊಂದು ಹೇಳಲಿ! ಆದರೆ ನಾನು ದೂರದವನು ಅವರ ಸಾನ್ನಿಧ್ಯದಲ್ಲಿ ತಪಶ್ಚರ್ಯ ಮಾಡಿದವರು ಸಾವಿರಾರು ಸ್ಮರಣೆಗಳನ್ನು ಹೇಳು ವರು. ಅವರ ತಮ್ಮ ಶಿವಾಜಿಯು ಅವರ ಚರಿತ್ರೆ ಬರೆದಿಟ್ಟಿರುವನೆಂದು ಕೇಳುತ್ತೇನೆ. ಅದು ಪ್ರಸಿದ್ಧವಾದಾಗ್ಗೆ ಓದಿರಿ. ಇದರಲ್ಲಿಯ ವಿಷಯಗಳನ್ನೇ ಸರಿಮಾಡಿಕೊಳ್ಳಿರಿ.

ವಿನೋಬಾಜಿಯವರು ಮಹಾರಾಷ್ಟ್ರದ ಮತ್ತು ಭಾರತದ ಭೂಷಣ ರಿರುವರು. ಅವರ ಚರಿತ್ರದಿಂದ ನಾನು ಸ್ಫೂರ್ತಿಯನ್ನು ದೊರಕಿಸಿರುವೆನು. ಸೇವಾದಲದ ಸೈನಿಕರೇ, ವಿನೋಬಾಜಿಯವರ ಈ ದಿವ್ಯ ಭವ್ಯ ಆದರ್ಶ ನಿಮ್ಮ ಕಣ್ಣು ಮುಂದೆ ಇಟ್ಟುಕೊಳ್ಳಿರಿ. ಶ್ರದ್ಧೆಯಿಂದ, ನಿಶ್ಚಯದಿಂದ ಪ್ರೇಮ ದಿಂದ ಮತ್ತು ತ್ಯಾಗದಿಂದ ಅಖಂಡವಾಗಿ ಭಾರತದ ಸೇವೆಮಾಡಿರಿ. ಬ್ರಾಹ್ಮಣ-ಬ್ರಾಹ್ಮಣೇತರ ಸ್ಪೃಶ್ಯಾಸ್ಪೃಶ್ಯ, ಹಿಂದು-ಮುಸಲ್ಮಾನ ಇತ್ಯಾದಿ ಭೇದಗಳನ್ನು ಮರೆತು ನೀವೆಲ್ಲರೂ ಭಾರತಮಾತೆಯ ಪುತ್ರರಾಗಿ ಹೊಸ ಹಿಂದುಸ್ಥಾನ ಕಲ್ಪಿಸಲು ಕಾಯ್ದ, ವಾಚಾ, ಮನಸಾ ಪ್ರಯತ್ನಮಾಡಿರಿ. ಬಡವರ ಸಂಸಾರವನ್ನು ಸುಂದರ ಮಾಡಲು, ಅವರಿಗೆ ಅನ್ನ ವಸ್ತ್ರ ದೊರೆ ಯಲು, ಜ್ಞಾನದೊರೆಯಲು, ವಿಶ್ರಾಂತಿ ದೊರೆಯಲು, ಕಲೆಯ ಆನಂದ ದೊರೆಯಲು ಮತ್ತು ಅವರ ಜೀವನ ಪೂರ್ಣ ವಿಕಾಸವಾಗಲು ಪ್ರಯತ್ನ ಮಾಡಿರಿ.

---

೩

# ಪ್ರಬಂಧ ವಿಭಾಗ.

ಶ್ರೀ. ಗುರೂಜಿಯವರು, ಅನೇಕ ಪ್ರಬಂಧಗಳನ್ನು ಬರೆದಿದ್ದು, ಅವುಗಳಲ್ಲಿ, ಕೆಳಗಿನ ಪ್ರಬಂಧಗಳನ್ನು ಆಯ್ದಿದೆ.

೧) ಸಾವಿನ ಸವಿ

೨) ಕುರಲ್

# ಸಾವಿನ ಸವಿ



ಸಾವನ್ನು ಕುರಿತು, ಭಾರತೀಯ ಸಂಸ್ಕೃತಿಯಲ್ಲಿ ಅತ್ರಿತ್ರ ಹರಡಿದ ವಿಚಾರಗಳು ಭವ್ಯವಾದವುಗಳು ಸವಿಯಾದವುಗಳು ಇವೆ; ಮರಣದ ಭೀಕರತೆ ಭಾರತೀಯ ಸಂಸ್ಕೃತಿಯಲ್ಲಿಲ್ಲ! ಮೃತ್ಯುವು ಜೀವನವೃಕ್ಷದ ಸವಿಯಾದ ಫಲ

ಸಾವೂ ಈಶ್ವರನ ಒಂದು ರೂಪವೇ. ಜೀವನ ಮರಣಗಳೆರಡೂ ಪರಮ ಮಂಗಲ ಭಾವಗಳು. ನಿಜವಾಗಿ ಉಳಿಯುವಿಕೆಯು ಅಳಿಯುವಿಕೆಯ ರೂಪವು ಒಂದೇ ಆಗಿದೆ. ನಿಶೆಯಲ್ಲಿಯ ನಸುಕು–ನಸುಕಿನಲ್ಲಿಯೇ ನಿಶೆಯು ನಿರ್ಮಾಣವಾಗುತ್ತಿದೆ. ಜೀವನ ಮರಣದ ಹಣ್ಣು, ಮರಣ ಜೀವನದ ಹಣ್ಣು.

' ಸಾವು ಎಂದರೆ ಧರಿಸಿದ ಉಡಪನ್ನು ಬಿಟ್ಟಂತೆ ಎಂದು ಗೀತೆಯಲ್ಲಿ ಹೇಳಿದೆ. ಜೀವನದ ಕಾರ್ಯವನ್ನು ಮಾಡುತ್ತ ಮಾಡುತ್ತ ದೇಹವೆಂಬ ಉಡುಪು ಜೀರ್ಣವಾದಾಗ ಮೂರು ಲೋಕದ ಜನನಿ ಹೊಸ ಉಡುಪನ್ನು ಧರಿಸಲು ಕರೆಯುತ್ತಾಳೆ. ಈ ಅವಳ ಕರೆಯೇ ಮರಣ. ನಮ್ಮನ್ನು ತನ್ನ ಮನೆಗೆ ಎತ್ತಿಕೊಂಡು ಒಯ್ದು ಹೊಸ ಉಡಿಗೆಯನ್ನು ಉಡಿಸಿ ಜಗತ್ತಿನ ಅಂಗಳದಲ್ಲಿ ನಮ್ಮನ್ನು ಆಡಲು ಬಿಟ್ಟು ದೂರ ಹೋಗಿ ನಿಂತು ನೋಡುತ್ತಾಳೆ. ಒಮ್ಮೊಮ್ಮೆ ಹುಟ್ಟಿದೊಡನೆಯೇ ಒಯ್ದುಬಿಡುತ್ತಾಳೆ, ಈ ತಾಯಿ. ಕೆಲವರು ಬಾಲ್ಯದಲ್ಲಿ, ಕೆಲವರು ತಾರುಣ್ಯದಲ್ಲಿ ಸಾಯುತ್ತಾರೆ. ಕಾರಣವಿಷ್ಟೆ, ತಾಯಿ ಇವರಿಗೆ ಉಡುಪನ್ನು ಉಡಿಸಿ ಕಳಿಸುತ್ತಾಳೆ. ಇವರಿನ್ನೂ ಈ ಜಗತ್ತನ್ನು ಮುಟ್ಟುವದರೊಳಗೆ ದೂರದಿಂದ ನೋಡಿ ಇವರಿಗೆ ಈ ಉಡುಪು ಶೋಭಿಸುವದಿಲ್ಲ ಎಂದು ಅವಳಿಗೆ ಅನಿಸುತ್ತದೆ. ಆದ್ದರಿಂದ ಆ ಮಗುವನ್ನು ತಿರುಗಿ ತನ್ನೆಡೆಗೆ ಒಯ್ದು ಮತ್ತೆ ಹೊಸ ಉಡುಗೆ ತೊಡಿಸಿಬಿಡುತ್ತಾಳೆ. ತಾಯಿಯ ಉತ್ಸಾಹಕ್ಕೆ ಮಿತಿಯೇ ಇಲ್ಲ.

ನನ್ನ ತಾಯಿ ಜಿಪುಣಳೂ ಅಲ್ಲ. ತಿರುಕಳೂ ಅಲ್ಲ. ಅವಳ ಭಾಂಡಾರವು ಅನಂತ ವಸ್ತ್ರಗಳಿಂದ ತುಂಬಿದೆ. ತಾಯಿಯ ಭಾಂಡಾರವು ವಸ್ತ್ರಗಳಿಂದ ತುಂಬಿದೆಯೆಂದು ಅವಳಿತ್ತ ಉಡುವನ್ನು ಮನಬಂದಂತೆ ಎಳೆದು ಕೆಡಿಸಿ ಹರಿಯುವಂತಿಲ್ಲ. ಅದನ್ನು ಜಾಗ್ರತೆಯಿಂದ ಉಪಯೋಗಿಸಬೇಕು. ಅವನ್ನು ನಿರ್ಮಲವಾಗಿಯೂ ಶುಚಿಯಾಗಿಯೂ ಇಡಬೇಕು ಅದು ಪವಿತ್ರವಿರಬೇಕು. ಅದು ಸೇವೆಯನ್ನು ಸಲ್ಲಿಸುತ್ತ ಸವೆದು ಜೀರ್ಣವಾಗಬೇಕು

ಕಾಯವು ಮಣ್ಣಿನ ಪಾತ್ರೆಯಂತೆ. ಅದನ್ನು ಸೂಚಿಸುವದಕ್ಕಾಗಿ ಶವ ದಹನದ ಕಾಲಕ್ಕೆ, ಮಣ್ಣಿನ ಮಡಿಕೆಯನ್ನು ಒಡೆಯುತ್ತಾರೆ. ಮಣ್ಣಿನ ಮಡಿಕೆ ಇದು, ಒಡೆದಿದೆ, ಇದಕ್ಕಾಗಿ ಅಳುವ ಕಾರಣವಿಲ್ಲ. ಸೇವೆಗಾಗಿ ಈ ಮಡಿಕೆ ನಮಗೆ ದೊರೆತಿತ್ತು. ಮಹಾನ್ ಧ್ಯೇಯ ವೃಕ್ಷಗಳಿಗೆ ನೀರೆರೆಯುವ ದಕ್ಕಾಗಿಯೇ ಅದು ನಮಗೆ ದೊರೆತುದಲ್ಲವೇ ? ಕೆಲವರ ಪಾತ್ರೆ ದೊಡ್ಡದು, ಕೆಲವರ ಪಾತ್ರೆ ಸಣ್ಣದು, ಕುಂಬಾರನು ಈ ತೆರದ ವಿಧವಿಧದ ಪಾತ್ರೆಗಳನ್ನು ರಚಿಸಿ, ಇವುಗಳಿಂದ ವಿಶ್ವದ ತೋಟವನ್ನು ರಚಿಸಬಯಸುತ್ತಿದ್ದಾನೆ. ಒಂದು ಮಡಿಕೆ ಒಡೆದರೇನಾಯಿತು ? ಆತ ಮತ್ತೊಂದನ್ನು ರಚಿಸಿ ಅದರಿಂದ ನೀರೆರೆಯುತ್ತಾನೆ. ಹೀಗೆಯೇ ನಡೆದಿದೆ ಈ ಪ್ರಪಂಚ. .

"ಮನುಷ್ಯನೆಂದರೇನು ? ಈ ನರದೇಹವೆಂದರೇನು ? ಇದೊಂದು ಮಣ್ಣಿನ ಮುದ್ದೆ. ಇದರಲ್ಲಿ ಚಿತ್ಕಳೆ ಇದೆ, ಜೀವವಿದೆ. ಈ ಜೀವದಿಂದಲೇ ಈ ಮಣ್ಣುಮುದ್ದೆಗೆ ಬೆಲೆ" ಹೀಗೆ ವ್ಹಿಕ್ಟರ ಹ್ಯೂಗೋ ಎಂಬವರು ಅಂದಿದ್ದಾರೆ. ಒಂದು ಮಣ್ಣಿನ ಮುದ್ದೆಯನ್ನು ಬದಲಿಸಿ, ವಿಶ್ವಂಭರನು ಇನ್ನೊಂದನ್ನು ಏರ್ಪಡಿಸುವನು. ಅದರಲ್ಲಿ ಚಿತ್ಕಳೆಯನ್ನು ತುಂಬಿ ಜಗತ್ತಿನಲ್ಲಿ ಮತ್ತೆ ಕಳುಹಿಸುವನ್ನು. ಚಿಕ್ಕಮಕ್ಕಳು ಒಂದು ಪಟವು ಹರಿದರೆ ಮತ್ತೊಂದು ಹೊಸ ಪಟವನ್ನು ಸಿದ್ಧಪಡಿಸಿ ಹಾರಿಸುವಂತೆ, ಎಲ್ಲಿಯೋ ಕಾಣದ ಒಂದು ಸ್ಥಳದಲ್ಲಿ ಕುಳಿತು ಜೀವರೂಪಗಳಾದ ಈ ಅನಂತ ಪಟಗಳನ್ನು ಹಾರಿಸುತ್ತಿದ್ದಾನೆ. ಸರಿಯಾಗಿ ಕೆಳಗೆ, ಮೇಲಕ್ಕೆ ಎಳೆಯುತ್ತಾನೆ. ಒಂದು ಹರಿಯಿತೆಂದರೆ ಮತ್ತೆ ಹೊಸದೊಂದು ಆಕಾರದ, ಹೊಸ ಬಣ್ಣದ ಪಟವನ್ನು ಹಾರಿಸುತ್ತಾನೆ. ಬಗೆ ಬಗೆಯ ಬಣ್ಣಗಳ, ನಾನಾ ಆಕಾರದ, ಅನೇಕ ಧರ್ಮದ, ವೃತ್ತಿಯ, ಕೋಟ್ಯಾವಧಿ ಜೀವಪಟಗಳನ್ನು ನಿತ್ಯನಿತ್ಯವೂ ಹಾರಿಸುತ್ತಿದ್ದಾನೆ.

ಹಾರುವಾಗ ಹರಿಯುತ್ತವೆ, ಮತ್ತೆ ಹೊಸವು ಬರುತ್ತವೆ, ನಡೆದೇ ಇದೆ, ಈ ಪ್ರಪಂಚದ ಕ್ರೀಡೆ; ಈ ವಿರಾಟ ಆಟ. ಸಾವು ಒಂದು ಮಹಾಯಾತ್ರೆ, ಮಹಾಪ್ರಸ್ಥಾನ, ಮಹಾ ನಿದ್ರೆ. ದಿನದ ಹೋರಾಟ ಮುಗಿಸಿದೊಡನೆ ನಾವು ಮಲಗುತ್ತೇವೆ. ಈ ನಿದ್ರೆ ಅಲ್ಪಕಾಲ ಬಾಳುವ ಸಾವು. ಇದೇ ರೀತಿ ಇಡೀ ಜೀವನವೆಲ್ಲ ಹೆಣಗಾಡಿ ದಣಿದು ಆ ನಿದ್ರೆಯನ್ನು ಹೊಂದುವೆವು. ನಿತ್ಯದ ನಿದ್ರೆ ಏಳೆಂಟು ತಾಸಿನದು, ಈ ನಿದ್ರೆ ದೀರ್ಘಕಾಲದ್ದು. ಒಂದೇ ಅಂತರವು ಇವೆರಡು ನಿದ್ರೆಗಳಲ್ಲಿ.

ಸಾವು ಎಂದರೆ ತಾಯಿಯ ಪಕ್ಕದಲ್ಲಿ ಸೇರಿ ಮಲಗುವದು! ದಿನವೆಲ್ಲ ಬಾಲಕನು ಆಡುವನು, ಬೀಳುವನು, ಏಳುವನು, ದಣಿಯುವನು. ರಾತ್ರಿಯಾದೊಡನೆಯೆ ತಾಯಿ ಆ ಮಗುವನ್ನು ಮೆಲ್ಲನೆ ಎತ್ತಿಕೊಂಡು ಬರುವಳು. ಆದರ ಆಟಿಗೆಗಳು ಅತ್ತಿತ್ತ ಬಿದ್ದಿರುವವು. ಆ ಮಗುವನ್ನು ತನ್ನ ಮಗ್ಗುಲಲ್ಲಿ ಮಲಗಿಸಿಕೊಳ್ಳುವಳು ತಾಯಿಯ ಮಗ್ಗುಲಲ್ಲಿ ಮಲಗಿದ ಆ ಮಗುವು ಬೆಳಗಿನಲ್ಲಿ ಮತ್ತಿಷ್ಟು ಉತ್ಸಾಹಭರಿತವಾಗಿ ಎದ್ದು ಮತ್ತೆ ಆಟಿಗೆಗಳೊಡನೆ ಆಡತೊಡಗುವದು. ಜೀವವು ಇದೇ ರೀತಿಯಾಗಿ ಆದೆ. ಜಗತ್ತಿನಲ್ಲಿ ದುಡಿದು ದಣಿದ ಜೀವವನ್ನು ಜಗನ್ಮಾತೆ ಎತ್ತಿಕೊಂಡು ಹೋಗುವಳು. ಮಗುವಿನ ಮನಸ್ಸಿಲ್ಲದಿದ್ದರೂ ಆದರ ಹಿತಕ್ಕಾಗಿ ತಾಯಿಯು ಜುಲುಮೆಯಿಂದ ಅದನ್ನೆತ್ತಿ ಕೈತಟ್ಟಿ ಮಲಗಿಸುವಂತೆ ಜೀವನನ್ನು ಮನಸ್ಸಿನ ವಿರುದ್ಧವಾಗಿಯೂ ಕರೆದೊಯ್ಯುವಳು. ಆಗ ಆ ಜೀವವು ತನ್ನ ಗೆಳೆಯರನ್ನು ಸಂಗಡಿಗರನ್ನು, ಪ್ರಪಂಚದಲ್ಲಿದ್ದ ಎಲ್ಲ ವಸ್ತುಗಳನ್ನು ಒಳ್ಳೇ ಆಶೆಯಿಂದ ನೋಡುತ್ತಿರುತ್ತದೆ. ಈ ಜೀವಬಾಲನ ಹಿತವನ್ನು ಅವನಿಗಿಂತ ತಾಯಿಯೇ ಚನ್ನಾಗಿ ಅರಿತಿರುವಳಲ್ಲವೇ? ಆ ಅಳುವ ಮಗುವನ್ನು ತಾಯಿ ತನ್ನ ಪಕ್ಕದಲ್ಲಿಟ್ಟು ಮಲಗಿಸುತ್ತಾಳೆ. ಜೀವ ರಸವನ್ನು ಕುಡಿಸುತ್ತಾಳೆ. ಮತ್ತೆ ಜಗತ್ತಿನ ರಂಗದಲ್ಲಿ ಆಡಲು ಬಿಡುತ್ತಾಳೆ.

ಸಾವು ಎಂದರೆ ತವರೂರಿಗೆ ಹೋಗಿ ಬಂದಂತೆ. ಅತ್ತೆಯ ಮನೆಗೆ ಬಂದ ಮಗಳು ಎರಡು ದಿನ ತಾಯಿಯ ಮನೆಗೆ ಬಂದು ಅಲ್ಲಿ ತಾಯಿಯ ಪ್ರೇಮಾಮೃತ ಪಾನ. ಮಾಡಿ ಉತ್ಸಾಹ, ಆನಂದಗಳನ್ನು ಪಡೆದು ಬಿಚ್ಚು ಮನಸ್ಸಿನಿಂದ ಮತ್ತೆ ಅತ್ತೆಯ ಮನೆಗೆ ತಿರುಗುವಳು. ಇದೇ ಪ್ರಕಾರ ಆ ಜಗನ್ಮಾತೆಯ ಮನೆಗೆ ಹೋಗಿ ಬರುವದೆಂದರೇನೇ ಮೃತ್ಯು. ಚಿಕ್ಕವನಿದ್ದಾಗ ಶಾಲೆಗೆ ಹೋದ

ಮಗುವು ಮಧ್ಯದಲ್ಲಿಯೇ ತಿರುಗಿ ಮನೆಗೆ ಧಾವಿಸುತ್ತದೆ. ಹಸಿವೆ, ನೀರಡಿಕೆ ಇಲ್ಲವೆ ಜಾಡ್ಯ ಇಂಥದೊಂದು ಕಾರಣದಿಂದ ಮನೆಗೆ ಬರುವದು. ಆದರೆ ನಿಜ ವಾಗಿ ಮಗುವು ತಾಯಿಯ ಮುಖಚಂದ್ರನನ್ನು ನೋಡುವ ಹಸಿವೆಯ ಮೂಲಕ ಬಂದಿರುತ್ತದೆ. ತಾಯಿಯ ಪ್ರೇಮದ ಹಸಿವೂ ಅದಕ್ಕೆ ಇರುತ್ತದೆ. ಆಗ ತಾಯಿ ಪ್ರೇಮದಿಂದ ಮಗುವನ್ನು ಚಪ್ಪರಿಸಿ ಕಲ್ಲುಸಕ್ಕರೆ ಕೊಡುವಳು. ಮಗು ಮತ್ತೆ ಆನಂದದಿಂದ ನಲಿಯುತ್ತ ಸಾಲೆಗೆ ಹೋಗುವದು. ಮತ್ತು ತನ್ನ ಪಾಠವನ್ನು ಕಲಿಯುವದು. ಇದರಂತೆಯೇ ಈ ಜಗತ್ತಿನ ಶಾಲೆಯಲ್ಲಿ ಬೇಸರ ಗೊಂಡು, ದಣಿದ ಜೀವಬಾಲಕರು ಜಗನ್ಮಾತೆಯ ಮುಖಚಂದ್ರನನ್ನು ನೋಡಲು ಹಾತೊರೆಯುತ್ತಾಳೆ. ತುಂಬ ಪ್ರೇಮರಸ ಪಾನ ಮಾಡಿ ಮತ್ತೆ ಸಂಸಾರದ ಮಹಾವಿದ್ಯಾಲಯದಲ್ಲಿ ಕಲಿಯಲು ಪ್ರಾರಂಭಿಸುವರು.

ಮರಣವೆಂದರೆ ದಣುವಿನ ಪರಿಹಾರ. ಅನಂತದಲ್ಲಿ ಬೇಸರ ಗೊಂಡ ಜನರು ಊರ ಹೊರಗಿನ ಹೊಂಡದಲ್ಲಿಯೋ, ಕೆರೆಯಲ್ಲಿಯೋ, ನದಿಯಲ್ಲಿಯೋ, ಈಸಲು ಹೋಗುವರು. ಸಮುದ್ರದಲ್ಲಿ ಈಸುವರು. ಹೊಳೆ ಯಲ್ಲಿ ಬಿದ್ದು ಏಳುವರು; ಇದರಿಂದ ದಣಿವು ಆರುವದು. ಜೀವನದಲ್ಲಿ ಮುಳುಗಿ ಎದ್ದರೇನೇ ಜೀವನವು ದೊರೆಯುವದು. ಮರಣವೆಂದರೇನು ? ಪ್ರಪಂಚದಲ್ಲಿ ದಣಿದ ಜೀವಿಗಳು ಅನಂತವಾದ ಈ ಜೀವನ ಸಮುದ್ರದಲ್ಲಿ ಮುಳುಗಿ ಏಳು ವರು ಅಲ್ಲಿ ಮುಳುಗಲು ಹೋಗುವದೆಂದರೇನೇ ಮರಣ. ಇದೊಂದು ಬಿಡುವು. ಅನಂತ ಜೀವನ ಸಾಗರದಲ್ಲಿ ಈಸಲು ದೊರೆತ ಬಿಡುವು. ಆ ಜೀವನಸಾಗರ ದಲ್ಲಿ ಮುಳುಗಿ ಜೀವನ ರಸದಿಂದ ಎರೆದುಕೊಂಡು ನೂತನ ಉತ್ಸಾಹದಿಂದ ಜಗತ್ತಿನ ಕಾರ್ಯರಂಗದಲ್ಲಿ ಪುನಃ ಸೇರುವದು.

ಎತ್ತರವಾದ ಶಿಖರದ ಮೇಲಿರುವ ಶಿವಾಲಯಕ್ಕೆ ಹೋಗಲು ಮೆಟ್ಟಲು ಗಳಿರುತ್ತವೆ. ಅದರಂತೆ ಪೂರ್ಣತ್ವದ ಶಿಖರವನ್ನು ಮುಟ್ಟಲು ಹುಟ್ಟು ಸಾವಿನ ಹೆಜ್ಜೆ ಹಾಕುತ್ತ ಜೀವ ನಡೆದಿದೆ. ಸಾವೂ ಮುಂದಣ ಹೆಜ್ಜೆ. ಮರಣವೆಂದರ ಪ್ರಗತಿಯು ಮುಂದುವರಿದಂತೆ. ದೇವರ ಸನ್ನಿಧಾನವನ್ನು ಸೇರಿಸಲು ನಮ್ಮ ನ್ನೊಯ್ಯುವ ಮೆಟ್ಟಲುಗಳಿಗೆ ನಾವು ನಮಸ್ಕರಿಸುತ್ತೇವೆ. ಆ ಮೆಟ್ಟಲು ನಮಗೆ ಪವಿತ್ರವಾದವುಗಳು. ಅವು ನಮ್ಮ ಧ್ಯೇಯಸಾಧನಗಳು. ಮರಣವು ಇಂಥದೊಂದು ಮೆಟ್ಟಲು. ಆದ್ದರಿಂದ ಅದು ಮಂಗಲವೂ ಪವಿತ್ರವೂ ಆಗಿದೆ.

ಅದು ನಮ್ಮನ್ನು ಕರೆದೊಯ್ದು ಒಳಗಿನ ಧ್ಯೇಯದೆಡೆಗೆ ಮುಟ್ಟಿಸುತ್ತದೆ. ಮರಣಕ್ಕೆ ಪ್ರಣಾಮವಿರಲಿ.

ಮರಣವು ಒಂದು ರೀತಿಯ ವಿಸ್ಮರಣವು. ಜಗತ್ತಿನಲ್ಲಿ ನೆನಪಿಗೆ ಇದ್ದಷ್ಟು ಮಹತ್ವವು ಮರವಿಗೂ ಇದೆ. ಹುಟ್ಟಿದಾರಭ್ಯ ನಾವು ಆಡಿದ ಮಾತು, ಮಾಡಿದ ಕೃತಿ, ಕೇಳಿದ ಧ್ವನಿ, ಕಂಡ ವಸ್ತು, ತೋಚಿದ ವಿಚಾರ, ಇವುಗಳನ್ನೆಲ್ಲ ನೆನಪಿನಲ್ಲಿಡಬೇಕೆಂದರೆ, ಅದೆಂಥ ಅಸಹ್ಯವಾದ ಭಾರವಾದೀತು? ಆ ಪ್ರಚಂಡ ಪರ್ವತವು ನಮ್ಮನ್ನು ಹತ್ತಿಕ್ಕಿ ನುಚ್ಚು ಮಾಡುವದು. ಜೀವನವು ಬೇಡಾಗುವದು.

ವ್ಯಾಪಾರಿಯು ಸಾವಿರಾರು ವ್ಯವಹಾರಗಳನ್ನು ಮಾಡುವನು. ಆದರೆ ಕೊನೆಗೆ ಆಗತಕ್ಕ ಇಂತಿಷ್ಟು ಲಾಭ ಅಥವಾ ಇಂತಿಷ್ಟು ಹಾನಿ ಎಂಬ ಮಾತನ್ನಷ್ಟೇ ಸುಲಭವಾಗಿ ನೆನಪಿನಲ್ಲಿಡುತ್ತಾನೆ. ಆದರಂತೆಯೇ ಈ ಜೀವನದ ಮಾತಾದರೂ ಜೀವನ ವ್ಯವಹಾರದಲ್ಲಿಯ ಲಾಭ ಹಾನಿಯನ್ನು ಪೂರ್ಣವಾಗಿ ತಿಳಿದುಕೊಳ್ಳುವ ಕ್ಷಣವೇ ಮರಣಸಮಯ. ಅರವತ್ತು ಎಪ್ಪತ್ತು ವರ್ಷಗಳ ವರೆಗೆ ಈ ಪ್ರಪಂಚದ ಅಂಗಡಿಯ ವ್ಯವಹಾರ ನಡೆದಿದೆ. ಈ ಅಂಗಡಿಯ ಲಾಭಹಾನಿಯನ್ನು ನೋಡುವ ಸಮಯವೇನೇ ಮರಣ. ಈ ಅನುಭವದಿಂದ ನಾವು ಕಲಿತು ಬಲ್ಲವರಾಗಿ ಮತ್ತೆ ಈ ಅಂಗಡಿಯನ್ನು ಆರಂಭಿಸುತ್ತೇವೆ. ತಾಯಿಯ ಅಪ್ಪಣೆ ಪಡೆದು ಮತ್ತೆ ಅಂಗಡಿಯ ವ್ಯವಹಾರದ ಪ್ರಾರಂಭ. ಈ ನಮ್ಮ ನಲುಮೆಯ ತಾಯಿಯು ಎಂದಿಗೂ ನಮ್ಮನ್ನು ಪ್ರತಿಬಂಧಿಸುವದಿಲ್ಲ.

ಮರಣವು ಅಗತ್ಯವಾದ ವಸ್ತು. ಈಗಿದ್ದ ನಾಮರೂಪದಿಂದ ಅಳಿದ್ದು ಹೋಗುವದು ಎಷ್ಟೋ ಸಲ ಅತ್ಯಗತ್ಯವೂ ಇಷ್ಟವೂ ಇರುತ್ತದೆ. ಓರ್ವ ಮನುಷ್ಯನು ಮೊದಲು ತಿಳಿಯದೇ ದುರ್ನಡತೆಯಿಂದಿದ್ದು ಆದರಲ್ಲಿ ಹೇಯ ಬುದ್ಧಿಯಿಂದ ಪಶ್ಚಾತ್ತಾಪಪಟ್ಟು ಮುಂದೆ ಒಳ್ಳೇ ನಡತೆಯನ್ನು ಅನುಕರಿಸಿದರೂ ಜನರು ಅದನ್ನು ಒಪ್ಪರು. ಆತನ ಕಲಂಕಿತ ಭೂತಕಾಲವನ್ನೇ ಎತ್ತಿ ಆಡುವರು. "ಓಹೊ! ಇವನೇ, ಬಲ್ಲೆ. ಸೂಳೆ ಮುಪ್ಪಾಗಿ ಜೋಗತಿಯಾದ ಳಂತೆ! ಈ ಮಹಾಶಯನು ಇದೊಂದು ಹೊಸ ಸೋಗು ತೆಗೆದಿದ್ದಾನೆ." ಎಂಬ ಬಿರುನುಡಿಯನ್ನು ಜನ ಬಿಡುವದಿಲ್ಲ. ಇವುಗಳನ್ನು ಕೇಳಿ ಕೇಳಿ ನೊಂದ ಅವನ ಹೃದಯ ಮತ್ತಿಷ್ಟು ತಾಪ ಹೊಂದುತ್ತದೆ. ಹಿಂದಿನ ಕೆಡಕನ್ನು

ಮರೆಯಬೇಕೆಂದು ಪ್ರಯತ್ನಿಸಿದರೂ ಜನರು ಅದನ್ನು ಮರೆಯದೆ ಹೀಯಾಳಿಸುವ ನುಡಿ ಕೇಳಿ ಈ ಜಗತ್ತಿನಿಂದ ಹೊರಗೆ ಹೋಗಲೇಬೇಕು ಎಂದೆನಿಸುತ್ತದೆ. ಆಗ ಈ ಜಗತ್ತಿನಿಂದ ಸರಿದು ತೆರೆಯಲ್ಲಿಂದ ಹೊಸರೂಪ, ಹೊಸ ನಾಮದಿಂದ ಪುನಃ ಈ ಜಗತ್ತಿನಲ್ಲಿ ಬಾಳಿ ಬೆಳೆಯುವದರಲ್ಲಿ ಸ್ವಾರಸ್ಯವಿಲ್ಲವೇ ?

ಮರಣವಿಲ್ಲದಿದ್ದರೆ ಈ ವಿಶ್ವದ ದಾರುಣ ಸ್ಥಿತಿಯನ್ನು ಬಣ್ಣಿಸುವರಾರು? ಮರಣವೇ ಸಂಸಾರವನ್ನು ರಮಣೀಯವಾಗಿ ಮಾಡುತ್ತದೆ! ಸಾವು ಇದೆಯೆಂದೇ ಜಗತ್ತಿನಲ್ಲಿ ಪ್ರೇಮವಿದೆ. ಅದಿಲ್ಲದೆ ನಾವೆಲ್ಲರೂ ಅಮರರಾಗಿದ್ದರೆ? ಕ್ಷಣ ವಿಚಾರ ಮಾಡಿರಿ! ಪರಸ್ಪರ ಸಂಬಂಧ ಉಳಿಯುತ್ತಿತ್ತೇ? ಅತ್ತೊಂದು ಇತ್ತೊಂದು ಬಿದ್ದ ಕಲ್ಲುಬಂಡೆಯಂತೆ ಸಿಡಿದೇ ಇರುತ್ತಿದ್ದಿಲ್ಲವೇ? ಎಲ್ಲರೂ ಒಂದಿಲ್ಲೊಂದು ದಿನ ಸಾವನ್ನು ಅಪ್ಪಲೇ ಬೇಕಾಗಿದ್ದರಿಂದಲೇ ಮನುಷ್ಯನು ಪ್ರೇಮದಿಂದ ನಡೆದುಕೊಳ್ಳುತ್ತಾನೆ. ಇದಕ್ಕಾಗಿ ಇಂಗ್ಲೀಷಿನಲ್ಲಿಯ ಒಂದು ಸಣ್ಣ ಕವಿತೆಯ ಅರ್ಥವನ್ನು ಇಲ್ಲಿ ಹೇಳಬೇಕೆಂದೆನಿಸಿದೆ. ‘ ಒಂದು ಮಗು ತನ್ನ ಅಣ್ಣನನ್ನು ಕಳೆದುಕೊಂಡಿದೆ. ಕೈಹಿಡಿದು ನಡೆಯುವ ಸಂಗಾತಿಯನ್ನು ಕಾಣದ ದುಃಖದಿಂದ ಉದ್ಗಾರ ತೆಗೆಯುತ್ತಲಿದೆ “ ಅಣ್ಣಾ ನೀನೆಲ್ಲಿರುವಿ? ನಾನೊಬ್ಬನೇ ಇಲ್ಲಿ ಅದೆಂತು ಆಡಲಿ? ಈ ಹೊಳೆಯ ದಂಡೆಯಲ್ಲಿ ನಾನೊಬ್ಬನೇ ಓಡಾಡಲ್ಯಾ? ಹಾರುತ್ತಿರುವ ಈ ಪಾತರಗಿತ್ತಿಗಳನ್ನು ಬೆನ್ನುಹತ್ತಿ ನಾನೊಬ್ಬನೇ ಹೇಗೆ ಆಡ್ಯಾಡಲಿ? ಅಂಣಾ! ಅಂಣನೆಲ್ಲಿರಬಹುದು? ಆತನು ಜೀವಂತನಿದ್ದಾಗ್ಗೆ ಆತನನ್ನು ಈ ಹೃದಯದಿಂದ ಪ್ರೀತಿಸಿದ್ದರೆ ಎಷ್ಟು ಚನ್ನಾಗಿತ್ತು? ಆದರೆ........ ಈ.........ಏನು?”

ಮರಣವು ಉಪಕಾರಿಯೂ ಇದೆ. ಜೀವಂತನಿರುವಾಗ ಆಗಲಾರದಂಥ ಕೆಲಸಗಳು ಮರಣದಿಂದ ಸಹಜ ಸಾಧ್ಯವಾಗುತ್ತಿವೆ. ಸಂಭಾಜಿಯ ಜೀವನ ಮರಾಠರಲ್ಲಿ ಒಡಕನ್ನು ತಂದೊಡ್ಡಿತ್ತು. ಅದೇ ಆತನ ಮರಣವು ಐಕ್ಯವನ್ನುಂಟುಮಾಡಿತು. ಅವನ ಮರಣವು ಅಮೃತವಾಗಿ ಪರಿಣಮಿಸಿತು. ಏಸುವಿನ ( ಕ್ರೈಸ್ತನ ) ಜೀವನದಲ್ಲಿ ಆಗದಿದ್ದುದೆಲ್ಲವೂ ಆತನ ಆ ಕ್ರಾಸ್‌ದ ಮೇಲಾದ ಸಾವಿನಿಂದ ಸಹಜವಾಗಿ ಸಾಧಿಸಿತಲ್ಲವೇ? ಈ ಮರಣದಲ್ಲಿ ಅನಂತ ಜೀವನವೂ ಅಡಕವಾಗಿದೆ.

ಮರಣವು ಕಾಳಕತ್ತಲೆಯೆಂದು ಅನಿಸಿದೆ ನಮಗೆ. ಆದರೆ ಮರಣವು ಅನಂತ ಪ್ರಕಾರದ ಅಮರ ಬೆಳಕು. ಮರಣವೇ ನಿರ್ವಾಣ, ಅಂದರೆ ಅನಂತ ಜೀವನವನ್ನು ಪ್ರಜ್ವಲಿಸುವದು. ಭಗವಾನ್ ಬುದ್ಧರು ಹೀಗೆ ಹೇಳಿದ್ದಾರೆ. " ಆತ್ಮ ನಿರ್ವಾಣವನ್ನು ಹೊಂದಿದರೇನೇ ನೀವು ಜಗತ್ತನ್ನು ಪ್ರೀತಿಸಬಲ್ಲಿರಿ. ನಿಮ್ಮನ್ನು ನೀವು ಮರೆಯಬೇಕು. ವೈಯಕ್ತಿಕ ಸ್ವಾರ್ಥ, ಆಶೆ, ಆಕಾಂಕ್ಷೆ ಗಳನ್ನೆಲ್ಲ ಮರೆತರೇನೇ ಈ ಅಮರ ಜೀವನವು ಸಿಕ್ಕುವದು." ಈ ಕಾಯದ, ಮನಸ್ಸಿನ, ಇಂದ್ರಿಯಗಳ ವಾಸನೆಗಳನ್ನೆಲ್ಲ, ಮರೆತುಬಿಡುವದೆಂದರೇನೇ ಮರಣ. ಈ ಮರಣವನ್ನು ದೇಹದಲ್ಲಿ ಜೀವವಿದ್ದಾಗಲೂ ಅನುಭವಿಸಲು ಬರುವದು. ತೆಂಗಿನಲ್ಲಿಯ ಗಿಟಕು ಚಿಪ್ಪಿನಿಂದ ಬೇರೆ ಇದ್ದು ಬುಡ್ ಬುಡ್ ಸಪ್ಪಳ ಮಾಡು ವಂತೆ ಜೀವನು ದೇಹದಲ್ಲಿ ಇದ್ದು ಸಂಪರ್ಕವಿಲ್ಲದಂತೆ ಇರುವದೇ ಮರಣ. ಆದ್ದರಿಂದಲೇ ತುಕಾರಾಮ ಮಹಾರಾಜರವರು ಅಂದಿದ್ದಾರೆ " ನನ್ನ ಸಾವನ್ನು ನಾನೇ ಕಂಡೆ. ಅದರ ಅನುಪಮ ಸುಖವನ್ನು ಸವಿದೆ" ಎಂದು. ಇಂಥ ಮರಣವನ್ನು ಅನುಭವಿಸಿದವರಿಗೆ ಪುನಃ ಸಾವಿಲ್ಲ. ಜೀವಂತನಿರು ವಾಗಲೇ ಸಾಯಲು ಕಲಿತವನೇ ಚಿರಂಜೀವಿ.

ಜರ್ಮನ್ ದೇಶದ ದಂತ ಕಥೆಗಳಲ್ಲಿ ಒಂದು ದಾರುಣವಾದ ಕಥೆ ಇದೆ- ಒಬ್ಬ ರಾಕ್ಷಸನನ್ನು ಓರ್ವ ದೇವತೆಯು " ನೀನೆಂದೂ ಸಾಯದಿರು " ಎಂದು ಶಪಿಸುತ್ತಾಳೆ. ನಮ್ಮ ದೇಶದ ಕಥೆಗಳಲ್ಲಿಯ ರಾಕ್ಷಸರೇನೋ ಇಂಥ ಶಾಪವನ್ನು ಸ್ವಾಗತಿಸುತ್ತಿದ್ದರು. ಎಂದಿಗೂ ಸಾಯದ ಸ್ಥಿತಿಗಿಂತ ಹೆಚ್ಚಿನ ಭಾಗ್ಯವಾವುದು ಅನ್ನುತ್ತಿದ್ದರು. ಇರಲಿ. ಆ ಶಾಪ ಕೇಳಿದ ಜರ್ಮನ್‌ರಾಕ್ಷ ಸನು ಅತೀವ ಮನಸ್ತಾಪಕ್ಕೆ ಗುರಿಯಾಗುತ್ತಾನೆ. ಜೀವನಕ್ಕಾಗಿ ಬೇಸರಿಯು ತ್ತಾನೆ. ಒಂದೊಂದಾಗಿ ಆತನ ಜೀವನದಲ್ಲಿ ಮಾಡಿದ ಕೃತಿಗಳು ಅವನೆದುರು ಬಂದು ಅಣಕಿಸುತ್ತವೆ. ಅವುಗಳನ್ನೂ, ನಿತ್ಯ ಜೀವನವನ್ನೂ, ಅದನ್ನು ಗೈದ ಆ ದೇಹವನ್ನೂ ಮರೆಯಲು ಅದೆಷ್ಟೋ ಪ್ರಯತ್ನಿಸುತ್ತಾನೆ. ಈ ಜೀವಕ್ಕೆ ಅಂಟಿಕೊಂಡ ಕಾಯವೆಂಬ ಈ ಮಣ್ಣುಮುದ್ದೆಯನ್ನು ಕಳಚಬೇಕೆಂದು ಆತನ ಆತ್ಮವು ಆತುರಪಡುತ್ತದೆ ಆದರೆ ಅವನಿಗೆ ಮರಣವು ಬರುವದಿಲ್ಲ. ಸಾಯಲೆಂದು ಉನ್ನತವಾದ ಪರ್ವತದ ಮೇಲಿಂದ ಹಾರಿದನು ಆದರೂ ಚಂಡಿನಂತೆ ಮೇಲಕ್ಕೆ ಪುಟಿದು ಬಂದನು. ಆತನನ್ನು ಅಗ್ನಿ ಸುಡಲೊಲ್ಲದು.

ನೀರು ಮುಳುಗಿಸಲೊಲ್ಲದು, ವಿಷವು ಕೊಲ್ಲಲೊಲ್ಲದು, ಉರುಲು ಮಾಲೆಯಾಯಿತು. ವಿಷವು ಅಮೃತವಾಯಿತು. ಹೀಗಾಗಿ ಈ ದೇಹದ ಮೇಲೆ ರೊಚ್ಚಿಗೇಳುತ್ತಾನೆ. ಹೃದಯದಲ್ಲಿ ಅಖಂಡ ಕೋಲಾಹಲದ ಬೊಂಬೆಯೆದ್ದಿದೆ. ಆದರೇನು ? ಅವನ್ನು ಸಂತೈಸಲು ಮರಣ ಮೇಘಗಳು ಮಳೆಗರೆಯಲೊಲ್ಲವು. ಆದುದರಿಂದ ಆ ರಾಕ್ಷಸನ ಕರುಣಾಮಯ ದೀನಪರಿಸ್ಥಿತಿಯು ಕೊನೆಗಾಣುವಂತಿಲ್ಲ. ಸಾವಿನ ಸೌಭಾಗ್ಯ ಅವನಿಗೆ ದೊರೆಯುವಂತಿಲ್ಲ.

ಎಂಥ ಅಸಹ್ಯವಾದ ದಾರುಣ ಪರಿಸ್ಥಿತಿಯಿದು ! ಸಾವನ್ನು ಹುಟ್ಟಿಸಿದ ಪರಮಾತ್ಮನ ಆಭಾರಗಳನ್ನು ಎಷ್ಟು ಮನ್ನಿಸಿದರೂ ಕಡಿಮೆಯೇ. ಮರಣವೆಂದರೆ ಜೀವ-ಈಶ್ವರರ ಕಿವಿಮಾತು. ನಾವು ಎಂದರೆ ಜೀವನದಲ್ಲಿ ತೇಲಾಡುವ ಕೆಸರು ತಳವನ್ನು ಕಾಣುವದು. ಸಾವು ಅಂದರೇನೇ ಪುನರ್ಜನ್ಮ.

ಅಮವಾಸ್ಯೆಯಲ್ಲಿ ನಾವು ಕೇವಲ ಕತ್ತಲೆಯನ್ನೇ ಕಾಣುತ್ತೇವೆ. ಅಂದು ಚಂದ್ರನು ಇಲ್ಲವೆಂದು ನಮ್ಮ ಅನಿಸಿಕೆ. ಆದರೆ ಕಡಲಿಗೆ ಎಲ್ಲಕ್ಕೂ ಹೆಚ್ಚಿನ ಉಕ್ಕು ಅಮಾವಾಸ್ಯೆಯ ದಿನವೇ. ಅಮಾವಾಸ್ಯೆಯು ಒಂದು ದೊಡ್ಡ ಪರ್ವಣಿಯು. ಅಂದು ಚಂದ್ರ ಸೂರ್ಯರ ಭೆಟ್ಟಿ. ಚಂದ್ರನು ಸೂರ್ಯನೊಡನೆ ಬೆರೆಯುತ್ತಾನೆ. ಅದರಂತೆ ಸಾವೆಂದರೆ ಜೀವನದ ಅಮಾವಾಸ್ಯೆ. ಜೀವವು ಈಶ್ವರನೊಡನೆ ಬೆರೆಯುತ್ತದೆ. ಅಂದು ಜೀವ ಪರಮಾತ್ಮರ ಮಿಲನವಾಗುತ್ತದೆ. ಎಲ್ಲಕ್ಕೂ ದೊಡ್ಡ ಉಕ್ಕು ಸಾಗರಕ್ಕೆ ಅಮಾವಾಸ್ಯೆಯ ದಿನವೇ ಅಲ್ಲವೆ? ಅದರಂತೆ ಮರಣವೆಂದರೆ ಅನಂತ ಜೀವನದೊಡನೆ ಕೂಡಿ ಹೋಗುವದು. ಸಾವಿನ ಅಮಾವಾಸ್ಯೆಯು ಜೀವನದ ದೊಡ್ಡ ಹುಣ್ಣಿಮೆಯು.

ಸಾಯುವ ಕಾಲಕ್ಕೆ ದೇಶಬಂಧು ಚಿತ್ತರಂಜನದಾಸರು ಒಂದು ಸುಂದರ ಕವನ ರಚಿಸಿರುತ್ತಾರೆ. ಅದರಲ್ಲಿ ಅವರು ಹೀಗೆ ಅಂದಿದ್ದಾರೆ "ಪ್ರಭೋ ನನ್ನ ಜ್ಞಾನಾಭಿಮಾನದ ಭಾರವನ್ನು ತಲೆಯ ಮೇಲಿಂದ ಇಳಿಸು. ಪುರಾಣ ಪುಸ್ತಕಗಳ ಭಾರವನ್ನು ಹೆಗಲ ಮೇಲಿಂದ ಇಳಿಸು. ಈ ಭಾರವನ್ನು ಹೊತ್ತು ಹೊತ್ತು ಈ ಕಾಯವು ಜರ್ಜರಿತವಾಗಿದೆ ನನ್ನಲ್ಲಿ ಏನೂ ಹುರುಳಿಲ್ಲ. ಉಸಿರಾಡಿಸಲು ಸಹ ಸಾಮರ್ಥ್ಯವಿಲ್ಲ, ತೇಕುತ್ತಿದ್ದೇನೆ ನೋಡಿದತ್ತ ಕತ್ತಲೆಯೇ ಕತ್ತಲೆ. ಇಳಿಸು ಪ್ರಭೋ, ಈ ಭಾರವನ್ನು. ತೀವ್ರ ಇಳಿಸು."

" ನವಿಲು ಗರಿಯ ಮುಕುಟ ಧರಿಸಿದ, ಕೈಯಲ್ಲಿ ಕೊಳಲು ಹಿಡಿದ, ರಾಧಾರಮಣ, ಶ್ಯಾಮಸುಂದರ ಗೋಪಾಲನೇ, ನಿನ್ನನ್ನು ಕಾಣಲು ನನ್ನ ಪಂಚಪ್ರಾಣಗಳು ಹಾತೊರೆಯುತ್ತಿವೆ "

ಎನಗೆ ವೇದ ಬೇಡ, ವೇದಾಂತ ಬೇಡ! ಅದೆಲ್ಲ ಮರೆತು ಹೋಗಲಿ. ಸ್ವಾಮಿ, ನಿನ್ನ ಅನಂತ ರಾಜ್ಯವನ್ನು ನಾನು ಕಾಣುತ್ತಿದ್ದೇನೆ. ಪ್ರಭು! ನಿನ್ನ ಕುಂಜದ್ವಾರದಲ್ಲಿ ಬಂದು ನಿಂತಿದ್ದೇನೆ. ನನಗೆ ಪ್ರಿಯವಾದ ನಿನ್ನೀ ಬಾಗಿಲ ದಲ್ಲಿ ಬಂದು ನಿಂತ ನನ್ನನ್ನು ನೋಡು. ನಂದಲಾರಂಭಿಸಿದ ದೀಪವನ್ನು ಮತ್ತೆ ಪ್ರಜ್ವಲಿಸಲು ನಿನ್ನ ಸನ್ನಿಧಿಗೆ ಬಂದಿದ್ದೇನೆ."

ಸಾವು, ಎಂದರೆ ಎಣ್ಣೆ ತೀರಲು ಸಮೀಪಿಸಿದ ದೀಪಕ್ಕೆ ಮತ್ತೆ ಎಣ್ಣೆ ಹಾಕಿದಂತೆ. ನಂದಾ ದೀಪವನ್ನು ಮತ್ತೆ ಬೆಳಗಿಸಿದಂತೆ. ಬೆಳಕು ತರಲು ಹೋಗುವದೇ ಸಾವು. ಇದೆಂಥ ಸಹೃದಯ ಕಲ್ಪನೆ! ಇರುವಿಕೆಯ ಬೇಸರವಿಲ್ಲ. ಸೇವೆ ಸಲ್ಲಿಸಲು ಬೇಸರವಿಲ್ಲ. " ಮತ್ತೆ ಮತ್ತೆ ಜನ್ಮವನ್ನು ಕೊಡು." ಇದು ಸಂತರ ಬೇಡಿಕೆ. ಈ ಅನಂತ ಜಗತ್ತಿನಲ್ಲಿ ಆ ಪರಮಾತ್ಮ ನನ್ನು ಸೇವಿಸುವ ಕುರಿತು ಮತ್ತೆ ಮತ್ತೆ ಆಡಲು ಬರುವರು ಇವರು. ಮಹಾ ಧೈರ್ಯದ, ಶೌರ್ಯದ ಆಟಗಾರರು ಇವರು.

ಭಾರತೀಯ ಸಂಸ್ಕೃತಿಯಲ್ಲಿ ಮರಣವು ಒಂದು ಅಮರವಾದ ಆಶಾ ವಾದವಾಗಿ ನಿಂತಿದೆ. ನಮ್ಮ ಸಂಸ್ಕೃತಿಯಷ್ಟು ಆಶಾವಾದಿ ಸಂಸ್ಕೃತಿಯು ಬೇರೊಂದಿಲ್ಲ. ಮರಣದ ನಂತರ ಮತ್ತೆ ಆಡಲು ಬರುವ. ರಾತ್ರಿ ಮಲಗಿ ಬೆಳಗಿನಲ್ಲಿ ಎದ್ದೊಡನೆ ಮಗುವು ಮತ್ತೆ ಆಟಗೆಯ ವಸ್ತುಗಳನ್ನು ಒಂದೆಡೆ ಕೂಡಿಸಿ ಆಟವನ್ನು ಆರಂಭಿಸುವಂತೆ, ಜೀವವು ಮರಣದ ನಂತರ ಮತ್ತೆ ಜಗತ್ತಿನಲ್ಲಿ ಬಂದು ವ್ಯವಹಾರವನ್ನು ಆರಂಭಿಸುತ್ತದೆ. ಅರ್ಧನೆಯ್ದ ವಸ್ತ್ರ ವನ್ನು ಮರುದಿನ ನೇಕಾರನು ಮತ್ತೆ ನೇಯಲು ಆರಂಭಿಸುವಂತೆ ನಾವಾ ದರೂ ಮಾಡತೊಡಗುತ್ತೇವೆ ಪುನರ್ಜನ್ಮದಲ್ಲಿ ಮೊದಲಿನ ಮಾತಿನ ನೆನವು ಸಾವಕಾಶ ಆಗುತ್ತ, ಮೊದಲಿನ ಜ್ಞಾನ, ಅನುಭವದ ಸಂಸ್ಕಾರ ಮತ್ತೆ. ತಲೆ ದೋರುತ್ತವೆ. ಅನೇಕ ಚಿಲ್ಲರೆ ಮಾತುಗಳನ್ನು ಮರೆತಿದ್ದರೂ ಜ್ಞಾನಾನುಭ ವದ ಸಂಸ್ಕಾರದ ಸಾರವು ನಮ್ಮನ್ನು ಜನ್ಮಜನ್ಮಕ್ಕೂ ಅಗಲದೆ ನಮ್ಮ

ಹತ್ತಿರವೇ ಇರುತ್ತದೆ. ಆ ಹಿಂದಿನ ಜನ್ಮದ ಸಂಸ್ಕಾರಸಾರದೊಡನೆ, ಮತ್ತೆ ಹೊಸ ಜನ್ಮವನ್ನು ಆರಂಭಿಸುತ್ತೇವೆ.

"ಯಾವದೂ ವ್ಯರ್ಥವಾಗಲಾರದು, ಆಶೆಯಿಂದ ಕಾರ್ಯ ಮಾಡು, ಅಂದರೆ ಕ್ರಮೇಣ ನೀನು ಪೂರ್ಣತ್ವವನ್ನು ಪಡೆಯುವಿ ಇದರಲ್ಲಿ ಸಂದೇಹ ವಿಲ್ಲ." ಎಂದು ನಮ್ಮ ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ಧೈರ್ಯ ವಿದ್ದವನೇ ಬಾಳುವನು. ಮರಣವೆಂದರೆ ಮತ್ತೆ ಹೊಸ ಹುಮ್ಮಸಿನಿಂದ ಧ್ಯೇಯಸಾಧನೆಯ ಸಿದ್ಧತೆ.

ಮರಣವು ಒತ್ತಾಯದ ಅನಾಸಕ್ತಿಯನ್ನು ಕಲಿಸುವದು. "ತೇನ ತ್ಯಕ್ತೇನ ಭುಂಜೀಥಾಃ" ಎಂದು ಉಪನಿಷತ್ತುಗಳು ಸಾರುತ್ತವೆ. "ಮೊದಲು ನೆರೆಯ ಜನರಲ್ಲಿಯ ಕೊರತೆಯನ್ನು ತುಂಬಿ, ಉಳಿದುದನ್ನು ನಿನಗಾಗಿ ಉಪ ಯೋಗಿಸು." ಈ ದಿವ್ಯ ಸಂದೇಶವನ್ನು ನಾವು ಮರೆಯುತ್ತೇವೆ. ಮೊದಲು ಮನೆ ತುಂಬುತ್ತೇವೆ, ಸಾಲದೇ ಬ್ಯಾಂಕುಗಳಲ್ಲಿ ಧನವನ್ನು ಇಡುತ್ತೇವೆ. ಮಗ್ಗುಲಲ್ಲಿದ್ದ ದೀನ ದುಃಖಿತರ ದುಃಖಗಳನ್ನು ಕಣ್ಣೆತ್ತಿ ನೋಡುವದಿಲ್ಲ. ಈ ಸಂಚಯದ ಕೆಸರೊಳಗಿಂದ ನಮ್ಮನ್ನು ಬಿಡಿಸಲು ನಮ್ಮ ಜೀವನದ ಉದ್ಧಾರ ಮಾಡಲು ಸಾವು ಬರುತ್ತದೆ. ಮರಣವೆಂದರೆ ತಾಯಿಯ ಮಂಗಲ ಕರಗಳು. ಮೈತುಂಬ ಹತ್ತಿದ ಆಸಕ್ತಿಯ ರಾಡಿಯನ್ನು ತೊಳೆದು ಸ್ವಚ್ಛಮಾಡುವ ಕೈ ಯೆಂದರೇನೇ ಮರಣ.

"ದೇವರೆ, ಈ ಕಾಯ, ಈ ಮನಸ್ಸು, ಧೂಳಿಯಿಂದ ಮುಸುಕಿದೆ. ನಿನ್ನ ಅಮೃತ ಕರದಿಂದ ಅವುಗಳನ್ನು ತೊಳೆದು ಸ್ವಚ್ಛಮಾಡು. ನಿನ್ನ ಕಾಲಡಿ ಯಲ್ಲಿ ನನ್ನನ್ನು ಮಲಗಿಸು ದೇವಾ!" ಇದುವೇ ಜೀವನದ ಆತುರದ ಕಳ ಕಳಿಯ ನುಡಿ. ಜಗತ್ತಿನಲ್ಲಿ ಆವ ಶಕ್ತಿಗೂ ಈ ಹುಡಿಯನ್ನು ತೊಳೆಯಲು ಸಾಮರ್ಥ್ಯವಿಲ್ಲ, ನೂರಾರು ಗುಡಿಗಳನ್ನು ಕೆಡವಿ ಮೂರ್ತಿಗಳನ್ನು ಒಡೆದು, ಅಗಣಿತ ದ್ರವ್ಯರಾಶಿಯ ಕೆಸರಿನಲ್ಲಿ ಗಝನೀ ಮಹಮ್ಮದನು ಸಿಕ್ಕಿದ್ದನು. ಆ ಕೆಸರಿನಲ್ಲಿ ಅತ್ತಿತ್ತ ಜಿಗಿದಾಡುತ್ತಿದ್ದನು. ಆತನ ಈ ಅಧಃಪತನವನ್ನು ದೇವರು ನೋಡಲಾರದವನಾಗಿ, ಅವನನ್ನು ಒಯ್ಯಲು ಬಂದನು. ಆಗ ಅವನು ಅಳ ಲಾರಂಭಿಸಿದನು. ಆಸಕ್ತಿಮಯ ಪ್ರಾಸಾದವನ್ನು ಬಿಡಲು ಅವನ ಮನಸ್ಸಿ

ಒಪ್ಪಲಿಲ್ಲ. ಆದರೇನು, ದೇವನು ಒಯ್ದೇಬಿಟ್ಟನು. ಮರಣದ ಸಾಬೂನಿನಿಂದ ಅವನನ್ನು ತೊಳೆದನು. ಈ ಜೀವನ ಮಾಲಿನ್ಯವನ್ನು ಕಳೆಯಲು ಮರಣವೆಂಬ ಅಮೃತವನ್ನು ಕರದಲ್ಲಿ ಹಿಡಿದ ಆ ಜಗನ್ಮಾತೆಯು ವಿನಾ ಮತ್ತಾರಿಗೂ ಸಾಧ್ಯವಿಲ್ಲ.

ಮರಣವು ನಮ್ಮನ್ನು ಕ್ಷಣಕ್ಷಣಕ್ಕೆ ಎಚ್ಚರಿಸುತ್ತದೆ. ಈ ಜಗತ್ತಿನಲ್ಲಿ ಇದ್ದುದನ್ನೆಲ್ಲ ಬಿಟ್ಟು ಬರಲೇಬೇಕಾಗುವದೆಂಬದನ್ನು ಸೂಚಿಸುತ್ತಿದೆ. ಜೀವನು ಉತ್ಕೃಷ್ಟ ಕುತನೀ ಗಾದೆಯಿಂದ ಧಾಬಳಿಯ ಮೇಲೆ ಭೂಶಯ್ಯೆಗೆ ಬರುವನು. ದೇವರ ದ್ವಾರದಲ್ಲಿ ನಮ್ರನಾಗಿಯೇ ಹೋಗಬೇಕು. ದಾಸರು ಹೇಳುವಂತೆ "ಸೂಜಿಯ ದ್ವಾರದಲ್ಲಿ ಆನೆಯು ಕೂಡಾ ಹಾಯಬಹುದು." ಆದರೆ ಜಗತ್ತನ್ನು ಕಾಡಿ, ಬಳಲಿಸಿ, ಸುಲಿದು, ಕುಬೇರನಾದ ಧನಮದವುಳ್ಳ ಮಾನವನು ಬಾಗಿಲವನ್ನು ದಾಟಲಾರ." ಇಂಥವರ ಮೋಟಾರ ಕಾರುಗಳು ನರಕದಲ್ಲಿ ಸಂಚರಿಸಬಹುದು. ಆದರೆ ಸ್ವರ್ಗದ ಇಕ್ಕಟ್ಟಾದ ದಾರಿಯಲ್ಲಿ ಪರರಿಗಾಗಿ, ಪರರ ಸೇವೆಗಾಗಿ, ದೇಹವನ್ನು ಸವೆಸಿದವರ ದೇಹ ಮಾತ್ರ ಸಹಜ ಹೋಗಬಲ್ಲದು.

ಅದು ಕಾರಣವೇ ಅಂತ್ಯಕಾಲಕ್ಕಾದರೂ ಗಾದಿಯ ಮೇಲಿಂದ ಕೆಳಕ್ಕೆ ಎಳೆಯಿರೆಂದು ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ನಾವು ಬಾಹ್ಯ ಜಗತ್ತಿನಲ್ಲಿ ಸೂಟು ಬೂಟುಗಳಿಂದ ಮೆರೆಯಬಹುದು. ಆದರೆ ಮನೆಗೆ ಬಂದೊಡನೆ ಸಂಜೆಯ ಮುಂದೆ ತುಳಸೀ ಕಟ್ಟೆಯಲ್ಲಿ ಕುಳಿತ ತಾಯಿಯ ಸಮೀಪಕ್ಕೆ ಹೋಗುವಾಗ ಈ ಅಬ್ಬರವು ನಡೆಯಲಾರದು. ತಾಯಿಯ ಮಂಗಲಕರಗಳು ನಮ್ಮ ಬೆನ್ನಮೇಲೆ ಆಡಬೇಕಾದರೆ ಸೂಟು ಬೂಟಗಳ ಈ ಅಬ್ಬರವನ್ನು ಬಿಟ್ಟು ಅವಳ ಹತ್ತರ ಹೋಗಬೇಕಲ್ಲವೇ ? ಅದರಂತೆ ಈ ಜಗತ್ತಿನಲ್ಲಿ ಮೆರೆದ ಮೇಲೆ ಜೀವನದ ಸಾಯಂಕಾಲದಲ್ಲಿ ಜಗನ್ಮಾತೆಯ ಹತ್ತರ ಹೋಗುವಾಗ ಈ ಆಡಂಬರವನ್ನೆಲ್ಲ ಬಿಟ್ಟು ನಮ್ರನಾಗಿ ಹೋಗಬೇಕಾಗುವದು. ಭಕ್ತಿ, ಪ್ರೇಮದ ವೈಭವವನ್ನು ಮಾತ್ರ ಸಂಗಡ ಒಯ್ಯಬಹುದು.

ಆದರೆ ಕೆಲವು ಸಾರೆ ಮನುಷ್ಯನು ನಗ್ನನಾಗಿ ತಾಯಿಯ ಭೆಟ್ಟಿಯಾಗಬೇಕಾದರೆ ನಾಚುತ್ತಾನೆ. ಗಾಂಧಾರಿಯ ಕೃಪಾದೃಷ್ಟಿ

ತನ್ನ ಕಾಯದ ಮೇಲೆ ಬಿದ್ದು ತಾನು ಅಮರನಾಗಬೇಕೆಂಬ ಇಚ್ಛೆ. ದುರ್ಯೋಧನನಲ್ಲಿದ್ದರೂ ಸಹ ನಾಚಿಕೆಯಿಂದ ಹೂವಿನ ಚಡ್ಡಿಯನ್ನು ಧರಿಸಿ ಅವಳ ಸಮೀಪದಲ್ಲಿ ಹೋದನಂತೆ. ಅದು ಕಾರಣ ಆತನ ದೇಹದಲ್ಲಿ ತೊಡೆಗಳನ್ನು ಬಿಟ್ಟು ಉಳಿದೆಲ್ಲವೂ ವಜ್ರದೇಹವಾಯಿತು. ಆದುದರಿಂದಲೇ ಭೀಮನು ಅವನ ತೊಡೆಯನ್ನು ಸೀಳಿ ಕೊಂದನಲ್ಲವೇ ? ತಾಯಿಯ ಹತ್ತಿರ ಕೂಸಾಗಿಯೇ ಹೋಗಬೇಕು. ಹುಟ್ಟುವದು ಭೂಮಿಯ ಮೇಲೆ. ಅದರಂತೆ ಸಾಯುವದು ಭೂಮಿಯ ಮೇಲೆಯೇ. ಅಂತೆಯೇ ಹುಟ್ಟಿದಾಗಲೂ ಆ ಜಗನ್ಮಾತೆಯ ಕೂಸು, ಸಾಯುವಾಗಲೂ ಅವಳ ಕೂಸೇ. ಹುಟ್ಟಿದಾಗ ಜಗನ್ಮಾತೆಯಿಂದ ಅಗಲಿದುದಕಾಗಿ ಅತ್ತಿರಿ, ಸಾಯುವಾಗ ಆ ತಾಯಿಯ ಸನ್ನಿಧಿಗೆ ಹೋಗುತ್ತೇನೆಂದು ಹಿಗ್ಗಿರಿ. ಹುಟ್ಟಿದಾಗ ನಾವು ಅಳುತ್ತೇವೆ. ಆದರೆ ತಾಯಿ-ತಂದೆ, ಬಂಧು-ಬಳಗದವರು ಹಿಗ್ಗುತ್ತಾರೆ. ಸಾಯುವಾಗ ನಾವು ನಗುತ್ತ ಸಾಯಬೇಕು, ಉಳಿದವರು ನಮ್ಮ ಸವಿ ನೆನಪನ್ನು ನೆನೆಸಿ ಅಳಲಿ.

ನಮ್ಮ ಬಾಳುವೆಯ ಪರೀಕ್ಷೆಯೆಂದರೆ ಮರಣ. ನಿಮ್ಮ ಮರಣದಿಂದ ನಿಮ್ಮ ಜೀವನದ ಬೆಲೆ ಕಟ್ಟುವದು. ಸಾಯುವಾಗ್ಗೆ ಅಳುವವನ ಬಾಳು ದೀನ ಸ್ಥಿತಿಯದು. ನಗು ನಗುತ್ತಾ ಸಾಯುವವನ ಬಾಳು, ಕೃತಾರ್ಥವಾದುದೆಂದು ಜನರು ತಿಳಿಯುವರು. ದೊಡ್ಡ ದೊಡ್ಡ ವ್ಯಕ್ತಿಗಳ ಮರಣವು ಒಂದು ದಿವ್ಯ ದರ್ಶನವು. ಆದರ ದರ್ಶನವು ಅನಂತರ ದರ್ಶನವು. ಅವರ ಮರಣ ಸಮಯದಲ್ಲಿ ಅವರಲ್ಲಿ ಎಷ್ಟು ಶಾಂತಿ, ಎಷ್ಟು ಸಮಾಧಾನ !

ಸಾಕ್ರೆಟಿಸನು ಅಂತ್ಯಕಾಲಕ್ಕೆ ಅಮೃತತತ್ತ್ವವನ್ನು ಅನುಭವಿಸುತ್ತಿದ್ದನು. "ಹೆಚ್ಚು ಬೆಳಕು, ಹೆಚ್ಚು ಬೆಳಕು" ಅನ್ನುತ್ತಾ ಗಟೆಯು ಅಸುಬಿಟ್ಟನು. "ರಾಮ, ಕೃಷ್ಣ, ಹರಿ" ಎಂದು ಭಜನೆ ಮಾಡುತ್ತಲೇ ತುಕಾರಾಮ ಮಹಾರಾಜರು ತೆರಳಿದರು. "ನನ್ನ ದಾಸಬೋಧವು ಇದೆ. ಹೀಗೇಕೆ ಅಳುತ್ತಿರುವಿರಿ?" ಎಂದು ರಾಮದಾಸರು ಅಂದು ತೆರಳಿದರು. "ಯದಾ ಯದಾಹಿ ಧರ್ಮಸ್ಯ ಗ್ಲಾನಿ" ಈ ಶ್ಲೋಕ ಉಚ್ಚರಿಸುತ್ತಲೇ ಲೋಕಮಾನ್ಯರು ದೇಹವನ್ನು ತ್ಯಜಿಸಿದರು. ಗಾಯತ್ರಿ ಮಂತ್ರವನ್ನು ಉಚ್ಚರಿಸುತ್ತ ಮೋತೀಲಾಲರ ಆತ್ಮಹಂಸವು ಹಾರಿಹೋಯಿತು. "ಬಂದೆ ಇದೋ ಬಂದೆ, ನಿನ್ನ ಪ್ರಿಯತಮ

ಬಾಗಿಲಲ್ಲಿ ದೀಪ ಬೆಳಗಿಸಲು ಬಂದೆ.'' ಎಂದು ದೇಶಬಂಧು ದಾಸರು ಉಸುರಿದರು. '' ಈ ಜಗತ್ತಿನ ಚಮತ್ಕೃತಿಯನ್ನು ನೋಡಿದೆ, ಇನ್ನು ಆ ಜಗತ್ತಿನ ಚಮತ್ಕೃತಿಯನ್ನಷ್ಟು ಕಾಣುವಾ'' ಎಂದು ಉಸುರಿದರು ಗೋಪಾಲ ಕೃಷ್ಣ ಗೋಖಲೆಯವರು.

'' ಅಗೋ ನೋಡಿರಿ ಭಾರತದ ಉಷಃಕಾಲ ಬರುತ್ತಲಿದೆ. ಈ ಬೆಳಕು ನೋಡಿ ನಾನು ನಿಜಧಾಮಕ್ಕೆ ಪ್ರಯಾಣ ಬೆಳೆಸುವೆನು.'' ಎಂದು ಭಗಿನಿ ನಿವೇದಿತಾದೇವಿಯವರೆಂದರು. ಶಿಶಿರಕುಮಾರ ಘೋಷರು ಚೈತನ್ಯ ಚರಿತಾಮೃತದ ಕೊನೆಯ ಭಾಗದ ಮುದ್ರಣವನ್ನು ನೋಡಿ '' ಮುಗಿಯಿತು ನನ್ನ ಕಾರ್ಯ. ನೀ ತಾಯಿ ಗೌರನನ್ನು ಕರೆದುಕೋ'' ಎಂದರು. ಮಗನಲಾಲ ಗಾಂಧಿಯವರು '' ದೇವಾ ಮಂಗಲ ಮಂದಿರದ ನಿನ್ನ ಹೆಬ್ಬಾಗಿಲನ್ನು ತೆರೆ, ದಿವ್ಯ ಪ್ರೇಮಾಮೃತ ತೃಷ್ಣೆಯಿಂದ ಈ ಬಾಲಕನು ಬಂದಿರುವನು. ನಿನ್ನ ಬಾಗಿಲಲ್ಲಿ ಬಂದಿರುವ ಈ ಮಗುವಿನ ಮೇಲೆ ಪ್ರೇಮದ ಮಳೆಗರೆ. ಪ್ರಪಂಚದಲ್ಲಿ ಹೆಣಗಿ, ಹೋರಾಡಿ, ದಣಿದು ಬಂದ ಈ ಮಗುವನ್ನು ನಿನ್ನ ಪಕ್ಕದಲ್ಲಿ ಮಲಗಿಸು, ನಿನ್ನ ಪ್ರೇಮ ನುಡಿಯಿಂದ ಸಂತೈಸು. ತೆರೆ ತೆರೆ ನಿನ್ನ ಮಂಗಲ ಮಂದಿರವನ್ನು ತೆರೆ" ಎಂಬ ಸಂಗೀತವನ್ನು ಅನ್ನುತ್ತಲೇ ಪ್ರಾಣಬಿಟ್ಟರು. ಜಗತ್ತಿನಲ್ಲಿ ಇಂಥ ಮಹಾ ಪ್ರಸ್ಥಾನಗಳು ಹೇರಳವಾಗಿವೆ. ಮರಣವೆಂದರೆ ಶಾಂತಿ, ನವಜೀವನದ ಆರಂಭ, ಆನಂದದ ದರ್ಶನ, ಒಂದು ಪರ್ವಣಿ, ಜೀವ-ಈಶ್ವರರ ಮಿಲನದ ಸಂಗೀತ. ಮರಣವೆಂದರೆ ನಲ್ಲನ ಮನೆ ಸೇರುವದು.

'' ಇಂದು ನಲ್ಲನ ಮನೆಗೆ ಹೋಗುವದಿದೆ, ಶೃಂಗಾರದ ಉಡುಪು ಧರಿಸು, ಮಣ್ಣಿನ ಹೊದಿಕೆಯನ್ನು ಮೈ ಮೇಲೆ ಧರಿಸು. ಮಣ್ಣಿನ ಹಾಸಿಗೆಯಲ್ಲಿ ನಲ್ಲನ ಜೊತೆಗೆ ಮಲಗುವದಿದೆ. ಎರೆದು ಹೇಳಲು ಹಾಕಿಕೊ, ಒಮ್ಮೆ ಒಮ್ಮೆ ಈ ಮನೆ ಸೇರಿದ ನಂತರ ತಿರುಗುವಂತಿಲ್ಲ. ಶೀಘ್ರ ಸಿದ್ಧಳಾಗು." ಇದೊಂದು ಸುಂದರವಾದ ಹಿಂದೀ ಕವನದ ಭಾವಾರ್ಥವಿದೆ. ಇದೆಂಥ ಸುಂದರ ಭಾವನೆ. ಮರಣವೆಂದರೆ ಜಗತ್ತಿನ ವಿಯೋಗ. ಆದರೆ ಜಗದೀಶ್ವರನೊಡನೆ ಯೋಗ, ಜಗದ ಬಿಡುವಿಕೆ; ಆದರೆ ದೇವರೊಡನೆ ಕೂಡುವಿಕೆ. ಮನುಷ್ಯನು ಮೃತನಾದ ಮೇಲೆ ನಾವು ಹೊಸ ವಸ್ತ್ರ ಉಡಿಸುತ್ತೇವೆ, ಅಲಂಕರಿಸುತ್ತೇವೆ.

ಮರಣವೆಂದರೆ ಜೀವ–ಶಿವರ ಮದುವೆ. ಆದುಕಾರಣವೇ ಶೃಂಗಾರ ವಲ್ಲವೇ?

ಮರಣದಲ್ಲಿಯ ಭಯಾನಕ ತೀಕ್ಷ್ಣತೆಯನ್ನು ಭಾರತೀಯ ಸಂಸ್ಕೃತಿಯು ತೆಗೆದೊಗೆದಿದೆ. ಜೀವನಕ್ಕಿಂತ ಮರಣವೇ ಅಂದವಾಗಿಯೂ ಮಧುರವಾಗಿಯೂ ಕಾಣುವಂತೆ ಮಾಡಿದೆ.'ಪ್ರಾಣೋ ಮೃತ್ಯುಃ'ಎಂಬ ಸಿದ್ಧಾಂತವ ಸ್ಥಾಪಿಸಿದೆ. ಪ್ರಾಣವೇ ಮರಣ. ಮರಣವೆಂದರೆ ಆಟ, ಮೋಜು, ಚಿರಲಗ್ನ.

ಯಾವ ಸಂಸ್ಕೃತಿ ಸಾವನ್ನು ಜೀವನವನ್ನಾಗಿ ಮಾಡಿದೆಯೋ ಆ ಸಂಸ್ಕೃತಿಯ ಉಪಾಸಕರಿಗೆ ಇಂದು ಸಾವು ನೋವಾಗಿದೆ. ಸಾವಿನ ಅಂಜಿಕೆ ತುಂಬಾ ಬಂದಿದೆ. ಸಾವು ಎಂಬ ಶಬ್ದವೂ ಅಸಹ್ಯವಾಗಿದೆ. ಜನ ದೇಹವನ್ನೇ ಪ್ರೀತಿಸಿ ಜೀವಗಳ್ಳರಾಗಿದ್ದಾರೆ. ಹಿರಿದಾದ ಧ್ಯೇಯಕ್ಕಾಗಿ ಕಾಯದ ಮಡಿಕೆಗಳನ್ನು ನಗೆ ಮೊಗದಿಂದ ಒಡೆಯಲು ಸಿದ್ಧರಾದವರೇ ಈ ಸಂಸ್ಕೃತಿಯ ನಿಜವಾದ ಉಪಾಸಕರು. ದೇಹದ ರಕ್ಷಕರು ಭಾರತೀಯ ಸಂಸ್ಕೃತಿಯ ಉಪಾಶಕರಲ್ಲ. ಭಾರತದಲ್ಲಿ ಇದ್ದ ದೈನ್ಯ, ದಾಸ್ಯವನ್ನು, ವಿಷಮಯ ವೈಷಮ್ಯವನ್ನು, ಅಜ್ಞಾನದ ಕತ್ತಲೆಯನ್ನು ದೂರಮಾಡಲು, ಬಲಿದಾನ ಮಾಡಲು ಲಕ್ಷಾವಧಿ ತರುಣ ತರುಣಿಯರು ಸಿದ್ಧರಾದರೆ ಮಾತ್ರವೇ ಈ ಭಾರತೀಯ ಸಂಸ್ಕೃತಿಯ ದಿವ್ಯ ಪರಿಮಳವು ದಿಗಂತದಲ್ಲಿ ಹಬ್ಬುವದು. ಆಗ ಭಾರತವು ನವತೇಜದಿಂದ ಮಿಂಚುವದು.

---

# ಕುರುಳ



ತುಂಗಭದ್ರೆಯ ದಕ್ಷಿಣದ ಬಹುಭಾಗಕ್ಕೆ ನಾವು **'ತಮಿಳನಾಡು'** ಎಂದು ಕರೆಯುತ್ತೇವೆ. ವಿಶೇಷವಾಗಿ ಕಾವೇರಿಯ ಸುತ್ತುಮುತ್ತಲಿನ ಪ್ರದೇಶವೆಲ್ಲ ಇದರಲ್ಲಿ ಸಮಾವೇಶವಾಗುತ್ತದೆ. ಆಂಧ್ರ, ಕರ್ನಾಟಕ, ಮಲಯಾಳಿ ಪ್ರಾಂತಗಳು, ಇದರ ಗಡಿಪ್ರದೇಶಗಳು. ಈ ತಮಿಳನಾಡಿನ ಮೂಲ ಸಂಸ್ಕೃತಿಯು ದ್ರಾವಿಡ. ದ್ರಾವಿಡ ಸಂಸ್ಕೃತಿಯು ಬಹು ಪ್ರಾಚೀನವಿದೆ. ಅದು ಎಷ್ಟು ಪ್ರಾಚೀನವೆಂಬುದನ್ನು ಹೇಳುವದು ಕಷ್ಟ. ದ್ರಾವಿಡರು ಕ್ಷಾತ್ರ ವೃತ್ತಿಯವರು. ಯುದ್ಧವೆಂದರೆ ಅವರಿಗೆ ಬಹು ಆನಂದ. ಕರ್ತೃತ್ವಹೀನ ಜೀವನಕ್ಕೆ ಅವರು ಮೂಗು ಮುರಿಯುವರು. ತಮಿಳ ಭಾಷೆಯ ಅತಿಪ್ರಾಚೀನ ಗೀತಗಳಲ್ಲಿಯೂ ಕಥೆಗಳಲ್ಲಿಯೂ ವೀರವೃತ್ತಿ ಹಾಗು ಸಾಹಸೀ ಜೀವನವೇ ವರ್ಣಿಸಲ್ಪಟ್ಟಿದೆ. ಒಂದು ಹಾಡಿನಲ್ಲಿ "ನನ್ನ ಮಗನು ಎಲ್ಲಿರುವನು ಎಂದು ಕೇಳುವಿ ? ಅವನು ಎಲ್ಲಿರುವನೆಂಬುದನ್ನು ನಾನರಿಯೆ, ಆದರೆ ಅವನು ಅಕಸ್ಮಾತ್ ರಣರಂಗದಲ್ಲಿ ಕಣ್ಣಿಗೆ ಬೀಳಬಹುದು. ಏಕೆಂದರೆ, ನನ್ನ ಹೊಟ್ಟೆಯಿಂದ ಹುಟ್ಟಿದ ಹುಲಿಯದು" ಎಂದು ಹೇಳಿದೆ. ದ್ರಾವಿಡ ಮಹಿಳೆಯರು ವೀರ ಮಾತೆಯರು. ವೀರರಿಗೆ ಜನ್ಮವೀಯುವದರಲ್ಲಿ ಅವರಿಗೆ ಧನ್ಯತೆ ಎನಿಸುತ್ತದೆ. ಶತೃದಮನರಿವರು ಅವರ ಪ್ರದೇಶಗಳನ್ನು ಉಧ್ವಸ್ತಗೊಳಿಸುವದು. ಅವರ ಮನೆಮಾರುಗಳನ್ನು ಸೂರೆಗೊಳ್ಳುವದು, ಇವೇ ಮೊದಲಾದ ಕಾರ್ಯಗಳಲ್ಲಿ ಅವರಿಗೆ ಅಭಿಮಾನವೆನಿಸುತ್ತದೆ. ಅಂಬಾ, ಅಂಬಾಲಿಕಾ ಹಾಗು ಅಂಬಿಕೆಯರನ್ನು ಭೀಷ್ಮನು ಯುದ್ಧದಲ್ಲಿ ಜಯಿಸಿ ತಂದಂತೆಯೂ, ಅಥವಾ ಶ್ರೀ ಕೃಷ್ಣನು ರುಕ್ಮಿಣಿಯನ್ನು ಅಪಹರಿಸಿದಂತೆಯೂ, ಇಲ್ಲವೆ ದ್ರೌಪದಿಯು ಜಯದ್ರಥನಿಗೆ 'ಮೊದಲು ನನ್ನ ಐವರು ಪತಿಗಳನ್ನು ಜಯಿಸಿ

ಆ ಮೇಲೆ ನನ್ನೆದುರು ಬಾ, ಎಂದಂತೆಯೂ, ಈ ದ್ರಾವಿಡರಲ್ಲಿಯೂ ಕೂಡ ವೀರ ರೀತಿ ಇದ್ದಂತೆ ತೋರುತ್ತದೆ. ಆರ್ಯರ ರಾಕ್ಷಸ ವಿವಾಹದ ಪದ್ಧತಿಯೋ ದ್ರಾವಿಡರಲ್ಲಿಯೂ ರೂಢವಾಗಿದ್ದಂತೆ ಕಾಣುತ್ತದೆ. ಅವರು ಮಾಂಸಾಹಾರಿ ಗಳು. ಶೂರರು, ಸಾಹಸಿಗಳು, ಧೈರ್ಯಶಾಲಿಗಳು, ವೀರ ಕ್ಷತ್ರಿಯರು. ಆದರೆ ಉದಾತ್ತತೆ—ಹಾಗು ಉಜ್ವಲ ನೀತಿಮತ್ತೆಯ ಬಗ್ಗೆ ಅಷ್ಟು ಅವರು ಪ್ರಸಿದ್ಧಿಯಿಲ್ಲ. ಅವರ ಪ್ರಾಚೀನ ಕಾವ್ಯಗಳಲ್ಲಿಯೂ ಈ ಗುಣಗಳು ಕಂಡು ಬರುವದಿಲ್ಲ.

ಮುಂದೆ ಆರ್ಯರು ದಕ್ಷಿಣಕ್ಕೆ ಬಂದರು. ತಮ್ಮೊಡನೆ ತಮ್ಮ ಸಂಸ್ಕೃತಿ ಯನ್ನೂ ತಂದರು. ತಾವು ಗೆದ್ದವರೆಂದು ಅವರು ಬರದಿದ್ದರೂ ಶಿಕ್ಷಕರು ಆಚಾರ್ಯರೆಂದು ಬಂದರು. ಬಂದ ಆರ್ಯರನ್ನು “ವೇದ ದ್ರಷ್ಟಾರರೆಂದೂ ಕೋಮಲ ಸ್ವಭಾವ”ದವರೆಂದೂ ಮನ್ನಿಸಹತ್ತಿದರು. ಬ್ರಾಹ್ಮಣ, ಬೌದ್ಧ, ಹಾಗೂ ಜೈನ ಈ ಮೂರು ಧರ್ಮದ ಜನರು ತಮ್ಮ ತಮ್ಮ ಸಂಸ್ಕೃತಿ, ನೀತಿ ಗಳನ್ನು ತೆಗೆದುಕೊಂಡು ಬಂದುದನ್ನು ಇತಿಹಾಸವು ಹೇಳುತ್ತದೆ. ತಮಿಳರ ಮೂಲ ಸಂಸ್ಕೃತಿಯು ದ್ರಾವಿಡ. ಅದೇ ಅದರ ತಳಹದಿಯು. ಆದರೆ ಮೇಲಿನ ಭವ್ಯ ಮಂದಿರವು, ಆರ್ಯಸಂಸ್ಕೃತಿಯದಿದೆ.* ಈ ಮೂರೂ ಧರ್ಮದ ಪಂಡಿತರು ಈ ನಾಡಿನಲ್ಲಿ ತಮ್ಮ ವಿಚಾರಗಳ ಪ್ರಚಾರವನ್ನು ಮಾಡಿದರು. ಸಂಸ್ಕೃತಿಯನ್ನು ಹಬ್ಬಿಸಿದರು. ವಿದ್ಯಾಪೀಠಗಳನ್ನು ತೆರೆದರು. ಸಾಹಿತ್ಯ ಸಂಘಗಳನ್ನು ನಿರ್ಮಿಸಿದರು. ಗ್ರಂಥಾಲಯಗಳನ್ನು ತೆರೆದರು. ತಮಿಳ ಭಾಷೆಗೆ ಭವ್ಯತೆಯನ್ನೂ ಶ್ರೇಷ್ಠತೆಯನ್ನೂ ಸ್ಥಿರತೆಯನ್ನೂ ಉಂಟು ಮಾಡಿದರು.

ವಿಂಧ್ಯಾದ್ರಿಯನ್ನು ದಾಟಿ ಮೊದಲು ದಕ್ಷಿಣಾಪಥಕ್ಕೆ ಬಂದ ಮಹರ್ಷಿ ಯೆಂದರೆ ಅಗಸ್ತ್ಯರು. ತಮಿಳಿನ ಮೊದಲನೇ ವ್ಯಾಕರಣ ಗ್ರಂಥವನ್ನು ಬರೆ

---

*** ಈ ಭವ್ಯಮಂದಿರವು ದ್ರಾವಿಡ ಆರ್ಯಸಂಸ್ಕೃತಿಗಳ ಸಂಗಮವೆಂದು ಹೇಳ ಬಹುದೇ ವಿನಃ ಕೇವಲ ಆರ್ಯಸಂಸ್ಕೃತಿ ಎಂದು ಹೇಳುವದು ಕಷ್ಟ. — ಸಂಪಾದಕ.**

ದವರು ಅಗಸ್ತ್ಯರೆಂದು ದಂತಕಥೆಯಿದೆ. ಆದರೆ ಆ ವ್ಯಾಕರಣವು ಲುಪ್ತ ವಾಗಿದೆ. ಅವರ ಶಿಷ್ಯನು ಬರೆದ ವ್ಯಾಕರಣವು ಮಾತ್ರ ಉಪಲಬ್ಧವಿದೆ. ಶ್ರೀ ಶಂಕರನು ತನ್ನ ಡಮರುವನ್ನು ಬಾರಿಸಿ, ಹೇಗೆ ಪಾಣಿನಿಗೆ ಸೂತ್ರಗಳನ್ನು ಹೇಳಿ ದನೋ ಆದೇ ಪ್ರಕಾರವಾಗಿ ಅಗಸ್ತ್ಯರಿಗೂ ಉಪದೇಶಿಸಿದನು ಎಂದು ದಂತ ಕಥೆಯಿದೆ. ಪಾಣಿನಿಯ ವ್ಯಾಕರಣ ಹೇಗೆ ಶಾಸ್ತ್ರೀಯವೂ ಅತುಲನೀಯವೂ ಇದೆಯೋ ಹಾಗೆಯೇ ಅಗಸ್ತ್ಯರ ತಮಿಳು ವ್ಯಾಕರಣವೂ ಇತ್ತೆಂದು ಹೇಳುತ್ತಾರೆ.

ತಮಿಳವು ಸಂಸ್ಕೃತದಷ್ಟೇ ಪ್ರಾಚೀನ. ಕ್ರಿಸ್ತಶಕದ ಪೂರ್ವದಲ್ಲಿಯೇ ತಮಿಳ ಭಾಷೆಯಲ್ಲಿ ಅನೇಕ ಗ್ರಂಥಗಳು ರಚಿಸಲ್ಪಟ್ಟಿವೆ. ಸಂಸ್ಕೃತಕ್ಕೂ ತಮಿಳಿಗೂ ಏನೂ ಸಂಬಂಧವಿಲ್ಲ ಸಂಸ್ಕೃತದ ಗಂಧವೂ ಕೂಡ ಇರದ ಪ್ರಮುಖ ಭಾಷೆಯು ಭಾರತದಲ್ಲಿ ಯಾವುದಾದರೂ ಇದ್ದರೆ ಅದು ತಮಿಳು. ಸಾಧಾರಣವಾಗಿ ಭಾರತದಲ್ಲಿಯ ಅರ್ವಾಚೀನ ಭಾಷೆಗಳೆಲ್ಲ ಸಂಸ್ಕೃತದಿಂದ ಹುಟ್ಟಿವೆ. ಹಾಗು ಅವುಗಳಲ್ಲಿಯ ವಾಙ್ಮಯವು ಕ್ರಿಸ್ತಿಶಕದ ಮೊದಲನೆ ಶತ ಮಾನಗಳಲ್ಲಿ ಪ್ರಾರಂಭವಾದದ್ದು ಕಂಡುಬರುತ್ತದೆ. ಆದರೆ ತಮಿಳ ಭಾಷೆಯ ಮಾತು ಹೀಗಲ್ಲ! ಇಂದಿಗೂ ಕೂಡ ತಮಿಳ ಭಾಷೆಯನ್ನು ವಿಮರ್ಶಿ ಸಿದರೆ ೧೦೦ಕ್ಕೆ ೫ ರಷ್ಟು ಕೂಡ ಸಂಸ್ಕೃತ ಶಬ್ದಗಳು ದೊರೆಯುವದಿಲ್ಲ. ತೆಲಗು, ಕನ್ನಡ, ಮಲಯಾಳಿ ಭಾಷೆಯಲ್ಲಿ ೧೦೦ ಕ್ಕೆ ಹೆಚ್ಚುಕಡಿಮೆ ೩೦-೪೦ ರಂತೆ ಸಂಸ್ಕೃತ ಶಬ್ದಗಳು ದೊರೆಯುತ್ತವೆ. ಹಾಗೆ ತಮಿಳಿನ ಸ್ಥಿತಿಯಿಲ್ಲ. ಆಂಧ್ರರು ತಮ್ಮ ದೇಶಕ್ಕೆ 'ಆಂಧ್ರದೇಶ' 'ಆಂಧ್ರಸೀಮಾ' ಎನ್ನುವರು.' 'ದೇಶ' ಸೀಮಾ, ಇವು ಸಂಸ್ಕೃತ ಶಬ್ದಗಳು. ಆದರೆ ತಮಿಳುನಾಡು ದಲ್ಲಿಯ 'ನಾಡು' ಶಬ್ದವು ದೇಶವೆಂಬ ಅರ್ಥದಲ್ಲಿದೆ. ತಮಿಳಭಾಷೆಯಲ್ಲಿ ಯಾವಬಗೆಯ ಸಂಸ್ಕೃತ ಶಬ್ದವೂ ಇಲ್ಲ. ಧರ್ಮ, ರಾಜಕಾರಣ, ಒಕ್ಕಲತನ, ವ್ಯಾಪಾರ ಈ ಎಲ್ಲ ಕ್ಷೇತ್ರಗಳಲ್ಲಿ ವಿಚಾರ ಪ್ರಕಟಮಾಡಲು ತಮಿಳಿನಲ್ಲಿ ಸ್ವತಂತ್ರ ಶಬ್ದಗಳಿವೆ. ಮರಾಠಿ ಭಾಷೆಯನ್ನು ನೋಡಿದರೆ, "ಧರ್ಮ, ಅರ್ಥ, ಕಾಮ, ಮೋಕ್ಷ" ಇತ್ಯಾದಿ ಸಂಸ್ಕೃತ ಶಬ್ದಗಳನ್ನೇ ಉಪಯೋಗಿಸುತ್ತಾರೆ. ಅಲ್ಲದೆ ರಾಜದಂಡ, ದುಷ್ಟ, ಇತ್ಯಾದಿ ಸಾವಿರಾರು ಸಂಸ್ಕೃತ ಶಬ್ದಗಳನ್ನು ಬಳಸುತ್ತಾರೆ ಆದರೆ ತಮಿಳಿನಲ್ಲಿ ನಾನಾ ಭಾವನೆಗಳನ್ನು ಪ್ರಕಟಿಸುವ ನೂರಾರು ಮೂಲ

ತಮಿಳ ಶಬ್ದಗಳೇ ಇವೆ. ಈ ಬಗೆಯಾಗಿ ತಮಿಳ ಭಾಷೆಯ ಶಬ್ದಸಂಗ್ರಹವೂ ಸ್ವತಂತ್ರವೂ, ವಿಪುಲವೂ ಇದೆ. ತಮಿಳು ಸ್ವತಂತ್ರ ಭಾಷೆಯಿದೆ. ಸ್ವತಂತ್ರ ಶಬ್ದಕೋಶ, ಸ್ವತಂತ್ರ ವಾಕ್ಯರಚನೆ, ಆ ಭಾಷೆ ಪೂರ್ಣ ಸ್ವಾವಲಂಬಿಯೂ, ಸ್ವಯಂಪೂರ್ಣವೂ ಇರುವದು. ಅಲ್ಲದೆ ಪ್ರಾಚೀನತೆಯಲ್ಲಿ ಸಂಸ್ಕೃತದೊಡನೆ ಸ್ಪರ್ಧಿಸುತ್ತಿರುವದು.

ಪ್ರಾಚೀನ ತಮಿಳು ವಾಙ್ಮಯದಲ್ಲಿ ಸಾಧಾರಣವಾಗಿ ಮೂರು ಭಾಗಗಳನ್ನು ಮಾಡಬಹುದು. ಸಂಗೀತ, ಸಾಹಿತ್ಯ, ಹಾಗು ನೃತ್ಯ ಎಂದು. ಸಂಗೀತ ಹಾಗು ನೃತ್ಯಗಳ ಮೇಲೆ ಗ್ರಂಥಗಳಿವೆ. ನಟರಾಜನ ಭವ್ಯಮಂದಿರ ಪ್ರದೇಶದ ಭಾಷೆಯಲ್ಲಿ ನಾಟಕ ಹಾಗು ನೃತ್ಯಗಳ ಗ್ರಂಥಗಳಿರುವುದು ಸ್ವಾಭಾವಿಕ. ನೃತ್ಯಕಲೆಯು ಪರಿಪೂರ್ಣತೆಯನ್ನು ಹೊಂದಿತ್ತು. ಸಾವಿರ ಸಾವಿರ ಎಳೆಗಳ ತಂತುವಾದ್ಯಗಳು ಇದ್ದು ನಿರುಪಮ ಸುಮಧುರ ಸಂಗೀತವನ್ನು ಸ್ರವಿಸುತ್ತಿದ್ದವು. ಪ್ರೇಮ ವಾಙ್ಮಯ, ಹಾಗು ವಿಚಾರಪೂರ್ಣ ವಾಙ್ಮಯ ವೆಂದೂ ವಿಭಾಗಗಳನ್ನು ಮಾಡುತ್ತಾರೆ. ಭಿನ್ನ ಭಿನ್ನ ಬಗೆಯ ಸಾಹಿತ್ಯಕ್ಕೆ ಭಿನ್ನ ಭಿನ್ನ ವ್ಯಾಕರಣಗಳಿವೆ. ಪ್ರೇಮಕಾವ್ಯಗಳ ವ್ಯಾಕರಣವೇ ಬೇರೆ. ಪ್ರಾಚೀನ ತಮಿಳ ವಾಙ್ಮಯವು ಟೀಕೆ ಟಿಪ್ಪಣೆಗಳಿಲ್ಲದೆ ತಿಳಿಯುವುದು ಅಸಾಧ್ಯ. ಸಂಸ್ಕೃತದಲ್ಲಿ ಯಾವ ಪ್ರಕಾರವಾಗಿ, ಭಾಷ್ಯ, ಟೀಕೆ, ಟಿಪ್ಪಣೆ ಗಳಿವೆಯೋ ಹಾಗೆಯೇ ತಮಿಳಿನಲ್ಲಿ ಕೂಡ ಉಂಟು.

ಕ್ರಿ. ಶ. ೬-೭ ಶತಮಾನಗಳೆಂದರೆ, ತಮಿಳ ನಾಡಿನ ವಿಧ್ವಂಸಕ ಕಾಲ. ಎಲ್ಲಿ ನೋಡಿದಲ್ಲೆಲ್ಲ ಯುದ್ಧಗಳೇ ನಡೆದಿದ್ದವು. ಈ ಗೊಂದಲದಲ್ಲಿ ಪ್ರಾಚೀನ ವಾಙ್ಮಯವು ಮಣ್ಣುಪಾಲಾಯಿತು. ಬೌದ್ಧ ಹಾಗು ಜೈನ ವಾಙ್ಮಯವೂ ಇದೇ ಕಾಲಕ್ಕೆ ನಾಶವಾಯಿತು. ಮುಂದೆ ಮುಸಲ್ಮಾನರ ಕಾಲದಲ್ಲಿ ಸಾವಿರಾರು ಧಾರ್ಮಿಕ ಗ್ರಂಥಗಳ ಹೋಳಿಯಾಯಿತು. ಗ್ರಂಥಾಲಯಗಳು ಉಧ್ವಸ್ಥಮಾಡಲ್ಪಟ್ಟವು ೧೮ನೇ ಶತಮಾನದಲ್ಲಿ ಮತ್ತೆ ವಾಙ್ಮಯಕ್ಕೆ ಉತ್ತೇಜನ ದೊರೆಯಹತ್ತಿತು. ೧೭೨೦ರ ಸುಮಾರಿಗೆ, ಅರುಣಾಚಲಮ್ ರೆಂಬ ನಾಟಕಕಾರರಾಗಿ ಹೋದರು. ಅವರು **'ರಾಮ ನಾಟಕಮ್'** ಎಂಬ ಸುಪ್ರಸಿದ್ಧ ನಾಟಕವನ್ನು ಬರೆದರು. ಈ ಲಲಿತ ಕಲೆಗಳಿಗೆ ಸಮಾಜದಲ್ಲಿದ್ದ

ಸ್ಥಾನವು ಈ ಗೊಂದಲದ ಸಮಯದಲ್ಲಿ ಮಾಯವಾಗಿತ್ತು. ಈ ಕಲೆಗಳು ದೇವಮಂದಿರಗಳನ್ನು ಮರೆಹೊಕ್ಕಿದ್ದವು. ದೇವಾಲಯಗಳಲ್ಲಿ ಸೇವಾರೂಪವಾಗಿ, ಇವುಗಳಿಗೆ ಸ್ಥಾನದೊರೆತಿತ್ತು. ಎಷ್ಟೋ ಕಡೆಗೆ ನೃತ್ಯಾಂಗನೆಯರಿಗೆ ಆಸುವು ದೊರೆಯಿತು. ( ಇವರನ್ನು ಗಂಧರ್ವರೆಂದು ಅನ್ನುತ್ತಿದ್ದರು. ) ತಂಜಾವೂರಿನ ಅರಸನಾದ ಸರಫೋಜಿ ಭೋಸಲೆಯು ತನ್ನ ದೀರ್ಘಕಾಲದ ಆಳಿಕೆಯಲ್ಲಿ (೧೭೮೦–೧೮೩೦) ಸಂಗೀತಕ್ಕೆ ಉತ್ತೇಜನವಿತ್ತನು ತಾಡಪತ್ರಗಳ ಮೇಲೆ ಬರೆದ ತಮಿಳ ವಾಙ್ಮಯವು ಉಪಲಬ್ಧವಾಗಿದೆ. ಎಷ್ಟೋ ಮಠಾಧಿಪತಿಗಳ ಆಧೀನದಲ್ಲಿಯೂ ದರಿದ್ರ ಪಂಡಿತರ ಮನೆಯಲ್ಲಿಯೂ ಬಿದ್ದಿದೆ ಅದರಲ್ಲಿಯ ಬಹು ಭಾಗವು ಪ್ರಸಿದ್ಧವಾಗಿದೆ. ಆಗುತ್ತಲಿದೆ.

ತಮಿಳ ಸಾಹಿತ್ಯವು ಸಂಸ್ಕೃತದಷ್ಟೇ ಪ್ರಾಚೀನವಿದ್ದರೂ ಎರಡರ ತುಲನೆಯನ್ನು ಮಾಡುವದು ಸಾಧ್ಯವೇ ಇಲ್ಲ. ಏಕೆಂದರೆ ವಾಙ್ಮಯದಲ್ಲಿ ಸಂಸ್ಕೃತಿಯ ಪ್ರತಿಬಿಂಬವು ಮೂಡುತ್ತದೆ. ಆರ್ಯರು ಬರುವ ಮೊದಲು ದ್ರಾವಿಡರಲ್ಲಿ ಉಚ್ಚ ಸಂಸ್ಕೃತಿ ಇರಲಿಲ್ಲ. ಆದುದರಿಂದ ಶ್ರೇಷ್ಠವಾಙ್ಮಯವೂ ಇರಲಿಲ್ಲ. ಸ್ವರ್ಗ, ನರಕ, ಪಾಪ, ಪುಣ್ಯ, ಜೀವ, ಶಿವ, ಆತ್ಮ–ಪರಮಾತ್ಮ ಇತ್ಯಾದಿ ಗಹನ ವಿಚಾರಗಳ ಸುಳಿವು ಕೂಡ ಅವರಲ್ಲಿ ಕಂಡುಬರುವದಿಲ್ಲ. ಆದರೆ ಒಂದು ವಿಷಯದಲ್ಲಿ ಮಾತ್ರ ತಮಿಳು ವಾಙ್ಮಯವು ಸಂಸ್ಕೃತದಕಿಂತಲೂ ಶ್ರೇಷ್ಠವಿದೆ. ನಿತ್ಯ ಜೀವನದಲ್ಲಿಯ ನೀತಿಯ ವಾಙ್ಮಯವು ತಮಿಳಿನಲ್ಲಿ ವಿಪುಲವಾಗಿದೆ ಎಂಬುದನ್ನು ಒಪ್ಪಲೇಬೇಕು. ಅನೇಕ ಜನ ಟೀಕಾಕಾರರು, ಆ ಜನರ ನೀತಿಮತ್ತೆಯೇ ಕಡಿಮೆತರಗತಿಯದಿದ್ದ ಮೂಲಕ, ಮೇಲಿಂದ ಮೇಲೆ ಅವೇ ನೀತಿ ಮಾತುಗಳನ್ನು ಹೇಳಬೇಕಾಯಿತೆನ್ನುತ್ತಾರೆ. ಉತ್ತರದಿಂದ ಬರುವ ಆರ್ಯರಿಗೆ, ಅವರು 'ಸತ್ಯವಾದಿನ್' ಎಂದು ಸಂಬೋಧಿಸಿದ ಉಲ್ಲೇಖಗಳು ಸಾಹಿತ್ಯದಲ್ಲಿ ದೊರೆಯುತ್ತವೆ. ಆದರೆ ಇಷ್ಟರಿಂದಲೇ ದ್ರಾವಿಡರೆಲ್ಲ ಅಸತ್ಯವಾದಿಗಳಿದ್ದರೆಂದು ಹೇಗೆ ಅನ್ನಲು ಬಂದೀತು? ಆಗ್ರಹವು ಉಪಯೋಗವಿಲ್ಲ.

ತಮಿಳು ಭಾಷೆಯಲ್ಲಿ ಐದು ಬಹುದೊಡ್ಡ ಮಹಾ ಕಾವ್ಯಗಳಿವೆ. ಐದು ಚಿಕ್ಕ ಮಹಾ ಕಾವ್ಯಗಳಿವೆ. ಎಂಟು ಗೀತ ಸಂಹಿತಗಳಿವೆ. ಹತ್ತು ದೊಡ್ಡ

ಕಾವ್ಯಗಳಿವೆ. ಈ ಹದಿನೆಂಟು ಚಿಕ್ಕ ಕಾವ್ಯಗಳಲ್ಲಿ ಮಹಾಭಾರತದ ಹಾಗು ಸ್ಮೃತಿಗಳ ಜ್ಞಾನಸಂಗ್ರಹವು ಸಂಗ್ರಹಿಸಲ್ಪಟ್ಟಿದೆ. ತಮಿಳ ವಾಙ್ಮಯವು ಆರ್ಯರ ವಿಚಾರಗಳಿಂದ ತುಂಬಿ ತುಳುಕುತ್ತದೆ ತಮಿಳ ವಾಙ್ಮಯವು ಪ್ರಾಚೀನವಿದ್ದರೂ ಆರ್ಯರು ಬರುವ ಮೊದಲು ಅವರಲ್ಲಿ ಹೇಳಿಕೊಳ್ಳುವಂತಹ ಸಾಹಿತ್ಯವಿರಲಿಲ್ಲ. ಮಹಾ ಕಾವ್ಯಗಳಲ್ಲಿ **ಕಂಭನ್‌ನ** ರಾಮಾಯಣ ಮತ್ತು **ಅತಿವಿರರಾಮಪಾಂಡ್ಯನ** 'ನೈಷತ ಕಾವ್ಯ' ಇವು ಬಹು ಪ್ರಸಿದ್ಧವಿವೆ. ಅಲಂಕಾರ ಶಾಸ್ತ್ರದಲ್ಲಿಯ ಕೆಲವನ್ನೂ ಕೆಲವು ಕಾವ್ಯಗಳನ್ನೂ ಓದಿದರೆ ಸಾಕೆಂಬ ಭಾವನೆಯು ಮಧ್ಯಕಾಲದ ಪಂಡಿತರಿಗೆ ಬಂದಿತ್ತು. ಜೈನ ಹಾಗು ಬೌದ್ಧರು ಬರೆದ ಎಷ್ಟೋ ಗಂಭೀರ ಗ್ರಂಥಗಳಿವೆ. ಆದರೆ ಜನತೆಯ ಲಕ್ಷ್ಯ ಅತ್ತ ಹೊರಳಿದಂತೆ ಕಾಣುವದಿಲ್ಲ. ಬ್ರಿಟಿಶರ ಕಾಲದಲ್ಲಿ ಇತರ ಭಾರತೀಯ ಭಾಷೆಗಳ ಮೇಲೆ ಪರಿಣಾಮವಾದಂತೆ ತಮಿಳ ಭಾಷೆಯ ಮೇಲೆಯೂ ಆಗಿದೆ. ರಾಷ್ಟ್ರೀಯ ಕವಿಗಳೂ ನಾಟಕಕಾರರೂ, ಕಾದಂಬರಿ ಕಥೆಗಾರರೂ, ಚರಿತ್ರಕಾರರೂ, ಶಾಸ್ತ್ರಜ್ಞರೂ ಹುಟ್ಟಿಹತ್ತಿದ್ದಾರೆ. ಸುಬ್ರಹ್ಮಣ್ಯಮ್ ಭಾರತಿ, ಎಂಬುವವರು ಅರ್ವಾಚೀನಕಾಲದ ರಾಷ್ಟ್ರೀಯ ಕವಿಗಳು. ಅವರು ೧೯೨೧ರಲ್ಲಿ ಮರಣವನ್ನೈದಿದರು.

ತಮಿಳ ಸಾಹಿತ್ಯವು ನೀತಿ ಶಾಸ್ತ್ರದಿಂದ ತುಂಬಿ ತುಳುಕುತ್ತದೆ ಎಂದು ಹಿಂದೆ ಹೇಳಿದ್ದೇನೆ. ಇಂತಹ ಗ್ರಂಥಗಳಲ್ಲಿ 'ಕುರುಳ' ಅತಿ ಶ್ರೇಷ್ಠವಾದುದು. ಇದು ಒಂದು ಉತ್ಕೃಷ್ಟ ಕಾವ್ಯ. ಇದರಲ್ಲಿ ಉದಾತ್ತ ವಿಚಾರಗಳೂ ಗಂಭೀರ ಭಾವನೆಗಳೂ ಕಾವ್ಯಕ್ಕಿಂತ ಮಿಗಿಲಾಗಿವೆ. ಶಬ್ದ ಹಾಗು ಅರ್ಥದ ಸಂಪತ್ತು ಇದರಲ್ಲಿ ನೋಡಲು ದೊರೆಯುವದು ಮೊದಲು ಈ ಗ್ರಂಥಕರ್ತನ ಬಗೆಗೆ ಒಂದೆರಡು ಮಾತುಗಳನ್ನು ಹೇಳಿ ಮುಂದೆ 'ಕುರಳ'ದ ಬಗ್ಗೆ ಹೇಳುವೆ.

ಈ ಪ್ರಸಿದ್ಧ ಗ್ರಂಥದ ಕರ್ತೃವು **'ತಿರುವಲ್ಲುವರ'**. ಮದ್ರಾಸದ ಸಮೀಪದಲ್ಲಿರುವ ಮೈಲಾಪುರದವರು. ಅವರ ಕಾಲ ನಿಶ್ಚಿತವಾಗಿ ಹೇಳಲು ಬರದಿದ್ದರೂ ಕ್ರಿ. ಶ.ಕದ ಮೊದಲನೇ ಶತಮಾನದಲ್ಲಿದ್ದರೆಂದು ನಿರ್ವಿವಾದ ವಾಗಿ ಹೇಳಬಹುದು. **ಶಿಲಪ್ಪಾಧಿಕಾರಮ್** ಮತ್ತು **ಮಣಿಮೇಖಲಾಯಿ**, ಎಂಬ ಎರಡನೇ ಶತಮಾನದ ಗ್ರಂಥಗಳಲ್ಲಿ ಕುರುಳದ ಉಲ್ಲೇಖವಿದೆ. ಪಾಂಡ್ಯರಾಜನಾದ ಉಗ್ರಪೇರುವಲುಡಿಯ ಕಾಲದಲ್ಲಿ ಮಧುರೆಯ ಕವಿ

ಮಂಡಳಿಯು ಈ ಕುರುಳ ಗ್ರಂಥವನ್ನು ಪ್ರಸಿದ್ಧ ಮಾಡಿತೆಂದು ತಿಳಿಯು ತ್ತದೆ. ಇವನು ಕ್ರಿ. ಶ. ಕ. ೧೫೫ರಲ್ಲಿ ಇದ್ದನೆಂಬ ಬಗೆಗೆ ವಾದವೇ ಇಲ್ಲ. 'ಈ ಕುರುಳ ಗ್ರಂಥದಲ್ಲಿ ನಾನು ಪ್ರಕಟಳಾಗಿರುವೆ' ಎಂದು ಸರಸ್ವತಿಯು ಪಾಂಡ್ಯರಾಜನನ್ನು ಕುರಿತು ಹೇಳಿದಳು, ಎಂದು ಒಬ್ಬ ಕವಿಯು ಕುರಳ್ ಕಾವ್ಯದ ಮಹತಿಯನ್ನು ವರ್ಣಿಸುವನು. ಈ ಪಾಂಡ್ಯರಾಜನು ಮೇಲೆ ವರ್ಣಿಸಿ ದವನೇ ಇರಬೇಕು. ಇದಲ್ಲದೆ ತಿರುವಲ್ಲೂವರರ ಮಿತ್ರರಾದ ಎಲೇಕಾರೆಂಬು ವವರು ಚೋಳಮನೆತನದ ಆರನೇ ಅರಸು. ಅವನ ಕಾಲವು ಮೊದಲನೇ ಶತಮಾನವೇ. ಅಂತೂ ಈ ಕವಿಯು ಹದಿನೆಂಟು ನೂರು ವರ್ಷ ಮೊದಲಿ ನವನು ಎಂಬುದರಲ್ಲಿ ಸಂದೇಹ ಇಲ್ಲ.

ಈ ಗ್ರಂಥಕಾರನ ಜೀವನ ಬಗೆಗೆ ಅಷ್ಟೊಂದು ಸಂಗತಿಗಳು ದೊರೆಯು ವದಿಲ್ಲ. ಅವನು ವಲ್ಲುವ ಜಾತಿಯವನೆಂದು ಅವನ ಹೆಸರಿನಿಂದ ತಿಳಿಯುವದು. 'ತಿರು' ಎಂದರೆ ಪೂಜ್ಯ-ಭಕ್ತ. ವಲ್ಲುವ ಜಾತಿಯು ಹರಿಜನರಲ್ಲಿಯದು. ಇವನು ಹರಿಜನ. ಈ ಜಾತಿಯ ಉದ್ಯೋಗವೆಂದರೆ, ಡಂಗುರ ಸಾರುವದು. ಸುದ್ದಿಯನ್ನು ಒಯ್ಯುವದು.

ಪಾಂಡ್ಯರ ರಾಜಧಾನಿಯು ಮಧುರೆ, ಇಲ್ಲಿಯೇ ಈ ಭಕ್ತಕವಿಯು ಹುಟ್ಟಿದನು. 'ಇವನ ತಂದೆಯು ಬ್ರಾಹ್ಮಣನು. ತಾಯಿ ಹರಿಜನ, ತಾಯಿಯ ಹೆಸರು 'ಆದಿ' ಈ ಹರಿಜನ ಕನ್ಯೆಯು ಬ್ರಾಹ್ಮಣನಿಂದ ಪೋಷಿಸಲ್ಪಟ್ಟಳು. ಆದುದರಿಂದ ಈಕೆಯ ಮನಸ್ಸಿನ ಮೇಲೆ ವೈದಿಕ ಸಂಸ್ಕೃತಿಯ ಪರಿಣಾಮ ವಾಗುವದು ಸ್ವಾಭಾವಿಕ. ಇವನ ತಂದೆಯ ಹೆಸರು 'ಭಗವಾನ್' ನೆಂದು. ಈ ದಂಪತಿಗಳ ಹೊಟ್ಟೆಯಲ್ಲಿ ಒಟ್ಟು ಆರು ಜನ ಮಕ್ಕಳು. ಈ ಆರೂ ಜನರೂ ಕಾವ್ಯಗಳನ್ನು ರಚಿಸಿದ್ದಾರೆ.

ತಿರುವಲ್ಲುವರರ ಬಾಲ್ಯದ ಬಗ್ಗೆ ಏನೂ ದೊರೆಯುವದಿಲ್ಲ. ಇವನ ಹೆಂಡತಿಯು ಮಹಾ ಪತಿವ್ರತೆಯೆಂದು ಪ್ರಸಿದ್ಧಿಯಿದೆ. ಬುದ್ಧ ಧರ್ಮದ ಗ್ರಂಥಗಳಿಂದ ತಿರುವಲ್ಲೂವರನು ಬೌದ್ಧಧರ್ಮಿಯೆಂದು ತಿಳಿಯುವದು. ಆತನ ಹೆಂಡತಿ ಸಿಂಗಾಪೂರದವಳು. ಆಕೆಗೆ ಬೌದ್ಧಭಿಕ್ಷುವು ಜ್ಞಾನ ದೀಕ್ಷೆ ಯನ್ನು ಕೊಟ್ಟಿದ್ದನು. ಇತ್ಯಾದಿ ಸಂಗತಿಗಳು ತಿಳಿಯುತ್ತವೆ. ಈ ದಂಪತಿಗಳು

ದಾಂಪತ್ಯ ಜೀವನವು ಸುಖಮಯವಾಗಿದ್ದಿತು. ಪತಿಪತ್ನಿಯರಲ್ಲಿ ಎಲ್ಲಿ ಪ್ರೇಮವಿದೆಯೋ ಅಲ್ಲಿ ಐಕ್ಯವಿದೆ, ಅಲ್ಲಿ ಆನಂದಕೇನು ಕೊರತೆ? ಗಂಡನ ಮಾತನ್ನು ಈಕೆಯು ವೇದವಾಕ್ಯದಂತೆ ಮನ್ನಿಸುತ್ತಿದ್ದಳು. ಆಕೆಯ ಹೆಸರು **ವಾಸುಕಿ.** ತಿರುವಲ್ಲುವರರು ಅತ್ಯಂತ ಸುಖಿಗಳೂ ಸಮಾಧಾನಿಗಳೂ ಆದ ಸಂಸಾರಿ ಇರುವರೆಂಬ ಸುದ್ದಿ ಕೇಳಿ ಒಬ್ಬ ವಿರಕ್ತ ಸಾಧುವು ತಿರುವಲ್ಲುವರರ ಕಡೆಗೆ ಬಂದನು “ಗೃಹಸ್ಥಾಶ್ರಮವು ಚೆನ್ನಾಗಿರುತ್ತದೆ, ಎಂದು ನೀನು ಹೇಳಿದರೆ ನಾನು ಮದುವೆಯಾಗುವೆ” ಎಂದು ಸಾಧುವು ಕೇಳಿದನು. ತಿರುವಲ್ಲುವರರಿಗೆ ಹಾಗೆ ಹೇಳಲು ಹೇಗೆ ಬಂದೀತು? ಬಹಳವಾದರೆ ತನ್ನ ಅನುಭವವನ್ನು ಹೇಳಲು ಶಕ್ಯವಿದ್ದಿತು. ಲಗ್ನವು ಒಂದು ಗೂಢವೇ ಇದೆ. ನಾಳೆ ಏನಾಗುವದೆಂಬುದನ್ನು ಯಾರು ಹೇಳಬಲ್ಲರು? ಎಂದನು. ತಿರುವಲ್ಲುವರರು ಆ ಸಾಧುವಿಗೆ ಕೆಲ ದಿನ ತಮ್ಮ ಮನೆಯಲ್ಲಿರಲು ಹೇಳಿದರು ಆತನು ಅಲ್ಲಿಯೇ ವಾಸ ಮಾಡಿದನು. ಒಂದು ದಿನ ತಿರುವಲ್ಲುವರರು, ತನ್ನ ಹೆಂಡತಿಯನ್ನು ಕರೆದು ಹಿಡಿತುಂಬ, ಉಕ್ಕಿನ ಚೂರುಗಳನ್ನು ಕೊಟ್ಟು ಅನ್ನವನ್ನು ಮಾಡು ಎಂದು ಹೇಳಿದರು. ಆಕೆಯು ಏನೂ ಸಂಶಯವನ್ನು ತೆಗೆದುಕೊಳ್ಳದೆ, ಅದನ್ನು ಒಲೆಯ ಮೇಲಿಟ್ಟು ಬೇಯಿಸಲು ಯತ್ನಿಸಿದಳು. ಮತ್ತೊಂದು ದಿನ ಆ ಸಾಧುವೂ ತಿರುವಲ್ಲುವರರೂ ಊಟಕ್ಕೆ ಕುಳಿತಿದ್ದರು. ಹೆಂಡತಿಯಾದ ವಾಸುಕಿಯು ನೀರು ಜಗ್ಗುತ್ತಿದ್ದಳು. ಅನ್ನವು ಆರಿತ್ತು. ಆದರೂ ‘ಎಲೆ ಏ, ಎಷ್ಟು ಬಿಸಿ ಅನ್ನವಿದು. ನನ್ನ ಕೈಯೆಲ್ಲ ಸುಟ್ಟು ಹೋಯಿತು.’ ಎಂದು ತಿರುವಲ್ಲುವರರು ಕೂಗಿದರು. ಕೂಡಲೆ ಕೊಡವನ್ನು ಅರ್ಧಕ್ಕೇ ಬಿಟ್ಟು ಓಡಿ ಬಂದು, ಪಾಪ ಆಕೆಯು ಬೀಸಣಿಕೆಯಿಂದ ಬೀಸಹತ್ತಿದಳು. ಆಶ್ಚರ್ಯದ ಸಂಗತಿ ಎಂದರೆ, ಆಕೆಯ ಪಾತಿವ್ರತ್ಯದ ಪ್ರಭಾವದಿಂದ ಆ ಕೊಡವು ನಡುವೆಯೇ ಜೋತಾಡುತ್ತಲಿದ್ದಿತು. ಒಂದು ದಿನ ತಿರುವಲ್ಲುವರರು, ಮಧ್ಯಾಹ್ನದಲ್ಲಿ ಮಗ್ಗದ ಮೇಲೆ ನೇಯ್ಯುತ್ತ ಕುಳಿತಿದ್ದರು. ಒಮ್ಮೆಲೇ ‘ಏ ದೀಪ ಹಚ್ಚಿಕೊಂಡು ಬಾ, ಎಳೆ ಹರಿದಿದೆ ಜೋಡಿಸಬೇಕಾಗಿದೆ’ ಎಂದು ಕೂಗಿದನು. ‘ಏನು ನನ್ನ ಗಂಡನಿಗೆ ಹುಚ್ಚುಗಿಚ್ಚು ಹಿಡಿದಿದೆಯೋ ಏನು! ನಡು ಹಗಲಲ್ಲಿ ದೀಪವನ್ನು ತಾ ಎನ್ನುವನು.’ ಎಂಬ ಶಂಕೆಯು ಕೂಡ ಈಕೆಯ ಮನಸ್ಸಿನಲ್ಲಿ ಬರದೆ, ಅವಸರದಿಂದ ದೀಪವನ್ನು ಹಚ್ಚಿಕೊಂಡು ಬರುವಳು.

ಎಂತಹ ವಿಶ್ವಾಸ ಪತಿಯ ಮೇಲೆ. ಇದೆಲ್ಲವನ್ನೂ ನೋಡಿ ಸಾಧುವು "ಪತಿ ಪತ್ನಿಯರಲ್ಲಿ ಪರಮೈಕ್ಯವಿದ್ದರೆ, ಎಳ್ಳುಕಾಳಷ್ಟು ಕೂಡ ಮನಸ್ಸಿನಲ್ಲಿ ಅವಿಶ್ವಾಸಕ್ಕೆ ಸ್ಥಾನವಿರದಿದ್ದರೆ, ಗೃಹಸ್ಥಾಶ್ರಮವೆಂದರೆ ಸುಖದ ಸಾಗರವು" ಎಂದು ತಿಳಿದುಕೊಂಡು 'ನನಗೆ ಎಲ್ಲವೂ ಅರ್ಥವಾಗಿದೆ, ನಾನು ಬರುವೆ' ಎಂದು ಹೊರಟುಹೋದನು.

ತಿರುವಲ್ಲುವರನ ಹೆಂಡತಿಯು ತೀರಿಕೊಂಡಳು. ಅವನಿಗೆ ಅತ್ಯಂತ ದುಃಖವಾಯಿತು. "ಎಲೇ ಪ್ರೇಮಮಯಿ! ನೀನು ನನ್ನ ಸಲುವಾಗಿ ರುಚಿ ಕಟ್ಟಾದ ಅಡಿಗೆಯನ್ನು ಮಾಡುತ್ತಿದ್ದೆ. ನನ್ನ ಆಜ್ಞೆಯನ್ನು ಯಾವಾಗಲೂ ಪಾಲಿಸುತ್ತಿದ್ದೆ. ನನ್ನ ಕಾಲುಗಳನ್ನು ಒತ್ತುತ್ತಿದ್ದೆ. ನಾನು ಮಲಗಿದ ನಂತರ ಮಲಗುತ್ತಿದ್ದೆ. ನಾನು ಏಳುವ ಮೊದಲು ಏಳುತ್ತಿದ್ದೆ. ನಿನ್ನಲ್ಲಿ ಕಪಟವಿರಲಿಲ್ಲ. ನಿನ್ನ ಸ್ವಭಾವ ಸರಳ, ಸುಂದರ. ಆದರೆ ಇಂದು ನನ್ನನ್ನು ಬಿಟ್ಟು ನಡೆದಿರುವೆ. ಈಗ ನನ್ನ ಕಣ್ಣುಗಳಿಗೆ ಶಾಂತರೀತಿಯಿಂದ ನಿದ್ರೆಬರಲು ಶಕ್ಯವಿದೆಯೇ' ಎಂದು ಹೆಂಡತಿಯನ್ನು ಕುರಿತು ತಿರುವಲ್ಲುವರನು ಉದ್ಗಾರ ತೆಗೆದನು. ಪತ್ನಿಯ ಮರಣದ ನಂತರ ತಿರುವಲ್ಲುವರನು ಸನ್ಯಾಸ ಸ್ವೀಕರಿಸಿದನು. ಜಗತ್ತಿಗುಪದೇಶ ಮಾಡುತ್ತ ಮಾಡುತ್ತ ಪರಲೋಕಕ್ಕೆ ತೆರಳಿದನು

**ಕುರುಳ್** ಗ್ರಂಥದಿಂದ ತಿರುವಲ್ಲುವರನ ಹೆಸರು ಅಜರಾಮರವಾಗಿದೆ "**ಜ್ಞಾನವೆಟ್ಟಿ**" ಎಂಬ ಚಿಕ್ಕ ಗ್ರಂಥವೊಂದು ಇವನ ಹೆಸರಿನಿಂದ ಪ್ರಸಿದ್ಧವಾಗಿದೆ. ಆದರೆ ಅದು ಅಷ್ಟು ಮಹತ್ವದ್ದಿಲ್ಲ. ಕುರಲದ ಬಗೆಗೆ ಹೇಳುವ ಮೊದಲು ಆತನ ತಂಗಿಯ ಬಗ್ಗೆ ಎರಡು ಮಾತುಗಳನ್ನು ಹೇಳುವೆ, ಈ ತಂಗಿಯ ಹೆಸರು '**ಅವಯ್ಯಾರ್**' ನಮ್ಮಲ್ಲಿ* ಮುಕ್ತಾಬಾಯಿ ಹಾಗು ಜನಾಬಾಯಿಯ ಅಭಂಗಗಳಿರುವಂತೆ, ಈ ಅವಯ್ಯಾರರ ಕವಿತೆಗಳು ಪ್ರಸಿದ್ಧವಿವೆ. ಆಕೆಯ ಕಾವ್ಯದಲ್ಲಿ ಸುಂದರತೆಯಿದೆ. ನೀತಿಯಂತೂ ತುಂಬಿ ತುಳುಕುತ್ತದೆ ಚಿಕ್ಕಮಕ್ಕಳಿಗೆ, ಕಲಿಸಲು ಉಪಯೋಗವಾಗಬೇಕೆಂದು, 'ಅ. ಆ' ಮೊದಲಾದ ಸ್ವರ ಹಾಗು ವ್ಯಂಜನಗಳನ್ನು ಮೊದಲಕ್ಷರವಾಗಿ ಉಪಯೋಗಿಸಿ, ಕಾವ್ಯವನ್ನು ರಚಿಸಿದ್ದಾಳೆ. ಚಿಕ್ಕ ಚಿಕ್ಕ ಚರಣಗಳಿವೆ. 'ಅಸಲಿ'ಯ

*ನಮ್ಮಲ್ಲಿ ಹೇಳವನ ಕಟ್ಟೆ ಗಿರಿಯಮ್ಮ, ಅಕ್ಕ ಮಹಾದೇವಿಯರಂತೆ,

— ಸಂಪಾದಕ

'ಅ' ಎಂದು ನಾವು ಅನ್ನುವಂತೆ, ತಮಿಳು ಬಾಲಕನು, "ಅ. ಅರಂ ಸೇ ಈ" ಎನ್ನುವನು ಅರಂ ಅಂದರೆ ಧರ್ಮ. ಅರಂ ಶಬ್ದವು ಅ ದಿಂದ ಪ್ರಾರಂಭ ವಾಗಿದೆ ಎಂದರ್ಥ. 'ಅರಂ ಸೇಈ' ಚರಣದ ಅರ್ಥವು ಧರ್ಮವನ್ನು ಮಾಡುವ ಇಚ್ಛೆ ಮಾಡು, ಎಂದು. ಅವನ್ನು ಕಲಿಸುವಾಗ 'ಆರು ವರುಸಿನಮ್' ಅಂದರೆ ಕ್ರೋಧವನ್ನು ಶಾಂತಮಾಡು, ಎಂಬ ಚರಣವನ್ನು ಕಲಿಸುತ್ತಾರೆ. ಈ ಬಗೆಯಾಗಿ ಅವಯ್ಯಾರರ ಚಿಕ್ಕಮಕ್ಕಳ ನೀತಿ ಸೂತ್ರಗಳಿವೆ. ಮೊದ ಮೊದಲು ಅಂಕಲಿಪಿಯಲ್ಲಿಯೇ ಈ ಸೂತ್ರಗಳಿರುತ್ತಿದ್ದವು. ಅವಯ್ಯಾರರ ಇತರ ಕವಿತೆಗಳೂ ಉಂಟು. ಅಲ್ಲಿಯ ಕಾವ್ಯದ ಸೊಬಗನ್ನು ನೋಡಿ! ಒಂದು ಕವಿತೆಯಲ್ಲಿ 'ತಾಡದ ಬೀಜವು ಎಷ್ಟು ದೊಡ್ಡದು. ವೃಕ್ಷವೂ ಎಷ್ಟು ಎತ್ತರವು! ಆದರೆ ಅದರ ನೆರಳು ಮಾತ್ರ ಒಬ್ಬನಿಗೂ ಕೂಡ ಸಾಕಾಗುವದಿಲ್ಲ. ಆದೇ, ಆಲದ ಬೀಜವು ಎಷ್ಟು ಚಿಕ್ಕದು? ತಾಡದ ವೃಕ್ಷದಷ್ಟು ಅದು ಎತ್ತರವೂ ಇಲ್ಲ. ಆದರೆ ರಾಜನೂ ಅವನ ಚತುರಂಗ ಬಲವೂ ವಿಶ್ರಾಂತಿಯನ್ನು ಪಡೆಯಲು ಬೇಕಾಗುವಷ್ಟು ನೆರಳನ್ನು ಅದು ಕೊಡಬಲ್ಲದು.'

ಇಂತಹ ಅವಯ್ಯಾರರ ಅಣ್ಣನಾದ ತಿರವಲ್ಲೂವರನು ಕುರುಳ, ಎಂಬ ಅಮೂಲ್ಯವಾದ ಕಾಣಿಕೆಯನ್ನು ಜಗತ್ತಿಗೆ ಕೊಟ್ಟಿರುವನು ಇದಕ್ಕೆ ತಮಿಳಿನಲ್ಲಿ ಬಹಳ ಮರ್ಯಾದೆ ಇದೆ. ಇದಕ್ಕೆ 'ತಮಿಳ ವೇದ'ವೆನ್ನುವರು. 'ಕುರುಳ' ಗ್ರಂಥದಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ 'ಧರ್ಮ'ವನ್ನೂ ಎರಡನೆಯ ಭಾಗದಲ್ಲಿ 'ಅರ್ಥ'ವನ್ನು ಮೂರನೆಯದರಲ್ಲಿ 'ಕಾಮ'ವನ್ನೂ ವರ್ಣಿಸಲಾಗಿದೆ. ಪುರುಷಾರ್ಥಗಳಲ್ಲಿ ಮೂರನ್ನು ವರ್ಣಿಸಿ, ನಾಲ್ಕನೆಯದಾದ ಮೋಕ್ಷವನ್ನು ಹೇಳಿಲ್ಲ ಅವನು ಅಸ್ಪೃಶ್ಯನಿದ್ದ ಮೂಲಕ ತನಗೆ ಅಧಿಕಾರವಿಲ್ಲವೆಂದು ಮೋಕ್ಷ ಧರ್ಮವನ್ನು ಹೇಳಲಿಲ್ಲವೇ ? ಅಥವಾ ಮೋಕ್ಷವೆಂದರೆ, ಪರಮಾತ್ಮಸ್ವರೂಪ ಪ್ರಾಪ್ತಿ. ಅದು ಅವರ್ಣ ನೀಯ ಸ್ಥಿತಿಯು, ಎಂದು ಹೇಳಿಲ್ಲವೇ? ಏನೆ ಇರಲಿ. ಚತುರ್ವಿಧ ಪುರುಷಾರ್ಥಗಳಲ್ಲಿ ಮೊದಲಿನ ಮೂರರ ಬಗೆಗೆ, ಕುರುಳ ಗ್ರಂಥದಲ್ಲಿ ಕಾವ್ಯ ಮಯವಾದ ವರ್ಣನವಿದೆ. ಮೊದಲನೇ ಭಾಗದಲ್ಲಿ ಧರ್ಮವನ್ನು ವರ್ಣಿಸು ವಾಗ ಹೇಳಿದ ಯತಿ ಧರ್ಮವೇ ಮೋಕ್ಷ ಧರ್ಮವೆಂದೂ ಕೆಲವರು ತಿಳಿಯುತ್ತಾರೆ.

ಈ ಮೂರೂ ಭಾಗ ಕೂಡಿ ೧೩೩ ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿಯೂ ಹತ್ತು ಹತ್ತು ಕವಿತೆಗಳಿವೆ. ಎಲ್ಲವೂ ಕೂಡಿ ೧೩೩೦ ಕವಿತೆಗಳಿವೆ. ಈ ಕವಿತೆಗಳು ದ್ವಿಪದಿಯಲ್ಲಿವೆ. ಕುರುಳ ಶಬ್ದದ ಮೂಲ ಅರ್ಥವೇ 'ದ್ವಿಪದಿ' ಎಂದು. ಇದರಲ್ಲಿ ಮೊದಲನೇ ಚರಣವು ದೊಡ್ಡದಿದ್ದು ಎರಡನೆಯದು ಚಿಕ್ಕದಿದೆ. ಮೊದಲನೇ ಚರಣದಲ್ಲಿ ನಾಲ್ಕು ಗುಣಗಳಿದ್ದರೆ, ಎರಡನೇದರಲ್ಲಿ ಮೂರು. ತಮಿಳಿನಲ್ಲಿಯೂ ಕನ್ನಡದಂತೆ ದ್ವಿತೀಯಾಕ್ಷರ ಪ್ರಾಸವಿರುತ್ತದೆ.

ಈ ೧೩೩೦ ಶ್ಲೋಕಗಳೂ ದ್ವಿಪದಿಯಲ್ಲಿಯೇ ಇವೆ. ವೃತ್ತಗಳು ತೀರ ಚಿಕ್ಕವಾದರೂ ವಿಶಾಲವಾದ, ಗಂಭೀರವಾದ ಅರ್ಥದಿಂದ ತುಂಬಿ ತುಳುಕುತ್ತಿವೆ. ಕುರುಳ ಕಾವ್ಯದಲ್ಲಿ ಎಲ್ಲೆಡೆಯಲ್ಲಿಯೂ ಒಂದು ಬಗೆಯ ಭವ್ಯತೆಯಿದೆ. ಉದಾತ್ತತೆ ಹಾಗು ಸಹೃದಯತೆಯು ಪೂರ್ಣವಾಗಿದೆ. ಪ್ರೇಮವನ್ನು ವರ್ಣಿಸುವ ಕೊನೆಯ ಭಾಗದಲ್ಲಿಯೂ ಕೂಡ, ಸದಭಿರುಚಿಗೆ ಕುಂದುತರುವ ಒಂದೂ ವಿಚಾರವೂ ಅಶ್ಲೀಲತೆಯೂ ಎಲ್ಲಿಯೂ ಕಂಡು ಬರುವದಿಲ್ಲ.

ಮೊದಲನೇ ಭಾಗದ ಸುರುವಿಗೆ ನಾಲ್ಕು ಪ್ರಕರಣಗಳಿವೆ. ಮೊದಲನೇ ಪ್ರಕರಣದಲ್ಲಿ ಪರಮಾತ್ಮನ ಸ್ತುತಿ ಇದೆ. ಈ ವರ್ಣನೆ ಕೆಲವೆಡೆಯಲ್ಲಿ ಪರಮಾತ್ಮನಿಗೆ ಅನ್ವಯಿಸುವದು. ಕೆಲವು ಸ್ಥಳಗಳಲ್ಲಿ ಬುದ್ಧ ಮಹಾವೀರರಂಥ ದೊಡ್ಡ ವಿಭೂತಿಗಳಿಗೆ ಅನ್ವಯಿಸುವದು. ಶೈವ ಹಾಗು ವೈಷ್ಣವರೂ, ತಿರುವಲ್ಲುವರನು ತಮ್ಮ ತಮ್ಮ ಪಂಥದವನೆಂದು ಅಭಿಮಾನ ಪಡುತ್ತಾರೆ. ಮೊದಲನೇ ಶತಮಾನದಲ್ಲಿ ಅನೇಕ ಮಿಶನರಿಗಳು ಇಲ್ಲಿಗೆ ಬಂದಿದ್ದರು. ಆದುದರಿಂದ ಕುರುಳಿನ ಮೇಲೆ ಬಾಯಬಲ್ಲಿನ ಪ್ರಭಾವವು ಬಿದ್ದಿದೆ ಎಂದು ಕ್ರಿಸ್ತೀಯರೂ ಕೂಡ ಅಭಿಮಾನಪಡುತ್ತಾರೆ. ಆದರೆ, ತಿರುವಲ್ಲುವರನು ಯಾವುದೇ ಒಂದು ವಿಶಿಷ್ಟ ಪಂಥದವನೆಂದು ತೋರುವದಿಲ್ಲ. ಅವನು ಸರ್ವ ಧರ್ಮಗಳಲ್ಲಿಯ ನೀತಿ ತತ್ವಗಳ ಸಂಗ್ರಾಹಕನಿರುವನು. ಅವನದು ನೀತಿ ಪ್ರಧಾನವಾದ ಧರ್ಮ. ಒಮ್ಮೊಮ್ಮೆ ಅವನು ಬೌದ್ಧ ಧರ್ಮೀಯನೆಂದು ಅನಿಸುವದು. ಆದರೆ ಯಾವ ಧರ್ಮದ ಉಲ್ಲೇಖವೂ ಈ ಗ್ರಂಥದಲ್ಲಿರುವದಿಲ್ಲ ಎರಡನೆಯ ಪ್ರಕರಣದಲ್ಲಿ ಪರ್ಜನ್ಯ ಸ್ತುತಿಯಿದೆ.

ಷಳಿಯಿಲ್ಲದೆ ಜಗತ್ತು ಬಾಳುವದೆಂತು? ಆಗ ಧರ್ಮವನ್ನು ಆಚರಿಸುವವರಾದರೂ ಯಾರು? ಮೂರನೆಯದರಲ್ಲಿ ವೀರ ವೈರಾಗ್ಯದ ವರ್ಣನೆಯಿದೆ. ನಾಲ್ಕನೇ ಪ್ರಕರಣದಲ್ಲಿ ಸದಾಚಾರದ ಮಹಾತ್ಮ್ಯವು ವರ್ಣಿಸಲ್ಪಟ್ಟಿದೆ. ಈ ಪ್ರಾಸ್ತಾವಿಕ ಪ್ರಕರಣಗಳ ನಂತರ ಮೊದಲನೇ ಪುರುಷಾರ್ಥವಾದ ಧರ್ಮದ ವರ್ಣನೆಗೆ ಮೊದಲಾಗುವದು.

ಈ ಧರ್ಮ ವಿಭಾಗದಲ್ಲಿ ಗೃಹಸ್ಥ ಹಾಗು ಯತಿ ಧರ್ಮದ ವರ್ಣನೆಗಳಿವೆ. ನಾಲ್ಕು ಆಶ್ರಮಗಳಲ್ಲಿ ಈ ಎರಡು ಆಶ್ರಮಗಳ ವರ್ಣನೆ ಮಾತ್ರ ಇದೆ. ತಿರುವಲ್ಲುವರನು ಸ್ವತಃ 'ಧನ್ಯೋಗ್ರಹಸ್ಥಾಶ್ರಮ:" ಎಂಬ ಮಾತಿನ ಅನುಭವವನ್ನು ಪಡೆದಿದ್ದನು. ಜೀವನದ ಕಡೆಗೆ ನಿರಾಶೆಯಿಂದ ನೋಡುವ ದೃಷ್ಟಿಯು ಅವನದಲ್ಲ. ಅವನ ದೃಷ್ಟಿಯು ಪ್ರೇಮಮಯವಾಗಿದೆ, ಗಂಭೀರವಾಗಿದೆ ಗೃಹಸ್ಥಧರ್ಮ, ಗಂಡಹೆಂಡಿರು, ಮಕ್ಕಳು ಇವುಗಳನ್ನು ಎಷ್ಟು ಸಹೃದಯತೆಯಿಂದ ಸುಂದರವಾಗಿ ವರ್ಣಿಸುತ್ತಾನೆ. ಮಕ್ಕಳ ಹೊಲಸನ್ನು ನೋಡಿ, ಅವನು ಮೂಗು ಮುರಿಯುವದಿಲ್ಲ. ಹುಬ್ಬು ಗಂಟಿಕ್ಕುವದಿಲ್ಲ. ಸರ್ವೋತ್ತಮ ಆನಂದವೆಂದರೆ, ಸಚ್ಛೀಲ ಹೆಂಡತಿ ಮತ್ತು ಆನಂದದ ಕೊನೆಯೆಂದರೆ, ಸುಂದರ ಸಂತತಿ, ಎಂದು ಅವನ ಅಭಿಪ್ರಾಯ. ಚಿಕ್ಕ ಮಕ್ಕಳ ವರ್ಣನೆಯನ್ನು ಮಾಡುವಾಗಂತೂ, ಅವನ ವಾಣಿಯು ಗಂಗೆಯಂತೆ ಹರಿಯುತ್ತಿದೆ. "ಮಕ್ಕಳ ಸ್ಪರ್ಶವೆಂದರೆ ಮೋಕ್ಷ. ಮೋಕ್ಷವೆಂದರೆ ಪರಮಾನಂದ" ಎಂದು ವರ್ಣಿಸುವನು. 'ಯಾರು ಚಿಕ್ಕಮಕ್ಕಳ ತೊದಲ್ನುಡಿಯನ್ನು ಕೇಳಿಲ್ಲವೋ ಅವರು ಮಾತು ಕೊಳಲು, ವೀಣೆಗಳು ಮಧುರ ಸ್ವರಗೈಯ್ಯುವವು, ಎನ್ನುವರು." ಎಂದು ಹೇಳುವನು. ಮಕ್ಕಳ ಬಗೆಗೆ ಇಷ್ಟು ಕೃತಾರ್ಥತೆ ಹಾಗು ಧನ್ಯತೆಗಳನ್ನು ತೀರ ಸ್ವಲ್ಪ ಶಬ್ದಗಳಲ್ಲಿ ಉತ್ಕಟ ರೀತಿಯಿಂದ ವರ್ಣಿಸಿದ ವರ್ಣನೆಗಳು ಅಪರೂಪ. ಗೃಹಸ್ಥ ಧರ್ಮದ ನಿರೂಪಣೆಯಲ್ಲಿ 'ಸವಿಮಾತು, ಪ್ರೇಮ. ಕೃತಜ್ಞತೆ, ಕ್ಷಮಾ ಸಂಯಮ, ಯಶ, ಇತ್ಯಾದಿ ಇಪ್ಪತ್ತು ನಾಲ್ಕು ಪ್ರಕರ್ಣಗಳಿವೆ. ಅವುಗಳ ಮಾದರಿಯನ್ನು ಮುಂದೆ ಕೊಡಲಾಗುವದು ಯತಿ ಧರ್ಮದಲ್ಲಿ ಒಂಬತ್ತು ಪ್ರಕರಣಗಳಿವೆ. ಅನಂತರ ಐದು ಸರ್ವಸಾಮಾನ್ಯ ಪ್ರಕರಣಗಳಿವೆ. ಮುಂದೆ ಎರಡನೆ ಭಾಗವಾದ 'ಅರ್ಥದ' ವರ್ಣನೆಯು ಪ್ರಾರಂಭವಾಗುವದು 'ಅರ್ಥ' ವಿಭಾಗದಲ್ಲಿ

ರಾಜ, ಅವನಿಗೆ ಅವಶ್ಯಕವಿರುವ ಗುಣ, ಮಂತ್ರಿಯು ಹೇಗೆ ಇರಬೇಕು ? ಸೈನ್ಯ ಹಾಗೂ ಶೂರ ಜನರು. ಗುಪ್ತಚಾರರು, ಮಿತ್ರರನ್ನು ತಿಳಿಯುವದು ಹೇಗೆ ? ಮಿತ್ರತ್ವದ ಮಹತ್ವ, ಒತ್ತಾಯದ ಪರಿಣಾಮ, ಶತ್ರುಗಳ ಬಗ್ಗೆ ದಕ್ಷತೆ, ಹೀಗೆ ವಿಭಾಗಗಳಿದ್ದು, ಮುಂದೆ, ಒಕ್ಕಲತನ, ಭಿಕ್ಷುಕ, ದಾನ, ಯಶ, ಕುಟುಂಬಕ್ಕೆ ಹೇಗೆ ದೊಡ್ಡಸ್ತನ ಬರಬೇಕು, ಇತ್ಯಾದಿ ಸುಂದರ ಪ್ರಕರಣಗಳಿವೆ ಈ ಪ್ರಕರಣಗಳು ಕೇವಲ ರಾಜನನ್ನು ಉದ್ದೇಶಿಸಿ ಇರದೆ, ಸರ್ವಸಾಮಾನ್ಯ ಜನತೆಯ ಬಗ್ಗೆಯೂ ಇವೆ. ನಮ್ಮಲ್ಲಿ ' ಅರ್ಥ ' ಶಬ್ದದಲ್ಲಿ ಸಮಾಜದ ವೈಭವ, ಸಮಾಜದ ಸರ್ವಾಂಗೀಣ ಉನ್ನತಿ ' ಎಂಬ ವ್ಯಾಪಕ ಅರ್ಥವಿದೆ. ರಾಜಕೀಯ ಅರ್ಥಕ್ಕಿಂತಲೂ ಆರ್ಥಿಕ ಅರ್ಥವು ವಿಶೇಷವಾಗಿದೆ. ಇಂದಿನ ಕಾಲಕ್ಕೆ ರಶಿಯಾದಂಥ ದೇಶದಲ್ಲಿ ಸರಕಾರವೆಂದರೆ, ಅರ್ಥಶಾಸ್ತ್ರದ ವ್ಯವಸ್ಥೆಯನ್ನು ಮಾಡುವವರು ಎಂಬ ಅರ್ಥವು ರೂಢವಾಗುತ್ತ ನಡೆದಿದೆ. ಇರಲಿ, ಸಮಾಜದ ವೈಭವಕ್ಕೆ ಹಾಗು ಸುಸ್ಥಿತಿಗೆ, ಯಾವ ಸಂಗತಿಗಳು ಅವಶ್ಯವಿವೆಯೋ ಅವೆಲ್ಲ ಈ 'ಅರ್ಥದ' ಪ್ರಕರಣದಲ್ಲಿ ಬರುತ್ತವೆ. ಪ್ರಜಾನು ರಂಜಕ, ದಕ್ಷ ಹಾಗು, ಪ್ರೇಮಮಯನಾದ ರಾಜನು, ಉದ್ಯೋಗಿಗಳು, ಕೃಷಿಕರಾದಂಥ ಜನ, ಭಿಕ್ಷುಕರ ಸುಳಿದಾಟವಿಲ್ಲದಿರುವದು, ಶೌರ್ಯ, ಧೈರ್ಯ, ತ್ಯಾಗ ಇತ್ಯಾದಿ ಗುಣ, ಇವೆಲ್ಲವುಗಳ ವರ್ಣನೆಗಳು ಈ ಭಾಗದಲ್ಲಿ ಬರುವವು. ಮೂರನೆಯ ವಿಭಾಗದಲ್ಲಿ ಕಾಮದ ವರ್ಣನೆಯಿದೆ. ಪ್ರಿಯೆ ಹಾಗು ಪ್ರಿಯಕರನ ವರ್ಣನೆಯಿದೆ. ಒಬ್ಬನು ಒಬ್ಬ ಯುವತಿಯನ್ನು ನೋಡುವನು. ಇಬ್ಬರ ದೃಷ್ಟಿಸಂಯೋಗವಾಗಿ ಪ್ರೇಮವು ಕೂಡುವುದು. ಪ್ರೇಮವಿಹ್ವಲರಾಗುವರು. ತಾಡವಾಲಿಯ ಹದನವಾದ ಮೊನೆಯುಳ್ಳ ಎಲೆಗಳ ಟೊಂಗೆಗಳ ಮೇಲೆ ತಮ್ಮ ಮೆರವಣಿಗೆಯನ್ನು ತೆಗೆಯುವರು. ಆ ಕಾಲಕ್ಕೆ ಈ ಪದ್ಧತಿಯು ಅಲ್ಲಿ ರೂಢಿಯಲ್ಲಿರಬೇಕು. ಇದರ ಅರ್ಥವಿಷ್ಟೇ ! ' ನಾವು ಮುಳ್ಳಿನ ಮೇಲೆ ಸಹ ಮಲಗಬಲ್ಲೆವು, ಆದರೆ ವಿಯೋಗವನ್ನು ಸಹಿಸಲಾರೆವು" ಎಂದು. ಈ ಅವರ ನಿಷ್ಠೆಯನ್ನು ಕಂಡು ಜನರು ಅವರಿಬ್ಬರಲ್ಲಿಯೂ ಇಷ್ಟು ಪ್ರೇಮವಿದ್ದರೆ ಅವರ ತಂದೆ ತಾಯಿಗಳು ಅವರ ಲಗ್ನವನ್ನೇಕೆ ಮಾಡಬಾರದು ? ಎಂದು ವಿಚಾರಿಸಹತ್ತುವರು. ಮುಂದೆ ಲಗ್ನವಾಗುವದು. ಆದರೆ ಪ್ರಿಯಕರನು ಯುದ್ಧಕ್ಕೆ ಹೋಗುವನು. ವಿಯೋಗ

ವಾಗುವದು. ಈ ವಿರಹಾವಸ್ಥೆಯಲ್ಲಿಯ ಕೋಮಲ ಭಾವನೆ, ಹೃದ್ಯವಿಚಾರಗಳನ್ನು ಅತ್ಯಂತ ಎದೆಕರುಗುವಂತೆ—ವರ್ಣಿಸಿದ್ದನ್ನು ನಾವು ನೋಡಬಹುದು. ಮುಂದೆ ಪ್ರೇಮಕಲಹದ ವರ್ಣನೆಯಿದೆ. ಇಲ್ಲಿಗೆ ಈ ಭಾಗವು ಮುಗಿಯುವದು. ಈ ಭಾಗದಲ್ಲಿ ಎಲ್ಲಿಯೂ ಅಶ್ಲೀಲತೆಯಿಲ್ಲ. ಮರ್ಯಾದೆಯ ಅತಿಕ್ರಮಣವಾಗಿಲ್ಲ. ಹೃದಯದಲ್ಲಿಯ ಭಾವನೆಗಳು ಅತಿ ಸವಿಮಾತುಗಳಿಂದ ವರ್ಣಿಸಲ್ಪಟ್ಟಿವೆ.

ಕುರುಳಿನಲ್ಲಿಯ ಸುಂದರ ಕಲ್ಪನೆ ಸುಂದರ ಉಪಮೆ, ಅಭಿನವ ವಿಚಾರಗಳ ಬಗ್ಗೆ ಎಷ್ಟು ಉದಾಹರಣೆಗಳನ್ನು ಕೊಡಬೇಕು! ೧೩೩೦ ಕವಿತೆಗಳೂ ಅಷ್ಟಕೋನವುಳ್ಳ ರತ್ನವಿದ್ದಂತೆ; ಪ್ರತಿಯೊಂದು ಕವಿತೆಯೂ ಕೆತ್ತಿದ ವಜ್ರ. ಅದರಲ್ಲಿ ಒಂದು ಶಬ್ದವನ್ನು ಕೂಡ ಹೆಚ್ಚು ಕಡಿಮೆ ಮಾಡಲು ಬರುವಂತಿಲ್ಲ. ಅದರ ಸವಿಯನ್ನು ಸ್ವಲ್ಪ ಸವಿಯೋಣ!

ಈ ಗ್ರಂಥದಲ್ಲಿ ಪ್ರೇಮ, ಭೂತದಯೆ, ಪರೋಪಕಾರ ಇತ್ಯಾದಿ ವಿಷಯಗಳ ಮೇಲೆ, ಉತ್ಕೃಷ್ಟವಾದ ವಿಚಾರಗಳಿವೆ ಒಂದೆಡೆಯಲ್ಲಿ 'ಪ್ರೇಮದ ಮಹಾದ್ವಾರವನ್ನು ನಿರ್ಬಂಧಿಸುವ ಅಗಳಿ ಯಾವುದು ? ಪರಸ್ಪರರನ್ನು ಪ್ರೇಮಿಸುವವರ ಆನಂದಾಶ್ರುಗಳು, ಪರಸ್ಪರರ ಹೃದಯದಲ್ಲಿರುವ ಪ್ರೇಮಸಿಂಧುವಿನ ಅಸ್ತಿತ್ವವನ್ನು ಸಾರುತ್ತವೆ." ಎಂದು ಕವಿಯು ವರ್ಣಿಸಿದ್ದಾನೆ. 'ಪ್ರೇಮದ ಸವಿಯನ್ನು ಸವಿಯಬೇಕೆಂದೇ ಜೀವಾತ್ಮನು ಮೇಲಿಂದ ಮೇಲೆ, ಅಸ್ಥಿಚರ್ಮಮಯ ಪಂಜರದಲ್ಲಿ ಬದ್ಧನಾಗುತ್ತಾನೆ." "ಯಾವನಿಗೆ ಹೃದಯದಲ್ಲಿ ಪ್ರೇಮದ ಸೋಂಕು ಕೂಡ ಇಲ್ಲವೋ ಅವನು ಸಿಡಿ ಹಾಯ್ದು ಗಿಡದಂತೆ." ಎಂದು ಅಂದಿದ್ದಾನೆ ಎರಡನೆಯವರಿಗೆ ದುಃಖವನ್ನು ಕೊಡಬಾರದು ಎಂಬ ವಿಷಯವನ್ನು ವರ್ಣಿಸುವಾಗ "ನಿನ್ನ ಒಂದು ಶಬ್ದಕೂಡ ಎರಡನೆಯವರಿಗೆ ದುಃಖವನ್ನು ಕೊಡುವದಾದರೆ ನಿನ್ನ ಸದ್ಗುಣಗಳೆಲ್ಲ ಹಾಳಾದವೆಂದೇ ತಿಳಿ." "ಸವಿಮಾತಿನಿಂದ ಕಾರ್ಯವಾಗುತ್ತದೆಂದು ಕಾಣುವಾಗ ಜನರು ಕಠೋರ ಮಾತುಗಳನ್ನೇಕೆ ಆಡುತ್ತಾರೊ?" ಎಂದು ಅಂದಿರುವನು. ಮತ್ತೊಂದೆಡೆಯಲ್ಲಿ "ಜಗತ್ತಿನ ಉಪಕಾರವನ್ನು ಅಪೇಕ್ಷಿಸದೇ ನಾವು ಉಪಕಾರವನ್ನು ಮಾಡಿದರೆ ಅದನ್ನು ತೀರಿಸಲು ಎಂದೂ ಶಕ್ಯವಿಲ್ಲ." ಎಂದು ಹೇಳಿದ್ದಾನೆ. "ಮೈಮೇಲಿನ ವಸ್ತ್ರವು ಹಾರುತ್ತಿದ್ದರೆ

ಕೂಡಲೆ ನಮ್ಮ ಕೈಗಳು ಅದನ್ನು ಸರಿಪಡಿಸಲು ಸಿದ್ಧವಾಗುತ್ತವೆ.'' ಅದರಂತೆಯೇ ಮಿತ್ರನ ಪಕ್ಷವು ಸ್ವಲ್ಪ ದುರ್ಬಲವಾದೊಡನೆಯೇ ಅವನ್ನು ಎತ್ತಿ ಹಿಡಿಯಲು ಸನ್ಮಿತ್ರನು ಮುಂದರಿಯುತ್ತಾನೆ.'' ಎಂದು ಮಿತ್ರತ್ವದ ವರ್ಣನೆಯನ್ನು ಮಾಡುತ್ತಾನೆ. ಇದು ಎಂತಹ ಸಮರ್ಪಕವಾದ ಸುಂದರವಾದ ವರ್ಣನೆಯು! ಶತ್ರುವು ಮೇಲೆ ಹೇಗೆಯೇ ತೋರಲಿ ನಾವು ಮಾತ್ರ ಮೋಸಹೋಗಬಾರದೆಂದು ಬಹು ಸುಂದರವಾಗಿ ವರ್ಣಿಸಿದ್ದಾನೆ. ''ಬಾಣವು ಸರಳ ಕಾಣುತ್ತದೆ. ಆದರೆ ಪ್ರಾಣತೆಗೆದುಕೊಳ್ಳುತ್ತದೆ.'' ''ವೀಣೆಯು ಕೊಂಕು ಇದ್ದರೂ ಮಧುರ ಸ್ವರ ಕೊಡುವದು.'' ಇದು ಎಷ್ಟು ಸುಂದರವಾದ ದೃಷ್ಟಾಂತ! ಇನ್ನೊಂದು ವರ್ಣನೆಯನ್ನು ನೋಡಿರಿ ''ಹೂಗಳ ಹೊಚ್ಚ ಹೊಸತನದ ಅರಳುವಿಕೆಯಿಂದ ಅದಕ್ಕೆ ಎಷ್ಟು ನೀರು ಉಣಿಸಿರುವರೆಂಬ ಕಲ್ಪನೆ ಬರುವದು, ಅದರಂತೆಯೇ ಮನುಷ್ಯನ ವೈಭವದಿಂದ ಅವನು ಎಷ್ಟು ಶ್ರಮ ಮಾಡಿರುವನೆಂಬುದು ಗೊತ್ತಾಗುವದು.'' ಪ್ರಿಯೆಯ ವರ್ಣನೆಯನ್ನು ಎಷ್ಟು ಸ್ವಲ್ಪ ಶಬ್ದದಲ್ಲಿ ಎಷ್ಟು ಸುಂದರವಾಗಿ ಮಾಡಿದ್ದಾನೆಂಬುದನ್ನು ನೋಡಿ.

''ಆಕೆಯ ನಗೆಯು ಮುತ್ತಿನಂತಿದೆ. ಶರೀರವು ಬಾಳೆಎಲೆಯಂತೆ ತೆಳ್ಳಗಿದೆ. ಶ್ವಾಸವು ಪರಿಮಳವುಳ್ಳದ್ದೂ ಮಧುರವೂ ಆಗಿದೆ ಆಕೆಯ ಕಣ್ಣುಗಳು ನೀಲಾಕಾಶದಂತೆ ಶೋಭಿಸುತ್ತವೆ. ನೀಲ ಕಮಲವೂ ಕೂಡ ಅದರ ಮುಂದೆ ನಾಚುವವು, ಹಂಸತುಪ್ಪಳ ಮತ್ತು ಗುಲಾಬಿಯ ಹೂಗಳೂ ಕೂಡ ಆಕೆಯ ಕಾಲಿಗೆ ಚುಚ್ಚುವವು!!'' ಎಷ್ಟು ಸಾದಾ ವರ್ಣನೆ! ಆದರೆ ಎಷ್ಟು ಮೋಹಕ!

ಉದಾತ್ತ ವಿಚಾರ, ಸಮರ್ಪಕ ದೃಷ್ಟಾಂತ, ಮನೋಹರ ವರ್ಣನೆಗಳ ಬಗ್ಗೆ ತಿರುವಲ್ಲುವರನ ಖ್ಯಾತಿಯು ಇದೆ. ಆದರೆ ಕಿರಿದರಲ್ಲಿ ಹಿರಿದರ್ಥವನ್ನು ಹೇಳುವದರಲ್ಲಿ ಈತನು ವಿಶೇಷ ಪ್ರಸಿದ್ಧಿಯನ್ನು ಪಡೆದಿರುವನು. ಪ್ರಾಚೀನ ತಮಿಳು ಕವಿಗಳು ಕುರುಳ ಗ್ರಂಥವನ್ನು ವರ್ಣಿಸುವಾಗ ಈ ಗುಣವನ್ನೆ ಮುಖ್ಯವಾಗಿ ಹೇಳುತ್ತಾರೆ. ''ಸಾಸಿವೆಕಾಳಿನಲ್ಲಿ ಸಪ್ತ ಸಮುದ್ರಗಳನ್ನು ತುಂಬಿದಂತೆ ಕುರುಳ ಗ್ರಂಥದ ಈ ದ್ವಿಪದಿಯಲ್ಲಿ ಅನಂತ ಅರ್ಥಗಳು ತುಂಬಿದ್ದಾವೆ. ತಿರುವಲ್ಲುವರನ ಅಕ್ಕನಂತೂ ಇದಕ್ಕಿಂತ ಮುಂದೆ ಹೋಗಿದ್ದಾಳೆ. ಈ ಸಾಸಿವೆ

ಕಾಳು ಕೂಡ ದೊಡ್ಡದಿರುತ್ತದೆ. ಪರಮಾಣುವಿನಲ್ಲಿ ಸಪ್ತಸಮುದ್ರವನ್ನು ತುಂಬಿದಂತೆ ನನ್ನ ಅಣ್ಣನ ಕಾವ್ಯವಿದೆ ಎಂದು ಹೇಳಿದ್ದಾರೆ.'' ಸ್ವಲ್ಪದರಲ್ಲಿ ಅಪಾರಾರ್ಥವನ್ನು ಹೇಳುವ ಕೆಲವು ಉದಾಹರಣೆಗಳನ್ನು ನೋಡುವ. ''ಮನುಷ್ಯನ ನಿಜ ಸಂಪತ್ತಿ ಎಂದರೆ ಆತನ ಸಂತತಿ'' ''ಮಗನ ವಿಷಯದಲ್ಲಿ ತಂದೆಯ ಕರ್ತವ್ಯವೆಂದರೆ ಮಗನು ವಿದ್ವತ್ ಪರಿಷತ್ತಿನಲ್ಲಿ ಮೊದಲನೆಯ ಬಹುಮಾನ ಪಡೆಯಲು ಯೋಗ್ಯನನ್ನಾಗಿ ಮಾಡುವದು; ಮಗನ ನಡತೆಯು ಹೇಗಿರಬೇಕೆಂದರೆ ಯಾವ ಪುಣ್ಯದಿಂದ ನಿನಗೆ ಇಂಥ ಸುಪುತ್ರನು ಹುಟ್ಟಿದನು. ಎಂದು ಎಲ್ಲರೂ ಅವನ ತಂದೆಯನ್ನು ಕೇಳುವಂತಾಗಬೇಕು'' ''ನಾನು ನನ್ನ ಕುಟುಂಬದ ಕೀರ್ತಿಯನ್ನು ಹೆಚ್ಚಿಸುವೆನೆಂದು ಯಾರು ಹೊರಬೀಳುವರೋ ಅವರ ರಕ್ಷಣೆಗಾಗಿ ದೇವರು ಸಹ ಟೊಂಕ ಕಟ್ಟುವನು'' ''ಯಾವ ಕಣ್ಣುಗಳಲ್ಲಿ ಮಾಧುರ್ಯವಿಲ್ಲವೋ ಅವು ಕಾಜುಗಳು'' ದೊಡ್ಡವರ ಸಂಪತ್ತು ಫಲದ ಭಾರದಿಂದ ಬಗ್ಗಿದ ಊರ ನಡುವಿನ ವೃಕ್ಷದಂತೆ'' ''ಹುಸಿ ನಗೆಯೊಂದರೆ ಗೆಳೆತನವಲ್ಲ. ಹೃದಯವನ್ನು ಅರಳಿಸುವ ಪ್ರೀತಿಯೇ ಗೆಳೆತನವು.'' ''ನನ್ನ ಜೀವನದಲ್ಲಿ ಒಂದು ಭಾಗದಲ್ಲಿ ಪ್ರೇಮವಿದ್ದರೆ ಇನ್ನೊಂದು ಭಾಗದಲ್ಲಿ ವಿನಯವಿದೆ ಈ ಎರಡರಿಂದ ನಾನು ಹಣ್ಣಾಗುವೆನು.'' ಹೀಗೆ ಅನೇಕ ಅರ್ಥಗಳುಳ್ಳ ಸುಂದರ ವಾಕ್ಯಗಳು ಮುತ್ತು ಮಾಣಿಕಗಳಂತೆ, ಅಲ್ಲಲ್ಲಿ ಪಸರಿಸಿವೆ. ದೇಶ, ಗೆಳೆತನ, ಒಕ್ಕಲತನದ ಮಹತ್ವ, ಭಿಕ್ಷಾ ಮೊದಲಾದ ವಿಷಯಗಳ ಸವಿಯನ್ನು ಓದಿಯೇ ಸವಿಯಬೇಕು. ಅಹಿಂಸೆ, ಮಾಂಸಹಾರತ್ಯಾಗ, ಸಭ್ಯತೆಗಳ ವರ್ಣನೆಯು ಅತಿ ಸುಂದರವಾಗಿದೆ. ಧೈರ್ಯತ್ಯಾಗಗಳ ವರ್ಣನೆಯನ್ನು ನೋಡಿ. ''ಯಾವನು ದುಃಖದಿಂದ ದುಃಖಿಯಾಗುವದಿಲ್ಲವೋ ಅವನು ದುಃಖವನ್ನೇ ದುಃಖಿಯಾಗಿ ಮಾಡುತ್ತಾನೆ. ಈ ವಾಕ್ಯವನ್ನೋದಿ ನಾನಂತೂ ಮುಗ್ಧನಾದೆ'' ''ಯಾವ ರೈತನು ತನ್ನ ಹೊಲದ ಕಡೆಗೆ ಮೇಲಿಂದ ಮೇಲೆ ಹೋಗುವದಿಲ್ಲವೋ ಅವನ ಹೊಲವು ಹೆಂಡತಿಯು ಮುನಿದಂತೆ ಅವನ ಮೇಲೆಯೇ ಮುನಿಯುವದು.'' ''ನನ್ನ ಹೊಟ್ಟೆಗೆ ಸಿಗುವದಿಲ್ಲವೆಂಬ ಶಬ್ದವನ್ನು ಕೇಳಿ ಭೂಮಾತೆ ನಗುವಳು ಇಂತಹ ರಸಮಯ, ಸಮರ್ಪಕ, ವರ್ಣನೆಗಳನ್ನೆಷ್ಟೆಂದು ಹೇಳಲಿ! ನಿಜವಾಗಿಯೂ ಕುರುಳ ಗ್ರಂಥವು ರತ್ನದ ಖಣಿಯಿದ್ದಂತೆ.

ತಿರುವಲ್ಲುವರನು ಸ್ವಾವಲಂಬನ ಪ್ರಿಯನು. "ಯಾವನು ತನ್ನ ಕಷ್ಟದಿಂದ ಕುಟುಂಬದ ವೈಭವವನ್ನು ಹೆಚ್ಚಿಸುವವನೋ ಅವನೇ ಮುಮುಕ್ಷು" ಎಂದು ಹೇಳಿದ್ದಾನೆ. ಕಪಟ, ಅಸೂಯೆಗಳೆಂದರೆ ಆತನು ಸಂತಪ್ತನಾಗುವನು. ಗಾಂಧೀಜಿಯವರ ತತ್ವಜ್ಞಾನದ ಸೂತ್ರಗಳನ್ನೆಲ್ಲ ಈ ಗ್ರಂಥದಲ್ಲಿ ಕಾಣಬಹುದು. ಪ್ರೇಮ, ಪರೋಪಕಾರ, ಭೂತದಯೆ, ಸತ್ಯವಸ್ತುಗಳ ಮೇಲೆ ಪ್ರೇಮ ಮಾಡುವದು, ಇತ್ಯಾದಿ ಜೀವನದ ಉದಾತ್ತ ಆದರ್ಶಗಳನ್ನು ಇಲ್ಲಿ ವರ್ಣಿಸಿದ್ದಾನೆ. ಸಾದಾ ಜೀವನ, ಉಚ್ಚ ವಿಚಾರಗಳೇ ತಿರುವಲ್ಲುವರನ ಧ್ಯೇಯವು. ಅವನ ಕಾವ್ಯದಲ್ಲಿಯ ಶಬ್ದರತ್ನಗಳೆಲ್ಲ ತಮಿಳು ಜನಾಂಗದ ನಾಲಿಗೆಯ ಮೇಲೆ ಇವೆ. ಈ ಗ್ರಂಥದಲ್ಲಿ ಕ್ರಿಸ್ತ, ಬುದ್ಧರ ಉಪದೇಶದಂತಹ ಉಪದೇಶವಿದೆ. ಚಾಣಿಕ್ಯ ಹಾಗು ಮಹಾಭಾರತದಂಥ ಅರ್ಥನೀತಿಯಿದೆ. ಕಾಲಿದಾಸನ ಸಮತೋಲ ಪ್ರೇಮಭಾವವನ್ನು ವ್ಯಕ್ತಪಡಿಸುವ ಸಾಮರ್ಥ್ಯವುಳ್ಳ ವಾಕ್ವೈಖರಿಯಿದೆ. ಅಲ್ಪದರಲ್ಲಿ ಬಹ್ವರ್ಥವನ್ನು ಹೇಳುವದರಲ್ಲಿಯಂತೂ ಇವನ ಕೈಯ್ಯೇ ಮೇಲು. ಕೃಷ್ಣನ ಪುಟ್ಟ ಮುಖದಲ್ಲಿ ಇಡೀ ವಿಶ್ವವೇ ಕಂಡಂತೆ ಇದೆ ಈ ಕಾವ್ಯ. ೧೭೫ ವರ್ಷಗಳ ಮೊದಲು 'ಕಾನಸ್ಟಂಟಿಅಸ್' ಎಂಬ ಹೆಸರಿನ ಒಬ್ಬ ಮಿಶನರಿಯು ಈ ಗ್ರಂಥದ ಭಾಷಾಂತರವನ್ನು ಲ್ಯಾಟಿನಿನಲ್ಲಿ ಮಾಡಿದನು. ಎರಿಯಲ ಹಾಗು ಡ್ಯೂಮಾಂಟರೆಂಬುವವರು ಮುಂದೆ ಇದನ್ನು ಫ್ರೆಂಚ್ ಭಾಷೆಯಲ್ಲಿ ಮಾಡಿದರು. ಅವರು ಈ ಗ್ರಂಥದ ಸ್ತುತಿಯನ್ನು ಬಹುವಾಗಿ ಮಾಡಿರುವರು.'ಮಾನವನ ಅತ್ಯುಚ್ಚ ಹಾಗು ವಿಶುದ್ಧ ವಿಚಾರಗಳ ದರ್ಶನವು ಇಲ್ಲಿಯಾಗುವದು. "ಗ್ರೀಕರಿಗೆ ಹೋಮರನ ಕಾವ್ಯವು ಹೇಗೆ ಪರಮೋಚ್ಚ ಆದರ್ಶವೋ ಹಾಗೆ, ತಮಿಳರಿಗೆ ಈ ಗ್ರಂಥವು ಎಂದು ಹೇಳಿದ್ದಾನೆ. ಮುಂದೆ ಈ ಗ್ರಂಥವು ಇಂಗ್ಲೀಷಿನಲ್ಲಿಯೂ ತಮಿಳಿನಲ್ಲಿಯೂ ಅನುವಾದಿಸಲ್ಪಟ್ಟಿದೆ.

ಶ್ರೀ ಎಸ್.ಎಸ್.ಅಯ್ಯರ ಅವರು ಇಂಗ್ಲೀಷನಲ್ಲಿ ಭಾಷಾಂತರಿಸಿದ ಕುರುಳ ಗ್ರಂಥದ ಆಧಾರದಿಂದ ನಾನು ತ್ರಿಚಿನಾಪಳ್ಳಿ ಜೇಲಿನಲ್ಲಿದ್ದಾಗ ಅನುವಾದಮಾಡಿರುವೆ. ಅವರು ಒಬ್ಬ ದೊಡ್ಡ ದೇಶಭಕ್ತರು. ಅವರು ದೊಡ್ಡ ತಮಿಳು ಪಂಡಿತರು. ಕಂಬನ್ ರಾಮಾಯಣದ ಮೇಲೆಯೂ ವಿದ್ವತ್ ಪ್ರಚುರವಾದ ನಿಬಂಧವನ್ನು

ಅವರು ಬರೆದಿದ್ದಾರೆ. ಶ್ರೀ. ಅಯ್ಯರರು ತಮ್ಮ ಪುಸ್ತಕದ ಕೊನೆಯಲ್ಲಿ 'ಈ ನನ್ನ ಭಾಷಾಂತರದ ಮೇಲಿಂದ ಭಾರತವ ಇತರ ಎಲ್ಲ ಭಾಷೆಗಳಲ್ಲಿ ಈ ಮಹಾ ಗ್ರಂಥದ ಭಾಷಾಂತರವಾಗಬೇಕು' ಎಂದು ತಮ್ಮ ಇಚ್ಛೆಯನ್ನು ಪ್ರಕಟಿಸಿದ್ದಾರೆ.

ಈ ಕುರುಳದ ವಿವೇಚನೆಯ ನಂತರ, ಭಾರತದ ಸಂಸ್ಕೃತಿಯು ಒಂದೇ ಇದೆ ಎಂಬ ಸಂಗತಿಯು ಎಲ್ಲರ ಲಕ್ಷ್ಯದಲ್ಲಿ ಬಂದಿರಲು ಸಾಕು. ಈ ವಿಶಾಲವಾದ ದೇಶದಲ್ಲಿ ಒಂದೇ ಬಗೆಯ ರಕ್ತವು ಹರಿಯುತ್ತಲಿದೆ. ಒಂದೇ ಬಗೆಯ ನಾಡಿಯ ಮಿಡಿತವಿದೆ. ನಾವು ಭಿನ್ನ ಭಿನ್ನ ಪ್ರಾಂತದ ವಾಙ್ಮಯವನ್ನು ಓದಿದರೂ ಕೂಡ, ಪ್ರಾಂತಗಳ ಭಿನ್ನತೆಯಿದ್ದರೂ ಮನಸ್ಸಿನಿಂದ, ವಿಚಾರದಿಂದ ನಾವೆಲ್ಲ ತೀರ ಸಮೀಪವಿರುವೆವೆಂದು ನಮಗೆ ಹೊಳೆಯದಿರದು. ಉಚ್ಚ ವಿಚಾರದ ವಿಭೂತಿಗಳು ಜಗತ್ತಿನವರಿರುತ್ತಾರೆ. ತಿರುವಲ್ಲುವರನು ಕೇವಲ ತಮಿಳ ನಾಡಿನವನಲ್ಲ ಭಾರತೀಯನು. ಇಷ್ಟೇ ಅಲ್ಲ, ಸರ್ವ ಜಗತ್ತಿನವನು. ಮಾನವ ಜಾತಿಯೇ ಉನ್ನತಿ ಪಡೆಯಬೇಕೆಂದು ಅವನು ಬರೆದಿರುವನು. ಜಾತಿಯಿಂದ ಹರಿಜನ, ಉದ್ಯೋಗದಿಂದ ನೇಕಾರ, ಆದರೆ ಅವನ ವಿಚಾರಗಳು ಮನಮೋಹಕವಾದುವುಗಳು. "ಶ್ರೀ ಸರಸ್ವತಿಯೇ ಆತನ ಮುಖದಿಂದ ವೇದವನ್ನು ನುಡಿಸಿದಳು" ಎಂದು ಕವಿಗಳು ಹೊಗಳುತ್ತಾರೆ. ಈ ಗ್ರಂಥದ ಮೇಲೆ ಅನೇಕ ಟೀಕೆ ಟಿಪ್ಪಣಿಗಳಿವೆ. ಅವುಗಳಲ್ಲಿ '**ಪೇರಿಮೇಲಾರಹರ**' ಇವರ ಟಿಪ್ಪಣಿಗಳು ಅತಿಪ್ರಸಿದ್ಧವಿವೆ.

ತ್ರಿಚಿನಾಪಳ್ಳಿ,
೧೭-೧೨-೧೯೫೦

೪

# ಕಥಾ ವಿಭಾಗ.

ಶ್ರೀವಾನ್ ಸಾನೆ ಗುರೂಜಿಯವರು, ಅನೇಕ ಚಿಕ್ಕ ಕತೆಗಳನ್ನು ಬರೆದು, ಮಹಾರಾಷ್ಟ್ರದ ಜನಕ್ಕೆ ಹುಚ್ಚು ಹಿಡಿಸಿದರು. ಅವರ ಕತೆಗಳ ವೈಶಿಷ್ಟ್ಯವೆಂದರೆ, ದೇಶಪ್ರೇಮ, ದೇಶ ಹಿತ ಚಿಂತನೆ, ರಾಷ್ಟ್ರದ ಪುನರುಜ್ಜೀವನ ಇವೇ. ಕತೆಗಳನ್ನು ಚಿತ್ರಿಸುವದರಲ್ಲಿ ಇವರದು ಪಳಗಿದ ಕೈ.



೧) ಅಪೂರ್ವತಾ
೨) ಜಯಂತ
೩) ಎಲೆತಿನ್ನುವ ಮನುಷ್ಯ
೪) ರಾಮಕೃಷ್ಣ
೫) ಶುಕ್ರ
೬) ಗೋ

# ಅಪೂರ್ವ ತ್ಯಾಗ



ಬಂಗಾಲದಲ್ಲಿ ಚೈತನ್ಯರೆಂಬ ಓರ್ವ ದೊಡ್ಡ ಭಕ್ತರಾಗಿ ಹೋದರು. ವೈಷ್ಣವಧರ್ಮವು ಅಲ್ಲಿ ಬೆಳೆಯಲು ಅವರೇ ಕಾರಣರು. ಅಲ್ಲಿಯ ಜನಕ್ಕೆ ಭಕ್ತಿಯ ರುಚಿ ಹಚ್ಚಿದರು. ಪರಮಭಕ್ತರಾಗುವ ಪೂರ್ವದಲ್ಲಿ ಚೈತನ್ಯರು ದೊಡ್ಡ ಪಂಡಿತರೆಂದು ಹೆಸರಾಗಿದ್ದರು. ನ್ಯಾಯಶಾಸ್ತ್ರದಲ್ಲಿ ಇವರನ್ನು ಕೈ ಹಿಡಿದವರಾರೂ ಇರಲಿಲ್ಲ

ಒಂದು ದಿನ ಚೈತನ್ಯರು, ಒಂದು ನದಿಯ ದಂಡೆಯ ಮೇಲೆ ಡೋಣಿಗಾಗಿ ಕಾದುಕುಳಿತಿದ್ದರು. ಅವರ ಹತ್ತರ ಸಾಮಾನುಗಳಿಂದ ತುಂಬಿದ ಒಂದು ಚೀಲ ವಿದ್ದಿತು. ನದಿಯ ದಂಡೆಯ ಮೇಲೆ ಹೋಗುವವರ ಗದ್ದಲ ಇತ್ತು. ಡೋಣಿ ಬೇಗ ಹೊರಡುವದರಲ್ಲಿತ್ತು. ಜನರು ಅತ್ತಿತ್ತ ಓಡಾಡುತ್ತಿದ್ದರು. ಚೈತ್ಯನರು ಡೋಣಿಯಲ್ಲಿ ಕುಳಿತರು. ಡೋಣಿ ನದಿಯ ಭವ್ಯ ಮತ್ತು ವಿಶಾಲವಾದ ಪಾತ್ರದಲ್ಲಿ ವೇಗದಿಂದ ನಡೆಯಹತ್ತಿತು.

ಸ್ವಚ್ಛವಾದ ಸೂರ್ಯಪ್ರಕಾಶವಿದ್ದಿತು. ದೂರದಿಂದ, ನದಿದಂಡೆಯ ಮೇಲಿದ್ದ ಗಿಡಗಳು ಸುಂದರವಾಗಿ ತೋರುತ್ತಿದ್ದವು. ಗಾಳಿಯೊಂದಿಗೆ ಅವು ಅಲ್ಲಾಡುತ್ತ, ತಲೆಬಾಗಿ ನದಿಗೆ ವಂದನೆ ಮಾಡುತ್ತಿರುವಂತೆ ಕಾಣುತ್ತಿದ್ದವು. ನಡುನಡುವೆ ಮಿಂಚಿನಂತೆ ನದಿಯೊಳಗಿನ ಮೀನಗಳು ಹೊಳೆಯುತ್ತಿದ್ದವು. ಕೆಲವು ಮೀನಗಳು ದೊಡ್ಡವಿದ್ದವು. ಅವು ನೀರಿನ ಮೇಲೆ ಮುಖಮಾಡಿ ಹೊರ ಜಗತ್ತಿನ ನೋಟ ನೋಡುತ್ತಿದ್ದವು. ಹೊರಜಗತ್ತಿಗೆ ವಂದಿಸುತ್ತಿದ್ದವೊ ಏನೋ! ಸೂರ್ಯ ಕಿರಣಗಳು ಅವುಗಳ ತಲೆಯ ಮೇಲೆ ಬಿದ್ದು ಹೊಳೆಯು ತ್ತಿದ್ದವು. ಆ ಮೀನ ನೋಡಿ " ಇವುಗಳನ್ನು ಹಿಡಿದರೆ ಒಂದು ಮೇಜವಾನಿ ಯಾಗುವದು " ಎಂದ ಒಬ್ಬ— ಈಗ ಇಲ್ಲಿ ಕುಳಿತು ಬರಿ ಬಾಯಮಾತಿನ ಹೊರತು ಮತ್ತೇನು ಮಾಡಲು ಬರುವಂತಿಲ್ಲ." ಎಂದು ಇನ್ನೊಬ್ಬ. ಅಷ್ಟರಲ್ಲಿ

“ ತಿನ್ನುವವರ ಹೊರತು ಬೇರಾವ ವಿಚಾರ ನಿಮಗೆ ತಲೆದೋರುವದಿಲ್ಲವೋ ? ತಿನ್ನುವದೊಂದೇ ಮನುಷ್ಯನ ಕೆಲಸವೇ ? ” ಎಂದು ಮುಗದೊಬ್ಬ ಅಂದನು.

ಹೀಗೆ ಮಾತು ನಡೆದಿದ್ದವು. ಬಿಸಿಲು ಬಲಿಯುತ್ತಿತ್ತು. ಚೈತನ್ಯರು ನದಿಯ ಅಲೆಗಳತ್ತ ನೋಡುತ್ತಿದ್ದರು. ಅವರ ಹೃದಯ ಸಾಗರದಲ್ಲೂ ಎಷ್ಟೊಂದು ತರಂಗಗಳು ಏಳುತ್ತಿದ್ದವು. ಅಷ್ಟರಲ್ಲಿ ಯಾರೋ ಒಬ್ಬರು ಅವರ ಹತ್ತಿರ ಬಂದು ಅವರ ಭುಜಕ್ಕೆ ಕೈ ಹಚ್ಚಿದರು. ಚೈತನ್ಯರು ಎಚ್ಚರಗೊಂಡರು. ಮೇಲಕ್ಕೆ ಕಣ್ಣೆತ್ತಿ ನೋಡಿದಾಗ ಯಾರನ್ನು ಕಂಡರು ? ಅವರ ಚಿಕ್ಕಂದಿನ ಗೆಳೆಯ, ಅವರ ಹತ್ತಿರ ನಿಂತಿದ್ದ. “ ಗದಾಧರ ! ಎಷ್ಟು ವರ್ಷದ ಮೇಲೆ ನಾವು ಭೆಟ್ಟಿಯಾಗುತ್ತಿದ್ದೇವೆ ? ಗುರುಗೃಹವನ್ನು ಬಿಟ್ಟನಂತರ ಇದೇ ಮೊದಲ ಭೆಟ್ಟಿ. ಬಾ, ಗೆಳೆಯಾ ಕೂಡು. ನಿನ್ನನ್ನು ನೋಡಿ ನನ್ನ ಹೃದಯ ಉಕ್ಕೇರಿದೆ.” ಎಂದು ಚೈತನ್ಯರು ಗದಾಧರನನ್ನು ತಮ್ಮ ಹತ್ತಿರ ಕೂಡಿಸಿ ಕೊಂಡರು. ಇಬ್ಬರೂ ತೇಜಃಪುಂಜರು. ವಿದ್ಯೆಯ ತೇಜವು ಮುಖದ ಮೇಲೆ ಹೊಳೆಯುತ್ತಿತ್ತು. ಪಾವಿತ್ರ್ಯದ ಮತ್ತು ಚಾರಿತ್ರ್ಯದ ಬೆಳಕು ಅವರ ಮುಖದ ಮೇಲಿತ್ತು. ರವಿ, ಚಂದ್ರರಂತೆ ಈ ಜೋಡಿ ಶೋಭಿಸುತ್ತಿತ್ತು. ಗಂಗಾ ಯಮುನೆಯ ಪ್ರವಾಹದಂತೆ ಕಾಣುತ್ತಿದ್ದರು. ಚೈತನ್ಯರ ಮೈಯ ಕಾಂತಿ ಹಾಲಿನ ನೊರೆಯಂತಿತ್ತು. ಗದಾಧರರು ನಸುಗಪ್ಪಾಗಿದ್ದರು. ಇಬ್ಬರೂ ಪ್ರೀತಿ ಯಿಂದ ಬಿಗಿದಪ್ಪಿದರು. ಸ್ವಲ್ಪ ಹೊತ್ತು ಯಾರೂ ಮಾತನಾಡಲಿಲ್ಲ.

ಭಾವನೆಗಳ ನೆರೆ ಕಡಿಮೆಯಾಗಿ ಭಾಷಣಕ್ಕೆ ಅವಸರ ದೊರೆಯಿತು.

**ಚೈತನ್ಯ :** ಹೇಗೆ ನಡೆದಿದೆ, ಗದಾಧರ ? ಕಲಿಯುವತನಕ ಜೀವನ ದಲ್ಲಿ ಮೋಜು ಇತ್ತು. ಹಕ್ಕಿಗಳಂತೆ ನಿಶ್ಚಿಂತವಿದ್ದೆವು ಆಗ. ಸಂಸಾರದ ಭಾರ ಬಿದ್ದಮೇಲೆ ಉಸಿರುಗಟ್ಟಿದಂತೆ ಆಗುತ್ತದೆ. ಈಗ ನೀನು ಎಲ್ಲಿ, ಏನು ಮಾಡುತ್ತೀಯಾ ? ಸಂಸಾರದ ತೊಂದರೆಗಳು ಹೆಚ್ಚಾಗಿ ಇಲ್ಲವಲ್ಲ ?

**ಗದಾಧರ :** ಚೈತನ್ಯ, ಅಧ್ಯಯನ ಅಧ್ಯಾಪನಗಳಲ್ಲಿ ಕಾಲ ಮುಂದರಿಯುತ್ತಿದೆ. ನನ್ನದು ಎಲ್ಲ ನೆಟ್ಟಗೆ ನಡೆದಿದೆ. ಮನೆಯಲ್ಲಿ ಕಲಿಯುಲು ವಿದ್ಯಾರ್ಥಿಗಳಿದ್ದಾರೆ. ಅವರಿಗೆ ನಾನು ಕಲಿಸುತ್ತಲಿದ್ದೇನೆ. ಶ್ರೀಮಂತ ಜಮೀನದಾರನೊಬ್ಬನು ಎಲ್ಲ ವೆಚ್ಚವನ್ನು ನೋಡಿಕೊಳ್ಳುತ್ತಾನೆ. ಆನಂದದಲ್ಲಿ

ದಿನ ಕಳೆಯುತ್ತಲಿದ್ದೇನೆ. ನಡುನಡುವೆ ಹಿಂದಿನ ಸವಿನೆನಪು ಬರುತ್ತವೆ ಗುರುಗೃಹದಲ್ಲಿ ನಾನು ನೀನು ಬಡಿದಾಡಿದ್ದನ್ನು ಹುಡುಗರಿಗೆ ಹೇಳುತ್ತೇನೆ. ಚೈತನ್ಯ, ಹೌದು ನಾವು ಬಡಿದಾಡುತ್ತಿದ್ದೆವು, ಆದರೆ ಎಷ್ಟು ಬೇಗ ಮರೆಯುತ್ತಿದ್ದೆವಲ್ಲ. ಮರೆತುಹೋಗುವ ಬಡಿದಾಟದಲ್ಲಿ, ಒಂದು ರೀತಿಯ ಆನಂದ ವಿರುವದಿಲ್ಲವೇ ?

**ಚೈತನ್ಯ :** ಹೌದು, ಆದರೆ ಜಗತ್ತು ಜಗಳ ಮರೆಯಲು ಸಿದ್ಧವಿರುವದಿಲ್ಲ. ಜಗಳಗಳನ್ನು ಕೆದರಿ ತೆಗೆಯಲು ಜಗತ್ತು ಸದಾಸಿದ್ಧವಿರುತ್ತದೆ. ಜಗತ್ತು ವಿಚಿತ್ರವಿದೆ! ಗದಾಧರ! ವಿದ್ಯಾರ್ಥಿಗಳಿದ್ದಾಗ ನಾವು ಎಷ್ಟು ಮನೋರಥಗಳನ್ನು ರಚಿಸುತ್ತಿದ್ದೆವು, ಎಂಥ ಸವಿಗನಸುಗಳನ್ನು ಕಾಣುತ್ತಿದ್ದೆವು ? ನಿನಗೆ ನೆನಪಿದೆಯೋ ?

**ಗದಾಧರ :** ಅವುಗಳನ್ನು ಹೇಗೆ ಮರೆಯುವೆ! ಚನ್ನಾಗಿ ನೆನಪಿನಲ್ಲಿವೆ. "ಜಗತ್ತು ನನ್ನನ್ನು ತಲೆಯಮೇಲೆ ಹೊತ್ತು ಕುಣಿಯುವಂಥ ನ್ಯಾಯಶಾಸ್ತ್ರದ ಗ್ರಂಥವೊಂದನ್ನು ಬರೆಯುವೆ" ಎಂದು ನೀನು ಗುರುಗೃಹದಲ್ಲಿ ಅಂದಿದ್ದಿ. ಗುರುಗಳು ನಿನಗೆ ಆಶೀರ್ವಾದವನ್ನಿತ್ತಿದ್ದರು.

**ಚೈತನ್ಯ :** ನಾನು ಆ ನಿಶ್ಚಯವನ್ನು ಕೃತಿಯಲ್ಲಿಳಿಸುತ್ತಲಿದ್ದೇನೆ. ಈಗ ನಾನು ನ್ಯಾಯಶಾಸ್ತ್ರದ ಮೇಲೆ ಬರೆಯುತ್ತಲಿದ್ದ ಗ್ರಂಥವು ಮುಗಿಯುತ್ತ ಬಂದಿದೆ. ಗದಾಧರ, ಅದನ್ನು ನೋಡಿ ನಿನಗೆ ಆನಂದವೆನಿಸುವದು.

**ಗದಾಧರ :** ಎಲ್ಲಿದೆ ಆ ಗ್ರಂಥ ? ಇಲ್ಲಿ ತಂದಿದ್ದೀಯಾ ?

**ಚೈತನ್ಯ :** ಹೌದು ತಂದಿದ್ದೇನೆ.

ಹೀಗೆಂದು ಚೈತನ್ಯರು ತಮ್ಮ ಚೀಲದೊಳಗಿಂದ ತಾವು ಬರೆದ ಗ್ರಂಥ ಹೊರತೆಗೆದರು. ಅದು ಸುಂದರವಾದ ವಸ್ತ್ರದಲ್ಲಿ ಕಟ್ಟಿತ್ತು. ಒಳ್ಳೇ ಎಚ್ಚರಿಕೆಯಿಂದ ಸುಂದರವಾಗಿ ಬರೆಯಲಾಗಿತ್ತು. ಗದಾಧರನು ಅದನ್ನು ತಕ್ಕೊಂಡು ಓದಲಾರಂಭಿಸಿದನು. ಚೈತನ್ಯರ• ಅಕ್ಷರ ಮುತ್ತಿನಂತಿದ್ದವು.

ಪುಟದಿಂದ ಪುಟಗಳನ್ನು ಗದಾಧರ ಓದುತ್ತಿದ್ದರು. ಓದಿದಂತೆ ಮನಸ್ಸು ಖಿನ್ನವಾಗಹತ್ತಿತು. ಮುಂದೆ ಅವರಿಂದ ಓದುವದಾಗಲಿಲ್ಲ. ಗದಾಧರರು ಮಾತನಾಡಲಿಲ್ಲ. ಒಂದು ದೀರ್ಘವಾದ ನಿಟ್ಟುಸುರು ಬಿಟ್ಟರು.

ಆಕಾಶದಲ್ಲಿ ಮೋಡಗಳು ಬರಹತ್ತಿದವು. ಸೂರ್ಯನು ಕಾಣದಾದನು ಡೋಣಿಯಲ್ಲಿಯ ಹುಡುಗರಿಗೆ ಹೆಂಗಸರಿಗೆ ತೊಂದರೆಯಾಗಬಾರದೆಂದು ಮೋಡಗಳು ಬಂದಿದ್ದವು! ತಾಯಂದಿರಿಗೆ ಸಮಾಧಾನವೆನಿಸಿತು. ಆದರೆ ಅಷ್ಟರಲ್ಲಿ ಬಿರುಗಾಳಿ ಬೀಸಹತ್ತಿತು. ಪ್ರಚಂಡವಾದ ಕಾರ್ಮೋಡಗಳು ತಲೆದೋರಹತ್ತಿದವು. ನದಿಯ ತೆರೆಗಳು ದೊಡ್ಡವಾದವು. ಡೋಣಿ ಹೊಯ್ದಾಡಹತ್ತಿತು. ಜನರು ಗಾಬರಿಗೊಂಡರು. ತಾಯಂದಿರು ಮಕ್ಕಳನ್ನು ಗಟ್ಟಿಯಾಗಿ ಅಪ್ಪಿಕೊಂಡರು. 'ನಾವು ಎಂಥ ಪಾಪಮಾಡಿದೆವೆಂದು ಈ ಬಿರುಗಾಳಿ ಬಂದಿತು' ಎಂದು ಕೆಲವರು ಚಡಪಡಿಸಹತ್ತಿದರು.

ಆಕಾಶ— ಪ್ರಸನ್ನ ಆಕಾಶವು ಕಪ್ಪಾಯಿತು. ಅಲ್ಪಾವಕಾಶದ ಹಿಂದೆ ಅದು ನಿರಭ್ರವಾಗಿತ್ತು. ಯಾರಿಗೂ ಈ ಮಾತು ಹೇಳಿದರೆ ನಿಜವೆನಿಸುತ್ತಿ ಲಿಕ್ಕಿಲ್ಲ. ನಿಸರ್ಗದ ಲಹರಿ. ಮನುಷ್ಯನು ನಿಸರ್ಗದ ಅಂಶವೆಂದು ಅವನದೂ ಲಹರಿ! ಒಂದು ಕ್ಷಣದ ಹಿಂದೆ ಪ್ರಸನ್ನವಿದ್ದ ಗದಾಧರನ ಮುಖವು ಎಷ್ಟು ಕಪ್ಪಾಗಿತ್ತು! ಅವನ ಹೃದಯಾಕಾಶದಲ್ಲಿಯ ಸೂರ್ಯನು ಮಾಯವಾದನು ಅಲ್ಲಿಯೂ ಕಾರ್ಮೋಡಗಳು ಕವಿದಿವೆ. ಏನು ಕಾರಣವಾಯಿತು?

**ಚೈತನ್ಯ:** ಗದಾಧರ, ಏನಾಗಿದೆ? ನೀನು ಒಮ್ಮೆಲೆ ಗ್ರಂಥವನ್ನು ಏಕೆ ಮುಚ್ಚಿದಿ? ಯಾವದಾದರೊಂದು ಶೋಕ ಪ್ರಸಂಗದ ನೆನಪಾಯಿತೆ? ಒಮ್ಮೆಲೆ ಬಿರುಗಾಳಿ ಬಿಟ್ಟಂತೆ, ನಿನಗೂ ಏನಾದರೂ ಆಯಿತೆ?

ಗದಾಧರ ಮಾತನಾಡಲಿಲ್ಲ ಅವರ ಕಣ್ಣೊಳಗಿಂದ ಒಂದೆರಡು ಹನಿಗಳು ಹೊರಬಿದ್ದವು. ಅವರು ಮುಖ ತಿರುವಿ ಕಣ್ಣೀರು ಒರಿಸಿಕೊಂಡರು ಚೈತನ್ಯನ ಕಡೆ ನೋಡುವದಾಗಲಿಲ್ಲ. ಚೈತನ್ಯನು ಅವನ ಕೈಗಳನ್ನು ತನ್ನ ಕೈಯಲ್ಲಿ ಹಿಡಿದನು. ಆಗ ಅವನ ಕೈಯಮೇಲೆ ಕಣ್ಣೀರು ಬಿದ್ದಿತು ಚೈತನ್ಯನಿಗೆ ಆಶ್ಚರ್ಯವೆನಿಸಿ ದುಃಖವೆನಿಸಿತು.

**ಚೈತನ್ಯ:** ಗದಾಧರ, ನಾವು ಇಂದು ಎಷ್ಟೋ ವರುಷಗಳಾದ ಮೇಲೆ ಭೆಟ್ಟಿಯಾಗುತ್ತಿದ್ದೇವೆ. ನಿನ್ನ ದುಃಖ, ನೀನೇಕೆ ನನಗೆ ಹೇಳುವದಿಲ್ಲ ಗುರುಗೃಹದಲ್ಲಿದ್ದಾಗ ನೀನು ನಿನ್ನ ಸುಖ ದುಃಖಗಳನ್ನು ನನಗೆ ಹೇಳುತ್ತಿದ್ದಿ ನಿನಗೆ ಹೊಟ್ಟೆ ನೋವಾದರೆ ನಾನು ಎಣ್ಣೆ ಹಚ್ಚಿ ತಿಕ್ಕದೆ ಅದು ಕಡಿಮೆಯಾಗು ತ್ತಿದ್ದಿಲ್ಲ. ಚಿಕ್ಕಂದಿನ ಆ ನಾನು ಈಗ ಬೇರೆಯಾದೆನೇ? ಆಗ ನೀ

ಸುಖದುಃಖಗಳನ್ನು ಕೇಳಲು ಯೋಗ್ಯನಿದ್ದವನು ಈಗ ಅಯೋಗ್ಯನಾದೆನೇ? ಗದಾಧರ, ಚಿಕ್ಕಂದಿನಲ್ಲಿ ನಿನ್ನ ಕಣ್ಣೀರು ವರಿಸಿದಂತೆ, ಇಂದು ಅವನ್ನು ವರಿಸಲು ಸಾಧ್ಯವಾಗಲಿ. ನಿನ್ನ ದುಃಖ ದೂರಮಾಡಲು ಸಾಧ್ಯವಾಗಲಿಲ್ಲ. ಜಗತ್ತಿನಲ್ಲಿ ಪರಸ್ಪರರ ದುಃಖ ಕಡಿಮೆಮಾಡುವದಕ್ಕಿಂತ ಹಿರಿದಾದ ಇನ್ನಾವ ಮಾತಿದೆ? ಇಂಥ ನೂರಾರು ಗ್ರಂಥಗಳನ್ನು ಬರೆಯುವದಕ್ಕಿಂತ ಒಬ್ಬನ ಕಣ್ಣೀರು ವರಿಸುವದು,ಅವನ ದುಃಖ ಕಡಿಮೆಮಾಡುವದು ಶ್ರೇಷ್ಠವಾದದ್ದೆಂದು ನನ್ನ ಭಾವನೆ. ಆದರೆ ಇನ್ನೂ ಪಾಂಡಿತ್ಯ ತೋರುವ, ಕೀರ್ತಿಪಡೆಯುವ ಮೋಹವು ಬಿಡಲೊಲ್ಲದು. ಮೋಹವನ್ನು ಗೆಲ್ಲುವದು ಕಠಿಣ, ಆದ್ದ ರಿಂದಲೇ ಅವನ್ನು ಗೆಲ್ಲುವದರಲ್ಲಿ ಪುರುಷಾರ್ಥವಿದೆ. ಅದಿರಲಿ. ನಿನ್ನ ದುಃಖ ತಿಳಿದುಕೊಳ್ಳುವದನ್ನು ಬಿಟ್ಟು ನಾನು ವ್ಯಾಖ್ಯಾನವನ್ನು ಕೊಡಹತ್ತಿದೆನಲ್ಲ! ಗದಾ, ಹೇಳು ನಿನ್ನ ದುಃಖದ ಕಾರಣ ಹೇಳು ತನ್ನ ಗೆಳೆಯ ತನಗೆ ದುಃಖ ಹೇಳುವದಿಲ್ಲ. ಇದಕ್ಕಿಂತ ದುರ್ದೈವ ಯಾವುದು? ಹೇಳು! ನಿನ್ನ ದುಃಖ.

**ಗದಾಧರ**: ಚೈತನ್ಯ, ಏನು ಹೇಳಲಿ, ಹೇಗೆ ಹೇಳಲಿ? ಯಾವ ಮಾತಿನಿಂದ ನನ್ನ ಹೃದಯಸಾಗರವು ಉಕ್ಕೇರಿ ಬರಬೇಕಾಗಿತ್ತೋ ಅದರಿಂದ ನನಗೆ ದುಃಖವೆನಿಸಹತ್ತಿದೆ. ನನ್ನ ದುಃಖ ಹೇಳುವದಕ್ಕೆ ನನಗೆ ನಾಚಿಗೆ ಆದರೆ ಸುಳ್ಳಾದರೂ ಹೇಗೆ ಹೇಳಲಿ? ಚೈತನ್ಯ, ನಾನೂ ನ್ಯಾಯಶಾಸ್ತ್ರದ ಮೇಲೆ ಒಂದು ಗ್ರಂಥ ಬರೆದಿದ್ದೇನೆ. ಆದರೆ ನಿನ್ನ ಗ್ರಂಥವನ್ನೋದಿ ನನಗೆ ನನ್ನ ಗ್ರಂಥದ ವಿಷಯ ನಾಚಿಗೆ ಅನಿಸಿತು. ಸೂರ್ಯನಿದುರು ಹೊನ್ನಿಹುಳ, ಮತ್ತು ಸಮುದ್ರದಿದುರು ಗುಂಡಿ, ಗರುಡನಿದುರು ಚಿಕ್ಕಹಕ್ಕಿ. ಅದರಂತೆ ನಿನ್ನ ಗ್ರಂಥದೆದುರು ನನ್ನದು! ಚೈತನ್ಯ! ನನ್ನ ಗ್ರಂಥವು ಪಂಡಿತರ ಮನ್ನಣೆ ಪಡೆಯುವದು, ಜಗತ್ತಿನ ಮನ್ನಣೆ ಪಡೆಯುವದೆಂದು ತಿಳಿದಿದ್ದೆ; ಆದರೆ, ನನ್ನ ಸೊಕ್ಕು ಮುರಿಯಿತು, ನನ್ನ ಅಹಂಕಾರವು ಕುಗ್ಗಿತು. ನಿನ್ನ ಗ್ರಂಥವಿರುವ ವರೆಗೆ ನನ್ನ ಗ್ರಂಥಕ್ಕೆ ಯಾರು ಕೈಹಚ್ಚುವರು? ಬಂಗಾರ ಸಿಕ್ಕಾಗ ಮಣ್ಣಿಗಾರು ಕೈಹಚ್ಚುವರು? ನಿನ್ನ ಗ್ರಂಥ ನೋಡಿ ನನಗೆ ಆನಂದವಾಗ ಬೇಕು, ಆದರೆ ಒಂದೇ ಕ್ಷಣದಲ್ಲಿ ನನ್ನ ಆಶೆ ಆಕಾಂಕ್ಷೆಗಳು, ಮಣ್ಣುಪಾಲಾ ದವು. ಆದ್ದರಿಂದ ನನಗೆ ದುಃಖವಾಯಿತು. ಈ ನಿರಾಶೆ ಸಹಿಸಲು ನನಗೆ ಸಾಧ್ಯವಾಗಲಿಲ್ಲ. ಏನಾದರೂ ನಾನೂ ಒಬ್ಬ ಮನುಷ್ಯ. ನಿನ್ನ ಗ್ರಂಥ ಓದಿ

ನನಗೆ ಮತ್ಸರವೆನಿಸಿತಂತಲ್ಲ; ಆದರೆ ಘೋರ ನಿರಾಶೆಯಿಂದ ದುಃಖಿತನಾಗಿದ್ದೇನೆ. ಚೈತನ್ಯ! ಎಂಥ ಗೆಳೆಯ ಇವ ಎಂದು ನಿನಗೆ ತಿರಸ್ಕಾರವೆನಿಸುತ್ತಿರಬೇಕು. ಆದರೆ, ಗೆಳೆಯ! ಕ್ಷಮಿಸು! ನಿಜವೆನಿಸಿದ್ದನ್ನು ಹೇಳಿದೆ. ನಿನ್ನನ್ನು ನೋಡಿ ಆನಂದವೆನಿಸಿತು, ಆದರೆ ನಿನ್ನ ಅಪೂರ್ವ ಗ್ರಂಥವನ್ನೋದಿ ನನ್ನ ಆಶೆ ನಿರಾಶೆಯಾಯಿತು.

**ಚೈತನ್ಯ :** ಗದಾಧರ .

ಮುಂದೆ ಮಾತು ಹೊರಡಲೊಲ್ಲವು. ಇಬ್ಬರೂ ಗೆಳೆಯರು ನಿಶ್ಶಬ್ದರಾಗಿ ಪ್ರವಾಹದತ್ತ ನೋಡಹತ್ತಿದರು. ಬಿರುಗಾಳಿ ಬರುವದಿತ್ತು, ಆದರೆ ಮೋಡಗಳು ಕರಗಹತ್ತಿದವು. ಸೂರ್ಯನು ಕಾಣಹತ್ತಿದನು. ಡೋಣಿಯ ಪ್ರವಾಸಿಗಳಿಗೆ ಆನಂದವೆನಿಸಿತು. ಡೋಣಿ ವೇಗದಿಂದ ಮುಂದರಿಯಹತ್ತಿತು. ಇನ್ನು ಅರ್ಧತಾಸಿನಲ್ಲಿ ದಂಡೆ ಕಾಣುವೆವೆಂದು ಅಂಬಿಗನು ಹೇಳಿದನು.

ಚೈತನ್ಯರ ಮುಖ ಗಂಭೀರವಾಗಿತ್ತು. ಅವರು ವಿಚಾರ ಮಾಡುತ್ತಿದ್ದರು. ಅವರ ಕಣ್ಣಲ್ಲಿ ಪ್ರೀತಿ, ಕಾರುಣ್ಯ ಭಾವಗಳ ಮಿಶ್ರಣವು ಕಾಣುತ್ತಿತ್ತು. ಕಣ್ಣು ಸ್ಥಿರವಾಗಿದ್ದವು. ತೊಡೆಯಮೇಲೆ ಆ ಗ್ರಂಥವಿತ್ತು. ಸುಂದರವಾದ ಅರಿವೆಯಲ್ಲಿ ಅದನ್ನು ಕಟ್ಟಲಾಗಿತ್ತು. ಚೈತನ್ಯರು ಗ್ರಂಥವನ್ನು ಕೈಯಲ್ಲಿ ಹಿಡಿದರು. 'ಇದೇನು ಇದೇನು' ಎಂದು ಗದಾಧರನು ಅನ್ನುವಷ್ಟರಲ್ಲಿ ಅವರು ಆ ಗ್ರಂಥವನ್ನು ನದಿಯ ಪಾತ್ರದಲ್ಲಿ ಒಗೆದರು. ನದಿಯು ಗಂಭೀರ ಪ್ರವಾಹವು ಸಾವಿರಾರು ತರಂಗಗಳಿಂದ ಅದನ್ನು ಅಪ್ಪಿಕೊಂಡಿತು. ಮತ್ತು ತನ್ನ ಅಂತರಂಗದಲ್ಲಿಟ್ಟುಕೊಂಡಿತು.

ಚೈತನ್ಯರ ಗಂಭೀರ ಮುಖದ ಮೇಲೆ ಪ್ರೀತಿಯು ಅರಳಿತ್ತು. ಸರೋವರದ ಮೇಲ್ಭಾಗದಲ್ಲಿ ಕಮಲಗಳು ಅರಳಿದಂತೆ ಅವರ ಮುಖದ ಮೇಲೆ ಪ್ರೇಮ ಅರಳಿತ್ತು. ಅವರ ಮುಖದ ಶಾಂತಿ ಅಪೂರ್ವವಾಗಿತ್ತು.

**ಗದಾಧರ :** ಇದೇನು ಮಾಡಿದಿ, ಚೈತನ್ಯ? ನಿನ್ನ ಈ ಕೃತ್ಯದಿಂದ ನನಗೆ ಆನಂದವೆನಿಸೀತೋ? ನಿನ್ನ ಈ ಕೃತ್ಯದಿಂದ ನನ್ನ ಹೆಸರು ಕಡೆತನಕ ಕೆಡುವದು. ಮತ್ತು ನಿನ್ನ ಹೆಸರು, ಕೀರ್ತಿ ಚಿರಂತನವಾಗಿ ಬಾಳುವದು.

ಗೆಳೆಯ ಎಂಥ ಅಮೌಲ್ಯವಾದ ಗ್ರಂಥವನ್ನು ಬೀಸಾಡಿದಿ? ನನ್ನ ನಿರಾಶೆ ಒಂದು ಕ್ಷಣದ್ದು, ಅದನ್ನು ನಾನು ಮರೆತು ಬಿಡುತ್ತಿದ್ದೆ. ಜಗತ್ತಿಗೆ ನೀನು ಹಾನಿ ಮಾಡಿದಿ. ನೀನು ಅನ್ನುವದಕ್ಕಿಂತ ನಾನು ಅನ್ನುವದೇ ಯೋಗ್ಯ. ನನಗೆ ನಿರಾಶೆ ಎನಿಸದಿದ್ದರೆ, ನನ್ನ ದುಃಖ ನಾನು ಸಹಿಸಿದ್ದರೆ ಹೀಗಾಗುತ್ತಿದ್ದಿಲ್ಲ. ಆದರೆ ಈಗೇನು ? ಚೈತನ್ಯ, ಗೆಳೆಯಾ ! ”

**ಚೈತನ್ಯ :** ಗದಾಧರ! ಆದದ್ದೆಲ್ಲ ಒಳಿತೇ. ನಿನ್ನ ಗ್ರಂಥವು ಬಾಳಲಿ. ಅದರಲ್ಲಿ ನನಗೆ ಆನಂದವಿದೆ. ಗ್ರಂಥ ಬರೆಯುವಾಗ, ಇದನ್ನು ಯಾಕೆ ಬರೆಯುತ್ತಿದ್ದೇನೆ ಎಂದು ನನಗೆ ಅನಿಸುತ್ತಿತ್ತು. ಎಲ್ಲಿಯೋ ಹೃದಯದ ಮೂಲೆ ಯಲ್ಲಿ ಮಂಜುಳವಾಣಿ ನುಡಿಯುತ್ತಿತ್ತು ಬೇಡ ಎಂದು. ಆದರೆ ಅದನ್ನು ಲೆಕ್ಕಿಸದೆ ಬರೆದೆ. ಆಸಕ್ತಿ ಗೆದೆಯಲೇ ಬೇಕಾಗಿತ್ತು. ಗದಾಧರ! ನಿನ್ನ ಮೇಲೆ ಉಪಕಾರವೆಂದಲ್ಲ, ಆದರೆ ನನ್ನ ಮೋಹವನ್ನು ಗೆಲ್ಲಲು ನಾನು ಈ ಗ್ರಂಥ ಬೀಸಾಡಿದೆ. ಆಸಕ್ತಿಯನ್ನು ಗೆಲ್ಲಲು ಇಂಥ ನೂರಾರು ಗ್ರಂಥಗಳನ್ನು ಬೀಸಾಡಬೇಕಾದೀತು ! ಗದಾ, ಖಿನ್ನನಾಗಬೇಡ, ನಿನ್ನ ಗ್ರಂಥದಲ್ಲಿ ನಾನಿದ್ದೇನೆ. ನಾವಿಬ್ಬರೂ ಒಬ್ಬ ಗುರುವಿನ ಶಿಷ್ಯರಲ್ಲವೇ? ನಿನ್ನ ಗ್ರಂಥವೇ ಇದ್ದು ಬಾಳಲಿ. ನಿನ್ನ ಗ್ರಂಥವನ್ನೋದದೆ ನ್ಯಾಯಶಾಸ್ತ್ರದ ಅಭ್ಯಾಸ ಮುಗಿಯಿತೆಂದು ಯಾರೂ ಅನ್ನಲಾರರು. ಪಂಡಿತರ ಮನ್ನಣೆ ಅದಕ್ಕೆ ದೊರೆತು, ನಿನ್ನ ಗ್ರಂಥವು ಪೂಜ್ಯವಾಗುವದು. ಗದಾ, ನಗು ! ನೋಡು, ಆ ಸೂರ್ಯನು ಮತ್ತೆ ನಗಹತ್ತಿದ್ದಾನೆ. ಬೇಡ, ನಿನ್ನ ಹಾಸ್ಯವನ್ನು ಮುಚ್ಚಿಡಬೇಡ. ಹಾಸ್ಯವನ್ನು ಮುಚ್ಚಿಡಬಾರದು. ಹೊರಗೆ ಬರಲಿ ಆ ಹಾಸ್ಯವು. ಜಗತ್ತಿನಲ್ಲಿ ಎಲ್ಲರ ಮುಖದ ಮೇಲೆ ಹಾಸ್ಯ ಮೂಡಬೇಕೆಂದು ನನ್ನ ಬಯಕೆ. ಕರುಣಾಳು ವಾದ ಪರಮೇಶ್ವರನ ಈ ಸೃಷ್ಟಿಯಲ್ಲಿ ಯಾರೂ ದುಃಖಕ್ಕೀಡಾಗಬಾರದೆಂದು ನನಗೆ ಅನಿಸುತ್ತದೆ. ನಗು, ಗದಾ, ನಗು. ನಿನ್ನ ಕಣ್ಣೀರು ಹೋಗಿ, ನಿನ್ನ ಮುಖದ ಮೇಲೆ ಹಾಸ್ಯವಾಡಲೆಂದು ನಾನೇನು ಮಾಡಲಿ ಗೆಳೆಯ ? ಈ ಗ್ರಂಥವೇ ಏಕೆ ನನ್ನ ಪ್ರಾಣವನ್ನು ಅರ್ಪಿಸಲು ಸಿದ್ಧನಿದ್ದೇನೆ. ಜಗತ್ತನ್ನು ನಗಿಸಬೇಕೆಂದು ಬಯಸಿದ ನಾನು, ಇಂದು ನನ್ನ ಗೆಳೆಯನನ್ನಾದರು ನಗಿಸಲಿ. ತ್ಯಾಗದ, ಪ್ರೇಮದ ಮೊದಲನೇ ಪಾಠವನ್ನಾದರೂ ಕಲಿಯಲಿ. ಮೊದಲನೆ ಹೆಜ್ಜೆ ಕಠಿಣವಿರುತ್ತದೆ, ಗದಾ— !

ಹೀಗೆಂದು ಚೈತನ್ಯರು ಗದಾಧರನನ್ನು ಅಪ್ಪಿಕೊಂಡರು. ಗದಾಧರನ ಹೃದಯವು ತುಂಬಿಬಂದಿತು. ಕಣ್ಣಲ್ಲಿ ಆನಂದಾಶ್ರುಗಳು ಬಂದವು. ಇಬ್ಬರ ಮುಖದ ಮೇಲೆ ಅಪೂರ್ವ ತೇಜವು ಕಾಣುತ್ತಿತ್ತು. ಕೈಯಲ್ಲಿ ಕೈಹಿಡಿದು ಇಬ್ಬರೂ ನಂದಿಯ ಪ್ರವಾಹದತ್ತ ನೋಡುತ್ತಿದ್ದರು. ದಂಡೆ ಬಂದಿತೆಂದು ಅಂಬಿಗರು ಕೂಗಿದರು. ಜನರು ತಮ್ಮ ತಮ್ಮ ಸಾಮಾನುಗಳನ್ನು ಕಟ್ಟ ಹತ್ತಿದರು. ಚಿಕ್ಕಮಕ್ಕಳು ದಂಡೆಯತ್ತ ನೋಡಹತ್ತಿದವು.

**ಚೈತನ್ಯ :** ಗದಾಧರ, ಈ ಜಗತ್ತಿನ ಪ್ರವಾಸದಲ್ಲಿ ಇನ್ನೊಂದು ಭೆಟ್ಟಿಯಾಗುವೆವು ?

**ಗದಾಧರ :** ಚೈತನ್ಯ, ಇನ್ನು ನಾವು ಭೆಟ್ಟಿಯಾಗದಿದ್ದರೂ ನಾವು ಮರೆಯುವದು ಸಾಧ್ಯವೇ ? ದಿನಾಲು ನನಗೆ ನಿನ್ನ ನೆನಪು ಬಂದು, ನಿನ್ನ ತ್ಯಾಗದಿಂದ ಕಥೆಯನ್ನು ಹೇಳುವಾಗ ಕಣ್ಣು ತುಂಬಿ ಬರುವವು. ಪ್ರೀತಿಯಿಂದ ತುಂಬಿದ ತ್ಯಾಗದಿಂದ ತುಂಬದ ಪ್ರೀತಿಯಿಂದ ನನ್ನನ್ನು ನೀನು ಬದ್ಧಮಾಡಿದಿ. ನಾನು ಜಗತ್ತಿಗೆ ನ್ಯಾಯಶಾಸ್ತ್ರವನ್ನೇನೋ ಕಲಿಸುವೆ ಚೈತನ್ಯ, ಆದರೆ ನೀನು ನಿರಪೇಕ್ಷ ಪ್ರೇಮದ ಶಾಸ್ತ್ರ ಕಲಿಸುವಿ! ರಸಹೀನ ಘಟಪಟಶಾಸ್ತ್ರ ಕಲಿಸುವ ದಕ್ಕಲ್ಲ ನಿನ್ನ ಜೀವನ, ನಿನ್ನ ಅವತಾರ; ಪರಮ ಮಂಗಲ ಪ್ರೇಮ ಕಲಿಸಲು ನಿನ್ನ ಅವತಾರವಿದೆ!

**ಚೈತನ್ಯ :** ಪ್ರೇಮ, ಪ್ರೇಮ, ಪ್ರೇಮ! ಹೌದು ದುಃಖದಲ್ಲಿ ಮುಳುಗಿದ ಈ ಜಗತ್ತಿಗೆ ಪ್ರೇಮದ ಆವಶ್ಯಕತೆ ಅದೆ. ಪ್ರೇಮ! ತುಂಬಲಿ ನನ್ನ ಹೃದಯದಲ್ಲಿ. ಪ್ರೇಮದ ಸಾಗರವು ಬಂದು ತುಂಬಲಿ ಮತ್ತು ನಾನು ಅದನ್ನು ಜಗತ್ತಿಗೆ ಕೊಡುವೆ. ದುಷ್ಟನಿರಲಿ, ಸುಷ್ಟನಿರಲಿ, ಎಲ್ಲರಿಗೂ ಪ್ರೇಮದ ಸವಿಯನ್ನು ಸವಿಸುವೆನು. ಹೌದು, ಗದಾಧರ, ಇದೇ ನನ್ನ ಜೀವಿತ ಕಾರ್ಯವು. ನನ್ನ ಜೀವಿತ ಕಾರ್ಯವು ಇಂದು ನನಗೆ ಸಾಧಿಸಿತು.

**ಗದಾಧರ :** ಜೀವಿತದ ಸಿದ್ಧಿ ದೊರೆತವನು ಧನ್ಯ, ಕೃತಕೃತ್ಯ.

---

# ಜಯಂತ



“ ಜಯಂತಾ, ನೀನು ಪಾಸಾಗಿಯೇ ತೀರುವಿ; ಮುಂದೇನು ಮಾಡಬೇಕೆಂದಿರುವಿ ? ನಿನ್ನ ದೊಡ್ಡಣ್ಣನಂತೂ ಚಳವಳಿಯಲ್ಲಿ ಸೇರಿಕೊಂಡ. ನಿನ್ನ ಮನಸ್ಸಿನಲ್ಲೇನಿದೆ ? ” ಎಂದು ಯಜಮಾನರು ವಿಚಾರಿಸಿದರು.

“ ಚಳವಳಿಯ ಭರವು ಕಡಿಮೆಯಾಗಿದೆ. ನನ್ನ ಲಕ್ಷ್ಯವು ಅತ್ತ ಕಡೆಗೆ ವಿಶೇಷವಿರುವದಿಲ್ಲ. ನಾನಂತೂ ಸಣ್ಣ ಹುಡುಗ, ಎಲ್ಲಿಗೆ ಹೋಗುವದಿದೆ ? ಆದರೆ ನನಗೆ ಬಹಳಷ್ಟು ಕಲಿಯಬೇಕೆಂದ್ಧಿದೆ.”

“ ಕಾಲೇಜಿನ ವೆಚ್ಚವನ್ನು ಹೇಗೆ ಪೂರೈಸುವದು ? ”

“ ಅಪ್ಪಾ, ನನಗೆ ನಾದಾರಿ ( .. ....) ಸಿಗಬಹುದು ನನಗೆ ಸಾಕಷ್ಟು ಗುಣಗಳು ದೊರೆಯುವವು. ಕಾಲೇಜಿನಲ್ಲಿ ಶಿಷ್ಯವೃತ್ತಿಯೂ ಸಿಕ್ಕರೂ ಸಿಕ್ಕಬಹುದು. ನನ್ನ ಕಾಲೇಜಿನ ವೆಚ್ಚವನ್ನು ನಿಮ್ಮ ಮೇಲೆ ಬೀಳಗೊಡುವದಿಲ್ಲ ”

“ ನಿನ್ನ ಶಿಕ್ಷಣದ ವೆಚ್ಚವು ನನ್ನ ತಲೆಯ ಮೇಲೆ ಬೀಳಲಾರದೆಂದು ಗ್ರಹಿಸಿದರೂ ನಿನ್ನಿಂದ ಮನೆತನ ಸಾಗಿಸಲು ಯಾವ ರೀತಿಯಿಂದಲೂ ನೆರವು ದೊರೆಯಲಾರದು. ನಾನೊಬ್ಬನೇ ಎಷ್ಟೆಂತು ದುಡಿಯಲಿ ? ನನಗೆ ದುಡಿದು ಸಾಕಾಗಿ ಹೋಗಿದೆ. ಸರಕಾರಿಯ ಕೆಲಸ; ಅಲ್ಲದೆ ಮುಂಜಾನೆ ಖಾಸಗೀ ನೌಕರಿ. ತಿಂಗಳ ಕೊನೆಗೆ ಗಳಿಕೆ-ಬಳಿಕೆಗಳು ಬಾಯಗೂಡಬೇಕಲ್ಲವೇ ? ಮನೆಯಲ್ಲಿ ನೀವು ನಾಲ್ಕೈದು ಜನ ಅಣ್ಣ ತಮ್ಮಂದಿರು. ದೊಡ್ಡವನು ದೇಶ ಸೇವೆಗೆ ತೆರಳಿದನು. ಬಿ. ಎ. ಆಗಿ ನೆರವಾದಾನು ಎಂದು ಆಶಾಭರಿತನಾಗಿದ್ದೆ ನಾನು. ಆದರೆ ಮನೆಯಲ್ಲಿ ಹೇಳದೆ ಕೇಳದೆ ಆವನು ಹೋಗಿಬಿಟ್ಟನು; ಹೋಗಲಿ. ದೇಶಕ್ಕೋಸ್ಕರ ಯಾರಾದರೂ ಒಬ್ಬರು ಹೋಗಲೇಬೇಕು. ಆದರೆ ನಿಮ್ಮೆಲ್ಲರನ್ನು ನಾನು ಹೇಗೆ ಸಂರಕ್ಷಿಸಲಿ ? ಜಯಂತಾ, ನೀನು ಕೆಲಸವನ್ನು ಹಿಡಿ. ರೇಶನಿಂಗ ಖಾತೆಯಲ್ಲಿ ಸಿಗಬಹುದು; ನಾನು ಹೇಳಿಟ್ಟದ್ದೇನೆ.”

" ನನಗಿನ್ನೂ ಹದಿನೈದು ವರುಷ; ನನಗಾರು ಕೆಲಸ ಕೊಡುವವರು?"

" ಅಲ್ಲಿ ವಯಸ್ಸಿನ ನಿರ್ಬಂಧವಿಲ್ಲ. ಮ್ಯಾಟ್ರಿಕ್ ಪಾಸಾಗಿದ್ದರೆ ಸಾಕು. ಎಳೆಯಳೇ ಹುಡುಗಿಯರೂ ಅಲ್ಲಿ ಕೆಲಸ ಮಾಡುತ್ತಿರುತ್ತಾರೆ."

ಅಷ್ಟರಲ್ಲಿ ಜಯಂತನ ತಂಗಿಯು ಅಲ್ಲಿಗೆ ಬಂದು " ಅಪ್ಪಾ, ನಾನ ನೌಕರಿಯನ್ನು ಮಾಡಲೇ ? ಜಯಂತ ಕಲಿಯಲಿ. ಅವನು ಬುದ್ಧಿವಂತನಾಗಿ ದ್ದಾನೆ. ನನಗೆಲ್ಲಿಯಾದರೂ ಒಂದು ಕೆಲಸ ಕೊಡಿಸಿಬಿಡು."

" ನೀನು ಮ್ಯಾಟ್ರಿಕ್ ನಾಪಾಸಿರುವಿ. ಮೇಲಾಗಿ ನಿನ್ನ ಪ್ರಕೃತಿಯು ಸರಿಯಾಗಿ ಇರುವದೇ ಇಲ್ಲ."

" ನೌಕರಿ ಮಾಡಿದರೆ ಸುಧಾರಿಸಬಹುದು. ನನ್ನಿಂದ ಏನಾದರೂ ಒಂದಿಷ್ಟು ಉಪಯೋಗವಾಯಿತಲ್ಲ ಎಂಬ ಸಮಾಧಾನವೂ ಎನಿಸ ಬಹುದು."

" ಬೇಡ, ಗಂಗೂ, ನೀನು ನೌಕರಿ ಮಾಡಬೇಡ. ನಮ್ಮ ಅಣ್ಣ ತಮ್ಮಂದಿರಿಗೆ ನೀನೊಬ್ಬಳೇ ತಂಗಿಯಾಗಿರುವಿ. ನೀನು ಮೊದಲು ನಿನ್ನ ಪ್ರಕೃತಿ ಯನ್ನು ಸುಧಾರಿಸಿಕೊಂಡು ಸರಿಯಾಗು. ನಿನ್ನ ತೂಕವು ಹೆಚ್ಚಾಗಲಿ. ನಾನು ನೌಕರಿ ಮಾಡುತ್ತೇನೆ ಮುಂಜಾನೆ ಕಾಲೇಜಿಗೆ ಹೋಗುತ್ತೇನೆ ಸಾವಿರಾರು ಹುಡುಗರು ಈ ರೀತಿ ಮಾಡುತ್ತಿದ್ದಾರೆ "

' ಆದರೆ ನೀನು ಅಶಕ್ತನಾಗಿರುವಿ; ನಿನ್ನಿಂದ ಇಷ್ಟು ಸಹಿಸುವದಾಗು ವದೋ ? "

" ಆಗದೇನು ? ಮನಸಿನಲ್ಲಿ ಬಂದರೆ ಎಲ್ಲವೂ ಆಗುವದು "

ಮುಂದೆ ಜಯಂತನ ಪರೀಕ್ಷೆಯ ಫಲಿತಾಂಶ ಹೊರಬಿದ್ದಿತು. ಜಯಂತ ಉತ್ತೀರ್ಣನಾಗಿದ್ದ. ಅವನಿಗೆ ನೂರಕ್ಕೆ ೭೦ ಗುಣಗಳು ದೊರೆ ತಿದ್ದವು. ಯಾವುದೇ ಕಾಲೇಜದಲ್ಲಾದರೂ ಅವನಿಗೆ ಶಿಷ್ಯವೃತ್ತಿ ದೊರಕ ಬಹುದಾಗಿತ್ತು. ಅವನು ಕಾಲೇಜಿಗೆ ಹೆಸರನ್ನು ಹಚ್ಚಿಸಿದನು. ಮುಂಜಾನೆ ಕಾಲೇಜು, ಮಧ್ಯಾಹ್ನ ನೌಕರಿ ಮಾಡುವವನಿದ್ದ. ಹದಿನೈದೇ ವಯಸ್ಸಿನ ಜಯಂತನು ತಾಸುಗಟ್ಟಲೆ ರೇಶನಿಂಗದ ಕೆಲಸವನ್ನು ಮಾಡಿ ಅವನು ದಣಿದು ಹೆಣವಾಗುತ್ತಿದ್ದನು. ಶರೀರವು ಬೆಳೆಯುವ ಕಾಲವದು; ಆದರೆ ಇವನು ಸವಿಯುತ್ತ ಸಾಗಿದ್ದನು. ಮಾಡಬೇಕೇನು ?

ಜಯಂತನು ಮನೆಯಲ್ಲಿಯೂ ತನ್ನ ತಾಯಿಗೆ ಮನೆಗೆಲಸದಲ್ಲಿ ನೆರವಾಗುತ್ತಿದ್ದನು. ರವಿವಾರ ಮನೆ ಸಾರಿಸುವನು. ಉಳಿದ ಅಣ್ಣತಮ್ಮಂದಿರ ಬಟ್ಟೆ ಒಗೆಯುತ್ತಿದ್ದನು. ಅವನಿಗೆ ಒಂದು ಅರೆ ಕ್ಷಣವಾದರೂ ವಿಶ್ರಾಂತಿ ಇರಲೆ ಇಲ್ಲ. ಮನೆಯಲ್ಲಿ ವಿದ್ಯುತ್ ದೀಪವಿರಲಿಲ್ಲ. ಚಿಮಣೀ ಎಣ್ಣೆಯು ದೊರೆಯುತ್ತಿರಲಿಲ್ಲ. ಜಯಂತನು ಅಭ್ಯಾಸ ಮಾಡಲು ತನ್ನ ಸ್ನೇಹಿತನೊಬ್ಬನ ಮನೆಗೆ ರಾತ್ರಿಯ ಕಾಲಕ್ಕೆ ಹೋಗುತ್ತಿದ್ದನು.

ಕಾಲೇಜ ಬಿಟ್ಟನಂತರ ಅವನು ಈಗ ಮನೆಯ ಕಡೆಗೆ ಬರುವದೇ ಇಲ್ಲ. ಅಲ್ಲಿಯೇ ಎಲ್ಲಿಯಾದರೂ ರೈಸ್‌ಪ್ಲೇಟ್ ( ........ ) ತೆಗೆದುಕೊಂಡು ತಿಂದು ನೌಕರಿಗಾಗಿ ಹೋಗುತ್ತಿದ್ದನು. ಆದರೆ ಜಯಂತನು ಮಾತ್ರ ಅಶಕ್ತನಾಗುತ್ತನಾಗಿದ್ದನು.

" ಜಯಂತಾ, ನಿನ್ನ ಮೈಯಲ್ಲಿ ಚೆನ್ನಾಗಿಲ್ಲವೇ ? " ಎಂದು ಗಂಗೂ ವಿಚಾರಿಸಿದಳು.

" ಯಾಕೆ ನನಗೇನಾಗಿದೆ ? ನೀನೇ ನಿನ್ನ ಪ್ರಕೃತಿಯನ್ನು ಜಪ್ಪಿಸಿಕೋಬೇಕಾದರೆ. ನಿನಗೆ ಚುಚ್ಚು ಮದ್ದಿನ ಅವಶ್ಯಕತೆ ಇದೆ. ಆದಕ್ಕಾಗಿ ನಾನು ನಿನಗೆ ಹಣ ಸಂಗ್ರಹಿಸಿಟ್ಟಿದ್ದೇನೆ. ನೀನು ನಮ್ಮ ಮನೆತನದಲ್ಲಿ ಒಬ್ಬಳೇ ಹೆಣ್ಣುಮಗಳು. ನಾನು ದೇವರ ಕಡೆ ಹೋದರೂ ಉಳಿದ ಅಣ್ಣಂದಿರಿರುತ್ತಾರೆ. ಆದರೆ ನೀನು ಹೋದರೆ ಮಾತ್ರ ಇನ್ನೊಬ್ಬ ತಂಗಿ ಎಲ್ಲಿದ್ದಾಳೆ ?

" ಹೀಗೆ ಮಾತನಾಡಬೇಡ. ನೀನು ಕಲಿ. ನೀನು ಜಾಣನಿರುವಿ. ನಿಜವಾಗಿಯೇ ನೀನು ದೊಡ್ಡವನಾಗುವಿ "

" ನನಗೆ ಬಹಳಷ್ಟು ಕಲಿಯಬೇಕೆಂದೆನಿಸುತ್ತದೆ."

" ಬೇಕಾದಷ್ಟು ಕಲಿ; ಪ್ರಕೃತಿಯನ್ನು ಮಾತ್ರ ಜಪ್ಪಿಸು."

ಗಂಗೂ ಚುಚ್ಚುಮದ್ದು ತೆಗೆದುಕೊಳ್ಳಲಾರಂಭಿಸಿದಳು. ಜಯಂತನ ಮಾತನ್ನು ಮುರಿಯುವದು ಅವಳಿಗೆ ಬೇಡವಾಗಿತ್ತು. ಆದರೆ ಜಯಂತ ಮಾತ್ರ ದಿನ ದಿನಕ್ಕೆ ಒಣಗುತ್ತ ನಡೆದಿದ್ದ.

" ಜಯಂತಾ, ನಿನಗೇನಾಗಿದೆ ? " ಎಂದು ತಾಯಿ ವಿಚಾರಿಸಿದಳು.

“ ಪರೀಕ್ಷೆ ಸಮೀಪಿಸುತ್ತಿದೆ. ರಾತ್ರಿ ಅಭ್ಯಾಸ ಮಾಡುತ್ತೇನೆ. ಆದ್ದರಿಂದ ನಾನು ಹೀಗೆ ಕಾಣುತ್ತಿರುವೆ. ಶರೀರವು ಕುಂದಿದರೂ ನನ್ನ ಮನಸ್ಸು ಉತ್ಸಾಹಭರಿತವಾಗಿದೆ. ಪರೀಕ್ಷೆ ಮುಗಿಯಿತೆಂದರೆ ಮುಂದೆ ಮೂರು ತಿಂಗಳು ಅಭ್ಯಾಸವಿಲ್ಲ. ಆಗ ನನ್ನ ಪ್ರಕೃತಿ ಸುಧಾರಿಸುವದು. ಅವ್ವಾ, ಎಷ್ಟೂ ಕಾಳಜಿ ಮಾಡಬೇಡ ”

“ ಅವನೊ ಅಲ್ಲಿ ಸೆರೆಮನೆಯಲ್ಲಿ; ನೀನೋ ಇಲ್ಲಿ ಈ ಅವಸ್ಥೆಯಲ್ಲಿ ”

“ ಅವ್ವಾ, ದೇಶದ ತುಂಬೆಲ್ಲ ಈ ಅವಸ್ಥೆಯಿದೆ ಅದರಲ್ಲಿಯೇ ನಾವು ಸುಖದಿಂದಿಲ್ಲವೇ ? ”

“ ಹುಡುಗಾ, ನೀನು ಬಹಳ ಬುದ್ಧಿವಂತನಿರುವಿಯಪ್ಪಾ ”

ತಾಯಿಯ ಕಣ್ಣುಗಳು ನೀರಿನಿಂದ ತುಂಬಿದವು. ಜಯಂತನು ಪುಸ್ತಕ ತೆಗೆದುಕೊಂಡು ಹೊರಬಿದ್ದನು. ಪರೀಕ್ಷೆಯು ಕಾಲಲ್ಲಿಯೇ ಬಂದಿತ್ತು. ಗಂಗೂ, ಜಯಂತರು ಅಂದು ತಿರುಗಾಡಲು ಹೋಗಿದ್ದರು.

“ ಗಂಗೂ, ಈಗ ನಿನಗೆ ಆರಾಮವೆನಿಸುವದಿಲ್ಲವೇ ? ”

“ ನನಗೆ ನಿನ್ನದೇ ಚಿಂತೆಯಾಗಿದೆ. ”

“ ನೀನು ಹುಚ್ಚಿಯಿರುವಿ ! ನನಗೆ ಇತ್ತೀಚೆ ಬಹಳ ಆನಂದವೆನಿಸುತ್ತಿರುತ್ತದೆ. ಕಾಲೇಜಿಗೆ ಹೋಗುತ್ತಿರುತ್ತೇನೆ. ಅದರಿಂದ ಈ ವರ್ಷ ಪುಕ್ಕಟೆ ಹೋಗುವದಿಲ್ಲ. ನೌಕರಿಯನ್ನು ಮಾಡುತ್ತಿರುವೆನಾದ್ದರಿಂದ ಮನೆಗೆ ನೆರವಾದಂತಾಗುತ್ತದೆ. ಅಂದು ನಾನು ಅವ್ವನಿಗೆ ಸೀರೆಯನ್ನು ತೆಗೆದುಕೊಂಡು ಬಂದೆ. ಆವಳಿಗೆ ಅಂದದೆಷ್ಟು ಆನಂದವೆನಿಸಿತು ! ತಂದೆಗೂ ಅಂದು ಆನಂದವೆನಿಸಿರಲು ಸಾಕು. ಸಣ್ಣ ಸಣ್ಣವರೂ ಕೂಡ ಹಳ್ಳಿಹಳ್ಳಿಗಳಿಂದ ತಂತಮ್ಮ ತಾಯಿ ತಂದೆಗಳಿಗೆ ನೆರವಾಗುತ್ತಿರುತ್ತಾರೆ. ಏಳೆಂಟು ವರುಷದ ಹುಡುಗನು ದನ ಕಾಯುತ್ತಾನೆ. ಮನೆಗೆ ನೆರವಾಗುತ್ತಾನೆ. ಬಿಳಿಛಾಯೆಯ ಹುಡುಗರು ಮನೆಗೆ ಭಾರವಾಗುತ್ತಾರೆ. ನಾವೂ ಏನಾದರೂ ಮಾಡಬೇಕು. ವರ್ತಮಾನ ಪತ್ರಗಳನ್ನು ಮಾರಬೇಕು. ಇಲ್ಲವೆ ಎರಡನೆಯ ಯಾವುದಾದರೂ ಉದ್ಯೋಗ ಮಾಡಬೇಕು. ಬಿಳಿ ಛಾಯೆಯುಳ್ಳ ಮನೆತನದಲ್ಲಿ ಒಬ್ಬನು ತಂದು ಬಂದು ಹಾಕುವವನು; ಹತ್ತಾರು ಜನರು ಕೂತು ತಿನ್ನುವವರು ! ಇಂಥ ಪರಿಸ್ಥಿತಿ ಬದಲಾಗಲೇಬೇಕು. ”

"ಜಯಂತಾ, ನನಗೊಂದು ಕೈರಾಟೆಯನ್ನು ತಂದುಕೊಡು. ನಾನು ಮನೆಯಲ್ಲಿ ಹೊಲಿಗೆಯ ಕೆಲಸವನ್ನು ಮಾಡುತ್ತ ಹೋಗುವೆನು."

"ಮೊದಲು ನಿನ್ನ ಆರೋಗ್ಯ ಸುಧಾರಿಸಲಿ. ನಿನ್ನ ಮುಂದಿನ ಹುಟ್ಟು ಹಬ್ಬದ ಕಾಣಿಕೆಯೆಂದು ಅದನ್ನು ನಿನಗೆ ತಂದು ಕೊಡುವೆನು"

ಇಬ್ಬರೂ ಮನೆಗೆ ಮರಳಿದರು ಜಯಂತನ ಪರೀಕ್ಷೆ ಮುಗಿಯಿತು. ಪರೀಕ್ಷೆಗಾಗಿ ಅವನು ನಾಲ್ಕು ದಿನ ರಜೆಯನ್ನು ಪಡೆದುಕೊಂಡ. ಪ್ರಶ್ನೆ ಪತ್ರಿಕೆಗಳನ್ನು ಚನ್ನಾಗಿಯೇ ಬಿಡಿಸಿದ್ದ. ಇಂದು ಕೊನೆಯ ಪ್ರಶ್ನೆಪತ್ರಿಕೆಯ ದಿನ. ಮನೆಯಲ್ಲಿ ತಂಗಿಯು ದಾರಿಯನ್ನು ಕಾಯುತ್ತಲಿದ್ದಳು—ಇನ್ನೂ ಜಯಂತನು ಏಕೆ ಬಂದಿಲ್ಲೆಂದು.

ಜಯಂತನು ಪ್ರಶ್ನೆಪತ್ರಿಕೆ ಬರೆದು ಎದ್ದನು. ಎಲ್ಲ ಹುಡುಗರೂ ಹೊರಟರು; ಆದರೆ ಜಯಂತನು ಮೂರ್ಛಿತನಾಗಿ ಬಿದ್ದುಬಿಟ್ಟನು. ಅವನ ಗೆಳೆಯರು ಓಡಿಬಂದರು. ಅವರು ಅವನನ್ನು ಎಬ್ಬಿಸಿ, ಒಂದು ಟ್ಯಾಕ್ಸಿಯನ್ನು ಮಾಡಿ ಮನೆಗೆ ಕರೆದುಕೊಂಡು ಬಂದರು.

"ಏನಾಯಿತು?" ಎಂದು ಗಾಬರಿಯಾಗಿ ಗಂಗೂ ಅವರನ್ನು ವಿಚಾರಿಸಿದಳು.

"ಮೂರ್ಛೆ ಬಂದು ಬಿದ್ದನು" ಎಂದು ಮಿತ್ರರು ಹೇಳಿದರು.

ಅವನ ಮಿತ್ರರೆಲ್ಲರೂ ಹೊರಟುಹೋದರು. ಗಂಗೂ ಅಣ್ಣನ ಹತ್ತಿರ ಕುಳಿತಳು. ಅವಳ ಕಣ್ಣು ನೀರಿನಿಂದ ತುಂಬಿದ್ದವು. ತಂದೆಯು ಕೆಲಸಕ್ಕೆ ಹೋಗಿದ್ದನು. ಅಣ್ಣತಮ್ಮಂದಿರು ಇನ್ನೂ ಶಾಲೆಯಿಂದ ಮರಳಿರಲಿಲ್ಲ. ತಾಯಿಯು ಕಾಳು ತೆಗೆದುಕೊಂಡು ಗಿರಣಿಗೆ ಹೋಗಿದ್ದಳು. ಹೀಗಾಗಿ ಗಂಗೂ ಒಬ್ಬಳೇ ಇದ್ದಳು.

"ಜಯಂತ, ಜಯಂತ" ಎಂದು ಅವಳು ಕೂಗಿದಳು. ಕಣ್ಣು ನೀರಿನಿಂದ ತುಂಬಿದ್ದವು. ಸ್ವಲ್ಪ ಹೊತ್ತಿನಲ್ಲೇ ತಾಯಿ ಬಂದಳು.

"ಜಯಂತ" ಎಂದು ತಾಯಿ ಕೂಗಿದಳು.

ಜಯಂತನು ಶುದ್ಧಿಯ ಮೇಲೆ ಬಂದನು; ಕಣ್ಣು ತೆರೆದನು. ಚಟುಕ್ಕನೆ ಎದ್ದು ಕುಳಿತನು. ತಾಯಿಯನ್ನು ತಬ್ಬಿಕೊಂಡನು.

"ಮೃತ್ಯುವು ನನ್ನನ್ನು ಒಯ್ಯಲಾರನು" ಎಂದು ಅವನೆಂದನು.

"ಮಲಗಿಕೊಂಡುಬಿಡು" ಎಂದಳು ತಾಯಿ.

"ನಿನ್ನ ತೊಡೆಯಮೇಲೆ ಮಲಗುತ್ತೇನೆ."

"ಇಡು ತಲೆಯನ್ನು."

"ಅವ್ವಾ ಡಾಕ್ಟರರನ್ನು ಕರತರಲಾ?" ಎಂದು ಗಂಗೂ ವಿಚಾರಿಸಿದಳು

"ಗಂಗೂ, ಡಾಕ್ಟರರು ಏತಕ್ಕೆ? ಬಡವರಿಗೇಕೆ ಡಾಕ್ಟರರು? ಡಾಕ್ಟರರಿಗೆ ಬಡಿಯುವ ಹಣವೇ ಮನೆಯ ಉಪಯೋಗಕ್ಕೆ ಬೀಳುವದು" ಎಂದು ಜಯಂತನೆಂದನು.

"ಡಾಕ್ಟರರನ್ನು ಕರೆದುಕೊಂಡು ಬರಲಿ" ಎಂದು ತಾಯಿಯು ತಿಳಿ ಹೇಳಿದಳು ಗಂಗೂ ತೆರಳಿದಳು. ಡಾಕ್ಟರರು ಬಂದು ಅವನ ಪ್ರಕೃತಿಯನ್ನು ಪರೀಕ್ಷಿಸಿದರು.

"ದಣಿವು ಬಹಳಾಗಿದೆ. ನಾನು ಚುಚ್ಚಿ ಔಷಧ ಹಾಕುತ್ತೇನೆ. ಆರಾಮ ಎನಿಸಬಹುದು. ಹೊಟ್ಟೆಯಲ್ಲೂ ತೆಗೆದುಕೊಳ್ಳಲು ಔಷಧ ಕೊಡುತ್ತೇನೆ. ನಾಲ್ಕು ತಾಸಿಗೊಮ್ಮೆ ಕೊಡುತ್ತ ಹೋಗಿರಿ. ನಿದ್ದೆ ಹತ್ತಿದರೆ ಮಾತ್ರ ಎಬ್ಬಿಸಬೇಡಿರಿ. ವಿಶ್ರಾಂತಿ ಬೇಕಾಗಿದೆ. ಮಿದುಳು ಬಹಳ ದಣಿದಿದೆ" ಎಂದು ಡಾಕ್ಟರರು ಹೇಳಿದರು. ಇಂಜೆಕ್ಶನ್ ಕೊಟ್ಟು ಡಾಕ್ಟರರು ತೆರಳಿದರು. ಅವರೊಡನೆ ಗಂಗೂ ಹೋಗಿ ಔಷಧವನ್ನು ತೆಗೆದುಕೊಂಡು ಬಂದಳು.

"ಜಯಂತಾ, ಬಾಯಿ ತೆಗೆ" ಎಂದು ಗಂಗೂ ಹೇಳಿದಳು.

ಅವನು ಬಾಯಿ ತೆರೆದನು. ಔಷಧ ಕುಡಿಸಿದಳು. ಅವನು ಮಲಗಿಬಿಟ್ಟನು. ಸಾಯಂಕಾಲದ ಹೊತ್ತಾಯಿತು. ತಾಯಿ ದೇವದರ್ಶನಾರ್ಥವಾಗಿ ಹೋಗಿದ್ದಳು. ತಂದೆ ಇನ್ನೂ ಬಂದಿರಲಿಲ್ಲ. ತಮ್ಮಂದಿರು ಆಟವಾಡಲು ಹೋಗಿದ್ದರು.

ಮನೆಯಲ್ಲಿ ಗಂಗೂ ಮತ್ತು ಜಯಂತ ಇಬ್ಬರೇ ಇದ್ದರು.

"ಗಂಗೂತಾಯಿ, ನನ್ನ ಜೇಬಿನಲ್ಲಿ ಹಣವಿದೆ. ನೀನು ಇಂಜೆಕ್ಶನ್ ತೆಗೆದುಕೋ. ಅನ್ನನಿಗೆ ಉಂಗುರದ ಆಶೆ ಇತ್ತು. ನೀನೂ ಹಾಗೆ

ಯಾವಾಗಲೋ ಅಂದೂ ತೋರಿಸಿದ್ದೆ. ಉಂಗುರದ ಸಲುವಾಗಿಯೂ ನಾನು ಹಣವನ್ನು ಕೂಡಿಹಾಕಿದ್ದೇನೆ. ನೀನು ಆವಳಿಗೊಂದು ಉಂಗುರವನ್ನು ತಂದು ಕೊಡು."

ಮುಂದೆ ಅವನಿಂದ ಮಾತನಾಡುವದಾಗಲಿಲ್ಲ ಅವನಿಗೆ ಶ್ರಮವಾಯಿತು. ಕಣ್ಮುಚ್ಚಿ ಬಿದ್ದುಕೊಂಡನು. ಈಗ ಎಲ್ಲರೂ ಮನೆಗೆ ಬಂದಿದ್ದಾರೆ. ಜಯಂತನಿಗೆ ಆರಾಮಾಗಿದೆ ಎಂದು ಎಲ್ಲರಿಗೂ ಅನಿಸುತ್ತಿತ್ತು. ಊಟಗೀಟ ಮುಗಿಯಿತು.

"ನೀನು ತುಸು ಹಾಲು ಕುಡಿ" ಎಂದು ತಾಯಿ ಹೇಳಿದಳು.

"ಕೊಡು, ನಿನ್ನ ಕೈಯಿಂದಲೇ ಕೊಡು" ಎಂದು ಜಯಂತನೆಂದನು.

ತಮ್ಮಂದಿರು ಮಲಗಿಕೊಂಡರು. ತಂದೆ, ತಾಯಿ, ಗಂಗೂ ಕುಳಿತಿದ್ದರು.

"ನೀವೂ ಮಲಗಿಕೊಳ್ಳಿರಿ. ನಾನು ಅವನ ಹತ್ತಿರ ಕುಳಿತುಕೊಳ್ಳುತ್ತೇನೆ. ಹನ್ನೆರಡು ಹೊಡೆಯಿತೆಂದರೆ ನಾನು ಗಂಗೂನನ್ನು ಎಬ್ಬಿಸುತ್ತೇನೆ" ಎಂದು ತಂದೆ ಎಂದರು.

"ಎರಡು ಬಡಿಯಿತೆಂದರೆ ನನ್ನನ್ನು ಎಬ್ಬಿಸು. ನಾನು ಕುಳಿತುಕೊಳ್ಳುತ್ತೇನೆ" ಎಂದು ತಾಯಿ ಹೇಳಿದಳು.

"ನೀವೆಲ್ಲರೂ ಮಲಗಿಕೊಳ್ಳಿರಿ. ನನಗೀಗ ಆರಾಮೆನಿಸುತ್ತಿದೆ. ನೀವು ಹಗಲೆಲ್ಲ ದುಡಿದು ದಣಿದಿದ್ದೀರಿ. ಮೇಲೆ ಈ ಜಾಗರಣೆ ಬೇಡ. ಮಲಗಿಕೊಳ್ಳಿರಿ" ಎಂದು ಜಯಂತ ಹೇಳಿದನು.

"ಜಯಂತ, ಹಗಲೆಲ್ಲ ದುಡಿಯುವ ರೂಢಿಯೇ ನನಗೆ ಬಿದ್ದಿದೆ. ಎತ್ತನ್ನು ಗಾಣಕ್ಕೆ ಹೂಡದಿದ್ದರೆ ಮಾತ್ರ ಅದು ಬೇನೆ ಬೀಳುವದು. ಆದರೆ ನನ್ನೊಡನೆ ಚಿಕ್ಕ ವಯಸ್ಸಿನವನಾದ ನಿನ್ನನ್ನು ಗಾಣಕ್ಕೆ ಹೂಡಬೇಕಾಗಿ ಬಂದಿರುವದರಿಂದ ನನಗೆ ಬಹಳೇ ಖೇದವಾಗುತ್ತದೆ." ಎಂದರು ತಂದೆ.

"ಖೇದವೆನಿಸಿಕೊಳ್ಳಬೇಡಿರಿ. ಕರ್ತವ್ಯವೆಂದು ಆನಂದದಿಂದ ಎಲ್ಲವನ್ನು ಮಾಡಬೇಕಾಗುವದು. ತಾಯಿ ಎಷ್ಟು ದುಡಿಯುತ್ತಿದ್ದಾಳೆ. ಬೀಸುವದನ್ನು ಮನೆಯಲ್ಲಿಯೇ ಮಾಡಿಕೊಳ್ಳುತ್ತಿದ್ದಾಳೆ. ಗಂಗೂನ ಮೈಯಲ್ಲಿ ಆರಾಮಿದ್ದರೆ ಅವಳಷ್ಟು ಆಕೆಗೆ ನೆರವಾಗುತ್ತಾಳೆ. ನೀವು—ಎಲ್ಲರೂ ಮಲಗಿಕೊಳ್ಳಿರಿ."

" ನೀನು ಮಾತನಾಡಿ ಆಯಾಸ ಮಾಡಿಕೊಳ್ಳಬೇಡ. ಸುಮ್ಮನೆ ಮಲಗು " ಎಂದು ತಂದೆ ಅವನ ತಲೆಯಮೇಲೆ ಕೈಯ್ಯಾಡಿಸುತ್ತ ಹೇಳಿದರು.

ಜಯಂತನು ಶಾಂತರೀತಿಯಿಂದ ಕಣ್ಮುಚ್ಚಿ ಮಲಗಿಕೊಂಡನು ತಾಯಿ ಗಂಗೂ ಹಾಸಿಗೆಯಲ್ಲಿ ಬಿದ್ದುಕೊಂಡರು. ತಂದೆ ಜಯಂತನ ಹತ್ತಿರ ಕುಳಿತರು.

ಹನ್ನೆರಡು ಬಡಿಯುವ ಹೊತ್ತಾಗಿರಬೇಕು ಸಿನೇಮಾ ಬಿಟ್ಟು ಜನರು ಮನೆಯ ಕಡೆಗೆ ಹೊರಟಿರುವ ಸಮಯ. ಜಯಂತನು ಕಣ್ಣು ತೆರೆದನು.

" ಅಪ್ಪಾ, ನಾನು ನೌಕರಿ ಹಿಡಿದೆ. ಎಷ್ಟು ಒಳ್ಳೆಯ ಕೆಲಸವನ್ನು ಮಾಡಿದೆನಲ್ಲವೇ ? ನಿಮ್ಮ ಚಿಂತೆಯನ್ನು ಒಂದಿಷ್ಟು ಕಡಿಮೆ ಮಾಡಿದೆ ಗಂಗೂತಾಯಿಗೆ ಇಂಜೆಕ್ಶನ್ ತೆಗೆದುಕೊಳ್ಳಲು ಹಣ ಸಾಕಾಗುವಷ್ಟಿದೆ. "

" ಆಹುದು. ನಿನಗೆ ಗುಣವಾಗಲಿ. ನೀನು ಮೊದಲು ನೆಟ್ಟಗಾಗು. "

" ನನಗೆ ನೆಟ್ಟಗಾಗದೆ ಹೋದರೂ ಗಂಗೂತಾಯಿಗೆ ಗುಣವಾಗಲಿ. ಅವಳು ನೆರವಾಗುವಳು " ಕೋಣೆಯಲ್ಲಿ ಮತ್ತೆ ಶಾಂತತೆಯು ನೆಲೆಸಿತು. ಗಂಗೂ ಎದ್ದಳು

" ಅಪ್ಪಾ, ನೀವು ಮಲಗಿಕೊಳ್ಳಿರಿ" ಗಂಗೂ ಹೇಳಿದಳು. ತಂದೆ ಮಲಗಿಕೊಂಡರು. ತಂಗಿ ಅಣ್ಣನ ಬದಿಗೆ ಕುಳಿತುಕೊಂಡಳು.

" ನೀನು ಅಪ್ಪನನ್ನು ಎಬ್ಬಿಸಬೇಡ " ಎಂದು ಜಯಂತ ಗಂಗೂನಿಗೆ ಹೇಳಿದನು.

" ಹಾಗೇ ಆಗಲಿ " ಗಂಗೂ ಉತ್ತರ ಕೊಟ್ಟಳು.

ಬೆಳಗಿನ ಜಾವ. ಜಯಂತನು ಒಮ್ಮೆಲೆ ಗಂಗೂನ ಕೈಯನ್ನು ಗಟ್ಟಿಯಾಗಿ ಹಿಡಿದ.

" ಏನೋ ? ಯಾಕೋ ? "

" ನಾನು ಹೋಗುತ್ತೇನೆ. ಸುಖದಿಂದ ಇರ್ರಿ. "

" ಜಯಂತ ! "

ಅವನೇನು ಮಾತನಾಡಲಿಲ್ಲ. ಬೆಳಗು ಹರಿಯಿತು. ತಾಯಿ ಎದ್ದಳು. ತಂದೆಯೂ ಎದ್ದರು. ತಮ್ಮಂದಿರೂ ಎದ್ದರು. ಆದರೆ ಜಯಂತ ಮಾತ್ರ ಏಳುವ ಹಾಗಿರಲಿಲ್ಲ.

ಕೆಲವು ದಿನಗಳು ಕಳೆದವು. ಜಯಂತನ ಪರೀಕ್ಷೆಯ ಫಲಿತಾಂಶ ಹೊರಬಿದ್ದಿತು. ಆದರೆ ಅದನ್ನು ನೋಡಬೇಕೆಂದು ಯಾರ ಮನಸಿನಲ್ಲಿಯೂ ಬರಲಿಲ್ಲ. ಸಾಯಂಕಾಲ ಜಯಂತನ ಗೆಳೆಯನೊಬ್ಬನು ಬಂದನು. ಅವನ ಕೈಯಲ್ಲಿ ವರ್ತಮಾನಪತ್ರವಿತ್ತು.

"ಗಂಗೂತಾಯೀ" ಎಂದವನು ಕೂಗಿದನು.

"ಏನು ನೀಳೂ?"

"ಜಯಂತನು ಒಂದನೆಯ ವರ್ಗದಲ್ಲಿ ಒಂದನೆಯವನು."

"ಆದ್ದರಿಂದಲೆ ದೇವರು ಅವನನ್ನು ಒಯ್ದನು."

ಗೆಳೆಯನು ಹೊರಟು ಹೋದನು. ಗಂಗೂ ಶೂನ್ಯಮನಸ್ಕಳಾಗಿ ಕಿಡಿಕಿಯೊಳಗಿಂದ ಎತ್ತಲೋ ನೋಡುತ್ತಿದ್ದಳು. ಅದೇನೆ ಇರಲಿ. ಅವಳ ಬೇನೆ ವಾಸಿಯಾಗಿದೆ. ಅವಳ ಬೆನ್ನನೋವು ಇಲ್ಲದಾಗಿದೆ. ಜಯಂತನು ಅವಳ ಬೇನೆಯನ್ನು ತೆಗೆದುಕೊಂಡು ಹೋದನೋ ಏನೋ? ಗಂಗೂ ಈಗ ನೌಕರಿ ಹಿಡಿದಿದ್ದಾಳೆ ಮನೆಯ ಜನರಿಗೆಲ್ಲ ನೆರವಾಗುತ್ತಿದ್ದಾಳೆ.

ಜಯಂತನು ಗತಿಸಿ ಒಂದು ವರ್ಷವಾಗಿ ಹೋಗಿದೆ. ಗಂಗೂ ಸುಂದರವಾದುದೊಂದು ಉಂಗುರವನ್ನು ತಂದಿದ್ದಾಳೆ

"ಅವ್ವಾ, ನಿನ್ನ ಬೆರಳಲ್ಲಿ ಹಾಕಿಕೋ."

"ನನಗೇಕೆ ಉಂಗುರ? ನೀವು—ಮಕ್ಕಳೆಲ್ಲ ಸುಖವಾಗಿದ್ದರೆ ಅಷ್ಟೇ ನನಗೆ ಸಾಕು."

"ಅವ್ವಾ, ಇದು ಜಯಂತನ ಕೊನೆಯ ಆಶೆಯಾಗಿತ್ತು."

"ಅವನ ಇಚ್ಛೆಯಿತ್ತೇ? ಅವನ ಇಚ್ಛೆಯನ್ನು ಹೇಗೆ ಮುರಿಯಲಿ?" ಎಂದೆನ್ನುತ್ತ ಬೆರಳಿನಲ್ಲಿ ಉಂಗುರವನ್ನಿಟ್ಟುಕೊಂಡಳು. ಕಣ್ಣಲ್ಲಿ ನೀರು ಬಂದವು. ತಾಯಿಯು ಮಗನ ಶ್ರಾದ್ಧವನ್ನು ಮಾಡಿದಳು.

---

# ಎಲೆ ತಿನ್ನುವ ಮನುಷ್ಯರು



ಕೆಲವು ವರುಷಗಳ ಹಿಂದಿನ ಅನುಭವವಿದು. ಆ ಮಾತಿಗೆ ೪-೫ ವರುಷಗಳಾಗಿರಬಹುದು. ನಾನು ಬೋರ್ಡಿಗೆ ಹೋಗಿದ್ದೆ. ಅಲ್ಲಿಯ ಸಮುದ್ರ ಶೋಭೆಯನ್ನು ದಿನಾಲು ನೋಡುತ್ತಿದ್ದೆ.

"ಇಲ್ಲಿಯೇ ಸಮೀಪದಲ್ಲಿರುವ ಆದಿವಾಸಿಗಳ ಊರುಗಳನ್ನು ನೋಡಲು ಬರಬಹುದೇ? ನಡೆ, ಇಲ್ಲೆನಬೇಡ" ಎಂದು ಮಿತ್ರನೊಬ್ಬನೆಂದನು.

"ಹೋಗೋಣ" ಎಂದು ನಾನೆಂದೆ.

ನಾವಿಬ್ಬರೂ ಹೊರಟೆವು. ಮಳೆಗಾಲ ಆದೇ ತಾನೇ ಮುಗಿದಿತ್ತು. ಸುತ್ತುಮುತ್ತಲೂ ಹಸಿರು ಮುರಿಯುವ ಹೊಲಗಳು. ನಡು ನಡುವೆ ಸರವು ಗಳು ನಾಗಮೋಡಿಯಲ್ಲಿ ಹರಿಯುತ್ತಿದ್ದವು. ಒಂದು ಬದಿಗೆ ಹುಲ್ಲುಗಾವಲು ಇತ್ತು.

"ಇದೇನು ಹುಲ್ಲು ಅಲ್ಲವೇ?" ಎಂದು ನಾನು ವಿಚಾರಿಸಿದೆ.

"ನಿಜ ಹೇಳಬೇಕೆಂದರೆ ಇದು ಹೊಲವು. ಹುಲ್ಲಿಗೆ ಬೆಲೆ ಬರುತ್ತದೆಂದು ಹೊಲದೊಡೆಯನು ಹುಲ್ಲನ್ನೇ ಬೆಳೆಯಿಸುತ್ತಿದ್ದಾನೆ. ಮತ್ತು ಹುಲ್ಲು ಬೆಳೆಯಿಸಲು ವೆಚ್ಚವೂ ಬಹಳ ತಗಲುವದಿಲ್ಲ ಒಬ್ಬ ಕಾಯುವವನನ್ನು ಇಟ್ಟರೆ ಸಾಕು" ಎಂದು ಮಿತ್ರನು ಉತ್ತರವಿತ್ತನು.

"ಅತ್ತಕಡೆಗೆ ಹೆಚ್ಚು ಧಾನ್ಯ ಬೆಳೆಯಿರಿ ಎಂಬ ಕೂಗು ಕೇಳಬರುತ್ತಿದ್ದರೆ ಇತ್ತಕಡೆಗೆ ಹುಲ್ಲನ್ನು ಬೆಳೆಯುತ್ತಿದ್ದಾರೆ. ಇದು ಹೇಗೆ?"

"ಅಧಿಕಾರಿಗಳ ಮುಷ್ಟಿ ಮುಚ್ಚಿದರೆ—ಎಲ್ಲವೂ ಸಾಗುತ್ತದೆ."

"ಈ ಭೂಮಿಯನ್ನು ಆದಿವಾಸಿಗಳಿಗೇಕೆ ಕೊಡಬಾರದು?"

"ಆದಿವಾಸಿಗಳಿಗೇನು ಭೂಮಿ ಸಾಗಮಾಡಲು ಬಂದೀತೇ? ನಾಳೆ ಸ್ವರಾಜ್ಯದಲ್ಲಿ ಅವರನ್ನು ಸೈನ್ಯ ಭರತಿಮಾಡುವಾ"

" ಆದಿವಾಸಿಗಳೇನು ಮಾನವರಲ್ಲವೇ ? ನಿಮ್ಮ ಹೊಲಗಳಲ್ಲೂ ಅವರೇ ದುಡಿಯುತ್ತಾರೆ. ನಿಮ್ಮ ಮನೆಗಳಲ್ಲೂ ಅವರೇ ಕಾಯಕಷ್ಟ ಮಾಡುತ್ತಾರೆ. ಅವರಿಗೆ ಎಲ್ಲವೂ ಬರುತ್ತದೆ. ಸೈನಿಕ ಖಾತೆಯಲ್ಲಿ ಸೇರ್ಪಡೆಯಾಗುವ ಹೊತ್ತು ಬಂದರೆ ಎಲ್ಲರೂ ಹೋಗಲೇಬೇಕು. ದೇಶದ ರಕ್ಷಣಾರ್ಥವಾಗಿ ಎಲ್ಲರೂ ಟೊಂಕ ಕಟ್ಟಲೇ ಬೇಕು. ಆದಿವಾಸಿಯರಷ್ಟೇ ಏಕೆ ಹೋಗಬೇಕು ? ಪಾರಸಿಗಳೇಕೆ ಹೋಗಬಾರದು ? ನಾವೂ ನೀವೂ ಏಕೆ ಹೋಗಬಾರದು ? "

ಎಂದು ಮೊದಲಾಗಿ ಮಾತನಾಡುತ್ತ ನಾವು ಸಾಗಿದ್ದೆವು. ಚಿಕ್ಕ ಚಿಕ್ಕ ಗುಡಿಸಲುಗಳು ಕಾಣತೊಡಗಿದವು. ನಾವು ಒಂದು ಗುಡಿಸಲದ ಹತ್ತಿರ ಬಂದೆವು ಗುಡಿಸಲದಲ್ಲಿ ಎರಡು ಭಾಗಗಳಿದ್ದವು. ಒಂದು ಭಾಗದಲ್ಲಿ ಕುರಿಗಳನ್ನು ಕಟ್ಟಲಾಗಿತ್ತು. ಇನ್ನೊಂದರಲ್ಲಿ ಮನುಷ್ಯರು ಇರುತ್ತಿದ್ದರು. ಒಂದು ಕಡೆ ಕುರಿಮರಿಗಳಾದರೆ ಇನ್ನೊಂದು ಕಡೆಯಲ್ಲಿ ಆದಿನಿವಾಸಿಗಳ ಮಕ್ಕಳು. ಮಲಗಿಕೊಳ್ಳಲು ಹರಕಲು ಮುರಕಲವಾದ ಶಿಂದೀ ಚಾಪೆ. ಬಟ್ಟೆಗಳಂತೂ ವಿಶೇಷ ಕಾಣಲಿಲ್ಲ. ಮಣ್ಣಿನ ಗಡಿಗೆ ಮಡಿಕೆಗಳೇ ಮನೆತನದ ಸಂಪತ್ತು. ತರುಣನೊಬ್ಬನು ಜ್ವರ ಬಂದು ಬಳಲುತ್ತಿದ್ದಾನೆ. ನಾನು ಅವನ ಮೈಮುಟ್ಟಿ ನೋಡಿದೆ. ಜ್ವರ ಬಹಳಿದ್ದಿರಬೇಕು ಎನಿಸಿತು. ಹಾಸು-ಹೊದೆಯಲು ಏನೂ ಇಲ್ಲ. ಔಷಧ, ಪಥ್ಯಕ್ಕೂ ಏನೂ ಇಲ್ಲ. ಹಾಲೂ ಹಣ್ಣೂ ಇಲ್ಲ. ಆ ಗುಡಿಸಲದಲ್ಲಿ ನಿರಾಶೆ, ದಾರಿದ್ರ್ಯ, ದೈನ್ಯಗಳ ರಾಜ್ಯವೇ ನೆಲೆಸಿತ್ತು.

ಅಲ್ಲೊಬ್ಬ ಮುದುಕಿಯಿದ್ದಳು. ಅಸ್ಥಿ ಚರ್ಮಗಳು ಮಾತ್ರ ಉಳಿದಿದ್ದವು. ಸಣ್ಣ ತುಂಡೊಂದು ಮಾತ್ರ ಮೈಮೇಲಿತ್ತು ಆವಳೆದುರು ಒಂದು ಹರಿವಾಣವಿತ್ತು. ಆ ಹರಿವಾಣದಲ್ಲಿ ಹೆಚ್ಚಿದ ಎಲೆಗಳಿದ್ದವು.

" ಆ ಎಲೆಗಳೇತಕ್ಕೆ ? " ಎಂದು ನಾನು ವಿಚಾರಿಸಿದೆ.

" ಅದನ್ನು ಬೇಯಿಸಿ ತಿನ್ನುತ್ತೇವೆ." ಎಂದು ಅವಳೆಂದಳು.

" ಬರೀ ಎಲೆಗಳನ್ನೇ ? ಅದರಲ್ಲಿ ಬೇಳೆ, ಅಕ್ಕಿ, ಕಣಕ ಅಥವಾ ಮತ್ತೇನಾದರೂ ಕೂಡಿಸುತ್ತಿರಬೇಕಲ್ಲವೇ ? "

" ಅಣ್ಣಾ, ಏನೂ ಇಲ್ಲ. ನಮಗೆಲ್ಲಿಂದ ಬರಬೇಕು ಅಕ್ಕಿ ಬೇಳೆ ? ನಮಗೇನು ಭೂಮಿ ಕಾಣಿಗಳಿವೆಯೇ ? ಸ್ವಲ್ಪ ಹೊಲ ಖಂಡಮಕ್ತೆ

ಹಿಡಿದಿರುತ್ತೇವೆ. ಆ ನೆಲ್ಲು ಎಷ್ಟು ದಿನಗಳ ವರೆಗೆ ಸಾಲಬೇಕು ? ಕೂಲಿ ಕುಂಬಳಿ ದೊರೆತರೆ ದುಡಿಯಬೇಕು. ಈ ಎಲೆಗಳನ್ನು ತಿನ್ನಬೇಕು. ಆಡು, ಕುರಿಗಳು ಎಲೆಗಳನ್ನು ತಿನ್ನುವದಿಲ್ಲವೇ ? ನಾವೂ ಹಾಗೆಯೇ ಎಲೆಗಳಾದರೂ ಸಾಕಷ್ಟು ದೊರೆಯುತ್ತವೆ. ಅದೂ ದೇವರ ಕೃಪೆಯೆಂದೇ ಹೇಳಬೇಕು. ನಾಳೆ ಜಮೀನುದಾರರು ಈ ಎಲೆಗಳನ್ನೂ ತೆಗೆದುಕೊಳ್ಳಬಾರದು ಎಂದು ಹೇಳಿದರೂ ಹೇಳಿದರೇ. ಆ ಮೇಲೆ ಹವೆಯನ್ನು ತಿಂದು ಕಾಲಹರಣ ಮಾಡಬೇಕಾಗುವದು”

ಮುದುಕಿಯ ಆ ಶಬ್ದಗಳು ಬಂದೂಕಿನ ಗುಂಡುಗಳಂತೆ ಹೃದಯುವನ್ನು ಹೊಕ್ಕವು. ನಾನು ನನ್ನ ತಲೆಯನ್ನು ಕೆಳಹಾಕಿದೆನು. ಕ್ಷಣಹೊತ್ತು ಅಲ್ಲಿ ನಿಂತು ಮತ್ತೊಂದು ಗುಡಿಸಲದ ಕಡೆಗೆ ಹೊರಳಿದೆ.

ಅಲ್ಲಿಯೂ ಅದೇ ದೃಶ್ಯ ಅಲ್ಲಿ ಅಕ್ಕತಂಗಿಯರಿಬ್ಬರು ಎಂಥದೋ ಕಂದಮೂಲಗಳನ್ನು ಹೆಚ್ಚುತ್ತಿದ್ದರು. ಆ ಕಂದಮೂಲವು ಎಂಥದೋ ಏನೋ ? ಅದು ಗೆಣಸಾಗಿರಲಿಲ್ಲ. ಅದು ಬೀಟಗಡ್ಡೆಯೂ ಅಲ್ಲ. ಬಟಾಟಿಯೂ ಅಲ್ಲ. ಉಳ್ಳಾಗಡ್ಡೆಯೂ ಅಲ್ಲ. ಅದು ಎಂಥ ಗಡ್ಡೆಯೋ ಏನೋ ಯಾರಿಗೆ ಗೊತ್ತು !

“ ಅದೆಂಥ ಗಡ್ಡೆ ? ” ಎಂದು ನಾನು ವಿಚಾರಿಸಿದೆ.

“ ಅಡವಿಯಿಂದ ತಂದಿದ್ದೇವೆ ”

“ ಸವಿಯಾಗಿದೆಯೇ ? ನೋಡೋಣ ”

ಆ ಗಡ್ಡೆಯ ತುಣಕೊಂದನ್ನು ಮುರಿದು ನಾನು ಬಾಯಲ್ಲಿ ಹಾಕಿಕೊಂಡೆ ಅದು ಕಹಿ ಹತ್ತಿತು.

“ ಕಹಿ ಹತ್ತುವ ಈ ಗಡ್ಡೆಯನ್ನು ತಿನ್ನುವಿರಾ ? ಗೆಣಸು, ಬಟಾಟಿ ತರುವದಿಲ್ಲೇಕೆ ?

“ ಅಣ್ಣಾ, ಬಡವರಿಗೆ ಚೇಷ್ಟೆಯನ್ನು ಮಾಡಬಾರದು. ಬಟಾಟಿ. ಗೆಣಸುಗಳು ನಿಮ್ಮಂಥವರಿಗೆ. ಅಕ್ಕಿ, ಜೋಳ, ಗೋದಿ ನಿಮಗೆ ಅವು ನಿಮ್ಮ ತಿನಸುಗಳು. ನಮಗೆಲ್ಲಿಂದ ಬರಬೇಕು ? ನಮಗೆ ಅವು ತಡೆಯುವದಾದರೂ ಹೇಗೆ ? ಅಡವೀ ಮನುಷ್ಯರಿಗೆ ಅಡವೀ ಎಲೆಗಳು, ಅಡವೀ ಕಂದಮೂಲಗಳು”

“ ಅವು ನಿಮಗೆ ಕಹಿ ಹತ್ತುವದಿಲ್ಲವೇ ? ”

" ಈ ಗಡ್ಡೆಗಳನ್ನು ಇಡೀ ರಾತ್ರಿ ಕುದಿಸಿ ಗಡಿಗೆಯಲ್ಲಿಡುತ್ತೇನೆ. ಆದರ ರಾಪ್ರ ಮುಂಜಾನೆ ಕಡಿಮೆಯಾಗುತ್ತದೆ. ಕಹಿ ಕಡಿಮೆಯಾಗುತ್ತದೆ. ಆ ಮೇಲೆ ನಾವದನ್ನು ತಿನ್ನುತ್ತೇವೆ. ಒಮ್ಮೆ ರೂಢಿಯಾಯಿತೆಂದರೆ ತೀರಿತು. ಒಗ್ಗಿ ಹೋಗುತ್ತದೆ "

ನಾನು ಆ ಶ್ರಮಜೀವಿಗಳಿಗೆ ನಮಸ್ಕಾರ ಮಾಡಿ ಹೊರಟೆ. ಅವರು ಆದಿವಾಸಿ ಜನರು. ಅವರೇ ಒಡೆಯರು ಅವರ ಹೊಲಗಳು ಅವರಿಗೆಂದು ದೊರೆಯಬೇಕು ? ಎಂದು ಚನ್ನಾಗಿ ಇರಬಹುದು ? ಗಟ್ಟಿಮುಟ್ಟೆಯಾಗಿ ಎಂದು ಬದುಕುವರು? ಅವರ ಮಕ್ಕಳು ಮರಿ ಎಂದು ಚಕ್ಕಂದದಿಂದಿರಬಹುದು? ಮನೆಮಾರು ಜ್ಞಾನ-ವಿಜ್ಞಾನ ಕಲೆ, ಆನಂದ ವಿಶ್ರಾಂತಿ ಮೊದಲಾದವೆಲ್ಲ ಎಂದು ಅವರಿಗೆ ದೊರೆಯುವವು ? ತಲೆ ತಲಾಂತರಗಳಿಂದ ಈ ಜನತೆಯು ಅರೆಹೊಟ್ಟೆಯಿಂದ ಬದುಕುತ್ತ ಬಂದಿದೆ. ಉಪವಾಸ ಬೀಳುವ ಜನರಿಗೆ ಸದ್ಗುಣಗಳ ಕಥೆಯನ್ನು ಹೇಳುತ್ತ ಕೂಡ್ರುವದು ಬೇಡ. ಅವರಿಗೆ ಮೊದಲು ಹೊಲಗಳನ್ನು ಕೊಡಿರಿ. ಆ ಮೇಲೆ ಸೆರೆ ಕುಡಿಯಬೇಡಿರಿ. ಎಂದು ಉಪದೇಶಿಸಿರಿ. ಕೇವಲ ನೈತಿಕ ಕಥೆಗಳು ಅವರಿಗೆ ನಿರುಪಯುಕ್ತವಾಗುವವು. ಉಪವಾಸ ಬೀಳುವವರಿಗೆ ಅನ್ನ ಕೊಡುವದೆಂದರೆ ಅವರಿಗೆ ಧರ್ಮವನ್ನು ಕಲಿಸಿದಂತಾಗುತ್ತದೆಂದು ಭಗವಾನ್ ಬುದ್ಧನು ಅನ್ನುತ್ತಿದ್ದನು. ಉಪವಾಸ ಬೀಳುವವರ ಧರ್ಮಜ್ಞಾನದ ಭಾಷೆಯು ಅನ್ನವೇ ಆಗಿದೆ. ಇದು ನಮ್ಮ ಲಕ್ಷ್ಯದಲ್ಲಿ ಬರುವದೆಂದು ? ಈ ಲಕ್ಷಾವಧಿ ಜೀವಿಗಳು ಎಂದು ನಗಬೇಕು ? ಎಂದು ನಲಿದಾಡಬೇಕು ?

" ನಾವು ತಿರುಗೋಣ. ಇವೆರಡೇ ದೃಶ್ಯಗಳು ನನ್ನ ಮರಣದವರೆಗೆ ಸಾಕು. ಸ್ವರಾಜ್ಯದಲ್ಲಿ ಏನು ಕೊಡಬೇಕು – ಎಂಬುದರ ಜ್ಞಾನವು ಇಲ್ಲಿಗೆ ಬಂದ ಮೇಲೆ ನನಗಾಯಿತು ನಡೆ, ನಾವಿನ್ನು ಹೋಗೋಣ " ಎಂದು ನಾನೆಂದೆ.

ಹೀಗೆ ವಿಚಾರ ಮಾಡಮಾಡುತ್ತ ನಾವು ತಿರುಗಿ ಬಂದೆವು.

---

# ರಾಮಕೃಷ್ಣ



ಸಂಜೆಯ ಹೊತ್ತು. ನಾನು ಮಹಾಲಕ್ಷ್ಮಿ ಸ್ಟೇಶನದಲ್ಲಿದ್ದೆ. ಗಾಡಿಗಳು ತುಂಬಿಬರುತ್ತಿದ್ದವು. ಒಳಗೆ ಸೇರಲು ಸಾಧ್ಯವಿರಲಿಲ್ಲ. ಬಾಗಿಲದಲ್ಲಿ ನಿಲ್ಲುವ ಧೈರ್ಯ ನನಗಿದ್ದಿಲ್ಲ. ಅನುವಿದ್ದಾಗ ಗಾಡಿಗೆ ಹೋಗುವದೆಂದು ನಿರ್ಧರಿಸಿ ನಾನು ಒಂದು ಬಾಕಿನ ಮೇಲೆ ಕೂತುಕೊಂಡೆ. ಅಷ್ಟರಲ್ಲಿ ೧೫–೧೬ ವರ್ಷದ ತರುಣ ಹುಡುಗನೊಬ್ಬ ನನ್ನ ಕಡೆ ಬಂದ. ಅವನ ಮೈಮೇಲೆ ಹರಕು ಅರಿವೆ ಇದ್ದವು. ಅವನ ಎತ್ತರವಾದ ದೇಹವು ಸೊರಗಿತ್ತು ಕಣ್ಣಲ್ಲಿ ಕರುಣೆ ತೋರುತ್ತಿತ್ತು. ಅವನ ತುಟಿ ನಡಗುತ್ತಿದ್ದವು. ನಾನು ಅವನತ್ತ ನೋಡುತ್ತ ಕೂತೆ. ಅವನೂ ನನ್ನತ್ತ ನೋಡುತ್ತಿದ್ದ. ಇಬ್ಬರ ಹೃದಯಗಳು ಭೆಟ್ಟಿಯಾಗಬಯಸುತ್ತಿದ್ದವು. ಅವನು ನನ್ನ ಕಣ್ಣಲ್ಲಿ ಸಹಾನುಭೂತಿಯನ್ನು ಶೋಧಿಸುತ್ತಿದ್ದನು. ನಾನು ಅವನ ಕಣ್ಣಲ್ಲಿ ಪ್ರಾಮಾಣಿಕತೆ ಹುಡುಕುತ್ತಿದ್ದೆನು.

" ದಾದಾ........" ಅವನು ಉಚ್ಚರಿಸಿದನು.

" ಏನು ಬೇಕು ನಿನಗೆ? ಕಣ್ಣಲ್ಲಿ ನೀರೇಕೆ?"

" ನಾನು ನಿರುದ್ಯೋಗಿ. ಹೊಟ್ಟೆಗೆ ಸಿಗಬಹುದೆಂದು ಮುಂಬಯಿಗೆ ಬಂದೆ. ನಾಲ್ಕು ದಿನಗಳಾದವು. ನಾನು ಉಪವಾಸ ಇದ್ದೇನೆ. ನಾಲ್ಕು ಆಣೆ ಕೊಡಿರಿ. ಏನಾದರೂ ತಿನ್ನುವೆ."

" ನೀನು ಎಲ್ಲಿಯವನು?"

" ನಾನು ದೂರಿನವನು. ಧಾಮಣಿ ನನ್ನ ಊರು. ಮನೆಯಲ್ಲಿ ತಾಯಿ ತಂದೆಯರಿದ್ದಾರೆ ಸೋದರರಿದ್ದಾರೆ. ಆದರೆ ತಿನ್ನಲಿಕ್ಕೆ ಇಲ್ಲ. ನಮ್ಮ ಒಡೆತನದ ಭೂಮಿ ಇಲ್ಲ, ಯಾರಿಗೂ ಕೆಲಸವಿಲ್ಲ. ' ಹೋಗು ಮುಂಬಯಿಗೆ,

ಹೊಟ್ಟೆಗಾಗಿ ಗಳಿಸು, ಉಳಿದರೆ ನಮಗೆ ಕಳಿಸು' ಎಂದು ಯಾವಾಗಲೂ ತಂದೆ ಅನ್ನುತ್ತಿದ್ದ. ಅದಕ್ಕೆ ಊರು ಬಿಟ್ಟು ಇಲ್ಲಿ ಬಂದೆ. ಯಾರ ಗುರುತೂ ಇಲ್ಲ. ಹೀಗೆ ಅಡ್ಡಾಡುತ್ತಲಿದ್ದೇನೆ."

ಮುಂದೆ ಅವನಿಗೆ ಮಾತನಾಡಲು ಬರಲಿಲ್ಲ. ನಾನು ನಾಲ್ಕು ಆಣೆ ತೆಗೆದುಕೊಟ್ಟೆ.

"ಈ ಜನರು ಮೋಸಮಾಡುತ್ತಾರೆ." ಅಲ್ಲಿಯೇ ನಿಂತಿದ್ದ ಗೃಹಸ್ಥನೊಬ್ಬನು ಅಂದನು.

"ಮೋಸಮಾಡಲಿ. ದೊಡ್ಡ ದೊಡ್ಡ ಕಾರಖಾನೆದಾರರು ಮೋಸ ಮಾಡುವದಿಲ್ಲವೇ? ವ್ಯಾಪಾರಸ್ಥರು ಮೋಸ ಮಾಡುವದಿಲ್ಲವೇ? ದೊಡ್ಡವರು ಮೋಸಮಾಡಿದರೆ ಏನೂ ಅಡ್ಡಿ ಇಲ್ಲ" ನಾನು ಅಂದೆ.

"ದಾನವನ್ನು, ಸತ್ಪಾತ್ರರಿದ್ದವರಿಗೆ ಮಾಡಬೇಕು" ಆ ಗೃಹಸ್ಥ ಧರ್ಮ ಹೇಳಹತ್ತಿದ್ದ.

ಆ ಹುಡುಗನ ಕಣ್ಣು ಅವರಿಗೆ ಉತ್ತರ ಕೊಡುತ್ತಲಿದ್ದವು. ನನಗೆ ಖಲೀಲ ಗಿಬ್ರಾನನ ಮಾತಿನ ನೆನಪು ಬಂದಿತು. ದೇವರಿಂದ ಆಯುಷ್ಯದ ದೇಣಗಿ ಪಡೆಯಲು ಪಾತ್ರನಿದ್ದವನು ನಾಲ್ಕಾಣೆ ಪಡೆಯಲು ಅರ್ಹನಲ್ಲವೇ? ಯಾರ ಉಪಯೋಗ ಈ ಜಗತ್ತಿನಲ್ಲಿಲ್ಲ? ಅಂಥವರನ್ನು ಆ ವಿಶ್ವಶಕ್ತಿಯು ಏತಕ್ಕೆ ಈ ಜಗತ್ತಿನಲ್ಲಿಡುವದು?

"ನಿಮ್ಮ ಉಪಕಾರ........" ಆ ಹುಡುಗ ಅಂದ.

"ಅದೆಂಥ ಉಪಕಾರ, ಮಗು? ತನ್ನ ಹತ್ತಿರ ಇದ್ದದ್ದನ್ನು ಎರಡನೆಯವರಿಗೆ ಕೊಡುವದೆ ಧರ್ಮ. ವಿಶ್ವವೆಲ್ಲ ತಮ್ಮ ಕುಟುಂಬವೆಂಬ ಭಾವನೆ ಬೆಳೆಯಬೇಕಾಗಿದೆ. ನಿನ್ನಂಥ ಸುಂದರ ಉತ್ಸಾಹಿ ಹುಡುಗರಿಗೆ ಕೆಲಸ ಸಿಗಬಾರದೆಂದರೆ ಇದಕ್ಕಿಂತ ಹೆಚ್ಚಿನ ಅಧರ್ಮ ಯಾವುದು? ಕೆಲಸ ಮಾಡಲು ಸಿದ್ಧರಿರುವವರಿಗೆ ಕೆಲಸ ಸಿಗುವದಿಲ್ಲ ಅಲ್ಲಿ ಎಲ್ಲಿಯ ಸುಖ, ಸೌಭಾಗ್ಯ?" ಇಂದಿನ ಸಮಾಜದ ರಚನೆಯಲ್ಲಿ ಬದಲಾವಣೆಯಾಗಬೇಕು. ಸಮಾಜವಾದ ಬೇಕು." ಎಂದೆ.

"ಸಮಾಜವಾದವೆಂದರೆ ಒಂದು ದೊಡ್ಡ ಸೋಗು!" ಆ ಗೃಹಸ್ಥನೆಂದ.

"ಬರತೇನೆ, ದಾದಾ." ಎಂದು ಆ ಹುಡುಗ ಹೋದ.

× × × ×

ಎರಡು ಮೂರು ತಿಂಗಳಗಳಾದವು. ಮಧ್ಯಾಹ್ನದ ಸಮಯ ಚಿಂಚಪ್ರೋಕಳಿ ಸ್ಟೇಶನಕ್ಕ ಹೋಗಿದ್ದೆ. ಒಂದು ಬಾಕಿನ ಮೇಲೆ ಒಬ್ಬ ತರುಣ ಮಲಗಿದ್ದ. ಅದೇ ಹರಕ ಅಂಗಿ ಮೈಯಲ್ಲಿತ್ತು. ಅದೆ ಕರುಣೆಯಿಂದ ತುಂಬಿದ ಮುಖ. ನಾನು ಹುಡುಗನನ್ನು ಗುರುತಿಸಿದೆ. ಅವನ ಹತ್ತರ ಹೋದೆ ಇವನು ಉಂಡಿದ್ದಾನೆಯೋ ಎಂಬ ವಿಚಾರ ಬಂದಿತು. ಊಟ ಮಾಡದಿದ್ದರೆ? ಜೇಬಿನಲ್ಲಿ ಕೈ ಹಾಕಿದೆ ಎರಡೇ ಆಣೆ ಇದ್ದವು. ನನಗೆ ವ್ಯಸನವಾಯಿತು.

ಅಷ್ಟರಲ್ಲಿ ಒಬ್ಬ ಲಠ್ಠ ಗೃಹಸ್ಥನು ಬಂದನು. ಶಿಳುವು ಧೋತರ ಉಟ್ಟಿದ್ದನು. ಮೈಯಲ್ಲಿ ಉದ್ದ ಕೋಟು ಇತ್ತು. ಬೊಟ್ಟುಗಳಲ್ಲಿ ಉಂಗುರ, ಬೂಟಿಗೆ ಅದೇ ಪಾಲಿಶ ಮಾಡಿಸಿದ್ದನು. ಆ ಗೃಹಸ್ಥ ಆ ಬಾಕಿನ ಹತ್ತರ ಬಂದ ಕೂಡಲಿಕ್ಕೆ ಸ್ಥಳ ಬೇಕಾಗಿತ್ತು. ಹೇಗೋ ಕೂಡಲಿಕ್ಕೆ ಬರುತ್ತಿತ್ತು. ಆದರೆ ಅಲ್ಲಿ ಕೂಡುವದೆಂದರೆ ಅವರಿಗೆ ಅವಮಾನವೆನಿಸುತ್ತಿತ್ತು.

' ಏ ಮಲಗಾವನ ಏಳು ಇದೇನು ಮಲಗುವ ಸಮಯವೇ? ಮಲಕೊಂಡಾನ ನಾಚಿಗೆ ಇಲ್ಲ, ಏಳು." ಎಂದು ಒದರಿದ.

"ಮಲಕೊಳ್ಳಲಿ ಬಿಡರಿ" ನಾನು ಅಂದೆ.

"ಇದೇನು ಮಲಗುವ ವೇಳೆಯೇ. ರಾತ್ರಿ ಕಳವು, ಹಗಲು ನಿದ್ದಿ. ಇದ್ದದ್ದ ಇವರದು. ಈ ಬಾಕ ಅಂದರ ಇವರ ಅಪ್ಪನ ಗಂಟೇನು." ಆ ಗೃಹಸ್ಥ ಕೂತಕೂತು ಬಡಬಡಿಸುತ್ತಿದ್ದ. ಆ ಹುಡುಗ ಎದ್ದ, ನನ್ನ ಕಡೆ ನೋಡಿದ ಮತ್ತು ಎದ್ದು ನಿಂತ.

"ದಾದಾ, ನೀವು ಕೂಡಿರಿ" ಎಂದು ಅವನು ನನಗೆ ಆದರದಿಂದ ಅಂದ.

"ಏನಾರ ತಿಂದಿ ಏನು ಇವತ್ತ?" ಎಂದು ನಾನು ಕೇಳಿದೆ.

"ಹೌದ್ರಿ, ಈಗ ನನಗ ಗಿರಣಿಯೊಳಗ ಕೆಲಸ ಸಿಕ್ಕಿದೆ. ರಾತ್ರಿ ಕೆಲಸಕ್ಕೆ ಹೋಗತೇನಿ ಸಾವಕಾಶ ಕೆಲಸ ಕಲಿತೇನಿ. ಈಗ ಸ್ವಲ್ಪ ಪಗಾರ ಸಿಗತದ.

ಮನಿಗೆ ಒಂದು ಹತ್ತು ರೂಪಾಯಿ ಕಳಿಸಿದೆ. ಮನಿಆರ್ಡರ ಕಳಿಸಿದ ದಿವಸ ಬಹಳ ಆನಂದವಾಯಿತು."

"ಇರೋದು ಎಲ್ಲಿ? ಮಲಗೋದು ಎಲ್ಲಿ?" ನಾನಂದೆ.

"ಹೀಂಗ ಇರತೇನಿ ಸ್ಟೇಶನ ನನ್ನ ಮನಿ ಸಾರ್ವಜನಿಕ ನಳದ ಮೇಲೆ ಸ್ನಾನ, ಅರಿವೆ ಒಗೆದು ಒಣಗಿಸುವದು. ಸ್ಟೇಶನಿನ ಬಾಕಿನ ಮೇಲೆ ಮಲಗತೇನಿ. ಇಲ್ಲ್ಯಾರ ಎಲ್ಲಿ ಸುಖದಿಂದ ನಿದ್ದಿ ಸಿಗತದ? ಒಮ್ಮೊಮ್ಮೆ ರಾಣಿಬಾಗಕ್ಕೆ ಹೋಗಿ ಮಲಗತೇನಿ. ಸ್ಟೇಶನದಾಗ ದೊಡ್ಡವರಿಗೆ ಕೂಡಲಿಕ್ಕೆ ಜಾಗ ಬೇಕು. ಅವರು ಈ ಹುಡುಗನಿಗೆ ರಾತ್ರಿ ನಿದ್ದೆ ಹತ್ತಿರಲಿಕ್ಕಿಲ್ಲ ಎಂದು ವಿಚಾರ ಮಾಡುವದಿಲ್ಲ. ಯಾರ ಕೇಳುವರು, ದಾದಾ, ನಮುಗ?"

ಆ ಹುಡುಗನ ಮಾತು ಎಷ್ಟು ಸರಳ ಮತ್ತು ಸಾದಾ ಅವನಿಗೆ ಜಗತ್ತಿನ ಮೇಲೆ ಸಿಟ್ಟಿಲ್ಲ. ಸ್ಟೇಶನದ ಮೇಲೆ ಬಾಳೆಹಣ್ಣಿದ್ದವು. ನಾ ಹೋಗಿ ಎರಡಾಣೆ ಬಾಳೆಹಣ್ಣು ತಂದೆ.

"ತಗೊ"

"ಯಾಕೆ ತಂದಿರಿ?"

"ಮತ್ತೇನು ಕೊಡಲಿ ನಿನಗೆ?"

"ನೀವು ಅಂದು ಕೊಟ್ಟ ನಾಲ್ಕಾಣೆ ಲಕ್ಷ ರೂಪಾಯಿಯಷ್ಟಾದವು ನನಗೆ. ಅಂದು ನಾನು ನಿತ್ರಾಣನಾಗಿದ್ದೆ. ನೀವು ಅನ್ನದಾತರಾಗಿ ಭೆಟ್ಟಿಯಾದಿರಿ. ನೀವು ಸಹಾನುಭೂತಿ ತೋರಿ ಎಲ್ಲವನ್ನು ಕೊಟ್ಟರಿ. ಅಲ್ಲವೇ? ಬಡವರ ಬಗ್ಗೆ ಸಹಾನುಭೂತಿ ಯಾರಿಗೆ ಅದೆ? ಅವರ ಸುಖ ದುಃಖದ ವಿಚಾರ ಮಾಡುವವರಾರು? ಬಡವರ ಬವಣೆ ಎಂದು ತೀರುವದು?"

"ಸಮಾಜದಲ್ಲಿ ಸಾಮ್ಯ ಬಂದಾಗ."

"ಅದೆಂದು ಬರುವದು?"

"ನೀವು ತಂದಾಗ. ಅದೇನು ಮೇಲಿಂದ ಬೀಳುವದಿಲ್ಲ. ನಿನ್ನಂಥ ತರುಣರು ಅಭ್ಯಾಸ ಮಾಡಬೇಕು, ಸಂಘಟನೆಯಲ್ಲಿ ಸೇರಬೇಕು. ಊರಿಗೆ ಹೋದರೆ ಅಲ್ಲಿಯೂ ಈ ವಿಚಾರ ಒಯ್ಯಬೇಕು ಅಲ್ಲವೇ? ನಮುಗಾಗಿ ಎರಡನೆ ಯುವರು ಏನು ಮಾಡುವರು?

"ನೀವು ನನಗೆ ಸುಲಭವಾದ ಪುಸ್ತಕ ಕೊಡುವಿರಾ?"

"ನೀನು ಎಷ್ಟು ಕಲಿತಿರುವಿ?"

"ನಾಲ್ಕು ಪುಸ್ತಕ ಓದೇನಿ."

"ಓದು, ಜನವಾಣಿ, ಸಾಧನಾ."

"ನೀವು ಎಲ್ಲಿ ಭೆಟ್ಟಿಯಾಗಬಹುದು."

ನಾನು ನನ್ನ ಪತ್ತೆ ಆವನಿಗೆ ಕೊಟ್ಟೆ. "ನಿನ್ನ ಹೆಸರೇನು?"

"ರಾಮಕೃಷ್ಣ"

"ಬರತೇನಿ ರಾಮಕೃಷ್ಣ ಸುಖದಿಂದ ಬಾಳು."

"ನಿಮ್ಮ ಸಮಾಜವಾದ ಬಂದಾಗ ಸುಖಿಯಾಗುವೆ. ಆಗ್ಗೆ ಅಲ್ಲವೇ ಎಲ್ಲ ಸಮಸ್ಯೆಗಳ ಪರಿಹಾರವಾಗುವದು." ಎಂದು ಅವನು ನನ್ನ ಕಡೆ ನೋಡಿ ಅಂದನು.

---

# ಶುಕ್ರೀ



ದ್ವಿತೀಯ ಮಹಾಯುದ್ಧವು ಆದೇ ಸಮಾಪ್ತವಾಗಿತ್ತು. ಅಣುಬಾಂಬು ಒಗೆದು ಸುಸಂಸ್ಕೃತ ಅಮೇರಿಕೆಯು ಜಪಾನದ ಪಟ್ಟಣಗಳನ್ನು ಕ್ಷಣ ಮಾತ್ರದಲ್ಲಿ ಸ್ಮಶಾನದಂತೆ ಮಾಡಿತ್ತು. ಮುಂದುವರಿಯುತ್ತಿದ್ದ ಯುದ್ಧವು ಒಮ್ಮೆಲೆ ನಿಂತುಬಿಟ್ಟಿತು. ಅಣುಬಾಂಬಿನ ಉಪಕಾರವೆಂದು ಯಾರೋ ಮುತ್ಸದ್ದಿಗಳು ಉದ್ಗಾರ ತೆಗೆದರು. ಮಹಾಯುದ್ಧದ ಕಾಲದಲ್ಲಿ ಸರಕಾರಕ್ಕೆ ನೆರವಾಗಲು ಅನೇಕಾನೇಕ ಜನರು ಟೊಂಕಕಟ್ಟಿದ್ದರು. ಬ್ರಿಟಿಶರ ಸರ್ವಸ್ವೀ ಸತ್ತೆಯು ಅವರ ರಕ್ಷಣಾರ್ಥವಾಗಿ ಸದೈವ ಸನ್ನದ್ಧವಾಗಿತ್ತು. ಕಾರಖಾನೆ ದಾರರು, ಜಮೀನುದಾರರೇ ಮೊದಲಾದವರು ಚೈನಿಯಲ್ಲಿ ಕಾಲಕಳೆಯು ತ್ತಿದ್ದರು; ಅಪರಂಪಾರ ಲಾಭದಿಂದ ಮೆರೆಯುತ್ತಿದ್ದರು. ಧನಜೀಭಾಯಿಯ ಐಟನ್ನಂತೂ ವಿಚಾರಿಸುವದೇ ಬೇಡ. ಅವನು ಸೈನಿಕ ಖಾತೆಗೆ ಮೇವನ್ನು ಪೂರೈಸುತ್ತಿದ್ದನು. ಅಲ್ಲಲ್ಲಿಗೆ ಸೈನಿಕರಿಗಾಗಿ ಹಾಲಿನ ಕೇಂದ್ರಗಳಿದ್ದವು. ಅಲ್ಲಿ ಆಕಳು-ಕರುಗಳಿದ್ದವು. ಅವುಗಳ ವೈಭವವೆಂಥದು! ಎಷ್ಟು ವ್ಯವಸ್ಥೆ! ಅಮೇರಿಕೆಯ ಸೈನಿಕರಿಗೆ ನಿಃಸತ್ವ ಹಾಲನ್ನು ಒದಗಿಸಿದರೆ ನಡೆಯುವ ಬಗೆ ಹೇಗೆ? ಭಾರತದೊಳಗಿನ ಜನರು ಬೇನೆಬೇಸರಿಕೆಗಳಿಗೆ ಈಡಾಗಿ ಮರಣ ಕ್ಕೀಡಾಗುತ್ತಿದ್ದರು. ಅವರಿಗೆ ಮನೆಮಾರು ಕೇಳಬೇಡಿ. ಹೊಟ್ಟೆ ತುಂಬ ಅನ್ನವಂತೂ ಇಲ್ಲವೇ ಇಲ್ಲ. ಆದರೆ ಸರಕಾರೀ ಹಾಲಿನ ಕೇಂದ್ರಗಳಲ್ಲಿ ಅಮೃತವೇ ದೊರೆತು, ಅವುಗಳು ಪ್ರತ್ಯಕ್ಷ ಸ್ವರ್ಗವೇ ಆಗಿದ್ದವು.

ಧನಜೀಭಾಯಿಯು ಕುಬೇರನೇ ಆಗಿದ್ದನು. ಅಸಂಖ್ಯಾತ ಮೇವಿನ ಬಣವಿಗಳು ಅವನ ವಶದಲ್ಲಿದ್ದವಷ್ಟೇ ಅಲ್ಲದೆ, ಕಾಳುಕಡಿ ಬೆಳೆಯುವ ಭೂಮಿ ಗಳಲ್ಲಿ ಸಹ ಮೇವನ್ನು ಬೆಳೆಯಿಸುತ್ತಿದ್ದನು. ಅಧಿಕಾರಿಗಳಿಗೆ ಅವನು ಹಣವನ್ನು

ಸೂರೆಮಾಡುತ್ತಿದ್ದನು. ಆದರಿಂದ ಆವನನ್ನು ಹಿಡಿಯುವವರೇ ಇರಲಿಲ್ಲ. ಆವನು ಸುಗ್ಗಿಯ ಕಾಲದಲ್ಲಿ ಹುಲ್ಲು ಕೊಯ್ಯಲು ಆದಿವಾಸೀ ಕೂಲಿಗಳನ್ನು ಹಚ್ಚುತ್ತಿದ್ದನು. ಆದರೆ ಹೊತ್ತಿಗೆ ಸರಿಯಾಗಿ ಕೂಲಿಯನ್ನೇ ಅವರಿಗೆ ಕೊಡುತ್ತಿರಲಿಲ್ಲ. ಒಂದು ರೂಪಾಯಿ ಎಂದು ಗೊತ್ತುಮಾಡಿ ಎಂಟಾಣೆಯನ್ನು ಅವರ ಕೈಗೆ ಹಚ್ಚುತ್ತಿದ್ದನು! ಸರಕಾರಿಯ ಕೆಲಸವಿದು; ಎಚ್ಚರಿಕೆ ಇರಲಿ; ಪ್ರಸಂಗಬಿದ್ದರೆ ಸೆರೆಮನೆಗೆ ಕಳಿಸೇನು ಎಂದು ಬೆದರಿಕೆಯ ಭಾಷೆಯನ್ನು ಪಯೋಗಿಸುತ್ತಿದ್ದನು.

ಮಹಾಯುದ್ಧವು ಕೊನೆಗಂಡಿದ್ದರೂ ಇನ್ನೂ ಭಾರತದಲ್ಲಿ ಪರಕೀಯ ಸೈನ್ಯವು ಕಾಲ್ಕಿತ್ತಿರಲಿಲ್ಲ. ಒಮ್ಮೆಲೆ ಹಡಗಗಳು ಹೇಗೆ ದೊರೆಯಬೇಕು? ಸಾವಕಾಶವಾಗಿ ಬಿಳಿ ಸಿಪಾಯರು ವಿಲಾಯತಿಗೂ, ಅಲ್ಲಿಂದ ಆಸ್ಟ್ರೇಲಿಯಾಕ್ಕೂ, ನಡುನಡುವೆ ಅಮೇರಿಕೆಗೂ ಕಳುಹಲ್ಪಡುತ್ತಿದ್ದರು. ವಿಜಯವು ಪ್ರಾಪ್ತವಾಗಿತ್ತು. ಅವರ ಸ್ವೈರಾಚಾರಕ್ಕೆ ಮೇರೆಯೇ ಉಳಿದಿರಲಿಲ್ಲ. ಪಟ್ಟಣದೊಳಗಿನ ಎಲ್ಲಾ ಒಳ್ಳೇ ಕಾಯಿಪಲ್ಲವು ಮೊದಲು ಅವರ ಬಾಯಿಗೆ ಬೀಳುತ್ತಿತ್ತು. ಹಾಲಿನ ಕೇಂದ್ರದ ಹಾಲು ಅವರಿಗೆ ಸಾಲದಾಗುತ್ತಿತ್ತು. ಪಟ್ಟಣದೊಳಗಿನ ಹಾಲೆಲ್ಲವೂ ಅವರಿಗೇ ಮೀಸಲಾಗಿತ್ತು. ಅವರ ಸಲುವಾಗಿ ಶ್ರೇಷ್ಠವಾದ ಗೋದಿ, ಸಾಕಷ್ಟು ಸಕ್ಕರೆ ಪೂರೈಸಲಾಗುತ್ತಿತ್ತು. ಅವರ ಜೀವದ ಮೇಲೆಯೇ ರಾಜ್ಯಸಾಮ್ರಾಜ್ಯಗಳು ನಡೆಯುತ್ತಿದ್ದವು.

ಧನಜೀಶೇಟನ ಮೇಲಿನ ವ್ಯಾಪಾರವು ಇನ್ನೂ ಊರ್ಜಿತಾವಸ್ಥೆಯಲ್ಲಿಯೇ ಇತ್ತು. ಇನ್ನೂ ಬ್ರಿಟಿಶರ ಸತ್ತಾಧಿಕಾರವು ಜೀವಂತವಾಗಿತ್ತು. ಕಾಂಗ್ರೆಸ್ಸಿನ ಮಹಾನ್ ಮುಂದಾಳುಗಳು ಇನ್ನೂ ಅಹಮ್ಮದನಗರದ ಕಿಲ್ಲೆಯಲ್ಲಿ ಕೊಳೆಯುತ್ತಿದ್ದರು. ಮಹಾತ್ಮಾಜಿಯವರು ಮಾತ್ರ ಹೊರಗಿದ್ದರು. ಜಿನ್ನಾನ ಭೆಟ್ಟಿಯನ್ನು ತೆಗೆದುಕೊಳ್ಳುತ್ತಿದ್ದರು! ಆದರಿಂದ ಯಾವ ನಿಷ್ಪತ್ತಿಯೂ ಹೊರಡುತ್ತಿರಲಿಲ್ಲ. ಧನಜೀಶೇಟನಿಗೆ "ನಿಮ್ಮ ಸರತಿ ಇನ್ನು ಮುಗಿಯುವದು ಕಾಂಗ್ರೆಸ್ಸಿನ ಮುಂದಾಳುಗಳು ಬಿಡುಗಡೆ ಹೊಂದುವರು. ಸ್ವರಾಜ್ಯವು ಬರುವದು. ಇನ್ನು ಮುಂದೆ ನಿಮ್ಮ ಬಲಾತ್ಕಾರವು ಬದುಕಲಾರದು" ಎಂದು ಯಾರೋ ವಿಚಾರಿಸಿದರು. ಅದಕ್ಕವನು "ಇಂಗ್ಲೀಷ ಸರಕಾರವೇನು ಮೂರ್ಖವಿರುವದೇ? ಅವರೇನು ತಮ್ಮ ಕೈಯಿಂದಲೆ ಸಾಮ್ರಾಜ್ಯದ ಮೇಲೆ

ನೀರು ಬಿಡುವರೇ? ಇಂಗ್ಲೀಷರು ಇಲ್ಲಿಂದ ಹೋಗಲಾರರು. ನನ್ನ ಜೀವಮಾನ ವಿರುವವರೆಗಂತೂ ಅವರು ಇಲ್ಲಿಂದ ಹೋಗಲಾರರು. ಕಾಂಗ್ರೆಸ್ಸಿಗೆ ಮೇಲಿಂದಮೇಲೆ ವನವಾಸ ಕಟ್ಟಿಟ್ಟದ್ದೆ. ನಮ್ಮ ಚೈನಿಗೆ ಚ್ಯುತಿಯೇ ಇಲ್ಲ. ನಾವು ಅಡವಿಯ ರಾಜರು ” ಎಂದು ಜಂಭಕೊಚ್ಚುತ್ತಿದ್ದನು.

ಧನಜೀಶೇಟನು ತನ್ನ..........ಇರುತ್ತಿದ್ದನು. ಮಳೆಗಾಲ ಮುಗಿಯು ಬಂದಿತ್ತು. ಈ ವರುಷ ಹಿಂಗಾರಿ ಮಳೆ ಚನ್ನಾಗಿ ಬೀಳದ್ದರಿಂದ ಹುಲ್ಲು ಹುಲುಸಾಗಿ ಬೆಳೆದಿರಲಿಲ್ಲ. ಮೇಲಾಗಿ ಹುಳುಗಳೂ ಹತ್ತಿದ್ದವು. ಹುಲ್ಲಿಗೆ ಹೂ ಬಿಟ್ಟಿರಲಿಲ್ಲ ಬರೀ ಹುಲ್ಲುಕಡ್ಡಿಗಳೇ ಉಳಿದಿದ್ದವು. ಹುಲ್ಲಿನ ಬೆಲೆಯಲ್ಲಿ ಏರಿಳಿತ ನಡೆದಿತ್ತು. ತನ್ನ ಹುಲ್ಲು ಬೇಗನೆ ಕೊಯ್ದು, ಎಲ್ಲಕ್ಕೂ ಮೊದಲು ಪೇಟೆಗೆ ಹೋಗಬೇಕೆಂದು ಧನಜೀಶೇಟನು ಚಡಪಡಿಸುತ್ತಿದ್ದನು. ಅದಕ್ಕಾಗಿ ಅವನ ಸಾಹಸ ಮಿತಿಮೀರಿತ್ತು! ಕೆಲಸಕ್ಕೆಂದು ಹಳ್ಳಿಹಳ್ಳಿಗಳಿಂದ ಆದಿ ವಾಸಿಗಳನ್ನು ತಂದನು. ಧನಜೀಶೇಟನ ಕಾವಲುಗಾರನಾದ ಪಠಾಣನು ಹಳ್ಳಿ ಹಳ್ಳಿಗೆ ಹೋಗಿ, ಆದಿವಾಸಿಯರನ್ನು ಕುರಿಗಳನ್ನು ಹಿಡಿದು ತರುವಂತೆ ಅಟ್ಟಿಕೊಂಡು ಬರುತ್ತಿದ್ದನು. ಧನಜೀಭಾಯಿಯು ಹೆಚ್ಚು ಕೂಲಿ ಕೊಡುವ ದಾಗಿ ಹೇಳಿ ಅವರನ್ನು ಕೆಲಸದಲ್ಲಿ ತೊಡಗಿಸಿದ್ದನು ಈಗ ಪುನಃ ಅಕಸ್ಮಾತ್ ಮಳೆ ಬಿದ್ದರೆ, ಈ ಹುಲ್ಲೂ ಕೈಗೆ ಹತ್ತಲಾರದೆಂದು ವಿಚಾರಿಸಿ, ಧನಜೀ ಭಾಯಿಯು ಉದಾರಿಯಾಗಿದ್ದನು.

ಕತ್ತಲು ಬೀಳುವ ಸಮಯ. ಇಂದು ಕೂಲಿಯನ್ನು ಕೊಡಬೇಕಾಗಿತ್ತು.

“ ನೀವು ಸರಿಯಾಗಿ ಕೆಲಸವನ್ನು ಮಾಡಲಿಲ್ಲ. ಕೂಲಿ ಪೂರ್ತಿಯಾಗಿ ದೊರೆಯಲಾರದು. ಎಂಟು ದಿವಸಗಳಲ್ಲಿ ಇಷ್ಟೇ ಹುಲ್ಲು ಕೊಯ್ಯುವದೆಂದ ರೇನು? ನೀವು ಕೆಲಸ ತಪ್ಪಿಸುವವರು, ಸೆರೆ ಕುಡಿಯುತ್ತೀರಿ. ಕೆಲಸ ಮಾಡುವದಿಲ್ಲ. ಹೆಚ್ಚಿಗೆ ಕೂಲಿ ಯಾತಕ್ಕೆ ನಿಮಗೆ; ಸೆರೆ ಸೆಡ್ಡಲಿಕ್ಕೋ? ನೀವೆಲ್ಲರೂ ಹರಾಮಖೋರರಿರುತ್ತೀರಿ. ನಿಮಗೆ ಆಟವಾಗಿದೆಯಲ್ಲವೇ? ಜೋಕೆಯಿಂದಿರ್ರಿ. ನಾನು ಧನಜೀಭಾಯಿ ಇದ್ದೇನೆ. ಇಂಗ್ಲಿಷ ಸರಕಾರದ ಅಗತ್ಯತೆಯೆಂದರೆ ಧನಜೀಭಾಯಿಯ ರಾಜ್ಯ. ಒಬ್ಬೊಬ್ಬರನ್ನೇ ಯರವಡಾಕ್ಕೆ ಕಳಿಸೇನು. ಕೆಲಸಮಾಡುವಹಾಗಿಲ್ಲ: ಕೂಲಿಯನ್ನು ಕೇಳದೆ ಬಿಡುವದಿಲ್ಲ.

ಎಲ್ಲಾ ಇಲ್ಲದ ಕಾರಭಾರ!" ಎಂದು ಧನಜೀಭಾಯಿ ತಿರಸ್ಕಾರದಿಂದಲೂ ಸಂತಾಪದಿಂದಲೂ ಬಡಬಡಿಸಿದನು.

"ನೀನು ಗೊತ್ತುಮಾಡಿದ ಕೂಲಿಯನ್ನು ಕೊಡು" ಎಂದನು ಒಬ್ಬ.

"ಕೊಡದಿದ್ದರೆ ನಾವು ಸಂಪು ಮಾಡುವೆವು" ಎಂದನು ಇನ್ನೊಬ್ಬ.

"ಮಳೆ ಬರುವದು ಹಾನಿಯಾಗುವದು, ಆಕಾಶದಲ್ಲಿ ಮೋಡಗಳು ಓಡಾಡುತ್ತಿವೆ ರೀತಿಯಂತೆ ಕೂಲಿಯನ್ನು ಕೊಟ್ಟರೇನೇ ನಾಳೆ ಕೆಲಸಕ್ಕೆ ಹೋಗುವೆವು" ಎಂದು ಆದಿವಾಸಿಯು ಮಾತನಾಡಿದನು

ಧನಜೀಭಾಯಿಯು ಹೆಚ್ಚು ಕೂಲಿಯನ್ನು ಕೊಡಲು ಸಿದ್ಧನಾಗಲಿಲ್ಲ. ಆದಿವಾಸಿಗಳು ಎದ್ದುಹೋದರು. ತಮ್ಮ ತಮ್ಮ ಊರುಗಳನ್ನು ಬಿಟ್ಟು ಅವರು ಇಲ್ಲಿಗೆ ಬಂದಿದ್ದರು. ಆ ಅಡವಿಯಲ್ಲಿಯೇ ಗುಡಿಸಲುಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಧನಜೀಭಾಯಿ ಅಲ್ಲಿಯೇ ಕುಳಿತಿದ್ದನು ಸ್ವಲ್ಪ ಸಮಯದ ನಂತರ ಪಠಾಣನನ್ನುದ್ದೇಶಿಸಿ 'ಲಾಲಾ, ನಾಳೆ ಇವರು ಕೆಲಸಕ್ಕೆ ಬರುವರೋ ಇಲ್ಲವೋ ಈ ಸೂಳೇಮಕ್ಕಳು."

"ನಾನು ಬಡಿಗೆ ತೋರಿಸಿ ಎಲ್ಲರನ್ನೂ ಕರತರುವೆನು ಒಬ್ಬೊಬ್ಬರ ಎಲವುಗಳನ್ನು ಮುರಿಯುವೆನು. ನೀವು ಯೋಚಿಸಬಾರದು ತಾವು ಅಂಜಬಾರದು ಸಾಬ! ನಾನಿರುವತನಕ." ಎಂದನು.

"ಒಳ್ಳೇದು. ಬೆಳಿಗ್ಗೆ ಅವರೆಲ್ಲರನ್ನು ಕೆಲಸಕ್ಕೆ ಕರೆದುಕೊಂಡು ಬಾ. ತೆಗೆದುಕೋ ಈ ಹತ್ತು ರೂಪಾಯಿಗಳನ್ನು"

ಲಾಲಾನು ಹತ್ತು ರೂಪಾಯಿಗಳನ್ನು ಕಿಸೆಯಲ್ಲಿಡುತ್ತ, ನಗುತ್ತ ಹೊರಟುಹೋದನು

ಆದಿವಾಸಿಯು ಗಂಡು ಹೆಣ್ಣು ಮಕ್ಕಳೆಲ್ಲ ರೊಟ್ಟೀತಿಂದು ಒತ್ತಟ್ಟಿಗೆ ನೆರೆದಿದ್ದರು. ನಾಳಿಗೆ ಏನು ಮಾಡಬೇಕೆಂಬ ವಿಚಾರವು ನಡೆದಿತ್ತು. ಎಲ್ಲರೂ ಸಂಪು ಹೂಡಬೇಕೆಂದು ಮಾತಾಡುತಿದ್ದರು. ಎಲ್ಲಕಡೆಗೂ ಸಂಪಾಗಬೇಕೆಂದು ಅವರ ಅಪೇಕ್ಷೆ. ಈ ಅನ್ಯಾಯವನ್ನು ಸಹಿಸಬೇಕೆಂದು ಅವರಲ್ಲಿ ಕೆಲವರು.

'ಧನಜೀಶೇಟನಿಗೆ ನಮ್ಮ ಕೈ ತೋರಿಸಬೇಕು. ನಮ್ಮ ಶ್ರಮದಿಂದಲೇ ಇವನ ಚೈನಿ. ನಮಗೆ ಎರಡು ಕಾಸುಗಳನ್ನು ಕೊಡುವಾ,

ತಾನಾದರೋ ಬಂಗಲೆಯನ್ನು ಕಟ್ಟಿಸುವ. ನಮಗೆ ಉಣ್ಣಲು ಅನ್ನವಿಲ್ಲ. ಇವನಿಗಾದರೋ ನಾಲ್ಕು ಮೋಟಾರುಗಳು. ನಾವು ಕುಡಿಯುವ ಸಿಂದಿ ಮಾತ್ರ ಇವನಿಗೆ ಕಾಣುತ್ತದೆ. ತಾನು ಮಾತ್ರ ಹೆಚ್ಚಿನ ಬೆಲೆಯ ಸೆರೆ ಕುಡಿಯು ತ್ತಿರುವ. ಇವನ ಉರವಣಿಗೆ ಕಡಿಮೆಯಾಗಲೇಬೇಕು." ಎಂದು ಒಬ್ಬ ತೇಜಸ್ವಿ ತರುಣನು ಮಾತನಾಡಿದನು.

ಎಲ್ಲರೂ ತಲೆಹಾಕಿದರು. ರಾತ್ರಿಯು ಬಹಳವಾಯಿತು ಎಲ್ಲರೂ ತಮ್ಮ ತಮ್ಮ ಗುಡಿಸಿಲಿಗೆ ಹೋದರು ಕೆಲವರು ಅಲ್ಲಿಯೇ ಹುಲ್ಲಿನ ಮೇಲೆ ಮಲಗಿ ದರು. ಅವರಿಗೆ ಹಾವು ಚೇಳುಗಳ ಭಯವಿರಲಿಲ್ಲ ಛಳಿಯ ಭಯವೂ ಇರಲಿಲ್ಲ

ಆದರೆ ಒಂದು ಗುಡಿಸಲಲ್ಲಿ ಮಾತ್ರ ಗುಜುಗುಜು ನಡೆದಿತ್ತು. ಅವರಿ ಗೇಕೆ ನಿದ್ದೆ ಬರಲಿಲ್ಲ, ಅಲ್ಲಿ ಏನು ನಡೆದಿತ್ತು ?

"ಆ ಪಠಾಣನಿಗೆ ಮಾತ್ರ ನಾನು ಬೆದರುವೆ ಮಾಲಕರ ಕಡೆಗೆ ನಡೆ. ನಿನಗೆ ೨೫ ರೂಪಾಯಿ ಕೊಡಿಸುವೆ" ಎಂದನಾ ನೀಚ. ನನಗೆ ಅಂಜಿಕೆ ಬರು ತ್ತಿದೆ. ಆ ನೀಚ ಧನಜೀಶೇಟ. ಅವನ ಕಣ್ಣುಗಳು ಹಾವಿನಂತಹವು. ಅವು ಗಳನ್ನು ಒಡೆದುಹಾಕಬೇಕೆನಿಸುತ್ತಿದೆ ನನಗೆ. ನೀನೇನೋ ಊರೂರಿಗೆ ಸುದ್ದಿ ಯನ್ನು ಹಬ್ಬಿಸಲು ಹೋಗುವೆ. ಆದರೆ ನಾನು ಹೇಗೆ ಇರಲಿ ? "

"ಶುಕ್ರೀ ನೀನು ಸುಮ್ಮನೆ ಗಾಬರಿಯಾಗುವೆ ಪ್ರಸಂಗ ಬಂದರೆ ಈ ಕುಡುಗೋಲಿನಿಂದ ಅವನ ಚರ್ಮವನ್ನು ಸುಲಿ. ನೀನು ಹಾವಿಗಂಜುವದಿಲ್ಲ. ಹುಲಿಗಂಜುವದಿಲ್ಲ. ಈ ಧನಜೀಶೇಟನಿಗಂಜುವಿಯಾ ? "

'ನಿನ್ನಂಥವನೇ ಅಂಜುವ ನಾವಂತೂ ಹೆಣ್ಣುಮಕ್ಕಳು" "ಲಾಲಾ ಇಲ್ಲಿ ನೋಡು, ನಾಳೆ ಅವನು ಕೂಲಿಯನ್ನು ಕೊಡುವನು ಸಂಪಿನ ಪ್ರಸಂಗವೇ ಬರುವದಿಲ್ಲ. ಗಾಬರಿಯಾಗಬೇಡ. ನಿನ್ನ ಸೀರೆ ಹರಿದಿದೆ. ಹೊಸದನ್ನು ತೆಗೆದುಕೊಳ್ಳುವೆ ಮೊದಲು ನಿನಗೆ ಸೀರೆ,ಆಮೇಲೆ ನನಗೆ ಅರಿವೆ."

"ನಿಮ್ಮ ಈ ಕೂದಲುಗಳನ್ನು ಸ್ವಲ್ಪ ಕತ್ತರಿಸಿಕೊಳ್ಳಿರಿ. ದೆವ್ವನಂತೆ ಕಾಣುವಿರಿ. ಏನು, ನಿಮ್ಮ ಕೂದಲಿಗೆ ಹೆರಳನ್ನು ಹಾಕಲೋ? ಏನು ಕತ್ತರಿಯಿಂದ ನಾನೇ ಕತ್ತರಿಸಲೋ ? "

"ಶುಕ್ರೀ, ಹೆಚ್ಚು ಮಾತಾಡಬೇಡ. ಏಟು ತಿಂದೀ"

“ ಮೊದಲು ಆ ಧನಜೀಶೇಟನಿಗೆ ಹೊಡೆಯಿರಿ. ಆಮೇಲೆ ನನಗೆ ಹೊಡೆದರೆ, ಅದನ್ನು ಆನಂದದಿಂದ ಸಹಿಸುವೆನು. ನೀವು ಹೆಣ್ಣುಮಕ್ಕಳಿಗೆ ಮಾತ್ರ ಹೊಡೆಯುವವರು, ಧನಜೀಶೇಟನಿಂದ ಒದೆತವನ್ನು ತಿನ್ನುವವರು. ಆ ಪಠಾಣನು ದಾಡವನ್ನು ತೋರಿಸುವನು. ನೀವೆಲ್ಲರೂ ನಾಯಿಯಂತೆ ಸುಮ್ಮನಾಗುವಿರಿ ನಾಳೆ ಸುಮ್ಮನಿರುವದಿಲ್ಲವೇ ? ”

“ ನಾಳೆ ನೋಡುವೆನು. ಈಗಂತೂ ಮಲಗಿಕೋ ”

ಎಲ್ಲ ಕಡೆಗೂ ಶಾಂತತೆಯಿತ್ತು. ನಾಯಿಗಳು ಒದರುತ್ತಲಿದ್ದವು. ಧನಜಿ ಶೇಟಜಿಯು ವಿಚಾರ ಮಾಡುತ್ತಲಿದ್ದನು. ಅವನಿಗೆ ನಿದ್ದೆ ಬರಲಿಲ್ಲ. ಲಾಲಾನು ಆದಿವಾಸಿಗಳ ಮಾತುಗಳನ್ನೆಲ್ಲ ಅವನಿಗೆ ಹೇಳಿದ್ದನು ಧನಜೀಶೇಟಜಿಯು ಲಾಲಾನನ್ನು ಎಬ್ಬಿಸಿ,

“ ಲಾಲಾ, ನೀನು ದೊಡ್ಡ ಬೆಳಗಿನಲ್ಲಿ ಎದ್ದು ಪೋಲೀಸರನ್ನು ಕರೆದುಕೊಂಡು ಬಾ. ಇವರ ಪ್ರಮುಖರನ್ನೆಲ್ಲ ತುರಂಗಕ್ಕೆ ಕಳಿಸೋಣ ”

“ ಒಳ್ಳೇದು, ಪೋಲೀಸರು ಬಂದರೆ ಒಳ್ಳೇದಾಗುವದು. ನಾನು ಬೇಗ ಹೋಗಿ ಅವರನ್ನು ಕರೆದುಕೊಂಡು ಬರುವೆ. ತಾವು ಮಲಗಿಕೊಳ್ಳಿರಿ ಚಿಂತೆಯನ್ನು ಮಾಡಬೇಡಿರಿ ಶೇಟಜೀ ? ಲಾಲಾ ಜೀವಂತನಿರುವವರೆಗೆ ತಮಗೆ ಅಂಜಿಕೆ ಏಕೆ ? ”

ಶೇಟಜಿಯು ಪಲ್ಲಂಗದ ಮೇಲೆ ಬಿದ್ದನು. ಲಾಲಾನು ತಂಬುವಿನ ಹೊರಗೆ ಹೊರಸಿನ ಮೇಲೆ ಮಲಗಿದನು. ಬೆಳಗ್ಗೆ ಎದ್ದು, ಪೋಲೀಸರ ಕಡೆಗೆ ಹೋದ. ಬೆಳಗಾಯಿತು. ಆದಿವಾಸಿಗಳು ಎದ್ದರು. ಆದರೆ ಅವರು ಕೆಲಸಕ್ಕೆ ಹೋಗುವ ಲಕ್ಷಣ ಕಾಣಲಿಲ್ಲ. ಎಂಟು ಹೊಡೆಯಿತು. ಆದರೂ ಯಾರೂ ಕೆಲಸಕ್ಕೆ ಹೋಗಲಿಲ್ಲ. ಧನಜೀಶೇಟನು ಅಲ್ಲಿಗೇ ಬಂದನು

“ ನೀವು ಕೆಲಸವನ್ನು ಮಾಡುವದಿಲ್ಲವೇ ? ಸೊಕ್ಕು ಬಂದಿದೆ ನಿಮಗೆ” ಎಂದನು.

“ ಶೇಟ, ಬಯ್ಯಬೇಡ. ಒಪ್ಪಿಕೊಂಡಂತೆ ಮೊದಲು ನಮಗೆ ಕೂಲಿಯನ್ನು ಕೊಡು. ಆ ಮೇಲೆ ಕೆಲಸದ ಮಾತು ”

“ ಕೆಲಸದಲ್ಲಿ ಕಸರು ಉಳಿಸಿ, ಪೂರ್ಣ ಕೂಲಿಯನ್ನು ಕೇಳುವಿರಾ ?”

“ ಮೊದಲು ಕೂಲಿಯನ್ನು ಕೊಡು ”

" ಮೊದಲು ಕೆಲಸಕ್ಕೆ ಹೋಗಿರಿ "

" ಮೊದಲು ಕೂಲಿ. ಇಷ್ಟು ಕೂಲಿಯನ್ನು ಕೊಡುವದು ನಿನಗೆ ಪೂರೈಸದಿದ್ದರೆ, ನಾವು ಬೇರೆ ಕಡೆಗೆ ಹೋಗುವೆವು. ಆದರೆ ನಾವು ದುಡಿದ ಕೆಲಸದ ಕೂಲಿಯನ್ನು ಪೂರ್ಣ ಕೊಟ್ಟುಬಿಡು ಇಲ್ಲದಿದ್ದರೆ, ಇಡೀ ಜಿಲ್ಲೆಯಲ್ಲಿಯೇ ಸಂಪು ಹಬ್ಬಿತು. ನಿನ್ನದಷ್ಟೇ ಅಲ್ಲ. ಯಾರ ಹುಲ್ಲೂ ಕೊಯ್ಯಲ್ಪಡಲಾರದು. ಕೂಡಿರಿ ಶಂಖವನ್ನು ಹೊಡೆಯುತ್ತ "

" ಸೂಳೇಮಕ್ಕಳೇ ! ಆಗ ನೀವು ಉಣ್ಣುವಿರೇನು ? "

" ಅದರ ಚಿಂತೆ ನಿನಗೆ ಬೇಡ "

ಅತ್ತಕಡೆಗೆ ಶುಕ್ರಿಯು ನಿಂತಿದ್ದಳು. ಕಾಡುಮಲ್ಲಿಗೆ ಹೂಗಳನ್ನು ಮುಡಿದಿದ್ದಳು. ಸಾದುಗಪ್ಪಿನ ತೇಜಸ್ವಿಯಾದ ಆ ಶುಕ್ರಿಯನ್ನು ಧನಜೀಶೇಟನು ನೋಡುತ್ತಲಿದ್ದನು.

" ಆ ಶುಕ್ರಿಯು ನಿನ್ನ ಹೆಂಡತಿಯಲ್ಲವೇ ? ಅಹಹಾ ನೋಡು ! ಮುಂಬೈ ಹೆಣ್ಣು ಆಗಿದ್ದಾಳೆ. ಈ ಹುಲ್ಲು ಕೊಯ್ಯುವಾಕೆಗೆ ಎಷ್ಟು ಡೌಲು. ತಲೆಯಲ್ಲಿ ಹೂ ಮುಡಿದಿದ್ದಾಳೆ " ಎಂದನು ಧನಜೀಶೇಟ.

" ಅಂದರೆ ನಿಮ್ಮ ಹೆಣ್ಣು ಮಕ್ಕಳಷ್ಟೆ ಹೂ ಮುಡಿಯಬೇಕೋ ? " ಎಂದನು ಮಂಗಳ್ಯಾ.

" ಸೂಳೇಮಗನೇ, ನಮ್ಮ ಹೆಣ್ಣುಮಕ್ಕಳ ಹೆಸರು ತೆಗೆಯುತ್ತೀಯಾ? ಎಚ್ಚರಿರು ನಿನ್ನ ಹಲ್ಲು ಮುರಿದೇನು ? ಸೊಕ್ಕು ಬಂದಿದೆ ನಿನಗೆ. ನಿನ್ನನ್ನೂ ತುರಂಗಕ್ಕೆ ಕಳಿಸುವೆನು. ನೀನೇ ಮುಖಂಡನೆಂದು ಕಾಣುತ್ತದೆ. ಸಿಂದೀ ಕುಡಿದು ಶುಕ್ರಿಗೆ ಹೊಡೆಯುತ್ತಿರುವಿಯಂತೆ. ನಿನಗೆ ಹೆಚ್ಚು ಕೂಲಿ·ಬೇಕಲ್ಲವೇ. ನಿನ್ನಂತಹ ನಾಯಿಗೆ ಇಂಥ ಶುಕ್ರಿಯ ಬೆಲೆ ಏನು ? ಆಕೆಗೆ ಬಂಗಲೆಯು ಶೋಭಿಸುವದು. ಅಲ್ಲಿ ಆಕೆಗೆ ಗುಲಾಬೀ ಹೂಗಳು ಸಿಕ್ಕಾವು. ಆನಂದದಿಂದ ಇದ್ದಾಳು "

ಮಂಗಳ್ಯಾನು ಹುಲಿಯಂತೆ ಧನಜೀಶೇಟಜಿಯ ಮೇಲೆ ಹಾರಿ, ಧನಜೀ ಶೇಟಜಿಗೆ ಎರಡೇಟು ಕೊಟ್ಟನು. ಉಳಿದವರು ಗಾಬರಿಯಾದರು. ಅವರು ಮಂಗಳ್ಯಾನನ್ನು ಹಿಂದಕ್ಕೆ ಸರಿಸಿದರು. ಶುಕ್ರಿಯು ಓಡುತ್ತಬಂದಳು. ಆಕೆಯು ಸಂತಾಪದಿಂದ, ' ಯಾಕೆ ಅವನನ್ನು ಹಿಂದಕ್ಕೆ ಸರಿಸುವಿರಿ ? ಆ

ಪಾಪೀ ಚಾಂಡಾಲನ ಕಣ್ಣುಗಳನ್ನು ಕಿತ್ತಲಿ! ಬಿಡಿರಿ ಅವನನ್ನು. ಈ ಶೇಟ ನೆಂದರೆ ಹೊಲೆಯ. ಅವನು ಹೊಲೆಯನಿದ್ದಾನೆ ''

ಇಷ್ಟರಲ್ಲಿ ಬೆದರಿಕೆಯ ಸೀಟಿಯು ಊದಲ್ಪಟ್ಟಿತು ಪೋಲೀಸರು ಬರ ಹತ್ತಿದರು. ಅವರೊಡನೆ ಲಾಲಾನಿದ್ದನು ಆದಿವಾಸಿಗಳು ಓಡಿದರು. ಪೋಲೀಸರು ಗೋಳೀಬಾರುಮಾಡುವರು, ತಮ್ಮನ್ನು ಹಿಡಿಯುವರು, ಎಂದು ಎಲ್ಲರೂ ತಮ್ಮ ತಮ್ಮ ಗುಡಿಸಲುಗಳಲ್ಲಿ ಹೋಗಿ ಕುಳಿತರು.

ಧನಜಿಯು ಪೋಲೀಸರ ಬಳಿಗೆ ಹೋಗಿ, ಉಪ್ಪು ಕಾರ ಹಚ್ಚಿ ಎಲ್ಲ ಸಂಗತಿಗಳನ್ನು ಅವರಿಗೆ ಹೇಳಿದನು. ಅವರನ್ನು ಕರೆದುಕೊಂಡು ಈ ಆದಿವಾಸಿ ಗಳ ಗುಡಿಸಲ ಕಡೆಗೆ ಬಂದನು.

'' ಮೊದಲು ಇವನನ್ನು ಹಿಡಿಯಿರಿ ಇವನು ನನ್ನನ್ನು ಕೊಲ್ಲುವವನಿದ್ದ. ಇವನು ತನ್ನ ಹೆಂಡತಿಯನ್ನು ಹೊಡೆಯುತ್ತಾನೆ. ಇವನೇ ಮುಖ್ಯಸ್ಥ. ಇವನೇ ಎಲ್ಲಕ್ಕೂ ಕಾರಣ.'' ಧನಜೀಶೇಟನು ಮಂಗಳ್ಯಾನ ಕಡೆ ಬೊಟ್ಟು ಮಾಡಿ ತೋರಿಸುತ್ತ ನುಡಿದನು. ಪೋಲೀಸರು ಅವನ ಕೈಗೆ ಬೇಡಿಯನ್ನು ಹಾಕಿದರು.

'' ನನ್ನನ್ನೂ ಹಿಡಿಯಿರಿ. ನಾನು ಒಬ್ಬಳೇ ಹೇಗೆ ಇರಲಿ? '' ಶುಕ್ರಿ ಎಂದಳು.

'' ನನ್ನ ಬಂಗಲೆಯಲ್ಲಿ ನೀನು ಕೆಲಸ ಮಾಡು. ಗಾಬರಿಯಾಗ ಬೇಡ '' ಧನಜಿಯೆಂದನು.

'' ನಿನ್ನ ಬಾಯಲ್ಲಿ ಹುಳಾ ಬೀಳಲಿ '' ಎಂದಳು ಶುಕ್ರಿ.

'' ಸುಮ್ಮನಾಗು '' ಎಂದು ಒಬ್ಬ ಪೋಲೀಸನೆಂದನು

'' ನೀವು ಇಲ್ಲಿ ಕೆಲಸ ಮಾಡುವದಿದೆಯಲ್ಲವೇ? '' ಅಧಿಕಾರಿಯು ವಿಚಾರಿಸಿದನು.

'' ಗೊತ್ತುಮಾಡಿದ ಕೂಲಿಯನ್ನು ಕೊಡಿರಿ ''

'' ಅವರು ಕೊಟ್ಟಷ್ಟು ಕೂಲಿಯನ್ನು ತಕ್ಕೊಳ್ಳಿರಿ ''

'' ನಾವು ತೆಗೆದುಕೊಳ್ಳುವದಿಲ್ಲ ''

'' ಸಾಯಿರಿ, ಏಳಿರಿ ಇಲ್ಲಿಂದ ''

''ಹೋಗುತ್ತೇವೆ. ಆದರೆ ನೆನಪಿರಲಿ. ಜಿಲ್ಹೆಯಲ್ಲೆಲ್ಲ ಸಂಪು ಹಬ್ಬೀತು.''

"ಇನ್ನೂ ಇಂಗ್ಲಿಷರ ರಾಜ್ಯವಿದೆ, ಹತ್ತಿದ ಬೆಂಕಿಯನ್ನು ಶಾಂತಗೊಳಿಸಲು."

ಆದಿವಾಸಿಗಳೆಲ್ಲ ಹೋದರು. ನಾಲ್ಕೆಂಟು ಜನರನ್ನು ಪೋಲೀಸರು ಹಿಡಿದರು. ಮಡಿಕೆ, ಗಡಿಗೆಗಳನ್ನೆಲ್ಲ ತಕ್ಕೊಂಡು ಆ ಆದಿನಿವಾಸಿಗಳು ಹೊರಟರು. ಮತ್ತು ಊರೂರಿಗೆ ಈ ಸುದ್ದಿಯನ್ನು ಮುಟ್ಟಿಸಿದರು. ಸಂಪು ಎಲ್ಲ ಕಡೆಗೂ ಹಬ್ಬಿತು; ಹುಲ್ಲಿಗೆ ಯಾರೂ ಕೈಹಚ್ಚಲೊಲ್ಲರು. ಕೊಯ್ದ ಹುಲ್ಲನ್ನು ಕಟ್ಟಲೊಲ್ಲರು. ಮೊದಲಿಗೇ ಕಡಿಸಿಯಿದ್ದ ಹುಲ್ಲು ಮಳೆ ಬಂದರೆ ನಾಶವಾದೀತು. ಕೊಯ್ದು ಕಟ್ಟಿದ ಹುಲ್ಲನ್ನು ಒಯ್ಯಲು ಗಾಡಿಗಳು ದೊರಕದಂತಾದವು ಕೆಲವು ಕಡೆಯಲ್ಲಿ ಹುಲ್ಲಿಗೆ ಬೆಂಕಿಹಚ್ಚಿದ ಸುದ್ದಿಯೂ ತಿಳಿದುಬಂತು.

ಜಮೀನದಾರರು, ಹುಲ್ಲಿನ ವ್ಯಾಪಾರಿಗಳು ಸುಮ್ಮನೆ ಕುಳಿತಿದ್ದಿಲ್ಲ. ಪಠಾಣರನ್ನು ಪೋಲೀಸರನ್ನು ಕರಕೊಂಡು ಕೂಡಲೆ ಯಾವದೊಂದು ಹಳ್ಳಿಗೆ ಹೋಗಿ, ನಿನಗೆ ಹಣವನ್ನು ಕೊಟ್ಟಿದ್ದೆವು. ಕೆಲಸಕ್ಕೆ ಬರುವಿಯೋ ಅಥವಾ ಹಿಡಕೊಂಡು ಹೋಗೋಣೋ, ಎಂದು ಹೆದರಿಕೆಯನ್ನು ಹಾಕುತ್ತಿದ್ದರು. ಪೋಲೀಸರೂ ಪಠಾಣರೂ ಕೆಲವರನ್ನು ಹೊಡೆದದ್ದೂ ಉಂಟು.

ಆದರೆ ಶುಕ್ರಿಯು ಎಲ್ಲಿದ್ದಳು? ಒಂದು ದಿವಸ ಧನಜಿಭಾಯಿಯು ಅವಳನ್ನು ಹಿಡಿದು ತರಿಸಿದನು. ಅವನ ಸೆರೆಯಲ್ಲಿ ಅವಳು ಸಿಕ್ಕಳು. ಹುಲಿಯ ಬಾಯಲ್ಲಿ ಚಿಗರಿಯು ಸಿಕ್ಕಿತು.

"ನೀ ನನ್ನ ಹತ್ತರ ಇರು ಮಂಗಳ್ಯಾನು ನಿನ್ನನ್ನು ಹೊಡೆಯುತ್ತಾನೆ. ನೀನು ಇಲ್ಲಿಯೇ ಇರು. ನೀನು ನನ್ನ ರಾಣಿ; ವನದೇವಿಯು. ನೀನು ನಿನಗೇನೂ ಕಡಿಮೆಯಾಗಲಿಕ್ಕಿಲ್ಲ. ಹೊಟ್ಟೆತುಂಬ ಅನ್ನ, ಸುಂದರವಾದ ಸೀರೆ, ಮುಡಿಯಲು ಗುಲಾಬಿಯ ಹೂಗಳಿವೆ. ಇಲ್ಲಿಯೇ ಇರು ಶುಕ್ರೀ" ಎಂದನು. ಅವಳು ಅವನ ಕೈಯನ್ನು ಜೋರಿನಿಂದ ಕಡಿದಳು ಧನಜಿಯು ಕೂಗಿದನು. ಆದರೆ ಅವನು ಉಚ್ಚ ತರಗತಿಯ ಮದ್ಯವನ್ನು ಸೇವಿಸಿದ್ದನು. ಅದರ ಮದವು ಅವನ ತಲೆಗೇರಿದ್ದರಿಂದ ಅವನಲ್ಲಿ ಮನುಷ್ಯತ್ವವು ನಾಶವಾಗಿತ್ತು. ಕೇವಲ ಪಶುವಿನಂತೆ ವರ್ತಿಸುತ್ತಿದ್ದನು. ಅವನು ಅವಳ ಸತೀತ್ವವನ್ನು ಸೂರೆಗೊಂಡನು.

ದಿನಗಳುರುಳಿದವು. ಸಂಪು ಹೆಚ್ಚುವ ಲಕ್ಷಣಗಳು ತೋರಹತ್ತಿದವು. ಇಂಥ ವೇಳೆಯಲ್ಲಿ ಸರಕಾರವು ಕೈಹಾಕಿ ಸಂಪನ್ನು ಶಾಂತಗೊಳಿಸಬೇಕೆಂದು ಕೆಲವರು ಅಭಿಪ್ರಾಯಪಟ್ಟರು.

ಅಂದು ಒಂದು ಸಭೆಯಿತ್ತು. ಸರಕಾರದ ಅಧಿಕಾರಿವರ್ಗವೂ ಜಮೀನದಾರರೂ, ವ್ಯಾಪಾರಿಗಳೂ ಅವರ ಮುಖ್ಯಸ್ಥರೂ ಆದಿನಿವಾಸಿಗಳ ಮುಖ್ಯಸ್ಥರೂ ಒಂದೆಡೆಯಲ್ಲಿ ಸೇರಿದ್ದರು. ಅದರಲ್ಲಿ ಉದಾರವೃತ್ತಿಯ ಸಜ್ಜನರೂ ಇದ್ದರು. ಆದಿನಿವಾಸಿಗಳ ಗುಂಪಿನಲ್ಲಿ ನಿರಪೇಕ್ಷ ಬುದ್ಧಿಯಿಂದ ಸೇವೆ ಮಾಡತಕ್ಕಂಥವರೂ ಇದ್ದರು. ಭಾಷಣಕ್ಕೆ ಮೊದಲಾಯಿತು. ಕೂಲಿ ದರವು ಎಷ್ಟು ಇರಬೇಕು ಎಂಬ ಒಗ್ಗೆ ಚರ್ಚೆಯಾಗಿ, ಆ ವಿಷಯವು ಬಗಿಹರಿಯಿತು.

“ನಮ್ಮ ಹೆಣ್ಣುಮಕ್ಕಳ ಮರ್ಯಾದೆಯನ್ನು ಇವನು ಕಳೆದಿದ್ದಾನೆ. ಇದಕ್ಕೇನು ಮಾಡುವಿರಿ” ಎಂದು ಒಬ್ಬ ವೃದ್ಧನು ವಿಚಾರಿಸಿದನು. ಏನಾದರು ಸಾಕ್ಷಿಗಳಿವೆಯೇ ಎಂದು ಸರಕಾರಿಯ ಅಧಿಕಾರಿಯು ಕೇಳಿದನು.

“ಹುಡುಗ ಹುಟ್ಟಿದ ಮೇಲೆ ಸಾಕ್ಷಿಯೇ” ಎಂದು ಒಬ್ಬ ಆದಿನಿವಾಸಿಯು ಹಲ್ಲು ಕಡಿಯುತ್ತ ಸಂತಾಪದಿಂದ ನುಡಿದನು.

“ಈ ಧನಜೀಶೇಟನು ಪಾಪವನ್ನು ಮಾಡಿರುವನೋ ಇಲ್ಲೋ ವಿಚಾರ ಮಾಡಿರಿ. ಮಂಗಳ್ಯಾನ ಹೆಂಡತಿಯಾದ ಶುಕ್ರಿಯನ್ನು ಈತನ ಪಠಾಣನು ಓಡಿಸಿಕೊಂಡು ಹೋದ, ಮತ್ತು ಒಂದು ದಿನ ಅಡವಿಯಲ್ಲಿ ಅವಳನ್ನು ತಂದು ಬಿಟ್ಟನು. ಆವಳು ಅಳುತ್ತಿದ್ದಳು. ಆತ್ಮಹತ್ಯ ಮಾಡಿಕೊಳ್ಳಲುದ್ಯುಕ್ತಳಾಗಿದ್ದಳು ಆ ವೇಳೆಯಲ್ಲಿ ಮಂಗಳ್ಯಾನು ತುರಂಗದಲ್ಲಿದ್ದನು. ಈ ರಾಜ್ಯದಲ್ಲಿ ನಮ್ಮ ಮಾನ ಮರ್ಯಾದೆ ಸುರಕ್ಷಿತ ಉಳಿಯುವದಿಲ್ಲ. ನಾವೇನು ಜನಗಳೇ ?” ಎಂದು ವೃದ್ಧನು ಗದ್ದರಿಸಿದನು.

“ಈಗ ನೀವು ಅನ್ನುವದೇನು” ಒಬ್ಬ ಜಮೀನುದಾರನೆಂದನು.

“ನ್ಯಾಯ ಬೇಕು” ಎಂದು ಆ ಮುದುಕನು ಹೇಳಿದನು.

“೧೦೦ ನೂರು ರೂಪಾಯಿಗಳನ್ನು ದಂಡವೆಂದು ಶುಕ್ರಿಗೆ ಧನಜೀ ಶೇಟನು ಕೊಡಬೇಕು” ಎಂದು ಅಧಿಕಾರಿಯು ಹೇಳಿದನು.

" ಯಾವನಾದರೊಬ್ಬ ಆದಿವಾಸಿಯು ಜಮೀನದಾರನೊಬ್ಬನ ಹೆಂಡತಿಯನ್ನು ಓಡಿಸಿಕೊಂಡು ಹೋಗಿದ್ದರೆ, ಅವಳ ಸತೀತ್ವವನ್ನು ಹರಣಮಾಡಿದ್ದರೆ, ಆ ಜಮೀನದಾರನ ಹೆಂಡತಿಗೆ ದಂಡವೆಂದು ಆದಿವಾಸಿಯು ೧೦೦ ರೂಪಾಯಿ ಕೊಡಬೇಕು ಎಂದು ನೀವು ಅನ್ನುತ್ತಿದ್ದಿರೊ? ನೀವು ಆ ಆದಿವಾಸಿಗೆ ೪-೮ ವರ್ಷಗಳ ಶಿಕ್ಷೆಯನ್ನು ಕೊಡುತ್ತಿದ್ದಿರಿ. ಆದಿವಾಸಿಗಳ ಹೆಣ್ಣುಮಕ್ಕಳ ಮರ್ಯಾದೆಗೆ ಏನೂ ಬೆಲೆಯಿಲ್ಲವೆ ? " ಎಂದು ಒಬ್ಬ ಆದಿವಾಸಿ ಸೇವಕನು ಅಂದನು

" ದಂಡವೆಂದರೆ ಹಣದ ಪ್ರಶ್ನೆಯಲ್ಲ. ಒಂದೇ ರೂಪಾಯಿ ಇರಲಿ ಅಥವಾ ೧೦೦ ರೂಪಾಯಿ ಇರಲಿ. ಅದಕ್ಕೇ ಬೆಲೆಯಿಲ್ಲ. ಎಷ್ಟೋಸಾರೆ ಶ್ರೀಮಂತರಿಗೆ ಒಂದು ಪೈ ದಂಡ ಮಾಡಿದ ಉದಾಹರಣೆಗಳುಂಟು. ದಂಡ ಮಾಡಿದ ಒಂದೇ ಒಂದು ಪೈಯು ದಂಡಕೊಡುವವನ ಪ್ರತಿಷ್ಠೆಯನ್ನು ಹರಣ ಮಾಡುತ್ತದೆ. ಅವನು ಮಾಡಿದ ಪಾಪವನ್ನು ಮುಚ್ಚುವದಿಲ್ಲ ನಾವು. ಏನು, ಧನಜೀಶೇಟರೆ " ಅಧಿಕಾರಿಯು ಒಳ್ಳೇ ಶಿಸ್ತಿನಿಂದ ವಿಚಾರಿಸಿದನು.

" ನಾನಂತೂ ನಿರಪರಾಧಿ. ಪಾಪವನ್ನು ಮಾಡಿರುವದಿಲ್ಲ, ೧೦೦ ರೂ. ಕೊಡಲು. ತಾವು ವಿಧಿಸುತ್ತೀರೆಂದ ಮೇಲೆ ಕೊಡುತ್ತೇನೆ. ಆದರೆ ಆ ಶುಕ್ರಿಯು ನೀಚಳು. ಅಡವಿಯಲ್ಲಿ ನನಗೆ ಈಕೆಯೆ 'ನನ್ನ ಗಂಡನು ನನಗೆ ದಿನಾಲು ಹೊಡೆಯುತ್ತಾನೆ. ಸಿಂದೀ ಕುಡಿಯುತ್ತಾನೆ. ಇದರಿಂದ ನನ್ನನ್ನು ಮುಕ್ತಮಾಡಿರಿ' ಎಂದು ತಾನೇ ಬೇಡಿಕೊಂಡಳು. ಈ ಪೀಡೆಯೇ ಬೇಡವೆಂದೆ. ಆದರೆ ಆಕೆ ತಾನಾಗಿಯೇ ನನ್ನ ಮನೆಗೆ ಬಂದಳು. ನಾನು ಆಕೆಯನ್ನು ಮರಳಿ ಅಡವಿಗೆ ಒಯ್ದು ಬಿಟ್ಟೆನು. ಈ ಜನರಿಗೆ ನಿಜ ಸಂಗತಿಯು ತಿಳಿದಿಲ್ಲ, ಕಾಡು ಜನರು. " ಧನಜೀಶೇಟನೆಂದನು.

" ಎಚ್ಚರಿಕೆಯಿಂದ ಮಾತಾಡಿರಿ " ಎಂದನು ವೃದ್ಧ.

" ಎಚ್ಚರಿಕೆಯಿಂದೇನು ಮಾತಾಡುವದು ? " ಧನಜೀಶೇಟನು ಸಿಟ್ಟಿಗೆದ್ದನು.

" ಕಾಡು ಜನರು ನಾವಲ್ಲ, ನೀವು. ಬಡಜನರ ರಕ್ತದಿಂದ ಬಾಳುವಂಥವರು, ಹೆಂಗಸರ ಮರ್ಯಾದೆಯನ್ನು ಕಳೆಯುವಂಥವರು. ನಿಮಗೆ

ರೀತಿ ನೀತಿಗಳಿಲ್ಲ, ಕೊಟ್ಟ ಮಾತಿನ ಬೆಲೆಯನ್ನಿಡದವರು, ಕೊಟ್ಟ ಅವಧಿಯ ಹಾಗೂ ಮಾಡಿದ ಕರಾರುಗಳ ಎಚ್ಚರಿಕೆ ಇಲ್ಲದವರು. ಇಂಥ ನೀವು ಕಾಡು ಜನರು. ಬಂಗಲೆಯಲ್ಲಿರುವಂಥವರು,, ಬ್ರ್ಯಾಂಡಿಯನ್ನು ಕುಡಿಯು ವಂಥ ನೀವು ಕಾಡು ಜನರು. ನಾವು ಕಾಡುಜನರಲ್ಲ. ನಾವು ದೇವರಿಗೆ ಅಂಜಿ ನಡೆಯುತ್ತೇವೆ " ಎಂದನು ವೃದ್ಧ.

" ಹೋಗಲಿ ಬಿಡಿರಿ ಆದದ್ದನ್ನು ಮರೆತುಬಿಡಿರಿ. ಕೂಲಿಯ ದರವು ಹೊಸದಾಗಿ ನಿಶ್ಚಯ ಮಾಡಿದೆಯಲ್ಲವೆ? ಧನಜೀಶೇಟ, ನೀವು ಒಂದು ನೂರು ರೂಪಾಯಿಗಳನ್ನು ಶುಕ್ರೀ ಅಥವಾ ಮಂಗಳ್ಯಾನ ಕಡೆಗೆ ಕಳಿಸಿರಿ. ಮಂಗಳ್ಯಾ ಮುಂತಾದವರನ್ನೆಲ್ಲ ಬಿಡುಗಡೆ ಮಾಡಲಾಗುವದು. ಸಂಪನ್ನು ಬಿಟ್ಟು ಬಿಡಿರಿ. ಶಾಂತಿಯನ್ನು ಕಾಯಿರಿ" ಅಧಿಕಾರಿಯೆಂದನು.

ಆದಿವಾಸಿಗಳು ಹೋದರು. ದೊಡ್ಡ ಜನರು ಕೂತಿದ್ದರು. ಫರಾಳದ ಕಾರ್ಯಕ್ರಮವಿತ್ತು. ಚಹಾ, ಹಣ್ಣು-ಹಂಪಲಗಳೂ ಬಿಸ್ಕೀಟೂ, ಅವಲಕ್ಕಿಯೂ ಇದ್ದವು

" ಕಟ್ಟ ಕಡೆಗೆ ನ್ಯಾಯವು ವರ್ಗದೂಷಿತವೇ ಇರುತ್ತದೆ" ಎಂದು ಆದಿವಾಸಿ ಸೇವಕನೆಂದನು.

" ನೀವು ಸಹ ವರ್ಗಯುದ್ಧದ ಮಾತನಾಡಹತ್ತಿದಿರಿ. ಆಶ್ಚರ್ಯ" ಎಂದನು ಅಧಿಕಾರಿ.

" ಧನಜೀಶೇಟನು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದನು. ನೀವು ಅದಕ್ಕಾಗಿ ಅವನಿಗೆ ಒಂದು ನೂರು ರೂಪಾಯಿ ದಂಡವನ್ನು ವಿಧಿಸುತ್ತೀರಿ. ಬಡವರ ಹೆಣ್ಣುಮಕ್ಕಳ ಮರ್ಯಾದೆಗೆ ನ್ಯಾಯಸಭೆಯಲ್ಲಿ ನೀವು ಕೊಡುವ ಬೆಲೆಯು ಇದೆಯೇ? ಎಲ್ಲೆಡೆಯಲ್ಲಿಯೂ ಇದೇ ರೀತಿ. ಅಮೇರಿಕೆಯಲ್ಲಿ ಒಬ್ಬ ನಿಗ್ರೋನು ಅಮೇರಿಕನ್ನ ತರುಣಿಯನ್ನು ಮುಟ್ಟಿದರೆ ಸಾಕು, ಅವನನ್ನು ಸುಟ್ಟುಬಿಡುತ್ತಾರೆ. ಆದರೆ ಅಮೇರಿಕನ್ ತರುಣರು ನಿಗ್ರೋ ತರುಣಿಯನ್ನು ಬಲಾತ್ಕರಿಸಿದರೆ ಅವನನ್ನು ಸುಡುವರೇನು? ೫-೧೦ ವರ್ಷಗಳ ವರೆಗೆ ಜೇಲಿ ಗಾದರೂ ಕಳಿಸುವರೇನು? ಇಲ್ಲ ಯಾವನು ಶ್ರೀಮಂತನೋ ಅವನಂತೆಯೇ ನ್ಯಾಯ. ಕಾಯಿದೆಯ ದೃಷ್ಟಿಯಿಂದ ಎಲ್ಲವೂ ಒಂದೇ ಎಂಬುದು ಸುಳ್ಳು. ಶ್ರೀಮಂತರು ಬ್ಯಾರಿಸ್ಟರರನ್ನಿಡಬಹುದು! ಬೇಕಾದ್ದನ್ನು ಸಿದ್ಧಪಡಿಸಬಹುದು.

ಆದರೆ ಬಡವರಿಗೆ ಕಾಯಿದೆಯಿಂದ ಸಿಗುವ ನ್ಯಾಯವನ್ನು ಯಾರೂ ಕೊಡುವದಿಲ್ಲ. ಎಲ್ಲವೂ ಸುಳ್ಳಿದೆ '' ಎಂದು ಆ ಸೇವಕನೆಂದನು.

'' ನೀವು ಇನ್ನೂ ನಿಜವಾದ ಗಾಂಧೀ ಮತಾನುಯಾಯಿಗಳಾಗಿಲ್ಲ. '' ಒಬ್ಬ ಶೇಟನೆಂದನು.

'' ಯುದ್ಧದ ವೇಳೆಯಲ್ಲಿ ಮುಂಬೈಯಲ್ಲಿ ಅಸ್ಟ್ರೇಲಿಯನ್ ಸೋಲ್ಜರರು ಪುಂಡಾಟಿಕೆಯನ್ನು ಸುರುವು ಮಾಡಿದಾಗ ಮಹಾತ್ಮಾಗಾಂಧಿಯವರು ಹಿಂಸೆಯು ಅಹಿಂಸೆಯ ಪ್ರತಿಸ್ಪರ್ಧಿಯಲ್ಲ. '' ಎಂದು ಹೇಳಿದರು. ' ಸತೀತ್ವದ ರಕ್ಷಣೆಯಾಗಲೇಬೇಕು ' ಗಾಂಧೀತತ್ವವನ್ನು ನನಗೆ ಉಪದೇಶಿಸುವ ಕಾರಣವಿಲ್ಲ. '' ಎಂದು ಆ ಆದಿವಾಸಿ ಸೇವಕನು ಅಂದನು.

'' ಹೋಗಲಿ ಬಿಡಿರಿ. ಆ ಆದಿವಾಸಿಗಳು ಹೋದರಲ್ಲವೇ? ಅವರಿಗೆ ಒಂದು ನೂರು ರೂಪಾಯಿಗಳೆಂದರೆ ಐದು ಸಾವಿರ ರೂಪಾಯಿಗಳಿಗಿಂತ ಹೆಚ್ಚು. ಸುಮ್ಮನೆ ನಾವು ವಾದಿಸುವದರಿಂದ ಪ್ರಯೋಜನವೇನು? ಈಗ ನಾವೆಲ್ಲರೂ ಹೊಗೋಣ '' ಎಂದನು ಅಧಿಕಾರಿ.

× × × ×

ಶುಕ್ರಿಯು ಚಿಂತಿತಳಾಗಿದ್ದಳು ಇತ್ತೀಚೆಗೆ ಅವಳ ಮೋರೆಯ ಮೇಲೆ ಕಳೆಯೇ ಇರಲಿಲ್ಲ. ಬಡಜನರು ದುಃಖವನ್ನು ನೆನಿಸುತ್ತ ಎಂದೂ ಕೂಡುವದಿಲ್ಲ. ಒಂದು ರೀತಿಯಿಂದ ನೋಡಿದರೆ, ತಮ್ಮ ಜೀವಮಾನದಲ್ಲೆಲ್ಲ ಅವರು ಎಚ್ಚರವಾಗಿಯೇ ಇರುತ್ತಾರೆ. ದುಃಖದ ಆವೇಗವನ್ನು ತೋರುವದು ಶಿಷ್ಟ ಜನರ ಪದ್ಧತಿಯಾಗಿದೆ. ಬಡವರು ದುಃಖಕ್ಕೆ ಮಹತ್ವವನ್ನು ಕೊಡುತ್ತಿದ್ದರೆ, ಅವರು ಬಾಳುವದೇ ಕಷ್ಟವಾಗುತ್ತಿತ್ತು. ಸಾದಾ ಹೂವನ್ನು ನೋಡಿ; ಸುಂದರ ಪಕ್ಷಿಯನ್ನು ನೋಡಿ, ಯಾವದಾದರೊಂದು ಮೀನ ಸಿಕ್ಕರೆ ಸಿಂದಿಯು ಸಿಕ್ಕರೆ— ದುಃಖವನ್ನು ಮರೆತು ನಗುವರು. ಆನಂದಿತರಾಗುವರು. ಆದರೆ ಶುಕ್ರಿಯು ಹೀಗೇಕೆ ಮಾಡುತ್ತಿದ್ದಾಳೆ? ಸ್ವಭಾವದಿಂದ ಅವಳು ಯಾವಾಗಲೂ ಹಸನ್ಮುಖಿ. ಅವಳು ಇನ್ನೂ ಗಿಡ್ಡಗಳನ್ನು ಹತ್ತುವಳು. ಟೊಂಗೆಯನ್ನು ಹಿಡಿದು ಜೋಕಾಲಿಯಾಡುವಳು. ಅವಳು ಅಡವಿಯ ಹೂಗಳನ್ನು ತರುವಳು, ಹಾಗೂ ಅವುಗಳನ್ನು ತಲೆಯಲ್ಲಿ ಮುಡಿಯುವಳು. ಆದರೆ

ಇತ್ತೀಚೆಗೆ ಅವಳು ಈ ಹುಡುಗಾಟಿಕೆಯಲ್ಲ ಮಾಯವಾಗಿದೆ. ಏನಾಗಿದೆ? ಅವಳ ಜೀವನದಲ್ಲಿ ಬಂದ ಸಂಕಟವಾವುದು ?

ಆ ದಿವಸ ಅವಳ ಗಂಡನು ಆನಂದದಲ್ಲಿದ್ದ. ಮಂಗಳ್ಯಾನು ಶುಕ್ರಿಯ ಕಡೆಗೆ ನೋಡಿ ನಕ್ಕನು, ಅವನಿಗೆ ಆನಂದವಾಗಿತ್ತು. ಆದರೆ ಶುಕ್ರಿಯ ಮುಖವು ಖಿನ್ನವೂ ಉದಾಸೀನವೂ ಆಗಿತ್ತು. ಅವನ ಆನಂದಕ್ಕೆ ಪ್ರತಿಯಾಗಿ, ಅವಳ ಮುಖದಲ್ಲ ಆನಂದ ಕಾಣಲಿಲ್ಲ. ಹೀಗೇಕಾಗಿರಬಹುದು ?

" ಎಲೆ, ಸ್ವಲ್ಪ ನಗು ನೋಡೋಣ! ನಾನು ನಗುತ್ತಿದ್ದೇನೆ, ಆದರೆ ನಿನ್ನ ಮೋರೆಯು ಒಣಗಿರುವದೇಕೆ? ನಿನಗೆ ಬಹಳ ದಿನಗಳಿಂದ ಹೊಡೆತ ಬಿದ್ದಿಲ್ಲವೆಂದು ಸಿಟ್ಟಿಗೆದ್ದಿರುವಿಯಾ? ಕಪಾಳಮೋಕ್ಷವನ್ನು ಕೊಟ್ಟರೆ ನಗುವಿಯಾ? ಹೆಂಗಸರನ್ನು ನಗಿಸಲು ಪ್ರಯತ್ನಿಸಿದರೆ ಅವರು ಅಳುತ್ತಾರೆ. ಅವರನ್ನು ಅಳಿಸಬೇಕೆಂದರೆ ನಗುತ್ತಾರೆ. ನಾನು ಹೊಡೆಯುವದರಿಂದ ನಿನಗೆ ಆನಂದವಾಗುವದು. ಅಲ್ಲವೇ ? ಮಾತಾಡು ಸಟವಿ "

ಶುಕ್ರಿಯು ಮಾತನಾಡಲಿಲ್ಲ. ಅವಳು ಗುಡಿಸಲನ್ನು ಬಿಟ್ಟು ಹೊರಗೆ ಹೋದಳು. ಶೂನ್ಯ ಮನಸ್ಕಳಾಗಿ ಅವಳು ಎತ್ತಲೋ ನೋಡುತ್ತಿದ್ದಳು. ಮಂಗಳ್ಯಾನು ಬೆನ್ನ ಹಿಂದೆಯೇ ಬಂದ. ಒಂದು ಗಿಡದ ಬುಡದಲ್ಲಿ ಅವಳು ಮೋರೆ ತಿರುವಿ ಕೂತಿದ್ದಳು. ಅವನು ಮೆಲ್ಲನೆ ಹೋಗಿ ಅವಳ ಕಣ್ಣು ಮುಚ್ಚಿದನು

' ಏನಿದು ? ಅಳುತ್ತಿರುವಿಯಾ ? ನಿನಗೆ ಆದುದಾದರೂ ಏನು? ಏನೆ, ನೀನು ಬಸಿರಾದುದನ್ನು ನೋಡಿ ನನಗೆ ಬಹಳ ನಗೆ ಬರುತ್ತಿತ್ತು. ನನ್ನ ಆನಂದವು ಹೊಟ್ಟೆಯಲ್ಲಿ ಹಿಡಿಸದಾಯಿತು. ಶುಕ್ರಿಗೆ ಮಗುವಾಗುವದೆಂದು, ನಾನು ಸಂತೋಷದಲ್ಲಿದ್ದೆ. ಹೀಗೇಕೆ ಅಳುವಿ ? ನಿನಗೆ ಚಿಂತೆ ಯಾತರದು ? ಆ ಪಾದ್ರಿಯ ಆಸ್ಪತ್ರೆಯಲ್ಲಿ ನಿನ್ನನ್ನು ಒಯ್ದಿಡುವೆನು. ಶುಕ್ರಿ, ಚಿಂತೆ ಮಾಡಬೇಡ. ಮಗುವಿಗಾಗಿ ಈ ಗಿಡಕ್ಕೆ ಜೋಕಾಲಿಯನ್ನು ಕಟ್ಟೋಣ. ಅವನಿಗಾಗಿ ಹಾಡನ್ನು ಹಾಡೋಣ. ಅಳಬೇಡ. "

ಈ ಬಗೆಯಾಗಿ ಸಮಾಧಾನ ಮಾಡುತ್ತ ಅವನು ಅವಳ ಕಣ್ಣೊರಿಸಿದನು. ಇಬ್ಬರೂ ಅಲ್ಲಿದ್ದರು. ಬೆಳದಿಂಗಳು ಬಿದ್ದಿತು. ದೂರದಲ್ಲಿ ನಾಯಿಗಳು ಒದರುತ್ತಿದ್ದವು. ಶುಕ್ರಿಗೆ ಮತ್ತೆ ದುಃಖವು ಒತ್ತರಿಸಿತು.

" ಏನ್ನೆ, ನಿನಗೆ ಅಳಲಿಕ್ಕೇನಾಯಿತು ? "

" ನಿಮಗೆ ಹೇಳತಕ್ಕ ಸಂಗತಿಯೊಂದಿದೆ "

" ಏನದು ? "

" ನೀವು ಕೇಳುವಿರಾ ? "

" ಕೇಳುತ್ತೇನೆ "

" ಹತ್ತು ಹದಿನೈದು ದಿನಗಳ ವರೆಗೆ ಎಲ್ಲಿಗಾದರೂ ಹೋಗಿರಿ ? "

" ಏಕೆ ? "

" ಅಂದರೆ ನಾನು ಸುಖವಾಗಿ ಹಡೆದೇನು. ನೀವು ಬರುವಷ್ಟರಲ್ಲಿ ಮನೆಯಲ್ಲಿ ಮಗುವಾಗಿರುವದು "

" ನಾನಿದ್ದರೆ ನಿನಗೆ ಹೆದರಿಕೆಯಾಗುವದೇ ? "

" ಹೌದು "

" ಆದರೆ ನೀನು ಒಬ್ಬಳೇ ಇರುವಿಯಾ ? "

" ಇರುವೆ "

" ಧನಜಿಯು ಬಂದರೆ ? "

" ಅವನ ಪ್ರಾಣವನ್ನು ಕೊಂಡೇನು ? "

" ಆವಾಗ್ಗೆ ಯಾಕೆ ತೆಗೆದುಕೊಳ್ಳಲಿಲ್ಲ ? "

" ಅವನಿಗೆ ಎಂದೆಂದಿಗೂ ನೆನಪಿರುವಂತೆ ಆ ವೇಳೆಯಲ್ಲಿ ಅವನನ್ನು ಕಡಿದಿದ್ದೇನೆ. ನೀಚ, ದುಷ್ಟ "

" ಶುಕ್ರೀ ನಿಜವಾಗಿ ನಾನು ಹೋಗಬೇಕೆ ? ನಿನಗೆ ವೇದನೆಗಳು ಆಗ ಬಹುದು ಧೈರ್ಯಕೊಡುವವರಾರು ? "

" ಆ ವೇದನೆಗಳಿಂದ ನನಗೆ ಸುಖವಾಗುವದು. ಯಾಕಂದರೆ ಮಗುವು ಜನಿಸುವದು "

" ನೀನು ಗಂಡು ಹಡೆಯುವಿಯೋ ? ಅಥವಾ ಹೆಣ್ಣೋ "

" ನಾನು ಏನು ಹೇಳಲಿ ? "

" ಮಗುವಿನ ಬಣ್ಣ ಹೇಗಿರಬಹುದು. ಕಪ್ಪೋ ಅಥವಾ ಕೆಂಪೋ ? "

" ನಾವಿಬ್ಬರೂ ಕಪ್ಪಾಗಿದ್ದೇವೆ "

" ಶುಕ್ರೀ ನಾನು ಹೋಗಲ್ಯಾ ? "

“ ಹೋಗು ”

“ ಮಂಗಳ್ಯಾನು ನಿಜವಾಗಿ ಹೊರಟು ಹೋದನು ಆ ಅರಣ್ಯದಲ್ಲಿ ಶುಕ್ರಿಯೊಬ್ಬಳೇ ಇದ್ದಳು ರಾತ್ರಿ ಕಳೆದು ಬೆಳಗಾಯಿತು. ಅವಳು ಗುಡಿಸಲ ದಲ್ಲಿದ್ದಳು. ಕೆಲವು ಗಡ್ಡೆಗಳನ್ನು ಬೇಯಿಸಿ ಅವಳು ತಿಂದಳು. ತಪ್ಪಲುಪಲ್ಲೆ ಯನ್ನು ಮಾಡಿ ಆಡು ಕುರಿಗಳಂತೆ ಅವಳು ತಿಂದಳು.

ಮೂರನೇ ಪ್ರಹರದಲ್ಲಿ ಅವಳು ಬೇನೆ ತಿನ್ನಹತ್ತಿದಳು. ಅವಳು ಅಲ್ಲಿ ತಳಮಳಿಸುತ್ತಿದ್ದಳು. ಹತ್ತಿರ ಯಾರೂ ಇಲ್ಲ. ಹುಡುಗ ಹುಟ್ಟುವನು! ಒಬ್ಬ ಅಜ್ಜಿಯಿಂದ ಎಲ್ಲವನ್ನು ಅವಳು ಕೇಳಿಕೊಂಡಿದ್ದಳು. ಗಳದ ಚೂರಿ ಯನ್ನು ತಯಾರಿಸಿ ಇಟ್ಟಿದ್ದಳು. ಅವಳು ನಡಗುತ್ತಿದ್ದಳು. ಉಸಿರುಕಟ್ಟಿತು. ಹತ್ತಿರ ಯಾರೂ ಇಲ್ಲ. ಇತ್ತಕಡೆಗೆ ಗೂಗೆ ಒದರುತ್ತಿತು. ಮತ್ತು ದೂರದಲ್ಲಿ ನಾಯಿ ಭೋ ಭೋ ಎಂದು ಕೂಗುತ್ತಿತ್ತು. ಶುಕ್ರಿಯ ಲಕ್ಷವು ಹಡೆಯು ವದರ ಕಡೆಗಿತ್ತು. ಮಗುವು ಹುಟ್ಟಿತು! ಕೆಂಪು ಬಣ್ಣದ ಹುಡುಗ, ಶುಕ್ರಿಯು ಚೀರಿಕೊಂಡಳು. ಅವಳು ಆ ಹುಡುಗನನ್ನು ಅಲ್ಲಿಯೇ ಒಗೆದಳು! ಅದು ಅಳಹತ್ತಿತು.

× × × ×

ಇಂದು ಮೂರನೆಯ ದಿನ! ರಾತ್ರಿಯ ಸಮಯ. ಶುಕ್ರಿಯು ಎದ್ದಿದ್ದಾಳೆ. ಅವಳು ಕೈಯ್ಯಲ್ಲಿ ಏನನ್ನೋ ತೆಗೆದುಕೊಂಡಿದ್ದಾಳೆ. ಆಕೆ ಎಲ್ಲಿಗೆ ಹೋಗುತ್ತಿರುವಳು? ಅವಳು ನಡಗುತ್ತಿದ್ದಳು. ಒಮ್ಮೆಲೆ ಅವಳ ಕೈಯಿಂದ ಏನೋ ಕೆಳಗೆ ಬಿತ್ತು. ಅದು ಏನಿರಬಹುದು? ಅದು ಸಜೀವವೇ, ನಿರ್ಜೀವವೇ? ಸಪ್ಪಳವಿಲ್ಲ, ಅಳುವಿಲ್ಲ, ಆ ಮಗು ಜೀವಂತವಿಲ್ಲವೇಕೇ? ಅದರ ಕುತ್ತಿಗೆ ಹಿಚುಕಿದವರಾರು? ಶುಕ್ರೀ ನೀನೇನು ಮಾಡಿದೆ?

ಇಷ್ಟರಲ್ಲಿ ಯಾರೋ ಬರುತ್ತಿರುವರೆಂದು ಅವಳಿಗೆ ಅನಿಸಿತು. ಅವಳು ಗಾಬರಿಯಾದಳು. ಬ್ಯಾಟರಿಯ ಬೆಳಕು ಬಿತ್ತು. ಅವರು ಪೋಲೀಸರು. ಅವಳು ಬಗ್ಗಿದಳು ಅವರು ಹತ್ತಿರ ಬಂದರು.

“ ಯಾರವರು? ” ಯಾರೋ ಒದರಿದರು.

ಶುಕ್ರಿಯು ಅಳತೊಡಗಿದಳು. ಪೋಲೀಸರು ಅವಳನ್ನು ಸುತ್ತುಗಟ್ಟಿದರು.

“ ನೀನು ಯಾರು ? ಅಳುವಿಯೇಕೆ ? ”

“ ನನ್ನ ಕೂಸು ಸತ್ತಿತು. ”

ಪೋಲೀಸರು ಅರಿವೆಯಲ್ಲಿ ಸುತ್ತಿದ್ದ ಆ ಕೂಸಿನ ಕಡೆಗೆ ನೋಡಿದರು. ಅದು ಸತ್ತ ಕೂಸು. ಕೆಂಪು ಕೆಂಪಾದ ಕೂಸು. ಪೋಲೀಸರು ಆಶ್ಚರ್ಯ ಚಕಿತರಾದರು.

“ ಈ ಕೂಸು ಯಾರದು ? ”

ಶುಕ್ರಿಯು ಮಾತನಾಡಲಿಲ್ಲ. ಅವಳು ಅಳುತ್ತಿದ್ದಳು. ನಡುಗುತ್ತಿದ್ದಳು

“ ಏನ್ರೆ, ಯಾರ ಕೂಸಿದು ? ”

“ ನನ್ನದು. ”

“ ನಿನ್ನ ಕೂಸೇ ? ಇಷ್ಟು ಕೆಂಪು ಬಣ್ಣದ್ದು ? ನಿನ್ನ ಗಂಡನು ಕೆಂಪ ಗಿರುವನೇನು ? ”

“ ಈ ಕೂಸು ನನ್ನದು; ಆದರೆ ನನ್ನದಲ್ಲ. ”

“ ಆದ ಸಂಗತಿಯೇನು ? ”

“ ಧನಜೀಶೇಟನನ್ನು ಕೇಳಿರಿ ” ಅವಳು ಅಳಹತ್ತಿದಳು.

“ ನೀನು ಈ ಕೂಸನ್ನು ಕೊಂದೆಯಾ. ಹೌದೋ, ಅಲ್ಲವೊ ? ”

“ ಅಂದಮೇಲೆ ಜೀವದಿಂದ ಹೇಗಿಡಲಿ ? ನನ್ನ ಅಪಮಾನದ ಚಿನ್ಹವಿದು! ಜನರು ನನಗೆ ಏನೆಂದಾರು ? ನನ್ನ ಜಾತಿಗೆ ಇಂಥ ಶಿಶುವು ಬೇಡ. ಇದು ಶ್ರೀಮಂತರ ಕೂಸು. ಬಡವರ ರಕ್ತವನ್ನು ಹೀರುವವರ ಬೀಜವಿದು. ಈ ಕೂಸು ನನಗೆ ಬೇಡ. ನಾನು ಮೋರೆಯನ್ನು ಹೇಗೆ ತೋರಿಸಲಿ ? ಕಪ್ಪಾದ ಕೂಸು ಹುಟ್ಟಲೆಂದು ನಾನು ದೇವರಿಗೆ ಮೊರೆಯಿಡುತ್ತಲಿದ್ದೆ. ನನ್ನ ಗಂಡನ ಕೂಸು. ಆದರೆ ಧನಜಿಯ ಪಾಪವು ಫಲಿಸಿತು. ”

“ ಪೋಲೀಸರು ಅವಳನ್ನು ಹಿಡಿದರು. ಆ ಕೂಸನ್ನು ಸಂಗಡ ತೆಗೆದು ಕೊಂಡರು. ಅವಳು ಜೇಲಿನಲ್ಲಿದ್ದಳು. ಧನಜೀಶೇಟನು ಸಾವಿರಾರು ರೂಪಾಯಿ ಗಳನ್ನು ಅಧಿಕಾರಿಗಳಿಗೆ ಕೊಟ್ಟನು ಕೂಸು ಹುಗಿಯಲ್ಪಟ್ಟಿತು. ಹುಡುಗನ ಸಾಕ್ಷಿಯನ್ನು ದೂರ ಮಾಡಲಾಯಿತು. ಶುಕ್ರಿಯ ಮೇಲೆ ಖಟ್ಲೆಯನ್ನು ಹಾಕಲಾಯಿತು. ಇವಳು ತನ್ನ ಕೂಸನ್ನು ಕೊಂದಳೆಂಬ ಆರೋಪವು ಅವಳ

ಮೇಲೆ ಇಡಲಾಯಿತು. ಶುಕ್ರಿಗೆ ಏಳು ವರ್ಷಗಳ ಶಿಕ್ಷೆಯನ್ನು ವಿಧಿಸಲಾಯಿತು.

ಮಂಗಳ್ಯಾನು ಎಲ್ಲಿದ್ದಾನೆ? ಅವನಲ್ಲಿ ಸೇಡು ತೀರಿಸಿಕೊಳ್ಳುವ ಬುದ್ಧಿ ಹೊತ್ತಿತೊಡಗಿದೆ. ಧನಜೀಶೇಟನನ್ನು ಚೂರುಮಾಡುವೆ, ಅಂದರೇನೆ ಮಂಗಳ್ಯಾನೆಂಬ ನನ್ನ ಹೆಸರು ಸಾರ್ಥಕ ' ಎಂದು ಅವನು ಪ್ರತಿಜ್ಞೆಗೈದನು. ಒಂದು ದಿವಸ ರಾತ್ರಿಯ ಸಮಯದಲ್ಲಿ ತನ್ನ ಬಂಗಲೆಯ ಅಂಗಳದಲ್ಲಿ ಧನಜೀಶೇಟನು ಕುಳಿತಿದ್ದನು. ಕೈಯ್ಯಲ್ಲಿ ಹೂಗಳಿದ್ದವು. ಮಂಗಳ್ಯಾನು ನರೆಕುಡಿದು ಮತ್ತನಾಗಿದ್ದನು ಅವನ ಕೈಯಲ್ಲಿ ಕೊಡ್ಲಿಯಿತ್ತು. ಅವನು ಒಳಗೆ ಬಂದನು ಧನಜೀಶೇಟನ ತಲೆಗೆ ಕೊಡ್ಲಿಯಿಂದ ಹೊಡೆದನು. ಒಂದು ಭಯಂಕರವಾದ ಚೀರಾಟ. ಪುನಃ ಹೊಡೆದನು ಧನಜೀಶೇಟನು ಸತ್ತು ಬಿದ್ದನು. ಮನೆಯಲ್ಲಿಯ ಜನರು ಓಡುತ್ತ ಬಂದರು. ಗಾಡಿಗಳೂ, ಜನರೂ ಓಡಿಬಂದರು. ಅಲ್ಲಿಯ ದೃಶ್ಯವನ್ನು ಯಾರು ವರ್ಣಿಸುವರು?

× × × ×

ಮಂಗಳ್ಯಾನ ಖಟ್ಲೆಯನ್ನು ವಿಚಾರಮಾಡಿ ಅವನಿಗೆ ಗಲ್ಲಿನ ಶಿಕ್ಷೆಯನ್ನು ಕೊಡಲಾಯಿತು. ಜೇಲಿನಲ್ಲಿಯ ಫಾಸೀ ಶಿಕ್ಷೆಯ ಕೋಣೆಯಲ್ಲಿ ಅವನಿದ್ದಾನೆ. ಶುಕ್ರಿಯು ಭೆಟ್ಟಿಯಾದರೆ ಒಳಿತಾದೀತೆಂದು ಅವನ ಮನಸ್ಸಿನಲ್ಲಿ ಬಂತು. ಒಂದು ದಿನ ಅವನು ಜೇಲಿನ ಅಧಿಕಾರಿಗಳಿಗೆ ಪ್ರಾರ್ಥಿಸಿದನು. ಶುಕ್ರಿಯು ಅದೇ ಜೇಲಿನಲ್ಲಿಯ ಹೆಂಗಸರ ಕೋಣೆಯಲ್ಲಿದ್ದಳು ಅವಳು ಎಲ್ಲ ಸಂಗತಿಯನ್ನು ಕೇಳಿದ್ದಳು. ಅವಳು ಬಹುಶಃ ಊಟವನ್ನು ಮಾಡುತ್ತಿರಲಿಲ್ಲ. ಅವಳ ಜೀವನದಲ್ಲಿಯ ಆನಂದವೆಲ್ಲ ಹೊರಟು ಹೋಗಿತ್ತು.

ಫಾಶೀ ಕೋಣೆಯಲ್ಲಿ ಮಂಗಳ್ಯಾನು ಕುಳಿತಿದ್ದಾನೆ. ಮತ್ತು ಶುಕ್ರಿಯು ಹೊರಗೆ ನಿಂತಿದ್ದಾಳೆ. ಎದುರಿಗೆ ಪೋಲೀಸರಿದ್ದಾರೆ.

“ ಶುಕ್ರೀ, ಅಳಬೇಡ ಯಾವ ಪಾಪಿಯು ತನ್ನ ಪಾಪದ ಕುರುಹು ದೂರಮಾಡಿ, ನಿನ್ನ ಹೆಸರನ್ನು ಕೆಡಿಸಿ, ನಿನಗೆ ಶಿಕ್ಷೆಯನ್ನು ಕೊಡಿಸಿದನೋ ಅವನನ್ನು ನಾನು ಕೊಂದಿದ್ದೇನೆ. ನಾನು ಸುಖದಿಂದ ಸಾಯುವೆನು ನಿನ್ನ ಹಾದಿಯನ್ನು ಕಾಯುತ್ತ ಮೇಲೆ ಕೂಡುವೆನು. ಅಲ್ಲಿ ಭೆಟ್ಟಿಯಾಗೋಣ,

ನಗೋಣ, ಆಡೋಣ. ಕಣ್ಣೀರನ್ನು ಒರಿಸಿಕೋ. ಅಡವಿಯಲ್ಲಿ ಯಾವ ಪ್ರಕಾರವಾಗಿ ನಗುತ್ತಲಿದ್ದೆಯೋ ಹಾಗೆಯೇ ಒಮ್ಮೆ ನಗು ನೋಡೋಣ. ನಿನ್ನ ಪ್ರೀತಿಗಾಗಿ ನಾನು ಸಾಯುತ್ತಲಿದ್ದೇನೆ. ಮಂಗಳ್ಯಾನು ನಿನ್ನನ್ನು ಎಂದಾದರೂ ಹೊಡೆದಿದ್ದರೆ ಅದನ್ನು ಮರೆತುಬಿಡು. ಶುಕ್ರೀ, ಒಂದು ದಿನ ನಿನ್ನನ್ನು ಗಿಡಕ್ಕೆ ಕಟ್ಟಿ ನಾನು ಮಲಗಿದ್ದೆ. ನಾನು ಸೆರೆಗುಡಿದು ಬಂದಿದ್ದೆ. ಮನುಷ್ಯತ್ವ ವನ್ನು ಕಳೆದುಕೊಂಡು ಪಶುವಾಗಿದ್ದೆ. ಆದರೆ ಮೂರನೆ ದಿನ ನಾನು ನಿನ್ನನ್ನು ಮುದ್ದಿಟ್ಟೆ. ನೀನು, ಮಂಗಳ್ಯಾನು ಮಾಡಿದ ಕೆಟ್ಟತನವನ್ನು ಮರೆ. ಒಳ್ಳೆಯದನ್ನು ನೆನೆಸು." ಅವನಿಗೆ ಮಾತಾಡಲು ಆಗಲಿಲ್ಲ.

"ನಾನು ಹೇಗೆ ಜೀವಿಸಲಿ? ಜೇಲಿನಲ್ಲಿ ನಾನು ಅಲ್ಲಿ, ನೀವು ಇಲ್ಲಿ. ಇದೇ ಪ್ರಕಾರವೇ ಇದ್ದಿದ್ದರೆ ಸ್ವಲ್ಪಾದರೂ ಆಶೆಯಿತ್ತು. ಆದರೆ ನೀವು ಹೊರಟೇಹೋಗುವಿರಿ? ನನ್ನ ಪ್ರಾಣವೂ ಹೋಗಲಿ!" ಈ ಪ್ರಕಾರ ಮಾತ ನಾಡುತ್ತ ಶುಕ್ರಿಯು ಅಳಹತ್ತಿದಳು.

ಫಾಶಿಯಾಗಲು ಎರಡು ದಿನದ ಅವಕಾಶವಿತ್ತು. ಶುಕ್ರಿಯು ಊಟ ವನ್ನು ಬಿಟ್ಟಳು. ಅವಳು ಒಂದೇ ತುತ್ತು ಮಾತ್ರ ಉಂಡು ಏಳುವಳು. ಅವಳ ಪ್ರಾಣವೂ ಹೋಗುವದೇ? ಮಂಗಳ್ಯಾನು ಮತ್ತನಾಗಿದ್ದನು. ಅವನು ಹಾಡಹತ್ತಿದನು.

ನಿನ್ನ ನನ್ನ ಪ್ರೀತಿ
ನನಗೆ ಇಲ್ಲ ಭೀತಿ
ಫಾಸಿ ಹಗ್ಗ ಹಾರ
ಕೂಡಿಕೊಳ್ಳೋಣ ಬಾರ

"ಮಂಗಳ್ಯಾನ ಮರಣ ಸಮಯವು ಸಮೀಪಿಸಿತು. ದೇವರ ನಾಮ ವನ್ನು ಸ್ಮರಿಸು" ಎಂದು ಶಿಪಾಯಿಯು ಹೇಳಿದನು.

"ನಾನು ದೇವರ ಹೆಸರನ್ನೇಕೆ ಉಚ್ಚರಿಸಲಿ? ನಾನೇನು ಪಾಪ ಮಾಡಿರುವೆನೇ? ಪಾಪ ಮಾಡಿದವರು ದೇವರ ಹೆಸರನ್ನು ಉಚ್ಚರಿಸುವರು. ನಾನು ಶುಕ್ರಿಯ ಹೆಸರನ್ನುಚ್ಚರಿಸುವೆ. ನಾವು ಮೇಲೆ ಕೂಡೋಣ. ಅವಳು

ಉಣ್ಣುವದಿಲ್ಲೆಂದು ಕೇಳುತ್ತೇನೆ. ನನ್ನ ಕೈಯಿಂದ ಪ್ರೀತಿಯ ಹೊಡೆತವು ಅವಳಿಗೆ ಸಿಗದ ವಿನಃ ಅವಳ ಹೊಟ್ಟೆತುಂಬುವದಿಲ್ಲ. ಅವಳು ಇಲ್ಲಿ ಹೇಗೆ ಇರುವಳು ? ”

ಅಂದು ಬೆಳಗು ಹರಿದ ಕೂಡಲೇ ಅವನನ್ನು ಹೊರಗೆ ತಂದರು. ಕ್ಷಣದಲ್ಲಿ ಕಾರ್ಯವೆಲ್ಲ ತೀರಿತು. ಮತ್ತು ಇತ್ತ ಕಡೆಗೆ ಹೆಂಗಸರ ಕೋಣೆಯಲ್ಲಿ ಶುಕ್ರಿಯೂ ಸತ್ತಿದ್ದಳು. ಅವಳು ಹಾಸಿದ ಕಂಬಳಿಯ ಮೇಲೆಯೇ ಬಿದ್ದಿದ್ದಳು. ಆದರೆ ಅವಳನ್ನು ಎಬ್ಬಿಸಲು ಹೋದರೆ ಅಲ್ಲೇನಿದೆ? ಅಲ್ಲಿ ಮೃತ ಶರೀರವು ಬಿದ್ದಿತ್ತು. ಪ್ರಾಣಪಕ್ಷಿಯು ಹೊರಟು ಹೋಗಿತ್ತು. ಎರಡು ಪಾರಿವಾಳಗಳು ಪ್ರೇಮ ಸಾಮ್ರಾಜ್ಯದಲ್ಲಿ ಹೊರಟುಹೋದವು.

---

# ಗೋ



ಆಕಳು ಭಾರತದ ನನ್ನಿಯ ತಾಯಿ. ಆಕಳಿಂದ ಭಾರತವು ಪುಷ್ಟ ವಾಯಿತು; ತುಷ್ಟಿಯನ್ನು ಹೊಂದಿತು. ವೇದಕಾಲದಲ್ಲಿ ಋಷಿಗಳು ಆಕಳ ಮಹಿಮೆಯನ್ನು ತಿಳಿದರು; ಸುಮಧುರ ಕವನ ಕಟ್ಟಿ, ಬಾಯಾರೆ ಹೊಗಳಿ ದರು. ಸುರಪತಿಗಳು, ನರಪತಿಗಳು ಅದನ್ನು ಪೂಜಿಸಿದರು. ಭಾರತದ ತಾಯಂದಿರಿಗೆಲ್ಲ ಆಕಳು ಇಷ್ಟ ದೇವತೆ. ಈಗ ಕಾಲ ಬದಲಾಯಿತು. ಗೋವಿನ ಗೋಳು ಕೇಳುವವರಿಲ್ಲ; ತಿರುವುಮುರುವಿನಲ್ಲಿ ಪರಿಸ್ಥಿತಿಯೂ ತಿರುಗು ತ್ತಿದೆ. ಆಕಳು ಹಿಂದುಳಿದು, ಎಮ್ಮೆಯ ಪೂಜೆಯಾಗುತ್ತಿದೆ; ಅಂತೆಯೇ ಭಾರತ, ಈಗ ತನ್ನತನವನ್ನು ಕಳೆದುಕೊಂಡಿತು; ಅಷ್ಟೇ ಅಲ್ಲ, ಸುಖ ವಿಚಾರ – ಸದಾಚಾರಗಳ ಶಕ್ತಿಯನ್ನು ಕಳೆದುಕೊಂಡು ವೈಭವಹೀನ ವಾಯಿತು.

ಕುಲಕರ್ಣಿ ಶ್ಯಾಮರಾಯರು ಇಂಥ ಭಾರತದ ಒಂದು ಹಳ್ಳಿಯಲ್ಲಿ ವಾಸವಾಗಿದ್ದರು. ಮೊದಲು ಚನ್ನಾಗಿದ್ದ ಮನೆತನವದು; ಈಗ ಇಳಿಗಾಲ ಬಂದು ಸಾಮಾನ್ಯ ಸ್ಥಿತಿಗೆ ಇಳಿದುಬಿಟ್ಟಿತು. ಶ್ಯಾಮರಾಯರ ಪತ್ನಿ ಕರ್ತವ್ಯ ದಕ್ಷ ಗೃಹಿಣಿ. ಅವರಿಗೆ ಇಬ್ಬರು ಮಕ್ಕಳು. ಮನೆಗೆ ದೊಡ್ಡ ಹಿತ್ತಲು. ದನದ ಹಕ್ಕಿಯಲ್ಲಿ ಗಂಟೆಯ ನಿನಾದ ಕೇಳಬರುತ್ತಿದೆ ಒಂದು ಆಕಳು, ಒಂದು ಎಮ್ಮೆ ಇವೆ. ಆಕಳು ಕರಿಯ ಬಣ್ಣದ್ದು. ಮೋರೆಯ ಮೇಲೆ ಚಂದಪ್ಪನ ಆಕಾರದ ಕಲೆಯಿದೆ; ಆದರ ಹೆಸರು ಕಪಿಲೆಯೆಂದು. ಅದು ಕೂಡ ಉಜ್ವಲ ಪರಂಪರೆಯಲ್ಲಿ ಬೆಳೆದದ್ದು. ಮೊಟ್ಟ ಮೊದಲು ಇದರ ಅಜ್ಜಿ ಈ ಮನೆಯಲ್ಲಿ ಕಾಲಿಟ್ಟಿತು. ಶ್ಯಾಮರಾಯನ ಅಜ್ಜನಿಗೆ ಆದೆಂದರೆ ಅಚ್ಚು ಮೆಚ್ಚಂತೆ; ಆಗ ಅದು ಸರತಿಗೆ ಹತ್ತು ಸೇರು ಹಾಲು ಕೊಡುತ್ತಿತ್ತಂತೆ; ಅದರ ಹತ್ತು ಎತ್ತುಗಳು, ಶ್ಯಾಮರಾಯರ ಅಜ್ಜನ ಬದುಕನ್ನು ನಡೆಯಿಸು ತ್ತಿದ್ದವಂತೆ. ಅದರ ಮಗಳು ಈ ಕಪಿಲೆಯ ತಾಯಿ. ಅದರ ಹೆಸರು

ತಾಂಬೂ ಎಂದು. ಶ್ಯಾಮರಾಯರ ತಂದೆಗೆ ಅದರ ಮೇಲೆ ಮೀರಿದ ಮಮತೆ; ಶ್ಯಾಮರಾಯರ ತಾಯಿ ಬೆಳಿಗ್ಗೆ ಮೊದಲು ಅದರ ಪೂಜೆ ಮುಗಿಸಿಕೊಂಡೇ—ಮುಂದಿನ ಕೆಲಸಕ್ಕೆ ತೊಡಗುವರು. ಒಂದು ದಿನ ಮುಪ್ಪಾದ ತಾಂಬೂ ಸತ್ತಿತು. ಆ ದಿನವೆಲ್ಲ ಶ್ಯಾಮರಾಯರ ತಂದೆಯ ಕಣ್ಣೀರು ತಪ್ಪಲಿಲ್ಲ.... ...

ಕಪಿಲೆಗೆ ಅವೆಲ್ಲ ನೆನಪಾಗಿ ಅಳು ಬರುತ್ತದೆ. ಅದು ಮನಸ್ಸಿನಲ್ಲಿಯೇ ವಿಚಾರ ಮಾಡುತ್ತ ತನ್ನ ತಾಯಿ ಹೋಗಿ ಪುಣ್ಯ ಮಾಡಿದಳೆಂದು ಅಂದು ಕೊಳ್ಳುತ್ತಿದೆ; ಯಾಕಂದರೆ ಅರಿಷಣ ಕುಂಕುಮದಿಂದ ಪೂಜೆ ಮಾಡಿಸಿಕೊಂಡ ಹಣೆ ಈಗಿದ್ದರೆ ಡೊಣ್ಣೆ ಪೆಟ್ಟು ತಿನ್ನಬೇಕಾಗುತ್ತಿತ್ತು. ಅವ್ವಾ ಈಗ ಅದೆಲ್ಲ ನೆನಪಿಗೆ ಬರುತ್ತಿದೆ ನೋಡು. ನೀನು ಸಂಭ್ರಮದಿಂದ ನನ್ನನ್ನು ನೆಕ್ಕು ತ್ತಿದ್ದುದು; ನನಗೆ ಮೈತುಂಬ ನವಿರೇಳುತ್ತಿದ್ದುದು. ಈ ಕುಟುಂಬದವರಿಂದ ನಾನು ಕೂಡ ನಿನ್ನಂತೆ ಪೂಜೆಪಡೆಯುತ್ತೇನೆಂದು ಆಗ ನಾನು ಲೆಖ್ಖ ಹಾಕು ತ್ತಿದ್ದೆ. ನಿನ್ನಂತೆ ನಾನೂ ಈ ಮನೆತನದ ಸೇವೆ ಮಾಡುವೆನೆಂದು ಆತುರ ಳಾಗಿದ್ದೆ. ಅವ್ವಾ ನನ್ನನ್ನು ನೆಕ್ಕುತ್ತ ನೆಕ್ಕುತ್ತ ಅದನೇನೋ ಹೇಳಿಕೊಡು ತ್ತಿದ್ದೆ; ಅಂಬಾ –ಎನ್ನುವ ನಿನ್ನ ಹುಂಕಾರ ಎಷ್ಟು ಗಂಭೀರವಾಗಿರುತ್ತಿತ್ತು. ನೀನು ನಿನ್ನ ಹಾಲಿನ ರೂಪದಿಂದ ಧರ್ಮಾಮೃತವನ್ನೇ ಹಣಿಸುತ್ತಿದ್ದೆಯಲ್ಲ ? ಆದರೆ ಈಗ ಹೇಗೆ ದಿನ ಕಳೆಯುವದು ! ಕಪಿಲೆಗೆ ದುಃಖ ತುಂಬಿಬರುವದು. ಗೋಳೋ ಎಂದು ಅಳುತ್ತ ನೆಲಕ್ಕೆ ಬಿದ್ದುಬಿಡುತ್ತಿತ್ತು.

ಕಪಿಲೆಯ ಕರು ಅದೇ ತೀರಿಕೊಂಡಿತ್ತು. ಚಳಿಗಾಲದ ದಿನವದು. ಅಂದು ಮಿತಿಮೀರಿದ ಚಳಿಬಿದ್ದಿತ್ತು. ನೀರು ಗಡ್ಡೆಗಟ್ಟುವಷ್ಟು ! ಮಂಜು ಮುಸುಕಿ ಗಿಡ ಮರಗಳೆಲ್ಲ ಕಾಣದಂತಾಗಿದ್ದವು. ಕಪಿಲೆಯ ಕರು ಥಂಡಿ ಯಿಂದ ನಡುಗುತ್ತ ಒರಟು ಬಂದು, ಕೈಕಾಲು ಎಳೆದುಕೊಳ್ಳುತ್ತ, ಮೂಲೆ ಯಲ್ಲಿ ಬಿದ್ದುಕೊಂಡಿತ್ತು. ಕಪಿಲೆಯನ್ನು ದೂರ ಕಟ್ಟಿದ್ದರು. ಕಟ್ಟಿದ ಕಣ್ಣೆ ದಪ್ಪವಾದದ್ದು. ಹರಿದುಕೊಂಡು ಕರುವಿನ ಹತ್ತಿರ ಹೋಗುವಂತಿರ ಲಿಲ್ಲ; ಬರುವಂತಿದ್ದರೆ ಹಾರಿಹೋಗುತ್ತಿತ್ತು; ಕರುವನ್ನು ಮಗ್ಗುಲಲ್ಲಿ ಅವಚಿಕೊಂಡು ತನ್ನ ಮೈಯ್ಯ ಕಾವನ್ನು ಅದಕ್ಕೆ ಕೊಡುತ್ತಿತ್ತು; ಮಮತೆ ಯಿಂದ ನೆಕ್ಕಬಹುದಾಗಿತ್ತು; ಆದರೆ ಅದೆಲ್ಲ ಈಗ ಸಾಧ್ಯವಿಲ್ಲ. ತನ್ನ ಎದುರೇ

ಚಳಿಯಿಂದ ಕರುವಿನ ರಕ್ತ ಗಟ್ಟಿಯಾಗುತ್ತಿತ್ತು; ಆದರೆ ಅದು ಏನೂ ಮಾಡುವಂತಿರಲಿಲ್ಲ; ಅಯ್ಯೋ!

ಮನೆಯ ಒಳಗೆ ಶ್ಯಾಮರಾಯರು ಗುದ್ದುವೊಳ ಗಾದಿಯ ಮೇಲೆ ಮಲಗಿ, ಮೇಲೆ ರಜಾಯಿ ಹೊತ್ತುಕೊಂಡು ಮೇಲೊಂದು ರಗ್ಗನ್ನು ಹೊದ್ದು ಕೊಂಡಿದ್ದರು. ಮಕ್ಕಳಿಗೆಲ್ಲ ಎರಡೆರಡು ರಗ್ಗನ್ನು ಹೊದಿಸಿದ್ದರು. ಆದರೆ ಕಪಿಲೆಗೆ— ? ಅದು ಕೂಡ ಈ ಮನೆತನಕ್ಕೆ ಹೊಂದಿಕೊಂಡ ಒಂದು ಪ್ರಾಣಿ ಯಲ್ಲವೇ ? ಅದು ಮನೆತನದ ಇಷ್ಟದೇವತೆಯಲ್ಲವೇ ? ಹೋಗಲಿ, ಕಪಿಲೆಯ ಮಾತು ಬಿಡೋಣ. ಅದರ ಕರುವನ್ನಾದರೂ ಕರುಣೆಯ ದೃಷ್ಟಿಯಿಂದ ಈ ಜನ ನೋಡಬಾರದಿತ್ತೆ? ಚಳಿಯಿಂದ ನಡಗುವ ಅದರ ಮೇಲೆ ಎರಡು ತಟ್ಟಿನ ತುಂಡನ್ನು ಚಲ್ಲಿದ್ದರೆ, ಕಪಿಲೆಯು ಅವರನ್ನು ಹಾಡಿ ಹರಸುತ್ತಿತ್ತು. ತನ್ನ ಕರುವಿನ ಮೇಲಿದ್ದ ತುಂಡು ತಟ್ಟನ್ನೇ ಅದು ಪೀತಾಂಬರವೆಂದು ತಿಳಿದುಕೊಳ್ಳು ತ್ತಿತ್ತು. ಗೋಕುಲದ ಗೋಪಾಲಕೃಷ್ಣ ತನ್ನ ಮೈಮೇಲಿನ ಪೀತಾಂಬರ ವನ್ನು ಆಕಳಿಗೆ ಹೊದಿಸುತ್ತಿದ್ದ; ತನ್ನ ಕೈಯಲ್ಲಿದ್ದ ರೊಟ್ಟಿಯ ತುಂಡನ್ನು ಮೊದಲು ಆಕಳ ಬಾಯಲ್ಲಿಡುತ್ತಿದ್ದ; ಆದರೆ ಈ ಜನ ಕಪಿಲೆಯನ್ನು ನೋಡು ತ್ತಿರಲಿಲ್ಲ; ಅದರ ಕರುವಿನ ಸುಖ ದುಃಖವನ್ನು ಕೇಳುತ್ತಿರಲಿಲ್ಲ.

ಥಂಡಿಯಿಂದ ಕರುವು ಗಾಬರಿಯಾಗಿದ್ದಿತು ಬೆಳಿಗ್ಗೆ ಸೂರ್ಯ ಉದಿಸಿ ನನ್ನ ಕಂದನಿಗೆ ಕಾವು ಕೊಟ್ಟಾನು. ಮೈಗೆ ಅವಚಿಕೊಂಡು, ನೆಕ್ಕುತ್ತ ಅದಕ್ಕೆ ಬಿಸಿಯಾದ ಹಾಲು ಉಣಿಸಿಯೇನೆಂದು ಕಪಿಲೆ ತದ್ರೇಕ ಚಿತ್ತಳಾಗಿ ದಾರಿಕಾಯುತ್ತಿತ್ತು ಲಕ್ಷವೆಲ್ಲ ಕರುವಿನ ಕಡೆಗೇ ಇತ್ತು. ಬೆಳಗಿನ ಸಮಯ ಸಮೀಪ ಬಂದ ಬಂದಂತೆ ಕಪಿಲೆಯ ಜೀವ ಕೆಳಗೆ ಮೇಲಾಗತೊಡಗಿತು. ಆಶೆ – ನಿರಾಶೆ – ಜೀವನ – ಮರಣಗಳ ಚಿತ್ರಗಳು ಕಣ್ಮುಂದೆ ಹಾದು ಹೋಗುತ್ತಿದ್ದವು. ಮೂಲೆಯಲ್ಲಿದ್ದುದೇನು ? ಅದೇನು ಎಲಬು ಮಾಂಸಗಳ ಬರಿಯ ಮುದ್ದೆಯೇ ಅಥವಾ ಬರಿಯ ಮಣ್ಣೊ ? ಪ್ರಾಣವಿದ್ದೀತೆ ? ಇಂಥ ಎಷ್ಟೋ ಚಿತ್ರಗಳು.

ಶ್ಯಾಮರಾಯರೆದ್ದರು. ಮೈಮೇಲೆ ಕಂಬಳಿ ಇತ್ತು. ನೀರೊಲೆಯ ಮುಂದೆ ಕುಳಿತು ಕೈ ಬೆಚ್ಚಗೆ ಮಾಡಿಕೊಂಡಿದ್ದರು. ಹೊರಗೆ ಬಂದರು.

ಕೈಯಲ್ಲಿ ಹಾಲಿನ ಪಾತ್ರೆ ಇತ್ತು. ಥಂಡಿಯಿಂದ ಕೈಗೆ ನಡುಕ ಹುಟ್ಟಿ ಪಾತ್ರೆ ಕೆಳಗೆ ಬಿತ್ತು. ಕಪಿಲೆಯನ್ನು ಹಿಂಡಿಕೊಳ್ಳುವದಕ್ಕೆ ಹೊರಟಿದ್ದರು. ಇತ್ತೀಚೆ ಕಪಿಲೆ ಹಾಲು ಬಹಳ ಕೊಡುತ್ತಿರಲಿಲ್ಲ.

ಶ್ಯಾಮರಾಯರು ದನದ ಹಕ್ಕಿಗೆ ಬಂದರು. ಕಪಿಲೆಯು ಕರುವನ್ನು ಕಟ್ಟಿದ ಮೂಲೆಯತ್ತ ನೋಡುತ್ತ ಚಡಪಡಿಸುತ್ತಿತ್ತು. ಶ್ಯಾಮರಾಯರು ಕರುವಿನ ಹತ್ತಿರ ಹೋದರು; ಆದರೇನು—ಕರುವು ಸತ್ತುಬಿದ್ದಿತ್ತು. ಆಣೆಕಲ್ಲಿ ನಷ್ಟು ತಣ್ಣಗಾದ ಮುದ್ದೆಯೊಂದದು! ಅದನ್ನವರು ಆಚೆ ಈಚೆ ಅಲುಗಾಡಿಸಿದರು. ಕೈಯಲ್ಲಿಯ ಕೋಲಿನಿಂದ ಸ್ವಲ್ಪ ತಿವಿದರು. ಕಪಿಲೆಗೆ ಇಂದು ಇದನ್ನೆಲ್ಲ ನೋಡಲಿಕ್ಕಾಗಲಿಲ್ಲ. ಮೋರೆಯನ್ನು ಆಚೆಗೆ ತಿರುವಿತು. ಶ್ಯಾಮರಾಯರು ಅದನ್ನು ದರ ದರ ಎಳೆದರು. ತನ್ನ ಕರುವನ್ನು ಹೀಗೆ ದರ ದರ ಎಳೆದದ್ದು ಕಪಿಲೆ ತನ್ನ ಅಂತಃಕರಣವನ್ನೇ ಜಗ್ಗುತ್ತಿರುವಂತೆ ಭಾಸವಾಗುತ್ತಿತ್ತು. ಅಯ್ಯೋ, ನನ್ನ ಕಂದನನ್ನೆಲ್ಲಿ ಒಯ್ಯುತ್ತೀರಿ; ಇಲ್ಲಿ ನನ್ನ ಹತ್ತಿರ ತನ್ನಿರಿ; ಅದಕ್ಕೆ ಕೊನೆಯ ಮೊಲೆಯುಣಿಸುತ್ತೇನೆ; ಅದಿನ್ನೂ ಸತ್ತಿರಲಾರದು" ಆದರೆ ಅದರ ಮಾತು ಯಾರಿಗೆ ತಿಳಿದೀತು ಶ್ಯಾಮರಾಯರ ತಂದೆ ಅಜ್ಜಂದಿರಿಗೆ ಅದರ ಮಾತು ತಿಳಿಯುತ್ತಿತ್ತು; ಆದರೆ ಶ್ಯಾಮರಾಯರಿಗೆ ತಿಳಿಯುತ್ತಿರಲಿಲ್ಲ. ಅವರು ಸ್ವಲ್ಪ ಇಂಗ್ಲೀಷ ಕಲಿತಿದ್ದರು. ಗೋವಿನ ಭಾಷೆ—ಮೂಕಪ್ರಾಣಿಗಳ ಭಾಷೆ—ಕಣ್ಣೀರಿನ ಭಾಷೆ ಅವರಿಗೆ ತಿಳಿಯುತ್ತಿರಲಿಲ್ಲ.

ಕಪಿಲೆಯ ಜೀವನವೇ ಇಂದಿಗೆ ನಿಂತಿತು; ಅದರ ಪಂಚಪ್ರಾಣವೇ ಹಾರಿಹೋಯಿತು. ಶ್ಯಾಮರಾಯರು ಅದರೆದುರು ಸ್ವಲ್ಪ ಹುಲ್ಲು ಚಲ್ಲಿದರು. ಮತ್ತೆ ಹಿಂಡಿಕೊಳ್ಳಬೇಕಾಗಿತ್ತು. ಒದೆಯಬಂದರೇನು ಗತಿ? ಹಾಲು ಕರೆಯಲು ಶ್ಯಾಮರಾಯರು ಬಂದು ಕುಳಿತರು. ಯಾವ ಆಕಳು ಒಂದು ಕ್ಷಣ ಪೂರ್ವದಲ್ಲಿ ತನ್ನ ಕರುವನ್ನು ಕಳೆದುಕೊಂಡು ದೀನೆಯಾಗಿತ್ತೋ, ಅಂಥ ಆಕಳಿಂದ ಹಾಲು ಕರೆಯುವದಕ್ಕಾಗಿ ಶ್ಯಾಮರಾಯರು ಬಂದು ಕುಳಿತರು! ಆಕಳ ಹೃದಯ ಅವರಿಗೆ ಹೇಗೆ ತಿಳಿದೀತು? ಅದಕ್ಕೂ ಭಾವನೆ ಇದ್ದಿತು. ದುಃಖೀ ಜೀವನ! ಅಂದು ಅದು ಹೇಗೆ ತೊರೆ ಬಿಟ್ಟೀತು; ತೊರೆ ಬಿಡಲಿಲ್ಲ. ಶ್ಯಾಮರಾಯರು ಮೊಲೆಯನ್ನು ಜಗ್ಗಹತ್ತಿದರು. ಕಪಿಲೆಗೆ ವೇದನೆ

ಆಯಿತು. ತಡೆಯಲಾರದೇ ಸ್ವಲ್ಪ ಕಾಲು ಎತ್ತಿತು; ಮೆಲ್ಲನೆ ಮತ್ತೆ ಕೆಳಗೆ ಕಾಲು ಬಿಟ್ಟಿತು; ಯಜಮಾನನಿಗೆಲ್ಲಿ ತಾಕುವದೋ ಎಂಬ ಭಯ ಅದಕ್ಕೆ. ಇವರ ತಂದೆ ತನ್ನ ತಾಯನ್ನು ಪೂಜಿಸಿದರು; ಅವರ ಮಗ ಇವರು; ಅಂಥವರನ್ನು ಹೇಗೆ ಒದೆಯುವದು ? ಶ್ಯಾಮರಾಯರಿಗೆ ತಾಳ್ಮೆ ಕಡಿಮೆ. ಕೈಯಲ್ಲಿಯ ಕೋಲಿನಿಂದ ಅದರ ಬೆನ್ನ ಮೇಲೆ ಏಟು ಹಾಕಿದರು. ಮೊದಲೇ ನೊಂದುಕೊಂಡ ಅದು ತಾಳಲಾರದೇ ಶ್ಯಾಮರಾಯರನ್ನು ಒದೆಯಿತು. ಶ್ಯಾಮರಾಯರು ಕ್ಷುಬ್ಧರಾದರು. ಕೋಲಿನಿಂದ ರಪ ರಪ ನಾಲ್ಕು ಏಟು ಹೊಡೆದರು. ಅಷ್ಟರಲ್ಲಿ ಅವರ ಮಗ ವಾಮನ ಹೊರಗೆ ಬಂದು " ಅಪ್ಪಾ, ಕರುವನ್ನು ಕಳೆದುಕೊಂಡಿದೆ. ಇಂದು ಅದು ತೊರೆ ಬಿಟ್ಟಿರಲಿಕ್ಕಿಲ್ಲ; ಹೋಗಲಿ ಬಿಡು; ಸುಮ್ಮನೇ ಯಾಕೆ ಹೊಡೆಯುತ್ತೀ " ಎಂದು ದೈನಾಸಪಡುತ್ತ ಹೇಳಿದ.

" ಹಾಗಾದರೆ ಪಾತ್ರೆಯನ್ನು ಹೇಗೆ ತಕ್ಕೊಳ್ಳುವದು; ಆಕಳ ಹಾಲಿನಲ್ಲಿ ಅದನ್ನು ತಕ್ಕೊಳ್ಳಬೇಕಲ್ಲವೆ ? ಸ್ವಲ್ಪ ಹಾಲು ಸಿಕ್ಕಿದ್ದರೆ ಸಾಕಾಗಿತ್ತು."

ಕಪಿಲೆಗೆ ಈ ಮಾತು ಕೇಳಿಸಿತು. ತನ್ನ ದುಃಖ ಮರೆಯಿತು. ಸತ್ವಶೀಲ ಪ್ರಾಣಿಯದು. ರಾತ್ರಿ ಹಗಲು ಕೈ ಹಾಕಿದಾಗ್ಗೆ ಹಾಲು ಕೊಡುತ್ತಿದ್ದ ತನ್ನ ತಾಯಿಯ ಗುಣ ಅದಕ್ಕೀಗ ನೆನಪಾಯಿತು. ತಾನು ಕೂಡ ಆ ಗುಣ ಪರಂಪರೆಯನ್ನು ಸಾಗಿಸಬೇಕಲ್ಲ ? ಅಮ್ಮಾ ನಾನು ನಿನ್ನ ಮಗು, ಅಂದ ಮೇಲೆ ನಿನ್ನ ಗುಣ ನನ್ನಲ್ಲೂ ಬರಬೇಕು; ಇದೋ ನೋಡು, ಯಜಮಾನ ಅತ, ಹೇಗೋ ಇರಲೊಲ್ಲ; ನಾನು ತೊರೆ ಬಿಡುತ್ತೇನೆ; ಹೀಗೆ ಮನಸ್ಸಿನಲ್ಲಿ ಅಂದುಕೊಂಡಿರಬೇಕು; ತೊರೆ ಬಿಟ್ಟಿತು. ಪಾತ್ರೆಯಲ್ಲಿ ಹಾಲಿನ ಧಾರೆಯ ನಾದ ಕೇಳಿಸಿತು. ಶ್ಯಾಮರಾಯರು " ನೋಡು ಇದರ ಗತ್ತು; ಲತ್ತೆ ಬಿತ್ತು; ಹಾದಿಗೆ ಬಂತು; ತುಂಟ ಜಾತಿಯ ಆಕಳದು; ಅದು ತಿಳಿದುಕೊಂಡಿತ್ತು; ಇಂದೊಮ್ಮೆ ಕಾಲುಜಾಡಿಸಿದರೆ, ನಾಳೆಯಿಂದ ತೊಂದರೆ ತಪ್ಪೀತೆಂದು; ನನಗೆ ತಿಳಿಯದ್ದೇ ಇದರ ಗುಣ; " ಎಂದು ತಮ್ಮ ಮಗನಿಗೆ ಹೇಳಿದರು ಶ್ಯಾಮರಾಯರು.

ಕಪಿಲೆಯ ವಿಚಾರದ ರೀತಿ ಬೇರೆ. ತಾನು ತನ್ನ ಸತ್ವ ಬಿಟ್ಟೆ; ಅದಕ್ಕೆ ಈ ಶಾಸನವೆಂದುಕೊಂಡಿತು.

ಹಾಲು ಹಿಂಡಿಕೊಂಡು, ಕಪಿಲೆಯನ್ನು ಅಡವಿಗೆ ಅಟ್ಟುವದು ಅವರ ರೂಢಿ. ಇಂದು ಹಾಗೆ ಮಾಡುವಂತಿಲ್ಲ. ಮಾದರು ಬಂದು ಕರವನ್ನೆಳೆದು ಕೊಂಡು ಹೋದಮೇಲೆ, ಅದರ ಕಣ್ಣೀ ಬಿಚ್ಚಬೇಕು. ಮಾದರವ ಬಂದ. ಕರುವನ್ನೆಳೆದುಕೊಂಡು ಹೋದ. ಕಪಿಲೆಯ ಕಣ್ಣೀಬಿಚ್ಚಿದರು. ಅದು ಮೊದಲು ತನ್ನ ಕರುವನ್ನು ಕಟ್ಟಿದ ಮೂಲೆಗೆ ಮೋರೆ ಹಾಕಿತು. ಕರುವನ್ನು ಕಂಡೇನೆ ಎಂದು ಸುತ್ತು ಮೂಸಿ ನೋಡಿತು. ನಿರಾಶೆಯಾಗಿ ಅಂಗಳಕ್ಕೆ ಬಂದಿತು ಸುತ್ತೂ ಕಣ್ಣರಳಿಸಿ ನೋಡಿತು. ಬೀದಿಗೆ ಬಂದಿತು. ತಾನು ಮತ್ತು ತನ್ನ ಕರುವು ಓಡಾಡಿದ ದಾರಿಯನ್ನೆಲ್ಲ ಹುಡುಕಿತು. ಕಾಲುಬುಡದ ಮಣ್ಣನ್ನು ಮೂಸಿನೋಡಿತು. ನಿರರ್ಗಳವಾಗಿ ಕಣ್ಣೀರು ಸುರಿಸಿತು. ದುಃಖದ ಭಾರ ಹೆಚ್ಚಾಗಿ ತೇಕುತ್ತಿದ್ದಿತು. ಅಲ್ಲಿ ಇದ್ದೀತೆ; ಇಲ್ಲಿ ಇದ್ದೀತೆ ಎಂದು ಆತುರಪಟ್ಟಿತು; ಹುಚ್ಚೆದ್ದು ಕಾನನವನ್ನೆಲ್ಲ ಹುಡುಕಿತು; ಗಿಡ ಮರಗಳೆಲ್ಲ. ತನ್ನ ದುಃಖದಲ್ಲಿ ಸಮಭಾಗಿಯೆಂದು ತಿಳಿದುಕೊಂಡಿತು.

ಆ ದಿನವೆಲ್ಲ ಕಪಿಲೆ ಏನೂ ತಿನ್ನದೆ ಉಪವಾಸದಲ್ಲಿ ಕಾಲ ಕಳೆಯಿತು ಸಂಜೆಗೆ ಮನೆಯಲ್ಲಿ ಕಾಲಿಟ್ಟಿತು. ಒಮ್ಮೆಲೆ ಕರ್ತವ್ಯದ ಅರಿವು ಜಾಗೃತ ವಾಯಿತು. ಒಡೆಯನ ಔಷಧಕ್ಕಾಗಿ ಒಂದು ಶಿಂಪು ತುಂಬುವಷ್ಟಾದರೂ ಹಾಲು ಕೊಟ್ಟೇ ತೀರಬೇಕಲ್ಲ.ಽ : ಇಡಿ ದಿನವೆಲ್ಲ ಏನೂ ತಿಂದಿರಲಿಲ್ಲ; ಅಂದು ಹಾಲು ಹೇಗೆ ಬರಬೇಕು. ಮನಸ್ಸಿಗೆಷ್ಟೇ ಬೇಡವೆನಿಸಿದರೂ ಒಡೆಯನ ಹಾಲಿಗಾಗಿ ಸ್ವಲ್ಪ ತಿಂದೇ ತೀರಬೇಕೆಂದು ನಿರ್ಧಾರ ಮಾಡಿ ಎದುರಿಗಿದ್ದ ಮೇವನ್ನು ತಿನ್ನಹತ್ತಿತು. ಕರುವನ್ನು ಕಳೆದುಕೊಂಡು ಶೋಕಸಾಗರದಲ್ಲಿ ಮುಳುಗಿದ ಕಪಿಲೆ—ಮೇವಿಗೆ ಬಾಯಿಹಾಕಿತು. ಭಾರತ ವರ್ಷದ ಆಕಳು ಅದು; ಯಾವ ಭಾರತದಲ್ಲಿ ಪಶು-ಪಕ್ಷಿ-ಚಿಗರಿಯಂಥ ಜೀವಿಗಳು ಕೂಡ ತಮ್ಮ ಸತ್ವದ ಸುಗಂಧ ಬೀರಿ, ಪೂಜೆಯ ವಸ್ತುಗಳಾದವೋ, ಅಂಥ ದಿವ್ಯ ದೇಶದಲ್ಲಿ ಹುಟ್ಟಿದ ಕಪಿಲೆಯದು! ಆದರೆ ಈಗ ಭಾರತದ ನರನಾರಿಯರು ಸ್ವಾರ್ಥ-ಲೋಭದಂಭಗಳಲ್ಲಿ ದಂಗಾಗಿ ಕುಣಿಯಬೇಕೆ? ಭಾರತ ತಾಯೀ— ಈ ಕೀಳು ಜನರ ಗೊಡವೆ ನಿನಗೆ ಬೇಡ! ಅದೋ ನೋಡು-ಗಂಗಾ-ಯಮುನಾ- ಕೃಷ್ಣಾನದಿಗಳು ನಿನ್ನ, ಕೀರ್ತಿಯನ್ನು ಉದ್ಘೋಷಿಸುತ್ತವೆ. ಕೋಗಿಲೆ- ಗಿಳಿ ಮುಂತಾದ ವಿಹಂಗ ಸಂಕುಲ ಸಂಜೆಯ ಗಾಳಿಯಲ್ಲಿ

ಪಾಯರಾಗಿ ಹಾರುತ್ತ ನಿನ್ನ ಸಂಸ್ಕೃತಿಯ ಸುಗಾನ ಮಾಡುತ್ತಿವೆ. ತಾಯೀ ಮಾನವಪುತ್ರರಿಲ್ಲ ದಾನವಪುತ್ರರಾಗಿದ್ದಾರೆ, ಅದಕ್ಕೆ ನೀನು ನೋಡಬೇಡ.

ಸಾಯಂಕಾಲ ಕಪಿಲೆಗೆ ಮೇವು ಹಾಕುತ್ತಿರಲಿಲ್ಲ. "ದಿನವೆಲ್ಲ ಅಡವಿಯಲ್ಲಿ ಚನ್ನಾಗಿ ಮೇದು ಬಂದಿದೆ, ಮತ್ತೇಕೆ ಅದಕ್ಕೆ ಮೇವು ಹಾಕುವಿ" ಎಂದು ಶ್ಯಾಮರಾಯ ತನ್ನ ಮಗ ವಾಮನನನ್ನು ಬೆದರಿಸಿದರು. ದಿನಾಲು ಅವರೇ ದನಗಳಿಗೆ ಮೇವು ಹಾಕುತ್ತಿದ್ದರು. ಕಪಿಲೆಯ ಬಾಯಿಗೆ ನಿಲುಕದಂತೆ ಎನ್ಮೊಗಷ್ಟೇ ಮೇವು ಚಲ್ಲುತ್ತಿದ್ದರು. ಎನ್ಮೊ "ತಾಯೀ ನೀನಷ್ಟು ತಿನ್ನು; ನೀನು ಉಪವಾಸವಿದ್ದು, ನಾನಷ್ಟೇ ಹೇಗೆ ತಿನ್ನುವದು" ಅನ್ನುವದು. ಕಪಿಲೆಯೂ ತನಗಲ್ಲಿದ್ದನ್ನು ತಿನ್ನುತ್ತಿರಲಿಲ್ಲ. ಕಂಡಕಂಡಸರದ್ದೆಲ್ಲ ನುಂಗಿ ನೀರು ಕುಡಿಯುವ ಮಾನವ ಅದಾಗಿರಲಿಲ್ಲ; ಎಷ್ಟಾದರೂ ಎರಡು ಕಾಲಿನ ಸರ್ವಭಕ್ಷಕ ಮಹಾಶಯನೀತ, ಇವನ ಸಾಟಿ ಅದಕ್ಕೇಕೆ ಬಂದೀತು ?

ಬೇಸಿಗೆಯ ದಿನಗಳವು. ಅಡವಿಯಲ್ಲೂ ಅದಕ್ಕೆ ನೀರು ದೊರಕುತ್ತಿರಲಿಲ್ಲ. ಅಲ್ಲಲ್ಲಿ ಕೊಳಚೆ ನೀರಿನ ಸಂಚಯ ಕಾಣುತ್ತಿತ್ತು. ಅಷ್ಟರಿಂದಲೇ ಇದು ತನ್ನ ನೀರಡಿಕೆಯನ್ನು ಹಿಂಗಿಸಿಕೊಳ್ಳುತ್ತಿತ್ತು. ಒಣಕಲು ದಿನಗಳು. ಹುಲ್ಲೂ ಸಿಕ್ಕುತ್ತಿರಲಿಲ್ಲ, ಅಂತೂ ಕಪಿಲೆಗೆ ಉಪವಾಸ, ದಿನಬೆಳಗೂ ತಪ್ಪುತ್ತಿರಲಿಲ್ಲ. ಹೀಗೆ ಕಾಲ ಹಾಕುತ್ತಿರುವ ಈ ಗೋವಿನ ಕೆಚ್ಚಲಲ್ಲಿ ಹಾಲು ಹೇಗೆ ಬಂದೀತು. 'ನನ್ನ ರಕ್ತದ ಹನಿ ಹನಿಯೂ ಹಾಲಾಗುವಂತೆ ಕರುಣಿಸು ಕೃಷ್ಣಾ' ಎಂದು ದೇವರನ್ನು ಮೊರೆ ಇಡುವದು. ದೇವರಿಗೆ ಈ ಮಾತು ಕೇಳಿಸಲಿಲ್ಲ. ಶ್ಯಾಮರಾಯರು ಅದರ ಆಶೆಯನ್ನು ಬಿಟ್ಟರು.

ಕಪಿಲೆಗೆ ಇನ್ನೂ ಹೆಚ್ಚಿನ ಕಷ್ಟದ ದಿನಗಳು ಬಂದವು. ಇದ್ದಕ್ಕಿದ್ದಂತೆ ಒಂದು ದಿನ ಅಡವಿಯಲ್ಲಿ ಕಪಿಲೆಯ ಕಾಲಿಗೆ ದೊಡ್ಡ ಮುಳ್ಳು ನೆಟ್ಟಿತು. ಕುಂಟುತ್ತ ಕುಂಟುತ್ತ ಮನೆಗೆ ಬಂದು, ಕೊಟ್ಟಿಗೆಯಲ್ಲಿ ಬಿದ್ದುಕೊಂಡಿತು. ಯಾರೂ ಇದರ ಕಡೆಗೆ ಲಕ್ಷ್ಯಗೊಡಲಿಲ್ಲ. ದಿನ ದಿನವು ಸಂಕಟಪಡುತ್ತ ಕುಂಟುತ್ತ ಅಡವಿಗೆ ಹೋಗಿ ಬರುವದು. ಕಪಿಲೆಗೆ ಜೀವ ಬೇಸರ ಬಂತು; ನಾನಿದ್ದೇನು ಫಲ ಎನ್ನುವ ಕೊನೆ ಗಳಿಗೆಯ ವಿಚಾರ ಆಗಾಗ ತಲೆಯಲ್ಲಿ ಬರುತ್ತಿದ್ದವು. ಅದೇ ಕೊಟ್ಟಿಗೆಯಲ್ಲಿ ತನಗೆ ಸಾವು ಬರಲಿಯೆಂದು ಅಪೇಕ್ಷಿಸುತ್ತಿತ್ತು. ಆಗಾಗ ಶ್ಯಾಮರಾಯ, ಕಪಿಲೆಯನ್ನು ನೋಡಿ ಗಬ್ಬಾಗಿದ್ದೀತೆ

ಎಂದು ಯೋಚಿಸುವರು ಕೆಲವು ದಿನ ಕಳೆದ ಮೇಲೆ "ಇದು ದಾರಿ ಬಿಟ್ಟಿತು; ಇದರಿಂದೇನೂ ಉಪಯೋಗವಿಲ್ಲ; ಮಾರಿಬಿಡುವದೊಳಿತು; ಈ ವರ್ಷದ ಬಿತ್ತಿಗೆಗಾಗಿ ಬೀಜವಿಲ್ಲ; ಇದನ್ನು ಮಾರಿ ನಾಲ್ಕು ರೂಪಾಯಿ ಬಂದರೆ ಅಷ್ಟೇ ಬೀಜಕ್ಕೆ ಅನುಕೂಲವಾದೀತು; ಎಮ್ಮೆಗೆ ಸ್ವಲ್ಪ ಹೆಚ್ಚಿನ ತಿನಿಸು ಹಾಕಿದರೆ, ಹೆಚ್ಚು ಹಾಲು ಕೊಟ್ಟೀತು; ಹಾಲು ಮಾರಿದರೆ ಮತ್ತೆ ಹೆಚ್ಚಿನ ಪ್ರಾಪ್ತಿಗೆ ದಾರಿಯಾದೀತು" ಹೀಗೆ ಏನೇನೋ ಮನೆಯಲ್ಲಿ ಮಾತಾಡುತ್ತಿದ್ದರು. ಇದೆಲ್ಲ ಕಪಿಲೆಗೆ ತಿಳಿಯುತ್ತಿತ್ತು. ನನಗೂ ಹೊಟ್ಟೆ ತುಂಬ ತಿನ್ನಲು ಹಾಕಿದರೆ ಹಿಂಡಲಾರೆನೆ; ನನ್ನ ಕರುವನ್ನು ಚನ್ನಾಗಿ ನೋಡಿ ಕೊಂಡು ಸಂರಕ್ಷಿಸಿದ್ದರೆ, ಮತ್ತೆ ನಾನು ಕರು ಹಾಕುತ್ತಿರಲಿಲ್ಲವೆ? ನನ್ನ ಮರ್ಯಾದೆಯನ್ನೇ ನೀವು ಬಯಲಿಗೆ ತಂದಿರಿ; ನಾಕಿನ್ನು ಈ ಸಂಸಾರದಲ್ಲಿಯ ತಾಪತ್ರಯ; ಮಾರುವಿರಾ? ಯಾರಿಗೆ ಕಟುಕನಿಗೋ? ಈ ಭಾರತ ಪೂರ್ವದಲ್ಲಿ ಗೋವನ್ನು ಯಾವ ದೃಷ್ಟಿಯಿಂದ ನೋಡುತ್ತಿದ್ದರೆಂಬುದು ನನಗೆ ಗೊತ್ತಿಲ್ಲವೆ? ದೇವರೆಂದು ಪೂಜಿಸುತ್ತಿದ್ದರು; ನನ್ನ ಅಣ್ಣತಮ್ಮಂದಿರು ಪರ ಶಿವನಿಗೆ ವಾಹನವಾದರು. ಅಂತಹ ನಮ್ಮನ್ನು ಈ ಕಾಲದ ಜನ ಈ ಸ್ಥಿತಿಗೆ ತಂದಿಳಿಸಿದರು ಮತ್ತೊಮ್ಮೆ ಉಜ್ವಲಕಾಲ ಬಂದೀತು; ಕೆಚ್ಚಲನ್ನು ತುಂಬಿ ಕೊಂಡು ಭಾರತದ ಸುಪುತ್ರರಿಗೆ ಮನದಣಿ ಹಾಲು ಉಣಿಸಿಯೇವು; ಭಾರತಕ್ಕೆ ಬಡತನ ಬಂದಿದ್ದರೆ, ತುಂಬಿದ ಅಂತಃಕರಣದಿಂದ ನಾಲ್ಕು ಸಿವಡು ಹುಲ್ಲು ಚಲ್ಲಿರಿ; ಅಷ್ಟರಿಂದಲೇ ನಮ್ಮ ಮೊಲೆಯಿಂದ ಹಾಲಿನ ಧಾರೆ ತಾನೆ ತಾನಾಗಿ ಸುರಿದೀತು.

ಕಟುಗನಿಗೆ ಮಾರಬೇಡಿ ನನ್ನ-; ಆದರೂ ಆತ ಇಷ್ಟೇನು ಕೆಟ್ಟವನಲ್ಲ; ದಿನಾಲೂ ಎಷ್ಟೊಂದು ಪೆಟ್ಟು ತಿನ್ನುವದು; ಈ ಕಟುಗರಿಗಿಂತ ಆ ಕಟುಗನೇ ಮೇಲು; ಇವರಷ್ಟು ಆತ ಆತ್ಮವಂಚಕನಾಗಿರಲಾರ; ಇವರು ಬಾಯಿಂದ ಗೋಮಾತೆಯನ್ನುತ್ತಾರೆ; ಕಾಲಲ್ಲಿ ಮುಳ್ಳು ನೆಟ್ಟರೆ ನೋಡುವದಿಲ್ಲ, ಕಣ್ಣಲ್ಲಿ ಹಳ್ಳು ಬಿದ್ದರೆ ಕೇಳುವದಿಲ್ಲ; ಇಂಥವರಿಗಿಂತ ಅಂಥ ಕಟುಗನೇ ಮೇಲು. ಕೊನೆಯ ಪಕ್ಷ ಆತ ದಯದ ನಾಟಕ ತೋರಿ, ಕೊಲ್ಲುವದಿಲ್ಲ. ಅಂದಮೇಲೆ ಆ ಮರಣ ಎಷ್ಟೋ ಒಳ್ಳೇಯದಲ್ಲs? ಭಗವಂತಾ ನನಗಿಲ್ಲಿಯೇ ಮರಣ ಬರಲಿ; ನನ್ನ ತಾಯಿ ಇಲ್ಲಿಯೇ ಪ್ರಾಣ ನೀಗಿತು; ಅಂದು ಶ್ಯಾಮರಾಯರ

ತಂದೆ ಕಣ್ಣಿಗೆ ಸೆರಗು ಹಾಕಿ ಗಳಗಳ ಅತ್ತರು; ತಾಯಿ ಪ್ರಾಣಬಿಟ್ಟ ಸ್ಥಾನವಿದು; ಇದಕ್ಕೂ ಪವಿತ್ರಸ್ಥಾನ ಮತ್ತಾವದಿದ್ದೀತು? ಭಗವಂತಾ, ಇಲ್ಲಿಯೇ ಬಿದ್ದುಕೊಳ್ಳುವಂತೆ ಕೃಪೆ ಮಾಡು; ಈ ಛಲನೆಗೇಕೆ ನಾನು ಬೇಸರಿಯಲಿ; ಸತ್ವಶಾಲಿಯಾಗಲಿ ನನ್ನ ಬಾಳು; ಅದೇ ನನ್ನ ಬಾಳ ಜ್ಯೋತಿಯಾಗಲಿ!

ಒಂದು ದಿನ ಕಪಿಲೆ ಅಡವಿಗೆ ಹೋದಾಗ, ತನ್ನ ಬಂಧು ಒಬ್ಬನನ್ನು ಕಟುಕನಿಗೆ ಮಾರಿದನೆಂದು ಅವರ ಸಂಗಾತಿಗಳು ಹೇಳಿದರು. ಕಪಿಲೆಗೆ ಕಣ್ಣು ಕತ್ತಲೆಗೂಡಿತು; ನೆಲಕ್ಕೆ ಬಿದ್ದಿತು; ಸುತ್ತಣ ಎತ್ತು ಆಕಳುಗಳೆಲ್ಲ ಅದನ್ನು ನೆಕ್ಕಿ ನಿಲ್ಲಿಸಿದವು ತಾಂಬೂ ಮನೆತನದ ಆಕಳಿದು; ಸಂಗಾತಿ ಆಕಳಿಗೆಲ್ಲ ಅದು ಆದರದ ವಸ್ತುವಾಗಿತ್ತು. ಮೆಲ್ಲನೆ ಚೇತರಿಸಿಗೊಂಡಿತು; ಧಾರೆಗಟ್ಟಿ ಕಣ್ಣೀರು ಸುರಿಸುತ್ತಿತ್ತು; ಅಂಬಾ ಎಂದು ಗೋಗರೆಯುತ್ತಿತ್ತು.

ಒಂದು ಆಕಳು ನುಡಿಯಿತು "ಈ ವರ್ಷ ಬಹಳ ದನ ಕಟುಕರ ಮನೆಯ ದಾರಿ ಹಿಡಿಯುವವು; ಬೀಜಕ್ಕಾಗಿ ರೈತರಲ್ಲಿ ದುಡ್ಡಿಲ್ಲ; ಸಾವುಕಾರ ಸಾಲಕೊಡುವಂತಿಲ್ಲ; ನಮ್ಮನ್ನು ಮಾರಿ ಬಂದ ದುಡ್ಡಿನಿಂದ ಬೀಜ ಕೊಂಡುಕೊಳ್ಳುವರು; ಅಂದ ಮೇಲೆ ನಮ್ಮ ಬೆಲೆ ಏನಿವರಿಗೆ?"

ಇನ್ನೊಂದು ಆಕಳು "ನಮ್ಮನ್ನು ನೋಡುವವರಿಲ್ಲ; ಅಂದ ಮೇಲೆ ನಮಗುಳಿದ ದಾರಿ ಒಂದೇ; ಅದು ನಾವೆಲ್ಲ ಒಟ್ಟುಗೂಡಿ ಒಮ್ಮೆಲೇ ಸತ್ತು ಹೋಗುವದು ಅಂದರೆ, ದಿನಾಲು ಪೆಟ್ಟು ತಿನ್ನುವದು, ಬಯಿಸಿಕೊಳ್ಳುವದು ತಪ್ಪೀತು! ಈ ಮಾನವ ಜಾತಿಯು ನಡೆಸಿದ ಗೋಜಾತಿಯ ಗೋಳಾದರೂ ತಪ್ಪೀತು! ಆ ಮೇಲಾದರೂ ಈ ಜನತೆಗೆ ತಿಳಿದೀತು; ಹೊಳೆದೀತು; ಬುದ್ಧಿ ಕಲಿತಾರು"

ಕಪಿಲೆಗೆ ಈ ಮಾತು ಸರಿಬರಲಿಲ್ಲ, ಅದು "ಮಾನವ ಜಾತಿಗೆ ಬಯ್ಯಬೇಡ ನೀನು; ದುಃಖ ನಮ್ಮ ಪಾಲಿಗೇ ಇರಲಿ, ಮಾನವರು ಸುಖವಾಗಿ ಬದುಕಲಿ, ದಿಲೀಪ ವಶಿಷ್ಠರ ಮಕ್ಕಳಿವರು; ಶ್ರೀಕೃಷ್ಣನ ಪೀಳಿಗೆಯವರು; ಇಂದಿಲ್ಲ ನಾಳೆಗಾದರೂ ಬುದ್ಧಿ ಬಂದೀತು; ಅವರು ಕುರುಡರಾದರೆಂದು ನಾವೂ ಹಾಗೇ ಆಗಬೇಕೆ; ಅದು ಸರಿಯಲ್ಲ ಹೀಗೆ ಎರಡೂ ನಿಟ್ಟಿನಿಂದ ಪಾಪ

ಸಂಚಯುವಾಗಹತ್ತಿದರೆ ಮೋಕ್ಷದ ಉಷೆ ಹೇಗೆ ಬಂದಾಳು? ಮಾನವರೀಗ ತಾಳಗೆಟ್ಟಿದ್ದಾರೆ; ಮೂಕ ಪ್ರಾಣಿಗಳಾದ ನಾವೇ ಈಗ ಹೆಚ್ಚು ತಪಸ್ಸು ಮಾಡಬೇಕಾಗಿದೆ; ತಿಳುವಳಿಕೆ ಇದ್ದವರೇಕೆ ಅಧಃಪತನದ ದಾರಿ ಹಿಡಿಯಬೇಕು; ತಾಳ್ಮೆಯೊಂದೇ ಬಾಳ್ವೆಗೆ ದಾರಿ; ನಮ್ಮ ಸೇವೆ ಮಾಡಿದ ಕೈಗೆ ಹೊಡೆಯುವ ಅಧಿಕಾರವೂ ಇದೆ; ನೋಡು—ಈ ಮೊದಲು ಈ ಜನ ಗೋಮಾತೆಯೆಂದು ಆದರಿಸಿದರು ಮಕ್ಕಳು ಅವಿವೇಕರಾದರೆ ತಾಯಿಯ ಮಮತೆ ಕಡಿಮೆಯಾಗುವದೆ? "ಸುಪುತ್ರೋ ಜಾಯೇತ ಕ್ವಚದಪಿ ಕುಮಾತಾ ನ ಭವತಿ" ಎನ್ನುವ ಮಾತು ನಿನಗೆ ತಿಳಿಯದೆ? ಬರುವಷ್ಟು ಹಾಲು ಕೊಡೋಣ; ಒಳ್ಳೆಯ ದಿನಗಳಿಗಾಗಿ ದಾರಿ ಕಾಯೋಣ, ದೇವರು ಭಕ್ತರಿಗಾಗಿ ಓಡಿಬರುತ್ತಾನೆನ್ನುವ ಮಾತನ್ನು ನೀನು ಗಟ್ಟಿಮಾಡಿಕೋ ನನ್ನ ತಾಯಿ ಆಗಾಗ ಹೇಳುತ್ತಿದ್ದ ಮಾತಿದು" ಎಂದಿತು.

ಕಪಿಲೆಯ ಈ ಗಂಭೀರ ವಾಣಿಯನ್ನು, ಸುತ್ತಣ ಸೃಷ್ಟಿಯೆಲ್ಲ ಕೇಳುತ್ತಿತ್ತು. ಗಿಡಮರಗಳೆಲ್ಲ ಅಲುಗಾಡದೆ ನಿಂತು ಕೇಳಿದವು; ಅವು ಕೂಡ ಈ ನಡುವೆ ಕ್ಷುಬ್ಧವಾಗಿದ್ದವು; ಅವಕ್ಕೆ ಈ ಮಾನವರೇ ಕಾರಣರು. ದಿನ ಬೆಳಗೂ ಗಿಡಗಳನ್ನು ಕಡಿದು, ತರುಸಂತತಿಯನ್ನೆಲ್ಲ ನಾಶಮಾಡುತ್ತಿದ್ದರು; ಹೊಸ ಸಸಿಯನ್ನು ನೆಟ್ಟು ನೀರೆರೆಯುವದನ್ನು ಬಿಟ್ಟುಬಿಟ್ಟಿದ್ದರು; ಹಳೆಯ ಗಿಡಗಳ ಯೋಗಕ್ಷೇಮ—ಬೇಡ—ಕಣ್ಣೆತ್ತಿಯೂ ನೋಡುತ್ತಿರಲಿಲ್ಲ; ಅಂದಮೇಲೆ ನಾವೇಕೆ ಈ ಮಾನವರಿಗೆ ಹಣ್ಣು ಕೊಡಬೇಕು; ಆಕಾಶಕ್ಕೆ ಕೈಮಾಡಿ ಮಳೆ ಕರೆಯಬೇಕು; ಅಂತಹ ಅಗತ್ಯ ತಾವಾದರೂ ಯಾಕೆ ತೋರಿಸುವದೆನ್ನುವ ನಿರ್ಧಾರಕ್ಕೆ ಬಂದಿದ್ದವು; ಆದರೆ ಕಪಿಲೆಯ ಉಪದೇಶದ ಮಾತುಗಳನ್ನು ಕೇಳಿ, ತಮ್ಮ ನಿಷ್ಠುರತೆಯನ್ನು ಕಡಿಮೆ ಮಾಡಿದವು; ಮಾನವ ಜಾತಿಯನ್ನು ಅಂತಃಕರಣದಿಂದ ನೋಡುವದನ್ನು ಕಲಿತವು. ಗಾಳಿ ಮುಖಾಂತರ ಸುತ್ತಣ ತರುಲತೆಗಳಿಗೆಲ್ಲ ಈ ಮಾತು ತಲುಪಿತು ಮಾನವರೇ—ಪಾಪಮಾಡಿ ನೀವು ದಣಿಯುವಿರೋ; ಅಥವಾ ಪುಣ್ಯಮಾಡಿ ನಾವು ದಣಿಯುವೆವೊ; ಅದನ್ನು ನೋಡಿಯೇ ಬಿಡೋಣವೆಂದವು. ಕಪಿಲೆಯ ಉಪನಿಷತ್ತು ಸಮಸ್ತ ಜೀವರಾಶಿಯನ್ನೆಲ್ಲ ವ್ಯಾಪಿಸಿತು.

ಕಪಿಲೆಯು ತನ್ನ ಬಲಿ ಕೊಡುವ ದಿನದ ದಾರಿ ನೋಡುತ್ತಿತ್ತು. ದಿನವೆಲ್ಲ ಅಡವಿಯಲ್ಲಿ ಧ್ಯಾನ ಮಾಡುತ್ತಿತ್ತು. ಯಾವಾಗಲೋ ಒಮ್ಮೊಮ್ಮೆ ಒಂದೊಂದು ಶಬ್ದ ಕಿವಿಗೆ ಬೀಳುತ್ತಿತ್ತು. ಒಂದು ದಿನದ ಬೆಳಗು ಜಾವದ ಸಮಯ. ಇನ್ನೂ ಕತ್ತಲಿತ್ತು ಹೊರಗೆ. ನಕ್ಷತ್ರ ಮಂಡಲ ಝುಗಝುಗ ಹೊಳೆಯುತ್ತಿತ್ತು. ದನದ ಕೊಟ್ಟಿಗೆಯ ಚಪ್ಪರಕ್ಕೆ ಒಂದು ಕಿಂಡಿ ಬಿಟ್ಟಿತ್ತು. ಅದರಿಂದ ಆಕಾಶದಲ್ಲಿಯ ಸಪ್ತಋಷಿಗಳ ಮೇಳ ಕಾಣುತ್ತಿತ್ತು-ಕಪಿಲೆಗೆ. ವಶಿಷ್ಠ ಋಷಿ! ಎಂಥ ಉಜ್ವಲ ಗೋಭಕ್ತನಾತ; ವಿಶ್ವಾಮಿತ್ರ ಲಕ್ಷಾಂತರ ಆಕಳುಗಳನ್ನು ಕೊಡುತ್ತೇನೆಂದರೂ, ತಾನು ಸಾಕಿದ ನಂದಿನಿಯ ಕೈ ಬಿಡಲಿಲ್ಲ; ಎಂಥ ದಿವ್ಯಪ್ರೇಮ; ಎಂಥ ನಿರ್ಲೋಭತೆ; ಕಪಿಲೆಯ ಹೃದಯ ಪ್ರೇಮ ಭಾವನೆಯಿಂದ ತುಂಬಿಬಂದಿತು; ಕಣ್ಣೀರ ಹನಿಯಿಂದ-ಆ ಮಹಾ ವಶಿಷ್ಠ ಮುನಿಗೆ ತರ್ಪಣ ಕೊಟ್ಟಿತು. ನನ್ನ ತಾಯಿ ಅಜ್ಜಿಯರು-ಆಕಾಶದಲ್ಲಿ ನಕ್ಷತ್ರ ಮಾಲಿಕೆಯಲ್ಲಿ ಸೇರಿರಬಹುದೇ ಎಂದು ಯೋಚಿಸಿತು. ಆ ಬೆಳಗಿನ ಮಂಗಲ ಸಮಯದಲ್ಲಿ ಕಪಿಲೆಯ ಹೃದಯ ಭಕ್ತಿಭಾವದಿಂದ ಭಾರವಾಯಿತು. ತದೇಕ ಚಿತ್ತದಿಂದ ಶ್ರೀಕೃಷ್ಣನನ್ನು ಮೊರೆಹೋಯಿತು. ಧನ್ಯ-ಧನ್ಯ ಕಪಿಲೇ ನೀನೇ ಧನ್ಯ! ಹೀಗೆ ಕಪಿಲೆಯು ಧ್ಯಾನಮಯ ಸ್ಥಿತಿಯಲ್ಲಿದ್ದಾಗ ಹೊರಗಿನಿಂದ ಶ್ಯಾಮರಾಯರ ಧ್ವನಿಯು ಕೇಳಿಸಿತು. "ಇಂದು ಸಂಜೆಗೆ ಒಯ್ಯುತ್ತೇನೆ; ಹತ್ತು ಹದಿನೈದು ರೂಪಾಯಿಗಳು ಬಂದರೆ, ಅಷ್ಟೇ ಉಪಯೋಗ ವಾದೀತು" ಎಂಟುಗಂಟೆಗೆ ಕಪಿಲೆಯನ್ನು ಕೊಟ್ಟಿಗೆಯಿಂದ ಹೊರಗೆ ಹೊಡೆದರು; ಅದು ಓಡಿ ಮತ್ತೆ ಕೊಟ್ಟಿಗೆಯೊಳಕ್ಕೇ ಹೋಯಿತು; ಗಟ್ಟಿಯಾಗಿ ಕುಳಿತುಬಿಟ್ಟಿತು; ಬೆನ್ನಮೇಲೆ ಏಟುಗಳು ಬಿದ್ದವು; ಆದರೂ ಅದು ಕದಲಲಿಲ್ಲ; ಕೊನೆಗೆ ಆಚೆ ಈಚೆ ಹಗ್ಗ ಹಚ್ಚಿ ಅದನ್ನೆಳೆದರು. ಕಪಿಲೆಗೆ ತನ್ನ ತಾಯಿ ಅಜ್ಜಿ ಪ್ರಾಣ ಬಿಟ್ಟ ಸ್ಥಳದಲ್ಲಿ ತಾನೂ ಬಿಡಬೇಕೆಂದು ಹಾತೊರೆಯಿತು; ಕೊನೆಗೆ ದೇವರ ಮನಸ್ಸಿಗೆ ಬಂದುದಾಗಲೀ ಎಂದು ಅಳುಗಳನ್ನು ಹಿಂಬಾಲಿಸಿತು. ಸುತ್ತಣ ಪ್ರಪಂಚಕ್ಕೆಲ್ಲ ತನ್ನ ಮೂಕ ಸಂದೇಶವನ್ನು ತಿಳಿಸಿತು. ಎಲ್ಲರಲ್ಲಿದ್ದ ಪರಮಾತ್ಮ-ಕಟಕನ ಕೈಯಲ್ಲಿಯೂ ಇದ್ದಾನೆ; ಅವನ ಕಂದ್ಲಿಯಲ್ಲೂ ಭಗವಂತಾ ನೀನಿದ್ದೀ; ಅಂದಮೇಲೆ ನಾನೇಕೆ ಶೋಕಿಸಲಿ ಎಂದು ತನಗೆ ತಾನೇ ಬುದ್ಧಿ ಹೇಳಿಕೊಂಡು ಗೋಣು ಕೆಳಗೆ ಚೆಲ್ಲಿಕೊಂಡು-ದಾರಿ

ತುಳಿಯುತ್ತಿತ್ತು. ಕಪಿಲೆಯ ಈ ಅನಸ್ಥೆಯನ್ನು ನೋಡಿ–ಕಲ್ಲುಗಳು ಕರಗಿದವು; ಮರಗಳು ಮರಗಿದವು; ಪಸಿಗಳು ಉಸುರ್ಗರೆದವು; ಸುತ್ತೂ ಕಾರುಣ್ಯದ ಶೋಕ ಗಾನ ಕೇಳುತ್ತಿತ್ತು.

ಕಪಿಲೆಯ ಕಣ್ಣೀರು ಮುಖದ ಮೇಲೆಯೇ ಒಣಗಿದವು ಮನಸ್ಸು ಶಾಂತಿಯನ್ನಪ್ಪಿತು. ಕಣ್ಣಲ್ಲಿ ಆರ್ತತೆಯು ಆವರಿಸಿತ್ತು ಒಡೆಯನ ಮಕ್ಕಳುಮರಿಗೆಲ್ಲ ಆಶೀರ್ವದಿಸಿ ತನ್ನ ದಾರಿ ಸಾಗಿಸಿತು.

ದನದ ಸಂತೆ ನೆರೆದಿತ್ತು. ಅಲ್ಲಿಯ ಮುಖ್ಯ ಗಿರಾಕಿಗಳೆಂದರೆ ಕಟುಕರು ಹಿಂದುಸ್ಥಾನದ ದಾರಿದ್ರ್ಯ–ನೈಷ್ಠುರ್ಯಗಳ ಪ್ರದರ್ಶನವೇ ಅದು! ಒಂದರ ಚಿತ್ರದಿಂದ, ಪ್ರಪಂಚದ ಉಳಿದೆಲ್ಲವುಗಳ ಚಿತ್ರಪಟ ಕಣ್ಣೆದುರು ಬಂದು ನಿಲ್ಲುತ್ತದೆ. ಹಿಂದುಸ್ಥಾನದಲ್ಲಿಯ ಗಿಡಗಳನ್ನು ನೋಡಿರಿ; ಆಕಳನ್ನು ನೋಡಿರಿ; ಪಕ್ಷಿಗಳನ್ನು ನೋಡಿ; ಸ್ತ್ರೀಯರನ್ನು ನೋಡಿರಿ; ಎತ್ತ ನೋಡಿದತ್ತ ದಾರಿದ್ರ್ಯ–ದುರ್ದೈವಗಳ ಭೂತಲೀಲೆಯೇ ಕಂಡೀತು!

ತಲೆ ಕೆಳಗೆ ಚೆಲ್ಲಿಕೊಂಡು ಎಷ್ಟೋ ಆಕಳುಗಳು ನಿಂತಿದ್ದವು; ಅಪಾರ ಶೋಕಸಾಗರ ಉಕ್ಕೇರುತ್ತಿತ್ತು; ವ್ಯವಹಾರ ಪ್ರಾರಂಭವಾಗಿತ್ತು ಕಪಿಲೆಯತ್ತ ಯಾವ ಗಿರಾಕಿಯೂ ಹಾಯಲಿಲ್ಲ. ಅದು ಸೊರಗಿ ಬಡಕಲಾದ ದನ. ಕಟುಗರು ಕಿಸಿಕಿಸಿ ಹಲ್ಲು ತೆಗೆಯುತ್ತ ನೋಡುತ್ತ ಹೋಗುತ್ತಿದ್ದರು. ಶ್ಯಾಮರಾಯರು "ಅಯಿದು ರೂಪಾಯಿ; ಬರಿಯ ಅಯಿದು ರೂಪಾಯಿ!" ಎನ್ನುತ್ತ ನಿಂತಿದ್ದರು. ಕೊನೆಗೊಬ್ಬ ಕಟುಗನಿಗೆ ದಯ ಬಂದಿತು "ತನಗಾಗಿ ತನ್ನೊಡೆಯ ಅದೆಷ್ಟು ದೀನನಾಗಬೇಕಾಯಿತಲ್ಲಃ; ದೇವಾ – ನನ್ನನ್ನು ಯಾರಾದರೂ ಕೊಂಡುಕೊಳ್ಳುವಂತೆ ಮಾಡು; ನನ್ನ ತೊಗಲಿನಿಂದ ಎರಡು ಜೋಡು ಕಾಲ್ಮರೆಗಳಾದಾವು; ನನ್ನ ಎಲುಬಿನಿಂದ ಕನಿಷ್ಟ ಎಂಟಾಣೆ ಗೊಬ್ಬರವಾದರೂ ಆಗಲಾರದೆ? ಮಾಂಸದಿಂದ ನಾಲ್ಕು ದುಡ್ಡು ಬರಲಾರದೆ?" ಎಂದು ಗೋಗರೆಯುತ್ತಿತ್ತು. ಕಟುಕ ಕೊಂಡುಕೊಂಡ. ಆತನ ಹೆಸರು ಸಜನೆ ಎಂದಿತ್ತು. ಕಪಿಲೆ ಯೋಚಿಸಿತು ಎಂಥ ಒಳ್ಳೇ ಹೆಸರಿದು! ಇಂಥ ಒಳ್ಳೇ ಹೆಸರಿದ್ದವನು ಒಮ್ಮೆಯಾದರೂ ಒಳ್ಳೆಯವನಾಗಲಾರನೆ? ಜೀವನದಲ್ಲಿ ಕ್ರಾಂತಿ ಮಾಡಲಾರನೆ? ಕಪಿಲಾ ಗೋವಿಗೆ ಕಟುಕನ

ಹೆಸರು ಕೇಳಿ ಅಂತಃಕರಣ ತುಂಬಿ ಬಂತು. ಇತರ ಕಟುಗರು ಸಜನನ ಚೇಷ್ಟೆ ಮಾಡಿದರು. ಅದಕ್ಕೆ ಆತ "ಈ ಆಕಳನ್ನು ನಾನು ಕೊಂಡುಕೊಳ್ಳ ದಿದ್ದರೆ, ಆ ರೈತರು ಇದನ್ನು ಇನ್ನೂ ಹೆಚ್ಚು ಹಣ್ಣು ಮಾಡುತ್ತಿದ್ದರು; ಅನ್ನ ನೀರು ಹಾಕದೇ ಕೊಲ್ಲುತ್ತಿದ್ದರು; ಎಂಥ ಕನಿಕರದ ದೃಷ್ಟಿಯಿಂದ ನನ್ನ ನೋಡಿತು; ನಾನು ಹಾಗೆಲ್ಲ ಗೋಳುಕಟ್ಟಿಕೊಳ್ಳುವದಿಲ್ಲ; ಒಂದು ಹೊಡೆತಕ್ಕೆ ಎರಡು ತುಂಡು" ಎಂದ.

ಕಪಿಲೆಯು ಕೃತಜ್ಞತೆಯಿಂದ ಕಟುಕನ ಕೈ ನೆಕ್ಕುತ್ತಿತ್ತು. ಕಟುಕನಿಗೆ ಆಶ್ಚರ್ಯವಾಯಿತು. ಎಂಥ ಒಳ್ಳೆಯ ಗುಣದ ಆಕಳಿದು. ಕಣ್ಣಲ್ಲಿ ನೀರೂರಿದವು; ದಯ ಬಂದು ಅದರ ಮೈಮೇಲೆ ಕೈ ಆಡಿಸಿದ. ಸಂಗಾತಿಗಳು ಮನೆಗೆ ಹೋಗಲು ಅವಸರ ಮಾಡಿದರು. ಅವರಿಗೆ ಆತ "ನನಗಿನ್ನೂ ಕೆಲಸ ವಿದೆ. ಗೋಪಾಲ ಬರುವ ದಾರಿ ಕಾಯುತ್ತಿದ್ದೇನೆ. ನಾನು ಕೊಂಡ ಆಕಳುಗಳಲ್ಲಿ ಚೆನ್ನಾದದ್ದನ್ನು ಆತ ನಾನು ಕೊಂಡ ಬೆಲೆಗೇ ತಕ್ಕೊಳ್ಳುತ್ತಾನೆ. ಆತ ಆಕಳ ಭಕ್ತ; ಆಕಳ ಸೇವೆ ಆತನಿಗೆ ಬಹಳ ಪ್ರೀತಿ; ನಾವು ಕೂಡ ಆಕಳ ಋಣದಲ್ಲಿರುತ್ತೇವೆ; ಇದರ ಮಕ್ಕಳು ದುಡಿದಾಗಲ್ಲ ನಾವು ಹೊಟ್ಟೆಗೆ ತಿನ್ನು ವದು; ಗೋಪಾಲ ಗೋವರ್ಧನ ಶಾಲೆ ತೆಗೆದಿದ್ದಾನೆ; ಅಲ್ಲಿ ಎಷ್ಟೋ ಆಕಳು ಗಳು ಇವೆ. ಇನ್ನೂ ಆತ ಯಾಕೆ ಬರಲಿಲ್ಲ; ಕೈಯಲ್ಲಿ ದುಡ್ಡಿರಲಾರದೆ?" ಎಂದ. ಅಷ್ಟರಲ್ಲಿ ಗೋಪಾಲ ಬಂದ.

ಕಪಿಲೆಯು ಮನ ತುಂಬಿಬಂತು. ಗೋಪಾಲ ಬಂದ; ಶ್ಯಾಮಲಾಂಗ ಶ್ರೀಕೃಷ್ಣನೇ ಇವನಾಗಿರಬಹುದೆ? ಎಂಥ ಪುಣ್ಯ ಮಾಡಿದ್ದೆನೋ, ಇಂಥ ಸುಸ್ವಭಾವದ ಕಟುಕನ ಕೈಗೆ ಬಿದ್ದೆ; ಮತ್ತಾರೋ ಆಗಿದ್ದರೆ ಈ ತನಕ ನನ್ನ ಆಯುಷ್ಯ ಮುಗಿಸಿಬಿಡುತ್ತಿದ್ದ; ಈ ಗೋಪಾಲ ನನ್ನನ್ನು ಕೊಂಡು ಕೊಳ್ಳಬಹುದೆ; ಯಾಕೆ ಈ ಆಶೆ; ಇದು ಮರ್ತ್ಯಭೂಮಿ; ಕರ್ಮಭೂಮಿ; ದೇವತೆಗಳಿಗೂ ಇಲ್ಲಿ ಹುಟ್ಟಬೇಕೆನ್ನುವ ಆಶೆ; ಅಂದಮೇಲೆ ಅಂಥ ಆಶೆ ನನಗೂ ಏಕೆ ಬೇಡ? ಬೇಕಾದರೆ ಪರೀಕ್ಷಿಸಲಿ; ತನ್ನದೆನ್ನುವ ಕಣ್ಣಿನಿಂದ ನೋಡಲಿ; ಹೊಟ್ಟೆತುಂಬ ಹುಲ್ಲು ಹಾಕಲಿ; ನೀರು ಕುಡಿಸಲಿ; ಅಂದರೆ ಇವರ ಮಕ್ಕಳಿಗೆಲ್ಲ ಹಾಲು ನೀಡಿಯೇನು; ಸಂಸಾರ ವಿಸ್ತಾರವಾಗಲೆಂದು ಹಾಡಿ ಹರಿಸಿಯೇನು.

ಅದೋ ಗೋಪಾಲ ಬಂದ. ಸಜನ ಆತನಿಗೆ ಸಲಾಮು ಮಾಡಿದ. ಪ್ರತಿಯಾಗಿ ಆತನೂ ಮಾಡಿದ "ಗೋಪಣ್ಣಾ ಈ ದಿನ ಬಹಳ ಆಕಳುಗಳು ಬಂದಿಲ್ಲ; ಬಂದವೆಲ್ಲ ಬಡಕಲುಗಳು; ನಾನು ನಾಲ್ಕೇ ದನಗಳನ್ನು ಕೊಂಡು ಕೊಂಡೆ" ಸಜನ ಹೇಳುತ್ತಿದ್ದ. ಕಪಿಲೆ ಆತನ ಮಾತನ್ನು ಕಿವಿ ನಟಿಸಿ ಕೇಳುತ್ತಿತ್ತು; ತಲೆಯೆತ್ತಿ ಗೋಪಾಲನನ್ನು ನೋಡುತ್ತಿತ್ತು; ಆದರೆ ಬಾಯಿಂದ ಕೇಳದಿರುವ ನಿರ್ಧಾರ ಮಾಡಿತ್ತು; ಬೇಡಿಕೊಂಡು ಬದುಕುವದು ಅದಕ್ಕೆ ಬೇಕಿರಲಿಲ್ಲ; ತತ್ವನಿಷ್ಠ ಆಕಳದು.

ಗೋಪಾಲ ಸಜನನ ಆಕಳುಗಳನ್ನು ನೋಡಿದ. ಗೋಪಾಲ "ಇಂದು ಯಾವ ಆಕಳೂ ನಿಮ್ಮ ಮನಸ್ಸಿಗೆ ಬರುವಂತಹದಿಲ್ಲ; ಎಲ್ಲ ಮುಗಿದುಹೋದ ಆಕಳಿದು; ಕರುಣೆ ತುಂಬಿದ ಕಣ್ಣಿಂದ ನೋಡಿತು; ಇರು ಎಂದು ಕೊಂಡು ಕೊಂಡೆ; ಕೇವಲ ಅಯಿದು ರೂಪಾಯಿಗೆ." "ನೀವು ಬಹಳ ನೋಡುತ್ತೀ ರಲ್ಲಾ? ಹೌದು- ಮೋರೆಯ ಮೇಲೆ ದೈನ್ಯ ತುಂಬಿದೆ; ಅದು ನನ್ನ ಕೈ ನೆಕ್ಕ ಹತ್ತಿದ ಕೂಡಲೆ ನನ್ನ ಸ್ಥಿತಿ ವಿಚಿತ್ರವಾಯಿತು."

ಗೋಪಾಲ— "ಸಜನ್ನ ಈ ಆಕಳು ನನಗಿರಲಿ. ಅಸಾಮಾನ್ಯ ಆಕಳಿದು. ನೋಡಿದ ಕೂಡಲೇ ನನ್ನ ತಾಯ ನೆನಪು ನನಗಾಯಿತು; ಈ ಗೋರೂಪದಿಂದ ಅವಳೆ ಬಂದವಳೆಂದೆನಿಸಿತು; ನಾನೂ ಸಂಜೆಗೆ ಬರುತ್ತಿರಲಿಲ್ಲ; ನನ್ನ ಆಕಳ ಸಂಸಾರ ಈಗ ಬೇಕಾದಷ್ಟು ಬೆಳೆದಿದೆ; ಜನರ ಸಹಾಯವೂ ಅಷ್ಟಿಲ್ಲ; ಆದರೆ ಇಂದು ಬೆಳಿಗ್ಗೆ ಕನಸು ಬಿತ್ತು. ಓರ್ವ ಸುಂದರ ಬಾಲಕ ಬಂದು "ಸಂಜೆಗೆ ನನ್ನ ಆಕಳು ಬಂದಿದೆ; ಅದನ್ನು ಕೊಂಡುಕೋ" ಎಂದು ಹೇಳಿದ. ಆ ಬಾಲಕ ಬೇರೆಯಲ್ಲ; ಗೋಪಾಲಕೃಷ್ಣನೇ ಆತ. ಅಂತೆಯೇ ನಾನು ಧಾವಿಸಿಕೊಂಡು ಬಂದೆ ಸಜನ, ನೋಡೀ ಆಕಳನ್ನು- ಶುಭಮಯ ಶುಭ್ರ ಯಶಸ್ಸನ್ನು ಎತ್ತಿ ತೋರಿಸುವಂತೆ ಇದರ ಹಣೆಯಮೇಲೆ ಮಿರುಗು ತ್ತಿರುವ ಚಂದ್ರಮನನ್ನು ನೋಡು ಇಂದು ನೀನು ನನಗೆ- ಪವಿತ್ರ ಆಕಳನ್ನು ದಯಪಾಲಿಸಿದೆ; ನನ್ನ ಹೃದಯ ಆನಂದದಿಂದ ತುಂಬಿ ಬಂದಿದೆ. ಇದೊ ತೆಗೆದುಕೊ ಈ ಅಯಿದು ರೂಪಾಯಿಗಳನ್ನು" ರೂಪಾಯಿಗಳನ್ನು ಕೊಡ ಹೋದ.

"ಗೋಪಣ್ಣಾ—ನನಗೆ ಈ ದುಡ್ಡು ಬೇಡ; ಇದು ನನ್ನ ಕೈ ನೆಕ್ಕಿದಾಗಲೇ, ನನಗೆ ನನ್ನ ತಾಯಿ ನೆನಪಾಯಿತು." ತನ್ನಲ್ಲಿದ್ದ ಹಗ್ಗದಿಂದ, ಕಪಿಲೆಯ ಕೊರಳನ್ನು ಸೈಲಾಗಿ ಕಟ್ಟಿದ. ಅದು ಗೋಪಾಲನನ್ನು ಹಿಂಬಾಲಿಸಿತು.

ಕಪಿಲೆಗೆ ಇನ್ನುಳಿದ ಆಕಳುಗಳ ನೆನಪು ಬಂದು ಕರುಣಾಪೂರ್ಣ ವಾಯಿತು. ತಾನಷ್ಟೇ ಬದುಕಬೇಕಾಯಿತಲ್ಲ' ಎಂದು ಒದ್ದಾಡಿತು. ದೇವರ ಇಚ್ಛೆ ಎಂದು ತನ್ನ ದಾರಿ ಸಾಗಿಸಿತು.

ಗೋಪಾಲ ಕಪಿಲೆಯನ್ನು ಅಟ್ಟಿಕೊಂಡು ಆಶ್ರಮಕ್ಕೆ ಬಂದ. ಆಶ್ರಮದ ಒಂದು ನಿಟ್ಟಿನಲ್ಲಿ ಚೊಕ್ಕಟವಾದ ದನದ ಹಕ್ಕಿ ಇತ್ತು. ಅಲ್ಲಿ ಹತ್ತು ಆಕಳು ಎರಡು ಹೋರಿ, ನಾಲ್ಕಾರು ಕರುಗಳಿದ್ದವು. ಸುತ್ತೆಲ್ಲ ಬೈಲು. ಒಂದು ಭಾಗಕ್ಕೆ ತೋಟವಿತ್ತು. ಸಂಜೆಯಾಗಿತ್ತು. ಗೋಪಾಲ ಕಪಿಲೆಯನ್ನು ಅಂಗಳದಲ್ಲಿ ನಿಲ್ಲಿಸಿದ. ಹೆಂಡತಿ ವನಮಾಳೆಯನ್ನು ಕರೆದು, ಪೂಜೆ ಮಾಡಲು ಹೇಳಿದ. ಆಕೆಯು ಹಣೆಗೆ ಕುಂಕುಮ ಅರಿಷಣ ಹಚ್ಚಿ ಪೂಜೆ ಮಾಡಿದಳು. ಗೋಪಾಲ ದೃಷ್ಟಿ ತೆಗೆಯ ಹೇಳಿದ. ಅವನ ಭಾವನೆಗಳನ್ನು ಆಕೆ ಅರಿತಳು. ಕಪಿಲೆಯ ದೃಷ್ಟಿ ತೆಗೆದಳು. ನಂತರ ಕಪಿಲೆಯನ್ನು ದನದ ಹಕ್ಕಿಗೆ ಒಯ್ದು ಅಲ್ಲಿ ಅದನ್ನು ಕಟ್ಟಿಹಾಕಿ ನಿರ್ಮಲ ನೀರನ್ನು ಹಣಿಸಿ ಮುಂದೆ ಮೇವನ್ನು ಹಾಕಿ "ತಾಯೀ, ಹೊಟ್ಟೆತುಂಬ ತಿನ್ನು. ನನಗೆ ಹರಿಸಿ, ಗೋಪೂಜೆಯ ನನ್ನ ಧ್ಯೇಯಸಿದ್ಧಿಯಾಗುವಂತೆ ಮಾಡು." ಎನ್ನುತ್ತ ಮಮತೆಯಿಂದ ಅದರ ಮೈಮೇಲೆ ಕೈಯಾಡಿಸಿದನು. ಕಪಿಲೆಯ ಸುಖ ಶಿಖರಕ್ಕೆ ಮುಟ್ಟಿತು. ತನ್ನ ಜೀವನಪಟ ತನ್ನ ಕಣ್ಣೆದುರು ಹಾಯ್ದುಹೋಗುತ್ತಿತ್ತು. ಕಪಿಲೆಗೆ ನೀರು, ಹುಲ್ಲು ಹಾಕಿ ಗೋಪಾಲ ಮನೆಯೊಳಗೆ ಬಂದ. ವನಮಾಲೆಯು ಅಡಿಗೆ ಮಾಡುತ್ತಿದ್ದಳು. ಕೈಕಾಲು ತೊಳೆದುಕೊಂಡು ಗೋಪಾಲ ದೇವರ ಮನೆಗೆ ಹೋದ. ಅಲ್ಲಿ ಶ್ರೀಕೃಷ್ಣನ ಸುಂದರಮೂರ್ತಿ ಇತ್ತು. ನೀಲಾಂಜನ ಹಚ್ಚಿಟ್ಟು, ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಕೈಮುಗಿದು ಕುಳಿತು ಕೊಂಡು, ಶ್ರೀಕೃಷ್ಣನ ಮೂರ್ತಿಯನ್ನು ಅಂತರಂಗದಲ್ಲಿ ಸ್ಥಿರಪಡಿಸಿದ. ಅಡಿಗೆ ಮನೆಯ ಕಡೆಗೆ ಹಣಿಕಿ ಹಾಕಿ "ಅಡಿಗೆ ಆಗಿದ್ದರೆ ಬಡಿಸು" ಎಂದು ಹೆಂಡತಿಗೆ ಹೇಳಿದ.

" ಅದೇನು ಇಷ್ಟು ಸಂತೋಷ ನಿಮಗೆ, ನನಗೆ ಕಾರಣ ಹೇಳುವದಿಲ್ಲವೇ ? " ವನಮಾಲೆಯೆಂದಳು.

" ಇಂದು ನಮಗೆ ನಮ್ಮ ತಾಯಿಯೇ ದೊರಕಿದಳು. ಆ ಆಕಳನ್ನು ನೋಡಿದಾಗಿನಿಂದ ನನಗೆ ನನ್ನ ತಾಯಿಯೇ ನೆನಪಾಗುತ್ತಿರುವಳು. ಪ್ರತ್ಯಕ್ಷ ಲಕ್ಷ್ಮಿಯೇ ನಮ್ಮ ಮನೆಗೆ ಬಂದಳು. ಇನ್ನು ನಮ್ಮ ಧ್ಯೇಯಸಿದ್ಧಿಗೆ ತಡವಾಗುವದಿಲ್ಲ. ಒಂದೊಂದು ಹಳ್ಳಿಯೂ ಒಂದೊಂದು ಗೋಕುಲವಾದೀತು; ಅಂತೆಯೇ ನನಗಷ್ಟು ಸಂತೋಷ. "

ಹಸನಾದ ಬಾಳೆ ಎಲೆಯನ್ನು ಹಾಕಿ, ವನಮಾಲೆಯು ರೊಟ್ಟಿ ಹಾಕಿ ದೊನ್ನೆಯಲ್ಲಿ ಹಾಲು ಕೊಟ್ಟಳು.

" ನೀನು ಕೂಡ ಊಟಕ್ಕೆ ಕೂಡು ನನ್ನ ಜೊತೆಗೆ. ಇದೋ ಇಲ್ಲಿ ಎದುರಿಗೇ ಕೂಡು. ಈ ಮುಚ್ಚಣಿಕೆಯ ಮೇಲೆ ರೊಟ್ಟಿಗಳನ್ನಿಟ್ಟುಕೊಳ್ಳೋಣ. ಬೆಣ್ಣೆ ಯಾಕಿಲ್ಲ " ಎಂದು ಕೇಳಿದ ಗೋಪಾಲ.

" ಇದೆ, ಹಾಕಲು ಮರೆತಿದ್ದೆ. ನಿಮಗೆ ಬೆಣ್ಣೆ ಎಂದರೆ ಬಲು ಪ್ರೀತಿ." ವನಮಾಲೆ ನುಡಿದಳು

" ನೋಡು, ನನ್ನ ತಾಯಿ ಕಲಿಸಿದ ಪಾಠವದು. ಆಕೆ ತುಳಸೀಪೂಜೆ ಮಾಡಿ, ಸಕ್ಕರೆ ಬೆಣ್ಣೆ ನೈವೇದ್ಯ ಇಡುತ್ತಿದ್ದಳು ಆ ಮೇಲೆ ಅದನ್ನು ನಾನು ತಿನ್ನುತ್ತಿದ್ದೆ."

ದಂಪತಿಗಳು ಊಟ ಮುಗಿಸಿದರು. ವನಮಾಲೆಯು ಕೆಲಸ ಮುಗಿಸುವದರಲ್ಲಿ ತೊಡಗಿದ್ದಳು. " ಬೆಕ್ಕು ಕಾಣಿಸುವದಿಲ್ಲವಲ್ಲ; ಸ್ವಲ್ಪ ಕರೆಯಿರಿ " ಇಬ್ಬರೂ ಒಟ್ಟಾಗಿಯೇ " ಮನೀ ಮನಿ " ಎಂದು ಕರೆದರು. ಬೆಕ್ಕು ಬಂದಿತು. ಅದಕ್ಕೆ ಹಾಲು ಕುಡಿಸಿ, ಉಳಿದದ್ದನ್ನು ಹೆಪ್ಪು ಹಾಕಿ ವನಮಾಲೆಯು ಮುಸುರೆ ತೊಳೆಯುವದರಲ್ಲಿ ತೊಡಗಿದಳು. ಪಡಸಾಲೆಯಲ್ಲಿ ಚಾಪಿ ಚಲ್ಲಿಕೊಂಡು ಗೋಪಾಲ ಏಕತಾರಿಯನ್ನು ಹಿಡಿದು ಭಜನೆಯಲ್ಲಿ ತಲ್ಲೀನನಾದ. ಭಜನೆ ಕೇಳುತ್ತ ಕೇಳುತ್ತ ವನಮಾಲೆಯು ಮುಸುರೆ ತಿಕ್ಕುತ್ತಿದ್ದಳು. ತಿಕ್ಕುವದನ್ನು ನಿಲ್ಲಿಸಿ ಆಕೆ—

" ಮೊನ್ನೆ ಹೊಸದಾಗಿ ಕಲಿತ ಹಾಡನ್ನು ಹಾಡಿರಿ. ಅದು ನನಗೆ ಸೇರುತ್ತದೆ. "

“ ಬೇಗನೆ ಬಂದು ನೀನೇ ಅನ್ನು. ನೀನು ಚನ್ನಾಗಿ ಅನ್ನುತ್ತೀ. ನಾನೂ ಮುಸುರೆ ತೊಳೆಯಲಿಕ್ಕೆ ಬರಲೇ, ಅಂದರೆ ನೀನು ಬೇಗನೆ ಬರುವಿ. ”

“ ಬರುವದೇ ನಿಮ್ಮ ಮನಸ್ಸಿನಲ್ಲಿದ್ದರೆ, ಕೇಳದೇ ಬಂದುಬಿಡುತ್ತಿದ್ದಿರಿ. ಸಾಕು ಹುಚ್ಚುಚ್ಚಾರ. ನಿಮ್ಮ ಹುಚ್ಚನ್ನು ನೋಡಿ ಕಪಿಲೆಯು ನಕ್ಕೀತು ” ಎಂದಳು. ತೊಳೆದ ಭಾಂಡಿಗಳನ್ನು ಒಳಗೆ ಒಯ್ದು ಇಟ್ಟಳು.

“ ತೊಳೆಯುವದೆಲ್ಲ ಆಯಿತೆ, ಚನ್ನಾಗಿ ತೊಳೆದಿದ್ದೀಯಾ, ಇಲ್ಲದಿದ್ದರೆ ಪಾತ್ರೆಗಳು ಸಿಟ್ಟಾದಾವು! ”

“ ಇದೋ ನೋಡಿರಿ. ಕನ್ನಡಿಯಂತೆ ಲಕ ಲಕ ಹೊಳೆಯುತ್ತವೆ. ”

“ ಸಾಕು ಬಿಡು. ನಿನ ಆತ್ಮಪೌರುಷ. ”

“ ನೋಡಿ ಮಾತಾಡಿರಿ— ”

ಮಾತು ನಿಂತಿತು. ಇಬ್ಬರೂ ತದೇಕಚಿತ್ತರಾಗಿ ಭಜನೆಯಲ್ಲಿ ಲೀನ ರಾದರು. ಕೊಟ್ಟಿಗೆಯಲ್ಲಿಯ ದನಗಳೂ ಗಾನ ಕೇಳಿ ಸಂತೋಷಪಟ್ಟವು. ಕಪಿಲೆಯೂ ಸಂತಸದಿಂದ ನಲಿದಾಡಿತು.

“ ಎಷ್ಟು ಚನ್ನಾದ ಹಾಡುಗಳಿವು; ಎಷ್ಟು ಸಲ ಅಂದರೂ ನನಗೆ ತೃಪ್ತಿಯಿಲ್ಲ ” ವನಮಾಲೆ ಎಂದಳು.

“ ಖಂಡಿತ ಹೇಳು, ಈ ಹಾಡುಗಳಲ್ಲಿ ಮುಖ್ಯವಾಗಿ ನಿನಗೆ ಸೇರಿದು ದೇನು ? ”

“ ಹೋಗಲಿ ಬಿಡಿ, ಸಾಕು. ”

“ ಅದೇಕಷ್ಟು ನಾಚುವೆ; ನಾಚುವಂಥದೇನಿದರಲ್ಲಿ ? ”

“ ನಾಚುವಂಥ ಮಾತೇ ಅಲ್ಲದೆ— ”

“ ಅಂದರೆ ಅದಾವುದು ? ”

“ ಗೋಪಾಲ, ಗೋಪಾಲ ಎನ್ನುವ ಶಬ್ದ ಬಂದ ಕೂಡಲೆ ನನ್ನ ಸಂತೋಷ ಉಕ್ಕೇರುತ್ತದೆ. ”

“ ಹಕ್ಕಿಗೆ ಹೋಗೋಣ ನಡಿ; ಶಗಣಿ ಬಿದ್ದಿದ್ದರೆ ಆಚೆಗೆ ಸರಿಸೋಣ ಎಂದ ಗೋಪಾಲ. ವನಮಾಲೆ ಕೈಯಲ್ಲಿ ಕಂದೀಲು ತಕ್ಕೊಂಡಳು. ಗೋಪಾಲ ಅವಳನ್ನು ಹಿಂಬಾಲಿಸಿದ. ಕೊಟ್ಟಿಗೆಯಲ್ಲಿ ದನಗಳೆಲ್ಲ ಕುಳಿತುಕೊಂಡು

ಮೆಲುಕಾಡಿಸುತ್ತಿದ್ದವು. ಕಪಿಲೆಯೂ ಮೆಲುಕಾಡಿಸುತ್ತಿತ್ತು. ಬಾಲವನ್ನೆತ್ತಿ ಹಾಕುತ್ತಿತ್ತು. ಒಟ್ಟಾರೆ ಅದು ಸಂತೋಷದಲ್ಲಿ ತೇಲು ಅದಕ್ಕೆ ಎಷ್ಟೋ ದಿನಗಳಿಂದ ಹೊಟ್ಟೆತುಂಬ ಹುಲ್ಲು-ನೀರು ದೊರ ವನಮಾಲೆಯು ಅದರ ಗಂಗೆದೊಗಲನ್ನು ತುರಿಸುತ್ತಿದ್ದಳು ಅದ ಕೈ ನೆಕ್ಕುತ್ತಿತ್ತು.

"ಇದರ ಕರುಗಳು ಒಳ್ಳೇ ಜಾತಿಯ ಆಕಳುಗಳಾಗುತ್ತವೆ; ಬೆ ಮುಂದೆ ನೋಡಿರಿ ತಾಯೀ, ಬಹಳಷ್ಟು ಕರುಗಳನ್ನು ಕೊಡಬೇಕು ನೀನು" ಎಂದಳು. ಅದು ಗೋಣು ಹಾಕಿ ಉತ್ತರ ಕೊಟ್ಟಂತೆ ಹಾಗೆ ಹೀಗೆ ಗೋಣನ್ನು ಅಲ್ಲಾಡಿಸಿತು.

ದಿನ ಹೋದ ಹಾಗೆ ಕಪಿಲೆಯು ಮೈತುಂಬಿಕೊಂಡು ನೋಡ ಯಿತು. ಈಗ ಅದು ಕಟ್ಟಿದಂತೆ ಕಾಣುತ್ತಿತ್ತು. ಅದನ್ನು ಕಣ್ಣು ನೋಡುತ್ತ ವನಮಾಲೆಯು "ಎಷ್ಟು ಚಂದ ಕಾಣುತ್ತದೆ; ನಮ್ಮ ಈಗ; ನಮ್ಮ ಸಂಸಾರಕ್ಕೊಂದು ಮೀರಿದ ಭೂಷಣವಿದು. ಭಾರತ ಮನೆಯನ್ನೂ ಇಂಥ ಆಕಳು ಬೆಳಗಬೇಕು; ಜೀವನ ಸಮೃದ್ಧಿಯಾಗ ಎಂದಳು. ಬೆಳಗಿನ ಹಾಲನ್ನು ಬೇಕಾಗುವಷ್ಟು ಮನೆಗಿಟ್ಟುಕೊಂಡು, ದದ್ದು ಮಾರುತ್ತಿದ್ದರು; ಸಂತೆಯ ದಿನ ಕೂಡಿಟ್ಟ ತುಪ್ಪ ಮಾರುತ್ತಿ ಅದರೊಡನೆ ಕೈತೋಟದಲ್ಲಿ ಬೆಳೆದ ಕಾಯಿಪಲ್ಯೆಗಳನ್ನು ಒಯ್ಯುತ್ತಿ ತಮಗೆ ಬೇಕಾದ ಕಾಯಿಪಲ್ಯೆಗಳನ್ನು ಮತ್ತೂ ತಮ್ಮಿಬ್ಬರಿಗೆ ಹತ್ತು ಧಾನ್ಯವನ್ನೂ ಅವರು ಬೆಳೆಯುತ್ತಿದ್ದರು. ಸೌಖ್ಯ ಸಂಸಾರದ ಗುಟ್ಟು ರಿಬ್ಬರಿಗೂ ಚನ್ನಾಗಿ ಗೊತ್ತಾಗಿತ್ತು. ಈ ನಡುವೆ ಸಹಾಯಕ್ಕೆಂದು ಹುಡುಗ ಅವರಲ್ಲಿ ಕೆಲಸಕ್ಕಿತ್ತು ಆತನ ಹೆಸರು ಸಾವಳ್ಯಾ ಎಂದು. ಅಲ್ಲಿಯೇ ಉಣ್ಣುತ್ತಿದ್ದ, ತಿನ್ನುತ್ತಿದ್ದ, ಮಲಗುತ್ತಿದ್ದ.

ವನಮಾಲೆಗೂ ಬಯಕೆಗಳು ಪ್ರಾರಂಭವಾಗಿದ್ದವು. ಪಿಲ್ಲ ಗಳನ್ನು ನೋಡಿಕೊಳ್ಳುವದು ಆಕೆಯ ಕೈಯಿಂದ ಆಗುತ್ತಿರಲಿಲ್ಲ. ಗಿಯೇ ಸಾವಳ್ಯಾನನ್ನು ಅವರು ಕೆಲಸಕ್ಕಿಟ್ಟುಕೊಂಡಿದ್ದರು. ಅತನಿ ಕೆಲಸವೆಂದರೆ ಸೇರುತ್ತಿತ್ತು. ಗೋಪಾಲ ಗೋಸಂರಕ್ಷಣೆಯ ಕ

ಹೀಗೆ ಸಾಗಿತ್ತು. ಕಪಿಲೆಯು ಸೌಖ್ಯದ ದಿನಗಳನ್ನು ಕಂಡಿತು. ಅದು ಅಲ್ಲಿ ಆರಾಧ್ಯದೇವತೆಯ ಸ್ಥಾನವನ್ನಲಂಕರಿಸಿತ್ತು.

ಕಪಿಲೆಯನ್ನು ಮಾರಿ ಶ್ಯಾಮರಾಯರು ಮನೆಗೆ ಬಂದರು. ಮನೆಯ ಭಾಗ್ಯ, ಮನೆಯ ಮಾಂಗಲ್ಯವನ್ನೇ ತಾವು ಮಾರಿ ಬಂದೆನೆನ್ನುವ ಕಲ್ಪನೆ ಅವರಿಗೆ ಕನಸುಮನಸಿನಲ್ಲಿ ಕೂಡ ಬರಲಿಲ್ಲ. ಮನೆಗೆ ಬಂದ ಶ್ಯಾಮರಾಯರನು ಮಗ ವಾಮನ ಕೇಳಿದ—

"ಅಪ್ಪಾ ಕಪಿಲೆ ಎಲ್ಲಿ?"

"ಮಾರಿ ಬಂದೆ. ಯಾವ ಗಿರಾಕಿ ಬರಲಿಲ್ಲ. ಕೊನೆಗೆ ಅಯಿದು ರೂಪಾಯಿಗೆ ಮಾರಿ ಬಂದೆ; ತಿರುಗಿ ಮನೆಗೆಲ್ಲಿ ತರಬೇಕಾಗುತ್ತದೋ ಎಂದು ನಾನು ಅಂಜಿದ್ದೆ" ಎಂದನು.

"ಅಪ್ಪಾ, ಎಂಥಾ ಆಕಳು! ನನಗೆಷ್ಟು ಸೇರುತ್ತಿತ್ತು!" ಎಂದ.

"ಇಟ್ಟುಕೊಂಡರೇನು ಉಪಯೋಗವಿತ್ತು. ಬರಡು ದನವದು!"

ಇನ್ನೂ ಬೇಸಿಗೆ ಕಾಲ ಮುಗಿದಿರಲಿಲ್ಲ. ಇದ್ದಕ್ಕಿದ್ದಂತೆ ಒಂದು ದಿನ ವಾಮನನಿಗೆ ಕೆಂಡದಂಥ ಜ್ವರ ಬಂದವು. ಹಾಸಿಗೆ ಹಿಡಿದ. ಲಕ್ಷಣ ಚನ್ನಾಗಿ ಕಾಣಿಸಲಿಲ್ಲ. ಶ್ಯಾಮರಾಯರು ಔಷಧ ಸುರುವು ಮಾಡಿದರು. ವೈದ್ಯರು ಬಂದು ಹೋಗುತ್ತಿದ್ದರು. ವಾಮನನ ತಾಯಿ ರಾತ್ರಿ ಹಗಲು ಅವನ ಹತ್ತಿರ ಕುಳಿತುಕೊಂಡು ಕಾಯುತ್ತಿದ್ದರು. ಜ್ವರ ಇಳಿಯುವ ಲಕ್ಷಣವೆಷ್ಟೂ ಇರಲಿಲ್ಲ.

"ಆಕಳನ್ನು ಹೊಡೆದಿರಿ ನೀವು, ನನ್ನನ್ನೂ ಹೊಡೆಯಿರಿ; ನಾನು ಹೋಗುತ್ತೇನೆ. ಮಾಧೂ, ಬಂದೆ ನಿಲ್ಲು." ಎಂದು ವಾತವಿಕಾರದಲ್ಲಿದ್ದ ವಾಮನ ಬಡಬಡಿಸುತ್ತಿದ್ದ. ಕೇಳುತ್ತಿದ್ದ ತಾಯಿಗೆ ಎದೆ ಒಡೆದಂತಾಯಿತು. ಇನ್ನು ಹುಡುಗ ಕೈಗೆ ಹತ್ತುವದಿಲ್ಲವೆಂದು ತಿಳಿದಳು. ಮತ್ತೆ ವಾಮನ "ಕಪಿಲಾ, ಕಪಿಲಾ ತಾಯೀ; ಎಲ್ಲಿದ್ದೀದಿ ನೀನು!" ಎಂದನು.

"ಕಪಿಲೆಯನ್ನು ತಿರುಗಿ ಮನೆಗೆ ತರುವಂತಿದೆಯೇನು? ಹುಡುಗ ಬದುಕುವಂತಿಲ್ಲ." ಎಂದಳು ವಾಮನನ ತಾಯಿ.

"ಅಲ್ಲಕ್ಕ, ಕಟುಗನಿಗೆ ಮಾರಿದ ಆಕಳು, ತಿರುಗಿ ಹೇಗೆ ಬಂದೀತು? ಇವನ ಜಡ್ಡಿಗೂ ಅದಕ್ಕೂ ಏನು ಸಂಬಂಧ?" ಶ್ಯಾಮರಾಯರು ತಮ್ಮ

ವಾದವನ್ನು ಬೆಳೆಯಿಸಿದರು. ಪತ್ನಿಗೆ ತಿಳಿಸುವ ಯತ್ನ ಮಾಡಿದರು. ಒಂದು ದಿವಸ ವಾಮನನ ಭೂಮಿಯು ಋಣ ತೀರಿತು. ಆತನ ತಾಯಿಯು ಅಪಾರ ದುಃಖದಲ್ಲಿ ಮುಳುಗಿದಳು. ಕಪಿಲೆ ಮನೆ ಬಿಟ್ಟಳೆಂದು, ತಾನು ತನ್ನ ಮಗನನ್ನು ಕಳೆದುಕೊಳ್ಳಬೇಕಾಯಿತೆಂದು ಆಕೆಯ ಮನಸ್ಸು ಹೇಳುತ್ತಿತ್ತು.

ರಾತ್ರಿ ! ಊರೆಲ್ಲ ಮಲಗಿತ್ತು. ಬೇಸಿಗೆಯ ಬಲಿತ ದಿನಗಳವು. ಶ್ಯಾಮರಾಯರು ಅಂಗಳದಲ್ಲಿ ಮಲಗಿದ್ದರು. ಹೆಂಡತಿ ಒಳಗೆ ಮಲಗಿದ್ದಳು. ಮಗ್ಗಲಲ್ಲಿ ಚಿಕ್ಕ ಹುಡುಗಿ ಶಾಮಲೆ ಮಲಗಿದ್ದಳು

ಮಧ್ಯರಾತ್ರಿ ಶ್ಯಾಮರಾಯರು ಒಮ್ಮೆಲೇ ಎಚ್ಚರಾದರು. ಝುಗ್ಗನೇ ಗಾಬರಿಯಿಂದ “ ಆಯ್ಯೋ, ಬೆಂಕಿ, ಬೆಂಕಿ, ಮನೆಗೆ ಬೆಂಕಿ ಹತ್ತಿದೆ; ಬೆಂಕಿ ಹತ್ತಿದೆ; ಮುಂದೇನು ಗತಿ ! ಅಯ್ಯೋ ಅಯ್ಯೋ ! ” ಎಂದು ಆಕ್ರೋಶ ಮಾಡ ಹತ್ತಿದರು. ಬೆಂಕಿ ಆರಿಸಲು ನೀರೆಲ್ಲಿ ? ಭಾವಿಯೋ ಬಹಳ ದೂರ. ಬೆಂಕಿಯೋ ಮನೆಯನ್ನು ಪೂರ್ತಿ ವ್ಯಾಪಿಸಿತ್ತು. ಜ್ವಾಲೆಗಳು ಆಕಾಶವನ್ನಪ್ಪುತ್ತಿದ್ದವು. ಸುತ್ತೆಲ್ಲ ಹೊಗೆ ಮುಸುಗಿ ಏನೂ ಕಾಣಿಸದಂತಾಗಿತ್ತು. ಅಂಥದರಲ್ಲಿ ಮನೆಯಲ್ಲಿನ ಸಾಮಾನುಗಳನ್ನು ಹೊರಗೆ ತರಲು ಸಾಧ್ಯವಿರಲಿಲ್ಲ ನೆರೆಹೊರೆಯವರು ಬೆಂಕಿ ಆರಿಸಲು ಯತ್ನಿಸಿದರು. ಅದು ಕೈಮೀರಿ ಹೋಗಿತ್ತು ಮನೆಯು ಬೆಂಕಿಗಾಹುತಿಯಾಯಿತು.

ಊರಲ್ಲಿಯ ಒಂದು ದೇವಾಲಯದಲ್ಲಿ ಶ್ಯಾಮರಾಯರು ಸಂಸಾರ ಹೂಡಿದರು. ಮಳೆಗಾಲ ಕಾಲಿಡುವದಿತ್ತು. ಮನೆ ಕಟ್ಟಿಸಲು ಸಾಧ್ಯವಿರಲಿಲ್ಲ. ನಾಲ್ಕಾರು ಪಾತ್ರೆಗಳು ಗಡಿಗೆಗಳ ಸಹಾಯದಿಂದ ಅಡಿಗೆ ಮುಂತಾದ್ದು ನಡೆದಿತ್ತು. ಮನೆ ಸುಟ್ಟ ದಿನ ಮೈಮೇಲಿದ್ದ ಮಡಿಸೀರೆಯೊಂದನ್ನು ಬಿಟ್ಟು ಬೇರೆ ಅರಿವೆಗಳಿರಲಿಲ್ಲ. ಶ್ಯಾಮರಾಯರ ಹೆಂಡತಿಗೆ ನಾಲ್ಕಾರು ಸಣ್ಣಪುಟ್ಟ ಆಭರಣಗಳನ್ನು ಮಾರಿ ಹೊಟ್ಟೆ ಹೊರಕೊಳ್ಳಬೇಕಿತ್ತು; ಅಂತೂ ಅವರು ದಿನಗಳನ್ನು ದೂಡುತ್ತಿದ್ದರು.

ಮಳೆಗಾಲ ಕಾಲಿಟ್ಟಿತು. ಜನರೆಲ್ಲ ಬಿತ್ತುವದರಲ್ಲಿ ತೊಡಗಿದರು. ಶ್ಯಾಮರಾಯರ ಹತ್ತಿರ ರಂಟೆ ಇಲ್ಲ, ಕುಂಟೆ ಇಲ್ಲ; ಎತ್ತೂ ಇಲ್ಲ. ದೀನರಾಗಿ ಭಿಕ್ಷೆ ಬೇಡುವದಕ್ಕೆ ಹತ್ತಿದರು. ಬೈಲು ಗುಡಿಯದು. ಚಳಿ ಬಹಳ.

ಒಂದು ದಿನ ಶ್ಯಾಮರಾಯರ ಮಗಳಿಗೆ ಜ್ವರ ಬಂದವು. ಹುಡುಗೆ ಹುರುಪಳಿಸುತ್ತಿತ್ತು. ಶ್ಯಾಮರಾಯರು ಏನು ಮಾಡುವಂತಿದ್ದರು ? ನಾಲ್ಕನೇ ದಿನ ಆ ಹುಡುಗೆಯೂ ಕಣ್ಮುಚ್ಚಿದಳು. ಶ್ಯಾಮರಾಯರ ಹೆಂಡತಿಯ ಕಣ್ಣೀರು ಧಾರೆಗುಟ್ಟಿ ಹರಿದವು. ದಿನ-ದಿನವೂ ಹೋದ ಮಕ್ಕಳನ್ನು ನೆನೆ-ನೆನಸಿ ಕೊರಗಿದರು– ಸೊರಗಿದರು–!

ಮಳೆಗಾಲ ಮುಗಿಯಿತು. ಶ್ಯಾಮರಾಯರು ಗುಡಿಸಲು ಹಾಕಿದರು. ಗುಡಿಯಿಂದ-ಸಂಸಾರ ಗುಡಿಸಲಿಗೇ ಬಂದಿತು. ಶ್ಯಾಮರಾಯರೀಗ ತುಂಬ ಸಾಲದಲ್ಲಿದ್ದರು. ಹೆಂಡತಿಯ ಮಾಂಗಲ್ಯವನ್ನು ಬಿಟ್ಟು, ಉಳಿದದ್ದನ್ನೆಲ್ಲ ಮಾರಿ ಬಿಟ್ಟಿದ್ದರು. ಮಡದಿ ಸಾವಿತ್ರೀಬಾಯಿಗೆ ಮಾನಸಿಕ ಸ್ವಾಸ್ಥ್ಯ ಎಲ್ಲುಳಿಯಬೇಕು ? ಯಾವಾಗಲೂ ಮನಸ್ಸಿನಲ್ಲಿ ಹುರುಹುರು ಇದ್ದೇ ಇರುವದು. ಶಾಂತಿಯ ದಾರಿಯನ್ನು ಹುಡುಕುತ್ತಿದ್ದರು.

ಇದ್ದ ಹಾಗೆ ಒಂದು ಬೆಳಿಗ್ಗೆ ಆ ಊರಿಗೆ ಒಬ್ಬ ಸ್ವಯಂಸೇವಕ ಬಂದ. ನೂಲುವ ಪ್ರಚಾರ ಆತ ಮಾಡುತ್ತಿದ್ದ. ನೂಲುವದನ್ನು ಕಲಿಸುತ್ತೇನೆಂದು ಹೇಳುತ್ತಿದ್ದ. ಸಾವಿತ್ರಿಬಾಯಿಯವರ ಲಕ್ಷ್ಯ ನೂಲುವದರ ಕಡೆಗೆ ಹೊರಳಿತು. ಸ್ವಯಂಸೇವಕನಿಂದ ನೂಲುವದನ್ನು ಕಲಿತರು. ಚರಕ ತಕ್ಕೊಂಡು, ಮನೆಗೆಲಸ ಮಾಡಿ-ಉಳಿದ ವೇಳೆಯನ್ನು ನೂಲುವದರಲ್ಲಿ ಕಳೆಯಹತ್ತಿದರು.

ದಸರೆ–ಹೋಯಿತು; ದೀಪಾವಳಿಯೂ ಜಾರಿತು; ಕಾಮನ ಹಬ್ಬವೂ ಬಂದಿತು. ಶ್ಯಾಮರಾಯರ ಸಂಸಾರ ಹೇಗೋ ಕುಂಟುತ್ತ ನಡೆದಿತ್ತು. ಸಾಲಗಾರರು ಎಡತಾಕುವದು ನಡೆದೇ ಇತ್ತು. ಮತ್ತೆ ದೇವಾಲಯವೇ ತಮಗೆ ಗತಿ ಎನ್ನುವ ಚಿಂತೆಯಲ್ಲಿದ್ದರು ಶ್ಯಾಮರಾಯರು.

ಒಂದು ದಿನ ಶಾಮರಾಯರು ಮನೆಗೆ ಬಂದರು. ನೋಡುತ್ತಾರೆ– ಹೆಂಡತಿಯು ಗಡಗಡ ನಡುಗುತ್ತ ಹಾಸಿಗೆ ಮೇಲೆ ಮಲಗಿದ್ದಾರೆ. ಆಗಾಗ ಅವರಿಗೆ ಜ್ವರ ಬರುತ್ತಿದ್ದವು. ತಲೆ ರುಮು-ರುಮು ಹೊಡೆಯುವದು. ಕೈಯ್ಯಿಂದ ಕೆಲಸವಾಗುತ್ತಿರಲಿಲ್ಲ.

ಶಾಮರಾಯರು ವೈದ್ಯರನ್ನು ಬೇಡಿಕೊಂಡು ಕರೆತಂದು ಹೆಂಡತಿಯನ್ನು ತೋರಿಸಿದರು. ಅವರು ಔಷಧ ಚೀಟಿಗಳನ್ನು ಕೊಟ್ಟರು; ಮತ್ತು ದಿನಕ್ಕೆ ಮೂರು ಸಲದಂತೆ ಆಕಳ ತುಪ್ಪದಲ್ಲಿ ಒಂದೊಂದನ್ನು ಕಲಿಸಿ ಕೊಡಿರೆಂದು

ಹೇಳಿದರು; ಆದರೆ ಆಕಳ ತುಪ್ಪ ಎಲ್ಲಿ ಸಿಗಬೇಕು ? ಕೊಂಡು ತರುವಷ್ಟು ಕೈಯಲ್ಲಿ ದುಡ್ಡು ಎಲ್ಲಿತ್ತು ? ಯಾರೋ ಅವರಿಗೆ ಗೋಪಾಲನ ಹೆಸರು ಹೇಳಿದರು.

ಕಪಿಲೆ ಈಗ ಕಟ್ಟ್ವಿ ನಾಲ್ಕೈದು ತಿಂಗಳಾಗಿತ್ತು. ಇನ್ನು ನಾಲ್ಕು ತಿಂಗಳಿಗೆ ಅದು ಈಯುತ್ತದೆ. ಗೋಪಾಲ ಸಂತೋಷದಲ್ಲಿದ್ದ. ಅಂದು ಸಂಜೆಗೆ ತುಪ್ಪ ಮಾರಲು ಹೋಗುವವನಿದ್ದ. ಕೈ ತೋಟದಲ್ಲಿಯ ಕಾಯಿ ಪಲ್ಯೆಗಳನ್ನು ಬುಟ್ಟಿಯಲ್ಲಿ ತುಂಬಿಟ್ಟು- ಒಂಟೆತ್ತಿನ ಬಂಡಿಯನ್ನು ಹೂಡಿದ. ಹೊರಡಲು ಸಿದ್ಧನಾದ. ಬಾಗಿಲಿಗೆ ಕೈ ಕೊಟ್ಟು ವನಮಾಲೆಯು “ ಬೇಗನೇ ತಿರುಗಿ ಬಂದುಬಿಡಿರಿ ಆ ? ” ಎಂದಳು.

“ ಯಾಕೆ ಒಬ್ಬಳೇ ಇರಲು ನಿನಗೆ ಅಂಜಿಕೆಯೇ ” ಎಂದ ಗೋಪಾಲ.

“ ನನಗೆಲ್ಲಿ ಅಂಜಿಕೆ. ಆಕಳಿವೆ. ಎತ್ತುಗಳಿವೆ. ಮೇಲೆ ಕಾಯುವ ಪರಮಾತ್ಮನಿದ್ದಾನೆ; ಅಂದಮೇಲೆ ನಾನೇಕೆ ಅಂಜಲಿ ? ಒಬ್ಬಳೇಯಾದರೆ ನನಗೆ ಬೇಸರಿಕೆ ಆದಕೆಂದು ಹೇಳಿದೆ; ಅಷ್ಟೇ ”

“ ಅಲ್ಲಃ ಬೇಸರಿಕೆ ಬಂದರೆ - ಕರುಗಳೊಡನೆ ಆಡು; ಹೂವುಗಳೊಡನೆ ಮಾತಾಡು; ಗಿಡಗಳಿಗೆ ನೀರು ಹಣಿಸು ” ಎಂದನು ಗೋಪಾಲ.

“ ನನಗೆ ತುಂಬ ದಣಿಕೆಯಾಗುತ್ತದೆ ಈಗ ”

“ ಹೋ - ಹೋ ತಿಳಿಯಿತು ಬಿಡು ಆಗಲಿ ಬರುತ್ತೇನೆ ” ಮುಂದೆ ಆಳು ಸಾವಳ್ಯಾ–ಹಿಂದೆ ಗೋಪಾಲ. ವನಮಾಲೆಯು ಮತ್ತೆ “ ಸಾವಳ್ಯಾ ಬೇಗನೇ ಬಂದು ಬಿಡು–ಗಾಡಿ ಹೊಡಕೊಂಡು ” ಎಂದಳು.

ಆತ “ ಆಗಲೀ ತಾಯಿ ” ಎನ್ನುತ್ತ ಎತ್ತಿನ ಬಾಲ ತಿರುವಿದ.

ಗಾಡಿಯೂ ಕಣ್ಮರೆಯಾಯಿತು. ವನಮಾಲೆ ಚರಕ ಮುಂದಿಟ್ಟು ಕೊಂಡು ನೂಲುವದಕ್ಕಾರಂಭಿಸಿದಳು ನೂಲುವದನ್ನು ಮುಗಿಸಿ-ಕೆಲಹೊತ್ತು ತೋಟದಲ್ಲಿ–ಹವೆ ಸೇವಿಸುತ್ತ ಓಡಾಡಿದಳು. ದನದ ಹಕ್ಕಿಗೆ ಹೋಗಿ ಶೆಗಣಿ ದೂರ ಸರಿಸಿದಳು. ಅಂಗಳವನ್ನೆಲ್ಲ ಕಸಗೂಡಿಸಿ ಚೊಕ್ಕ ಮಾಡಿದಳು. ಹೊರಗೆ ಗಾಡಿಯ ಸಪ್ಪಳ ಕೇಳಿಸಿತು; ಎತ್ತಿನ ಕೊರಳೊಳಗಿನ

ಗಂಟೆಯ ನಾದ ಕಿವಿಯನ್ನು ಹೊಕ್ಕಿತು. ಗಾಡಿ ನಿಂತಿತು. ಗಾಡಿಯಲ್ಲಿ ಮತ್ತಾರೋ ಇದ್ದರು. ಅವರನ್ನು ಇಳಿಸಿಕೊಂಡು ಗೋಪಾಲ ಮನೆಯ ಹೊಸ್ತಿಲೆದುರು ಬಂದು, ಮುಗ್ಗುಲಿಗೆ ನಿಂತಿದ್ದ ಹೆಂಡತಿಗೆ ಹೇಳಿದ "ನಾವು ಬೇರೆ ಇಟ್ಟ ಆ ಲಕ್ಷ್ಮಿಯ ತುಪ್ಪ ತೆಗೆದುಕೊಂಡು ಬಾ ಇಲ್ಲಿ" ಎಂದ. ತನ್ನಲ್ಲಿಯ ಪ್ರತಿಯೊಂದು ಆಕಳಿಗೂ ಗೋಪಾಲ ಒಂದೊಂದು ಹೆಸರಿಟ್ಟಿದ್ದ. ಬೇರೆ ಬೇರೆ ಆಕಳ ಮೇಲೆ, ಬೇರೆ ಬೇರೆ ಆಹಾರದ ಪ್ರಯೋಗ ಮಾಡುತ್ತಿದ್ದ. ಒಂದಕ್ಕೆ ಹಾಲು ಹೆಚ್ಚಾಗುವದಕ್ಕೆ, ಮತ್ತೊಂದಕ್ಕೆ ಬೆಣ್ಣೆ ಹೆಚ್ಚಾಗುವದಕ್ಕೆ, ಹೀಗೆ ಆತನ ಪ್ರಯೋಗ ನಡೆದಿತ್ತು. "ಲಕ್ಷ್ಮೀ ಆಕಳ ತುಪ್ಪ ಬಹಳ ಕಂಪು. ಕೇವಲ ಔಷಧಕ್ಕಾಗಿ ಉಪಯೋಗವೆಂದು ಇದನ್ನು ಬೇರೆ ಇಟ್ಟಿದ್ದೆ ನಾನು" ಎನ್ನುತ್ತ ತುಪ್ಪದ ಪಾತ್ರೆಯನ್ನು ಶ್ಯಾಮರಾಯರ ಮುಂದೆ ಹಿಡಿದ.

"ನನಗೆ ಬೇಕೆಂದೇ ನಾನೀ ತುಪ್ಪ ಮಾರುವದಿಲ್ಲ; ನೀವು ಎರಡು ಶೇರಿನಷ್ಟು ಒಯ್ಯಿರಿ, ದುಡ್ಡು ಕೊಡಬೇಡಿ, ನಿಮ್ಮ ಹೆಂಡತಿಯ ಆರೋಗ್ಯ ಚನ್ನಾದರೆ ನನ್ನ ದುಡ್ಡು ಬಂದ ಹಾಗೆಯೇ" ಎಂದ.

ತನ್ನ ಆಕಳನ್ನು ತೋರಿಸಲಿಕ್ಕೆಂದು ಶ್ಯಾಮರಾಯರನ್ನು ದನದ ಹಕ್ಕಿಗೆ ಕರೆದೊಯ್ದ. ನೋಡುತ್ತ ನೋಡುತ್ತ ಅವರಿಬ್ಬರೂ ಕಪಿಲೆಯ ಎದುರು ಬಂದರು. "ಇದು ನಮ್ಮ ಮನೆಯ ಆರಾಧ್ಯ ದೇವತೆಯು. ಇನ್ನು ನಾಲ್ಕು ತಿಂಗಳುಗಳಿಗೆ ಈಯುತ್ತದೆ; ಆಗ ನಿಮಗೆ ಇದರ ತುಪ್ಪ ಕಳಿಸುತ್ತೇನೆ. ಶ್ಯಾಮರಾಯರು ನೋಡುತ್ತ ನಿಂತರು. ಕೂಡಲೇ ಗುರುತು ಹಿಡಿಯಲಾರ ದಷ್ಟು ಅದು ಬದಲಾಗಿತ್ತು; ಆದರೆ ಕಪಿಲೆಗೆ ಶ್ಯಾಮರಾಯರ ಗುರ್ತು ಬೇಗನೇ ಹತ್ತಿತು; ಅದು ನಾಚಿತು. ತನ್ನನ್ನು ನೋಡಿ ತನ್ನ ಯಜಮಾನ ಗುರುತು ಹಿಡಿದು, ನಾಚಬಹುದೆಂದು ತನ್ನ ಮೋರೆಯನ್ನು ಆಚೆಗೆ ತಿರುವಿತು.

"ಎಲ್ಲಿ ಸಿಕ್ಕಿತು ಈ ಆಕಳು ನಿಮಗೆ ?" ಎಂದರು ಶ್ಯಾಮರಾಯರು. ಗೋಪಾಲ ಎಲ್ಲ ಕತೆಯನ್ನೂ ವಿವರಿಸಿದ. ಶ್ಯಾಮರಾಯರಿಗೆ ದುಃಖ ತಡೆಯು ವದಾಗಲಿಲ್ಲ. ಗೊಳೋ ಎಂದು ಅತ್ತುಬಿಟ್ಟರು ಕಪಿಲೆಯು ಅವರ ಕಾಲನ್ನು ನೆಕ್ಕಹತ್ತಿತು.

“ಗೋಪಾಲಾ! ಇದು ನನ್ನ ಆಕಳು. ಇದನ್ನು ನಾನು ಬಹಳ ಪೀಡಿಸಿದೆ, ಹೊಡೆದೆ-ಬಡೆದೆ-; ಇದರ ಕರುವನ್ನು ಜೋಪಾನ ಮಾಡಲಿಲ್ಲ; ಕೊನೆಗೆ ನಾನು ಮಾಡಿದ ಪಾಪ ನನ್ನನ್ನೇ ತಿಂದಿತು. ಇದರ ಮುರುಕ ನನಗೆ ತಟ್ಟಿ ನಾನೀಗ ನಿರ್ಗತಿಕನಾದೆ. ತಾಯೀ, ನಿನ್ನ ಸೇವೆಯಲ್ಲಿಯೇ ನಾವಿಬ್ಬರೂ ಈ ದೇಹವನ್ನು ಸವೆಸುತ್ತೇವೆ” ಎನ್ನುತ್ತ ಶ್ಯಾಮರಾಯರು ಆಕಳ ಕಾಲು ಹಿಡಿದುಕೊಂಡರು. ಕಪಿಲೆಯೂ ತನ್ನ ಹಳೆಯ ಯಜಮಾನನಿಗೆ ಆರೋಗ್ಯವಾಗಲಿ ಎಂದು ದೇವರನ್ನು ಬೇಡಿಕೊಂಡಿತು. ಗೋಪಾಲ “ಶ್ಯಾಮರಾವ, ನಿಮ್ಮ ಕಪಿಲೆಯನ್ನು ನಿನುಗೆ ತಿರುಗಿ ಕೊಡುತ್ತೇನೆ ಈದಕೂಡಲೆ ಇದನ್ನು ನೀವು ಒಯ್ಯಬಹುದು. ನೀವು ಪಶ್ಚಾತ್ತಾಪದಗ್ಧರಾಗಿದ್ದೀರಿ!” ಎಂದ.

“ಛೆ ಹಾಗಲ್ಲ. ನಾನೇ ನಿಮ್ಮಲ್ಲಿಗೆ ಬರುತ್ತೇನೆ. ಇಲ್ಲಿಯೇ ನಿಮ್ಮೊಡನೆ ವಾಸ ಮಾಡುತ್ತೇನೆ. ನಾನು ದನಗಾಯಿಯಾಗುತ್ತೇನೆ ನಿಮ್ಮ ಆದರ್ಶಗಳು ನನಗೂ ಮಾರ್ಗ ತೋರಿಸಿ, ಪಾಪಿಯಾದ ನನ್ನನ್ನು ಪುಣ್ಯವಂತನನ್ನಾಗಿ ಮಾಡಲಿ”

ಶ್ಯಾಮರಾಯರು ಮನೆಗೆ ಬಂದು, ಹೆಂಡತಿಗೆ ಎಲ್ಲ ವಿಷಯವನ್ನೂ ತಿಳಿಸಿದರು. ಕಪಿಲೆಯು ಸೌಖ್ಯವಾಗಿದೆ ಎನ್ನುವ ವಿಷಯ ತಿಳಿದು ಅವರಿಗೆ ಸಮಾಧಾನವಾಯಿತು, ಸಂತೋಷವಾಯಿತು. ಅರ್ಧ ಬೇನೆಯೇ ಕಡಿಮೆಯಾಯಿತು ಅವರಿಗೆ. ತುಪ್ಪದಲ್ಲಿ ಚೂರ್ಣ ತಕ್ಕೊಂಡರು. ಅವರ ಬೇನೆ ಪೂರ್ತಿಯಾಗಿ ಗುಣವಾಯಿತು.

ಒಂದು ದಿನ ಶ್ಯಾಮರಾಯರು ಹೆಂಡತಿಯನ್ನು ಕುರಿತು ಹೇಳಿದರು. “ನಾವು ಕೂಡ ಆಶ್ರಮಕ್ಕೆ ಸೇರೋಣ. ಇದ್ದ ಮನೆಮಾರನ್ನು ಮಾರಿ ಸಾವುಕಾರರ ಸಾಲ ತೀರಿಸೋಣ. ಉಳಿದ ಆಯುಷ್ಯವನ್ನೆಲ್ಲ ಆಕಳ ಸೇವೆಯಲ್ಲಿ ಕಳೆಯೋಣ” ಎಂದರು.

“ಈ ಮಾತನ್ನು ನಿಮಗೆ ನಾನು ಎಂದೊ ಹೇಳಿದ್ದೇನೆ. ಕಪಿಲೆ ಗೋವಿನ ಸೇವೆಯನ್ನು ಮಾಡಿ, ಹಿಂದಿನ ಪಾಪವನ್ನು ತೊಳೆದುಕೊಳ್ಳೋಣ” ಎಂದು ಹೊರಡುವದು ಎಂದು ಪಾರ್ವತಿಬಾಯಿಯು ಆತುರರಾಗಿ ಕೇಳಿದರು. “ಇಷ್ಟರಲ್ಲಿಯೇ ಹೋಗೋಣ” ಎಂದು ಶ್ಯಾಮರಾಯರು ಹೇಳಿದರು.

ಶ್ಯಾಮರಾಯರು ಮನೆಮಾರನ್ನು ಮಾರಿದರು. ಗೋಸೇವಾಶ್ರಮಕ್ಕೆ ಬಂದರು. ಗೋಪಾಲ ಅವರನ್ನು ಸ್ವಾಗತಿಸಿದ. ಎಲ್ಲರೂ ಒಟ್ಟಾಗಿಯೇ ಇರ ಹತ್ತಿದರು. ಶ್ಯಾಮರಾಯರು ದೊಡ್ಡ ಅಣ್ಣ, ಸಾವಿತ್ರಿಬಾಯಿಯು ದೊಡ್ಡ ಅಕ್ಕನೆಂದು ಅನ್ನುವಷ್ಟು ಅವರ ಗೆಳೆತನ ಬೆಳೆಯಿತು. ಯಾರಲ್ಲೂ ಭೇದ ಭಾವ ಬೆಳೆಯಲಿಲ್ಲ. ಸಮತೆಯ ಸ್ವರ್ಗವಾಯಿತು ಅವರ ಬಾಳು. ಶ್ಯಾಮರಾಯರು ಗೋಸೇವೆಗೆ ನಿಂತರು. ಅವರು ನಸುಕಿನಲ್ಲಿಯೇ ಏಳುವರು. ಸಾವಳ್ಯಾನು ಕೂಡ ಆಗಲೇ ಏಳುವನು. ಗೋಪಾಲ ಮೊದಲೆ ಎದ್ದಿರುತ್ತಿದ್ದ. ಸಾವಳ್ಯಾ ಹಾಗೂ ಶ್ಯಾಮರಾಯರು ಶೆಗಣಿಯನ್ನೆತ್ತಿ ಗೊಬ್ಬರದ ಗುಂಡಿಗೆ ಹಾಕುತ್ತಿದ್ದರು. ಹಿಂಡಿಕೊಳ್ಳುವ ಕೆಲಸ ಗೋಪಾಲನದು. ಇವರಿಬ್ಬರು ಅವನಿಗೆ ನೆರವಾಗುತ್ತಿದ್ದರು ಪಲ್ಯಕಾಯಿ ಮಡಿಗಳಿಗೆ ನೀರು ಉಣಿಸು ತ್ತಿದ್ದರು. ಶ್ಯಾಮರಾಯರು ದನಗಳನ್ನು ಅಡವಿಗೆ ಒಯ್ದು ಕಾಲಾಡಿಸಿ ಕೊಂಡು ಬರುತ್ತಿದ್ದರು. ಕರುಗಳಿಗೆ ಎಳೆಯ ಹುಲ್ಲು ತಿನಿಸುವರು, ಕಪಿಲೆಯ ಸೇವೆ ಮಾಡುವರು, ಆಕಳುಗಳಿಗೆ ನೀರು ಕುಡಿಸುವರು. ಗೋಪಾಲ ಹಾಲನ್ನೊಯ್ದು ಮಾರಿ ಬರುತ್ತಿದ್ದ. ಪಲ್ಯೆಕಾಯಿಗಳನ್ನು ತೊಳೆದು ಸೂಡು ಮಾಡುವದು ತೊಳೆಯುವದು, ಇವೆಲ್ಲ ಕೆಲಸ ವನಮಾಲಾ ಹಾಗೂ ಪಾರ್ವತಿಬಾಯಿಯವರದು. ದೇವರಿಗೆ ಹಾರ ಕಟ್ಟಿಡುವ ಕೆಲಸಕ್ಕೆ ಇಬ್ಬರವೂ ಜಿದ್ದು.

ಮಳೆಗಾಲ ಕಾಲಿಟ್ಟಿತು. ಪೃಥ್ವಿಯ ಮೇಲೆ ಮೇಘರಾಜನು ಮಳೆ ಸುರಿಯ ಹತ್ತಿದ. ಕಾದ ಭೂಮಿಯು ಆಕಂಠ ನೀರು ಕುಡಿದು ಶಾಂತ ವಾಯಿತು ಅಲ್ಲಲ್ಲಿ ಅಷ್ಟು ಇಷ್ಟು ಎಳೆ ಹಸಿರಾದ ಕಿರಿಹುಲ್ಲು ಚಿಗಿಯಹತ್ತಿತು. ಒಂದೆಡೆ ನಾಲ್ಕು ಬಿಟ್ಟು, ಇನ್ನೊಂದೆಡೆ ಗೇಣು ಗೇಣು. ಮೋರೆ ಮೇಲೆ ಗಾಳಿಗೆ ಲೋಲಾಡಹತ್ತಿತು. ದನಗಳೆಲ್ಲ ಹಿರಿ ಹಿರಿ ಹಿಗ್ಗಿದವು. ಕಾನನದಲ್ಲಿ ನವಿಲುಗಳು ಆನಂದದಿಂದ ಗರಿ ಕೆದರಿ ಕುಣಿಯಹತ್ತಿದವು; ಪಕ್ಷಿಗಳ ಗಂಟ ಲಿಗೆ ಮಾಧುರ್ಯ ಬಂದಿತು. ಸುತ್ತೆಲ್ಲ ಆನಂದ ಉಕ್ಕೇರುತ್ತಿತ್ತು. ಜೀವರಾಶಿ ಗಳೆಲ್ಲ ಸಂಭ್ರಮದಲ್ಲಿದ್ದವು. ದೂರ ಕೊಳ್ಳದಲ್ಲಿ ಬೇಕಾದಷ್ಟು ಹುಲ್ಲು ಬೆಳೆ ದಿದ್ದಿತು. ದನಗಳು ಹೊಟ್ಟೆತುಂಬ ಮೇಯುತ್ತಿದ್ದವು. ಶ್ಯಾಮರಾಯರು ಮೇಯಿಸಲಿಕ್ಕೆಂದು ಆಕಳುಗಳನ್ನಟ್ಟಿಕೊಂಡು ಹೋಗುತ್ತಿದ್ದರು. ಒಂದೊಂದು

ಸಲ ಗೋಪಾಲನೂ ಹೋಗುತ್ತಿದ್ದ. ಹುರುಪಿನಿಂದ ಕೊಳಲನ್ನು ಊದುತ್ತಿದ್ದ ದನಗಳೊಡನೆ ಆಟವಾಡುತ್ತಿದ್ದ. ಕಪಿಲೆ ಈಗ ತುಂಬ ಈಯಲಾಗಿತ್ತು. ಹೊರಗೆ ಬಿಡುತ್ತಿರಲಿಲ್ಲ. ಹಸಿರು ತಂದು ಮನೆಯಲ್ಲಿಯೇ ತಿನಿಸುತ್ತಿದ್ದರು.

ಕಪಿಲೆ ಈಯಿತು. ಬೇಕಾದಷ್ಟು ಹಾಲು ಕೊಡುತ್ತಿತ್ತು. ಎಲ್ಲರಿಗೂ ಆನಂದವೇ ಆನಂದವಾಯಿತು. ಸರತಿಗೆ ೧೫-೨೦ ಶೇರು ಕೊಡುತ್ತಿತ್ತು. ಉಳಿದ ಆಕಳುಗಳು-ಈದವು. ಸುತ್ತಣ ರೈತ ವರ್ಗವೆಲ್ಲ ಕಪಿಲೆಯನ್ನು ನೋಡಲಿಕ್ಕೆ ಬರುವರು. ಇಲ್ಲಿಯ ಹಾಲು ಅಮಳನೇರದ ವಿದ್ಯಾರ್ಥಿ ನಿಲಯಕ್ಕೆ ಹೋಗತೊಡಗಿತು; ಆ ಸುತ್ತಿಗೆಲ್ಲ ಆಶ್ರಮವು ಆಕಳ ಹಾಲು ಕೊಡಹತ್ತಿತು. ಆಶ್ರಮದ ಕೀರ್ತಿ ಬೆಳೆಯಿತು.

ಕೆಲವು ದಿನಗಳ ನಂತರ ವನಮಾಲೆಯು ಗಂಡು ಕೂಸನ್ನು ಹೆತ್ತಳು. ಕೂಸು-ಸುಮ್ಮನೇ ಚಂಡಿನಂತಿತ್ತು. ಬಾಣಂತಿತನವನ್ನೆಲ್ಲ ಪಾರ್ವತಿ ಬಾಯಿಯೇ ಮಾಡಿದಳು. ಈಗ ಶ್ಯಾಮರಾಯರಿಗೊಂದು ಬೇರೆ ಗುಡಿಸಲು ಕಟ್ಟಲಾಗಿದೆ. ಸಾವಿತ್ರೀಬಾಯಿಯ ಮನೆ-ವನಮಾಲಾಬಾಯಿಗೆ ತವರು ಮನೆಯಾಗಿತ್ತು. ಕೂಸಂತೂ ಯಾವಾಗಲೂ ಅವರನ್ನೇ ಅಂಟಿಕೊಂಡಿತ್ತು.

ರಾತ್ರಿ ಅಂಗಣದಲ್ಲಿ ಪ್ರಾರ್ಥನೆ ನಡೆಯುತ್ತಿತ್ತು. ಕಪಿಲೆಯು ಮನಸ್ಸಿನಲ್ಲಿ—"ನನ್ನ ಯಜಮಾನಿಗೆ ಒಂದು ಮಗುವಾಗಲಿ; ಹೋದ ವಾಮನ ತಿರುಗಿ ಬಂದು, ನನ್ನ ಕರುವಿನ ಕೂಡ ಆಡಲಿ" ಎಂದು ಅಂದುಕೊಳ್ಳುತ್ತಿತ್ತು. ಮುಂದೆ ಕೆಲವು ದಿನ ಕಳೆದ ನಂತರ-ಸಾವಿತ್ರಿಬಾಯಿಗೂ ಒಂದು ಗಂಡು ಮಗುವಾಯಿತು; ಅದು ಕೇವಲ ಹೋದ ವಾಮನನಂತಿತ್ತು. ಕಪಿಲೆಯ ಆನಂದ ದ್ವಿಗುಣಿತವಾಯಿತು; ಅಂದು ಅದು ಹೆಚ್ಚು ಹಾಲನ್ನು ಕೊಟ್ಟಿತು. ಯಾರಿಗೆ ಗೊತ್ತು ವಾಮನನ ಸಲುವಾಗಿ ಒಳಗೆ ಹಾಲನ್ನು ಮುಚ್ಚಿಟ್ಟು ಕೊಂಡಿತ್ತೋ ಏನೋ?

ಪುಣೆಯಲ್ಲಿ ಒಂದು ಪ್ರದರ್ಶನ ನೆರೆಯುವದಿತ್ತು. ತನ್ನ ಆಕಳನ್ನು ಪ್ರದರ್ಶನದಲ್ಲಿ ಕಟ್ಟಬೇಕೆಂದು ಆತ ಯೋಚಿಸಿರಲಿಲ್ಲ; ಆವರೆ ಸಮಾಜ

ಹಿತಕ್ಕಾಗಿ ಆತ ಅದನ್ನು ಅಲ್ಲಿಗೆ ಒಯ್ಯತಕ್ಕವನಿದ್ದ. ಗೋಪಾಲ-ಸಾವಳ್ಯಾ ಕೂಡಿಕೊಂಡು ಕಪಿಲೆಯನ್ನು ಪ್ರದರ್ಶನಕ್ಕೊಯ್ದರು.

ಅದೋ ಅಲ್ಲಿ ನೋಡಿರಿ! ಪ್ರದರ್ಶನ ನೆರೆದಿದೆ. ಒಂದು ಕಡೆಗೆ ಕಪಿಲೆಯು ನಿಂತಿತ್ತು. ಪವಿತ್ರ-ಮಂಗಳ-ಗೋ ತಾಯಿಯಾಕೆ. ಗೋಪಾಲ ಅದರ ಚರಿತ್ರೆಯನ್ನೆಲ್ಲ ಬರೆದು, ಒಂದು ಸಣ್ಣ ಪುಸ್ತಕ ಅಚ್ಚು ಹಾಕಿಸಿದ್ದ. ಅದಕ್ಕೆ ಒಂದಾಣೆ ಬೆಲೆ ಇಟ್ಟಿದ್ದ. ಸಾವಿರಾರು ಪ್ರತಿಗಳು ಖರ್ಚಾದವು. ಚರಿತ್ರೆಯಲ್ಲಿ ಬರೆದ ಕಪಿಲಾ ಗೋವು ಇದೇಯೆಂದು ಜನರು ಅದಕ್ಕೆ ನಮಸ್ಕಾರ ಮಾಡುವರು. ಅದರ ಕರುವಿಗೆ ಇನ್ನೂ ಒಂದು ವರ್ಷವಾಗಿರಲಿಲ್ಲ; ಆಗಲೇ ಅದೆಷ್ಟು ದೊಡ್ಡದಾಗಿ ಕಾಣುತ್ತಿತ್ತು. ಅದರ ಮೋರೆಯ ಮೇಲೂ ಚಂದ್ರ ಚಿಗಿತಿದ್ದ. ಅಲ್ಲಿ ಕಪಿಲೆಯು ಸರತಿಗೆ ೨೫ ಶೇರು ಹಾಲು ಕೊಟ್ಟಿತು. ಅದಕ್ಕೆ ಮೊದಲ ಬಹುಮಾನ ದೊರೆಯಿತು ಅದರ ಕರುವಿಗೂ ಬೆಳ್ಳಿಯ ಪದಕ ದೊರೆಯಿತು. ಮ್ಯಾಜಿಕ ಲಾಂಟರ್ನದ ಸಹಾಯ ತಕ್ಕೊಂಡು, ಗೋಪಾಲ ಪ್ರದರ್ಶನದಲ್ಲಿ-ಗೋಪಾಲನೆಯನ್ನು ಕುರಿತು ಉಜ್ವಲ ಭಾಷಣ ಮಾಡಿದ. ನೆರೆದ ರೈತ ವರ್ಗವೆಲ್ಲ ಭಲೆ ಭಲೆ ಎಂದಿತು. ಭಾಷಣದ ತುಂಬೆಲ್ಲ ಗೀತೆಯ ಉಕ್ತಿಗಳು-ವೇದ ಕಾಲದಿಂದ ಐತಿಹಾಸಿಕ ಕಾಲದ ವರೆಗಿನ ಗೋರಕ್ಷಣೆಯ ಇತಿಹಾಸವನ್ನು ಒಂದು ವಿಚಿತ್ರಪಟದಂತೆ ಜನತೆಯ ಮುಂದೆ ಇಟ್ಟ. ಕೊನೆಗೆ ಕಪಿಲೆಯ ಚರಿತ್ರೆ ಹೇಳಿ-ಪರದೆಯ ಮೇಲೆ ಅದರ ಚಿತ್ರವನ್ನು ಮೂಡಿಸಿ ತನ್ನ ಭಾಷಣವನ್ನು ಮುಗಿಸಿದ.

ಈ ತೆರನಾಗಿ ಕಟುಕನಿಂದ ಐದು ರೂಪಾಯಿಗೆ ಕೊಂಡುಕೊಂಡ ಆಕಳ ಮಾತು ಸುತ್ತಿಗೆಲ್ಲ ಮನೆಮಾತಾಯಿತು.

ಕಪಿಲೆ ಹಾಗೂ ಅದರ ಹೋರಿ ಭೀಮನನ್ನು ಮುಂದೆ ಹಾಕಿಕೊಂಡು ಗೋಪಾಳ-ಸಾವಳ್ಯಾನು ತಿರುಗಿ ಆಶ್ರಮಕ್ಕೆ ಬಂದರು. ಅಂದು ಅವರಿಗೆ ದಿಗ್ವಿಜಯ ಮಾಡಿ ಬಂದ ಸಂಭ್ರಮ! ಸ್ವಾಗತಿಸಲು ಸಾವಿತ್ರಿಬಾಯಿ-ವನಮಾಲೆಯರು ಕೈಯಲ್ಲಿ ಆರತಿಯನ್ನು ತಕ್ಕೊಂಡು ಎದುರಿಗೇ ನಿಂತಿದ್ದರು. ಅವರ ಎರಡೂ ಕೂಸುಗಳೂ ಆಳುಗಳ ಕೈಯಲ್ಲಿದ್ದವು. ಕೊಟ್ಟಿಗೆಯಲ್ಲಿದ್ದ ಆಕಳುಗಳು ಉತ್ಸಾಹದಿಂದ ಹುಂಕರಿಸಿದವು. ಕಪಿಲೆಯೂ ಹುಂಕರಿಸಿತು.

ನಮ್ಮ ಭಾಗ್ಯಕಾಲ ಉದಯಿಸಿತು. ಗೋಮಾತೆಯ ಭಾಗ್ಯಕಾಲ ಬಂ
ಭಾರತದ ಭಾಗ್ಯಕಾಲ ಬಂದಂತೆಯೇ ಅದು! ಗೋಪೂಜೆಯು ಭಾರತ
ಬೆಳೆದಂತೆ ಅವರ ಭಾಗ್ಯವೂ ಬೆಳೆದೀತು! ಗೋಪೂಜೆ ಮತ್ತು ಭಾರ
ಭಾಗ್ಯ ಇವೆರಡೂ ಒಂದಕ್ಕೊಂದು ಸಂಬಂಧಪಟ್ಟ ಮಾತುಗಳು. ಆ
ಭಾರತೀಯ ಸಂಸ್ಕೃತಿಯ ಪ್ರತೀಕ; ಮತ್ತು ಮಂಗಲಚಿಹ್ನ. ಭಾ
ತಪಸ್ಸು, ಭಾರತದ ಶಕ್ತಿ, ಆಕಳ ರೂಪದಲ್ಲಡಗಿದೆ! ಭಾರತದ ಔದಾ
ಆಕಳ! ಭಾರತದ ಸತ್ವ ಆಕಳ! ಭಾರತವನ್ನು ಉದ್ಧರಿಸುವ ಹಂಬಲಿ
ಗೋಸೇವೆ ಮಾಡುವ ನಿರ್ಧಾರ ಮಾಡಬೇಕು.

---

೫

# ಸಂಕೀರ್ಣ ವಿಭಾಗ

ಗುರೂಜಿಯವರ ಬರೆವಣಿಗೆಯಲ್ಲಿ ಅವರ ಪತ್ರಗಳಿಗೂ ಕವನಗಳಿಗೂ ಒಂದು ಸ್ಥಾನವಿದೆ. ಅವರು ಕೆಲ ವಿಶಿಷ್ಟ ಅಂಶಗಳ ಮೇಲೆ ವ್ಯಕ್ತಪಡಿಸಿದ ವಿಚಾರ ಗಳವ ಉದ್ಬೋಧಕವಾಗಿವೆ. ಮಾದರಿ ಗಾಗಿ ಅವುಗಳಲ್ಲಿ ಕೆಲವನ್ನು ಆಯ್ದು ಇಲ್ಲಿ ಕೊಡಲಾಗಿದೆ.

| | |
|---|---|
| ಪತ್ರಗಳು : | ೧. ನಾತಾಳಿ |
| | ೨. ನಾನು ಕಂಡ ಧಾರವಾಡ |
| ವಿಚಾರ ಸಂಕಲನ : | ೧. ಭಾರತೀಯ ಸಂಸ್ಕೃತಿ |
| | ೨. ಅಂತರ್-ಭಾರತಿ |
| | ೩. ರಾಷ್ಟ್ರೀಯ ಸಂಪತ್ತು |
| ಕವನಗಳು : | ೧. ನನ್ನ ಪತ್ರಿ |
| | ೨. ಇದುವೆ ನಿಜದ ಧರ್ಮ ! |
| | ೩. ಕಂಬನಿ |
| | ೪. ಸ್ವಾತಂತ್ರ್ಯದಿನ |
| | ೫. ಅಮರಜಾಗೃತಿ ಗೀತ |

# ನಾ ತಾ ಳಿ



ಚಿ. ಪ್ರಿಯ ಸುಧಾ !

ನಿನ್ನ ಪತ್ರ ಮುಟ್ಟಿತು. ನನ್ನ ತರ್ಕವು ನಿಜವಾಯಿತು ನಿನಗೆ ಎಲ್ಲರ ನೆನಪು ಆಗುವದು ಸಹಜವಾದದ್ದು. ದುಃಖವನ್ನು ಮನುಷ್ಯನು ಮರೆಯಲು ಇಚ್ಛಿಸುವದಿಲ್ಲ; ಮತ್ತು ಅದನ್ನು ಮರೆಯುವದು ಸಾಧ್ಯವೂ ಇಲ್ಲ. ಆ ದುಃಖ ವೆಂದರೆ ಪ್ರಿಯ ಜನರಿಂದ ಅಗಲಿಕೆ. ಮರಣವೆಂದರಂತೂ ಚಿರವಿಯೋಗ. ಆದರೂ ನಾವು ಆ ದುಃಖವನ್ನು ಮರೆತು ಮತ್ತೆ ನಮ್ಮ ಕರ್ತವ್ಯ ಮಾಡಲು ಸಿದ್ಧರಾಗಬೇಕಾಗುತ್ತದೆ ನೀನು ಅಭ್ಯಾಸ ಪ್ರಾರಂಭಿಸಿದ್ದು ನೋಡಿ ನನಗೆ ಸಮಾಧಾನವಾಯಿತು.

ನಿಮಗೆ ನಾತಾಳಿಯ ರಜೆ ಇರಲಿಕ್ಕಿಲ್ಲ. ೨೫ ನೇ ತಾರೀಖಿನ ದಿನ ಆದಿತ್ಯವಾರವೇ ಇದೆ. ಡಿಸೆಂಬರ ೨೫ ಎಂದರೆ ಭಗವಾನ್ ಯೇಸುಕ್ರಿಸ್ತನ ಹುಟ್ಟಿದ ದಿವಸ. ನಾತಾಳಿಯ ದಿನಗಳೆಂದರೆ ಯೇಸುವಿನ ಜನ್ಮೋತ್ಸವದ ದಿನಗಳು. ೧೯೫೨ ವರ್ಷಗಳ ಹಿಂದೆ ಬಾಲ ಯೇಸು ಜನಿಸಿದನು. ಅವನ ತಾಯಿ ಮೇರಿ ಅವಳು ಬಡವಿ. ಬೆಥಲಮ್ ಊರಿಗೆ ಬಂದಿದ್ದಳು. ಇಳಿ ಯಲು ಎಲ್ಲಿಯೂ ಸ್ಥಳವಿರಲಿಲ್ಲ ರಾತ್ರಿ ಅವಳು ಬೇನೆ ತಿನ್ನಹತ್ತಿದಳು. ಕೊನೆಗೆ ಒಂದು ದನದ ಹಕ್ಕಿಗೆ ಹೋದಳು. ಅಲ್ಲಿ ಹಡೆದಳು. ಬಾಲ ಯೇಸು ದನದ ಹಕ್ಕಿಯಲ್ಲಿ ಜನಿಸಿದನು. ಬಡವರ ಪಕ್ಷವನ್ನು ವಹಿಸುವ ಯೇಸು ದನದ ಹಕ್ಕಿಯಲ್ಲಿ ಹುಟ್ಟಿದ್ದರಲ್ಲಿ ಒಂದು ಔಚಿತ್ಯವೇ ಇದೆ. ದನದ ಗೋದಲೆ ಅವನ ತೊಟ್ಟಿಲು! ಅತ್ತ ದನ ಕಾಯುವವರು ದನ ಕಾಯುತ್ತಿದ್ದರು. ಅವರಿದುರು ಓರ್ವ ತೇಜಸ್ವಿ ದೇವದೂತನು ಬಂದುನಿಂತನು. ಅವರು ಅಂಜಿದರು. ದೇವದೂತ ಅಂದನು "ಅಂಜಬೇಡಿರಿ. ನಾನು ನಿಮಗೆ ಶುಭವಾರ್ತೆ ಹೇಳಲು ಬಂದಿದ್ದೇನೆ. ಮಾನವ ಜಾತಿಯ ಉದ್ಧಾರಕನು ದನದ

ಹಕ್ಕಿಯಲ್ಲಿ ಜನಿಸಿದ್ದಾನೆ." ಹೀಗೆಂದು ದೇವದೂತನು ಅದೃಶ್ಯನಾದನು. ಸ್ವರ್ಗದಲ್ಲಿಯ ಘಂಟೆಗಳು ಬಾರಿಸಹತ್ತಿದವು. ಅವುಗಳ ಮಂಗಲಧ್ವನಿಯು ಕೇಳಬಂದಿತು. ದನ ಕಾಯುವವರು ಹುಡುಕುತ್ತ ಬರುತ್ತಾರೆ ಅವರಿಗೆ ಆ ತೇಜಸ್ವಿ ಮಗುವು ಕಂಡುಬರುತ್ತದೆ. ಅವರು ಅದನ್ನು ವಂದಿಸುತ್ತಾರೆ. ಆಕಾಶದಲ್ಲಿ ಹೊಸದೊಂದು ನಕ್ಷತ್ರ ಕೆಲವರಿಗೆ ಕಾಣುತ್ತದೆ. ಅರಸನೊಬ್ಬನು ಹುಟ್ಟಿದ್ದಾನೆ ಮತ್ತು ಅವನು ಬೆಥಲಾಮುದಲ್ಲಿ ಬೆಳೆಯುತ್ತಾನೆಂಬ ಸುದ್ದಿ ಹರಡುತ್ತದೆ. ಅಲ್ಲಿಯ ಅರಸನಿಗೆ ಭಯ ಹುಟ್ಟಿ ಚಿಕ್ಕ ಮಕ್ಕಳನ್ನು ಕೊಲ್ಲಲು ಆಜ್ಞೆ ಮಾಡುತ್ತಾನೆ. ಜೋಸೆಫ್ ಮತ್ತು ಮೇರಿಯುವರು ಅಂಜಿ ಬಾಲ ಯೇಸುವನ್ನು ತೆಗೆದುಕೊಂಡು ಈಜಿಪ್ತಕ್ಕೆ ಓಡಿ ಹೋಗುತ್ತಾರೆ. ಅಲ್ಲಿ ಅವನು ದಿನದಿನಕ್ಕೆ ಬೆಳೆಯುತ್ತಾನೆ. ದೊಡ್ಡವನಾದ ಮೇಲೆ ಮತ್ತೆ ತಾಯ್ನಾಡಿಗೆ ಬರುತ್ತಾನೆ. ಅಲ್ಲಿ ಉಪದೇಶ ಮಾಡುತ್ತಾನೆ. ಸಿರಿವಂತರ ಬಲುಮೆಯನ್ನು ಕಂಡು ಸಂತಾಪಗೊಳ್ಳುತ್ತಾನೆ. ಆದರೆ ಬರೀ ಸಂತಾಪಗೊಂಡು ಏನು ಪ್ರಯೋಜನ? ಪ್ರೇಮದಿಂದಲೇ ತಿಳಿಸಿಹೇಳಬೇಕು ಎಂದು ಅನಿಸುತ್ತದೆ. ಯೇಸು ಎಲ್ಲರ ಸೇವೆ ಮಾಡುತ್ತಾನೆ. ಮಹಾರೋಗಿಗಳನ್ನು ಅಪ್ಪಿಕೊಳ್ಳುತ್ತಾನೆ. ಒಂದು ದಿನ ಪ್ರವಚನ ನಡೆದಾಗ ಓರ್ವ ವೇಶ್ಯೆ ಅವನಲ್ಲಿ ಬರುತ್ತಾಳೆ. ಜನರೆಲ್ಲ ಅವಳನ್ನು ಕಲ್ಲಿನಿಂದ ಹೊಡೆಯಲು ಹೋಗುತ್ತಾರೆ. ಆಗ ಏಸುವು "ಯಾರಿಗೆ ತಾನು ನಿಷ್ಪಾಪಿಯಿದ್ದೇನೆಂದೆನಿಸುತ್ತದೆಯೋ ಅವರು ಕಲ್ಲಿನಿಂದ ಹೊಡೆಯಬೇಕು" ಎಂದನು. ಚಿಕ್ಕಮಕ್ಕಳೆಂದಂತೂ ಅವನಿಗೆ ಹುಚ್ಚು. ಅವನ ಬಲಿದಾನವು ಮಾನವ ಜಾತಿಗಾಗಿತ್ತು. ಅವನನ್ನು ಶಿಲುಬೆಯ ಮೇಲೆ ಏರಿಸುತ್ತಾರೆ. ಆದರೆ ಅವನ ದೇಹ ಕಾಣುವದಿಲ್ಲ. ದೇವದೂತರು ಬಂದು ದೇಹ ಸಹಿತ ಅವನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾರೆ. ಆದ್ದರಿಂದ ಏಸುವಿನ ಗೋರಿ ಎಲ್ಲಿಯೂ ಇಲ್ಲ. ಮಾನವ ಜಾತಿಯ ಹೃದಯದಲ್ಲಿದೆ ಅವನ ಅನುರಸ್ಮಾರಕ. ನೀನು ದೊಡ್ಡವಳಾದ ಮೇಲೆ ಏಸುವಿನ ಚರಿತೆಯನ್ನೋದು.

ನಾತಾಳಿ ಹಬ್ಬ ಆನಂದದ್ದು. ಒಬ್ಬರಿಗೊಬ್ಬರು ಭೆಟ್ಟಿಯಾಗುವರು. ಸುಮಾರು ೧೫–೧೬ ನೂರು ವರ್ಷಗಳ ಹಿಂದೆ ಏಶಿಯಾಮೈನರ ನಗರದಲ್ಲಿ ಓರ್ವ ಮನುಷ್ಯನು ಆಗಿಹೋದ. ಅವನು ಬೀದಿಯಲ್ಲಿ ಒಂದು ದಿನ

ಹೋಗುತ್ತಿದ್ದನು. "ನನ್ನದೆಲ್ಲವನ್ನು ನಾನು ಕಳೆದುಕೊಂಡೆ. ನಾನಂತೂ ಪೇನೆಯುವ. ನನಗೆ ಏಳಲೂ ಬರುವದಿಲ್ಲ." ಎಂಬ ದುಃಖದ ಶಬ್ದಗಳು, ಅವನಿಗೆ ಒಂದು ಮನೆಯೊಳಗಿಂದ ಕೇಳಬಂದವು. ಅವನ ಹತ್ತರ ಮೂರು ಬಂಗಾರದ ಗಟ್ಟಿಗಳಿದ್ದವು. ಆ ಮನೆಯ ಕಿಡಕಿಯೊಳಗಿಂದ ಒಂದು ಗಟ್ಟಿಯನ್ನು ಅವನು ಒಳಗೆ ಒಗೆದನು. ಆ ದುಃಖಿ ಮನುಷ್ಯನಿಗೆ ಮತ್ತು ಅವನ ಮಕ್ಕಳಿಗೆ ಆನಂದವಾಯಿತು. ಅವರ ಆನಂದ ನೋಡಿ ಆ ಉದಾರ ಮನುಷ್ಯನು ಮರುದಿವಸ ಎರಡನೆ ಗಟ್ಟಿಯನ್ನು ಮತ್ತು ಮೂರನೇ ದಿನ ಮೂರನೇ ಗಟ್ಟಿಯನ್ನು ಅವನ ಮನೆಯಲ್ಲಿ ಒಗೆದನು. ಮೂರನೆ ದಿನ ಆ ಮನೆಯವರು ಅವನನ್ನು ಹಿಡಿದರು. ಮತ್ತು ಅವನ ಕಾಲಬೀಳಹತ್ತಿದರು. ಆಗ ಅವನು ಅಂದನು "ನನ್ನ ಆಭಾರ ಮನ್ನಿಸಬೇಡಿ. ಆ ಪ್ರಭುವನ್ನು ನೆನಿಸಿರಿ. ಅವನು ನನ್ನನ್ನು ಕಳುಹಿದನು."

ಈ ಮನುಷ್ಯನು ಮುಂದೆ ದೊಡ್ಡ ಸಾಧುವೆಂದು ಪ್ರಸಿದ್ಧನಾದನು ಕೆಲವರು ಅವನಿಗೆ ಸಾಧು ನಿಕೋಲಸ್ ಅನ್ನುತ್ತಾರೆ. ಕೆಲವರು ಅವನಿಗೆ ಫಾದರ ಕ್ರಿಸ್‌ಮಸ್ ಅನ್ನುತ್ತಾರೆ. ಅನೇಕ ಜನರಲ್ಲಿ ಮಕ್ಕಳಿಗಾಗಿ ಅವನು ಅನೇಕ ಕೊಡುಗೆಗಳನ್ನು ತರುತ್ತಾನೆಂದು ಕಲ್ಪನೆ ಅದೆ. ಮೈಮೇಲೆ ಅನೇಕ ಅರಿವೆ ಅಂಚಡಿ ಆಟಿಗೆಯ ಸಾಮಾನ ತೊಟ್ಟುಕೊಂಡು ಬರುತ್ತಾನೆ. ನಾತಾಳಿ ಹಬ್ಬದಲ್ಲಿ ಮನೆಯವರು ಕ್ರಿಸ್‌ಮಸ್ ಗಿಡ ಮಾಡಿ ಅದಕ್ಕೆ ಅನೇಕ ಆಟಿಗೆಯ ಸಾಮಾನು ಜೋತುಬಿಡುತ್ತಾರೆ ಮತ್ತು ಅದರ ಮೇಲೆ ಅಲ್ಲಲ್ಲಿ ಮೇಣಬತ್ತಿಗಳನ್ನು ಹಚ್ಚುತ್ತಾರೆ. ಮಕ್ಕಳು ಅದರ ಸುತ್ತು ಕೂಡುತ್ತಾರೆ. ಮೋಜು ಇರುತ್ತದೆ. ಕ್ರಿಸ್‌ಮಸ್ ಗಿಡದ ಪದ್ಧತಿಯನ್ನು ಇಂಗ್ಲಂಡಕ್ಕೆ ವ್ಹಿಕ್ಟೋರಿಯಾ ರಾಣಿಯ ಗಂಡನಾದ ಆಲ್ಬರ್ಟನು ತಂದನೆನ್ನುತ್ತಾರೆ. ನಾತಾಳಿ ಭೆಟ್ಟಿಯೆಂದು ಶುಭೇಚ್ಛೆಯ ಕಾರ್ಡುಗಳನ್ನು ಕಳಿಸುವ ರೂಢಿಯೂ ಇದೆ. ಇದು ೧೮೪೦-೫೦ ಸುಮಾರಕ್ಕೆ ಬಂದಿದೆ.

ಜಾನೆವಾರಿ ೧ಕ್ಕೆ ಹೊಸ ವರ್ಷಾರಂಭ. ಯಾವ ದೇವತೆಯ ಮೇಲಿಂದ ಜಾನೆವರಿ ಈ ಹೆಸರು ಬಂದಿದೆ ಆ ದೇವತೆಗೆ ಹಿಂದೆ ನೋಡುವ ಒಂದು

ಮತ್ತು ಮುಂದೆ ನೋಡುವ ಒಂದು— ಹೀಗೆ ಎರಡು ಮುಖಗಳಿವೆ. ಹಿಂದಿನ ವರ್ಷದತ್ತ ನೋಡುವದು ಮತ್ತು ಮುಂದಿನ ವರ್ಷದತ್ತ ದೃಷ್ಟಿ ಇಡುವದು.

ಕ್ರಿಸ್ತನ ಸಂದೇಶದ ಅವಶ್ಯಕತೆ ಇಂದು ಎಷ್ಟಿದೆ! ಕ್ರಿಸ್ತನು ಹಗಲೆಲ್ಲ ಹೇಳುತ್ತಾನೆ " ನಾನು ಶಾಪ ಕೊಡಲು ಬಂದಿಲ್ಲ. ಪ್ರೇಮವನ್ನು ಕೊಡಲು ಬಂದಿದ್ದೇನೆ. ನಿಮ್ಮ ನೆರೆ ಹೊರೆಯವರನ್ನು ಪ್ರೀತಿಸಿರಿ " ಎಂಬ ಅವರ ಉಪದೇಶ ಎಷ್ಟು ಬೆಲೆಯುಳ್ಳದ್ದಿದೆ. ನಾವೂ ನೆರೆಹೊರೆಯ ಧರ್ಮ ಎಂಬ ಶಬ್ದ ಉಪಯೋಗಿಸುತ್ತೇವೆ. ' ನೆರೆಹೊರೆಯವ ' ಈ ಶಬ್ದದ ಅರ್ಥ ಹೆಚ್ಚಿಸಿದಷ್ಟು ಬೆಳೆಯುತ್ತಿದೆ. ನೆರೆಯ ಜನ, ನೆರೆಯ ಪ್ರಾಂತ, ನೆರೆಯ ರಾಷ್ಟ್ರ, ನೆರೆಯ ಖಂಡ ಎಲ್ಲರೂ ನೆರೆಹೊರೆಯವರೇ. ಕ್ರಿಸ್ತನ ಸಂದೇಶವು ಜಗತ್ತಿಗೆ ತಿಳಿದಿದ್ದರೆ ಮಹಾಯುದ್ಧಗಳೇ ಆಗುತ್ತಿದ್ದಿಲ್ಲ. ಅವನಂತೂ ಅಂದಿದ್ದಾನೆ " ಸೂಜಿಯ ತೂತಿನೊಳಗಿಂದ ಒಂಟೆ ಹಾಯ್ದು ಹೋಗಬಹುದು, ಆದರೆ ಸ್ವರ್ಗದ ಬಾಗಿಲೊಳಗಿಂದ ಶ್ರೀಮಂತನು ಹಾಯುವದು ಅಶಕ್ಯ. " ಇತರರ ಅವಶ್ಯಕತೆಯನ್ನು ಪೂರೈಸದೆ ಸಿರಿವಂತನಾಗುವವನಿಗೆ ಕಳ್ಳನೆಂದು ಗೀತೆಯೂ ಹೇಳಿದೆ. ಇಸ್ಲಾಮವು ಹೇಳುತ್ತದೆ, " ನೀನು ರೊಟ್ಟಿ ತಿನ್ನಲು ಕೂತಾಗ ಎರಡನೆಯವರನ್ನು ಕರೆ. " ಎಲ್ಲ ಧರ್ಮಗಳ ವಿಚಾರ ಒಂದೇ. ಆದರೆ ನಾವು ಮಾತ್ರ ಅಹಂಕಾರದಿಂದ ಧರ್ಮಗಳ ಹೆಸರಿನಲ್ಲಿ ಯುದ್ಧ ಮಾಡುತ್ತೇವೆ.

ಸ್ವಾಮಿ ವಿವೇಕಾನಂದರು ಕ್ರಿಸ್ತಜಯಂತಿ ದಿನ ಉಪವಾಸ ಮಾಡುತ್ತಿದ್ದರು. ಕ್ರಿಸ್ತನು ಕೇವಲ ಕ್ರಿಶ್ಚಿಯನ್ ಜನರವನಲ್ಲ, ಅವನು ಇಡೀ ಜಗತ್ತಿಗಾಗಿದ್ದಾನೆ ಮಹಾತ್ಮಾಜಿಯವರು ವ್ಹೆನೀಸ ನಗರಕ್ಕೆ ಹೋಗಿದ್ದರು. ಅಲ್ಲಿ ಒಂದು ಚರ್ಚದಲ್ಲಿರುವ ಕ್ರಿಸ್ತನ ಚಿತ್ರವನ್ನು ನೋಡುತ್ತಿದ್ದರು. ಅಲ್ಲಿಂದ ಅವರಿಗೆ ಹೊರಬೀಳುವದಾಗಲಿಲ್ಲ. ೧೯೩೦ ರ ಡಿಸೆಂಬರದಲ್ಲಿ ಅವರು ಆಯರ್ವಿನ್‌ರೊಡನೆ ಒಪ್ಪಂದ ಮಾಡಿದರು. ಅವು ನಾತಾಳದ ದಿನಗಳಿದ್ದವು. ಆಗ ಅವರು " ಕ್ರಿಸ್ತನ ತತ್ವದ ವಿಜಯವಾಯಿತು " ಎಂದರು.

ಹೊಸ ವರ್ಷವೆಂದರೆ ಹೊಸ ಸಂಕಲ್ಪ. ಹಳೆಯದು ಹೋಗಲಿ, ಹೊಸದು ಬರಲಿ. ಕೆಟ್ಟ ಇದ್ದದ್ದು, ಕೊಳೆತದ್ದು, ಕಾಲಕ್ಕೆ ಸರಿ ಇಲ್ಲದ್ದು ಹೋಗಲಿ. ಹೊಸ ಕಾಲಕ್ಕೆ ಯೋಗ್ಯವಿದ್ದದ್ದು ಬರಲಿ. 'ಒಳ್ಳೆಯದನ್ನು ಜೀರ್ಣೋದ್ಧಾರ

ಮಾಡಿರಿ" ಎಂದು ರಾಮದಾಸರು ಹೇಳಿದ್ದಾರೆ. ಹಳೆಯದರಲ್ಲಿ ಚಲೊ ಇದ್ದದ್ದನ್ನು ಉಳಿಸಬೇಕು, ಬೆಳಿಸಬೇಕು. ಸುಧಾ, ನೀನೂ ಹೊಸ ಸಂಕಲ್ಪ ಮಾಡು. ಇಂಥದನ್ನು ಓದುವೆ, ಇಂಥದನ್ನು ಕಲಿಯುವೆ ಎಂದು ನಿರ್ಧರಿಸು.

ಈಗ ನಿಮ್ಮಲ್ಲಿ ಯಾವ ಹೂವಿನ ಸುಗ್ಗಿ ಅದೆ. ಗುಲಾಬಿ ಹೂ ಇರಬೇಕು. ಮತ್ತು ಸೇವಂತಿಗೆ ಅಲ್ಲ? ನನಗೆ ಬರೆದು ತಿಳಿಸು. ನೀನು ಶಾಲೆಯ ತೋಟಕ್ಕೆ ಹೋಗುತ್ತೀಯಾ? ಹೊಸ ಹೂ ಗಿಡಗಳನ್ನು ಅಲ್ಲಿಯ ತೋಟಿಗನು ಹಚ್ಚಿರಬೇಕು. ಹಗಲು ನಾವು ಹೂವುಗಳನ್ನು ಅರಳಿಸಬೇಕು ಮತ್ತು ರಾತ್ರಿ ದೇವರು ಆಕಾಶದ ತೋಟದಲ್ಲಿ ಅರಳಿಸಿದ ಹೂವುಗಳನ್ನು ನೋಡಬೇಕು (To grow flowers by day, to see stars by night) ಹೀಗೆ ಪ್ರಸಿದ್ಧ ಫ್ರೆಂಚ ಲೇಖಕ ವ್ಹಿಕ್ಟರಹ್ಯೂಗೊ ಅಂದಿದ್ದಾನೆ. ಆಕಾಶದಲ್ಲಿಯ ತಾರೆಗಳ ತೋಟವು ಯಾವಾಗಲೂ ಅರಳಿರುತ್ತದೆ. ಅದು ದಿನಾಲು ಹೊಸದೆ

ಪಶ್ಯ ದೇವಸ್ಯ ಕಾವ್ಯಂ। ನ ಮಮಾರ ನ ಜೀರ್ಯತಿ।

ಹೀಗಿದೆ ದೇವರ ಕಾವ್ಯ. ಅದು ಅಮರವಾಗಿದೆ, ಚಿರವಾಗಿದೆ. ಸೃಷ್ಟಿಯ ಕಾವ್ಯ ಓದುವ ರುಚಿ ಹತ್ತಬೇಕು.

ಸಾಕು ಈ ಪತ್ರ ಇನ್ನು.

ನಿನ್ನ

ಅಣ್ಣಾ

# ನಾನು ಕಂಡ ಧಾರವಾಡ



**ಚಿ. ಪ್ರಿಯ ಸುಧಾ !**

ಈ ಸಲ ನಿನ್ನ ಸುಂದರ ಪತ್ರ ಬರಲಿಲ್ಲ. ನಿನ್ನ ಪತ್ರ ಚಂದವಿರುತ್ತ ವೆಂದು ಹೋದ ಸಲ ಅಂದುದಕ್ಕೆ ನಿನಗೆ ಗರ್ವ ಬಂದಿತೇ? ಮಳೆಗಾಲ ಬಂತೆಂದು ಬಹಳ ಕೆಲಸದಲ್ಲಿ ತೊಡಗಿದ್ದೀಯಾ ? ಮುಂಜಾನೆ ಕಾಳುಕಡಿ ಬಿಸಿಲಿನಲ್ಲಿ ಹಾಕಿ, ವನ ಕರ ತಿನ್ನಬಾರದೆಂದು ಇಡೀ ದಿನ ಕಾಯ್ದು ಮತ್ತೆ ಸಂಜೆ ಅದನ್ನೆಲ್ಲ ಕೂಡಿಸಿ ಒಳಗಿಡುವದು, ಇವೆಲ್ಲ ಕೆಲಸ ಬೇಸಿಗೆಯಲ್ಲಿ ಮಾಡುವದಿರುತ್ತದೆ. ಮತ್ತೆ ಬೆಲ್ಲದ ಪೆಂಟಿ ತಂದು ಒಡೆದಿಡುವದು. ಈ ಸಲ ನೀನು ಯಾವ ಯಾವ ಪಲ್ಯೆಕಾಯಿ ಬೆಳೆಯುವದನ್ನು ನಿರ್ಧರಿಸಿದ್ದೀ?

ಕೆಲ ಕೆಲ ಕಡೆ .ಮಳೆ ಪ್ರಾರಂಭವಾಗಿದೆಯೆಂದು ಓದಿದ್ದೇನೆ. ಇದು ತಾತ್ಪೂರ್ತಿಕವಾದದ್ದೋ ನಿಜವಾದದ್ದೋ ತಿಳಿಯುವಂತಿಲ್ಲ. ಏನೇ ಇದ್ದರೂ ಕುಡಿಯುವ ನೀರಾದರೂ ಆಯಿತು ಮತ್ತು ಇನ್ನು ಮಳೆಗಾಲದ ಮಳೆಯೂ ದೂರಿಲ್ಲ.

ಅಕಸ್ಮಾತ್ ಧಾರವಾಡಕ್ಕೆ ಹೋಗಿಬಂದೆ. ಎಂದೂ ಅಲ್ಲಿ ಹೋಗಿರ ಲಿಲ್ಲ. ಅಲ್ಲಿ ನನ್ನ ಮಿತ್ರ ಭಾಸ್ಕರರಾಯರ ಕಡೆ ಹೋಗಿದ್ದೆ. ಅವರ ಮನೆಯ ವಾತಾವರಣ ಮಧುರವಾದದ್ದು. ಎಲ್ಲ ಹುಡುಗರು ಸರಳ ಸ್ವಭಾವದವರು. ಆನಂದದಿಂದ ಇರುವರು. ಅವರ ಚಿಕ್ಕ ಸುಹಾಸ ಸ್ನಾನಮಾಡಿ ತನ್ನ ಚಡ್ಡಿಯನ್ನು ತಾನೇ ಒಗೆಯುವನು. ಎಲ್ಲರೂ ಕೂಡಿ ನೀರು ತರುವರು. ಊಟಕ್ಕೆ ಕೂತಾಗಲು ಆನಂದದ ವಾತಾವರಣ. "ನನ್ನ ಮಾವಿನ ಹಣ್ಣಿನ ರಸ, ತಾಯಿ ನೀ ತೆಗೆದುಕೊಡು" ಎಂದು ಸುಹಾಸ ಅಂದ. ತಾಯಿ ಎಂದರೆ ಎಂಥ ಹಿರಿದಾದ ಕೊಡುಗೆ, ಚಿಕ್ಕಮಕ್ಕಳಿಗೆ ಎಲ್ಲವನ್ನೂ ತಾಯಿಯಿಂದ

ಮಾಡಿಸಿಕೊಳ್ಳುವದರಲ್ಲಿ ಆನಂದ. ಅಲ್ಲಿ ಅವರ ಎಲ್ಲ ಹಕ್ಕು, ಅವರ ಸ್ವಾತಂತ್ರ್ಯ !

ನಾವು ಮಾತನಾಡುತ್ತಿದ್ದೆವು. ನಾನು ಕೇಳಿದೆ " ಹುಬ್ಬಳ್ಳಿ " ಶಬ್ದದ ಅರ್ಥವೇನು ? ಮಿತ್ರರೆಂದರು ಕನ್ನಡದಲ್ಲಿ 'ಹೂ' ಅಂದರೆ ಫೂಲ ('ಹೂ' ವಿಗೆ ಮರಾಠಿ ಶಬ್ದ ) ಮತ್ತು ಬಳ್ಳಿ ಅಂದರೆ ವೇಲ (ಬಳ್ಳಿಗೆ ಮರಾಠಿ ಶಬ್ದ). 'ಫೂಲವೇಲ' ಇದು ಈ ಶಬ್ದದ ಅರ್ಥ. ಹೆಸರಿನ ಅರ್ಥ ತಿಳಿದರೆ ಎಷ್ಟು ಆನಂದವಾಗುತ್ತದೆ. ಉಟಕಮಂಡ ನಾವು ಭೂಗೋಲದಲ್ಲಿ ಓದುತ್ತೇವೆ. ನೀಲಗಿರಿಯಲ್ಲಿಯ ಹವೆಯ ಸ್ಥಳ! ಆದರೆ ಉಟಕಮಂಡ ಇದು ಸಾಹೇಬರು ಮಾಡಿದ ಅಪಭ್ರಂಶ 'ಉದಕಮಂಡಲ' ಇದು ಅದರ ಸುಂದರ ಸಂಸ್ಕೃತ ಹೆಸರು. ನೀಲಗಿರಿಯಲ್ಲಿ ಅಲ್ಲಲ್ಲಿ ಸುಂದರವಾದ ನೀರಿನ ಸರೋವರಗಳಿವೆ. ಮತ್ತೆ ಕೊಡಗಿನ ರಾಜಧಾನಿ ಮರ್ಕಾರಾ ಅಂತಾರೆ. ಅದರ ನಿಜ ಹೆಸರು ಮಡಿಕೆರೆ ಎಂದಿದೆ. ನಾನು ಅಲ್ಲಿಯ ನೀರಿನ ಸ್ವಚ್ಛತೆಯ ಕಥೆ ಕೇಳಿದ್ದೇನೆ. ಈಸಲು ಮನುಷ್ಯನು ನೀರೊಳಗೆ ಹೋದರೆ ಬುಡದ ವರೆಗೆ ಕಾಣುತ್ತಾನೆ. ಸ್ವಚ್ಛ ನೀರು !

ನನಗೆ ಧಾರವಾಡದಲ್ಲಿ ಅನೇಕ ಮಾತು ಹೊಳೆದವು, ತಿಳಿದವು. ಕನ್ನಡ ವಾಙ್ಮಯದಲ್ಲಿಯ ಅನೇಕ ಹೆಸರು ಕೇಳಿಬಂದವು. ಅನೇಕರ ಇತಿಹಾಸ ಕೇಳಿದೆ. ಅದನ್ನೆಲ್ಲ ಈ ಪತ್ರದಲ್ಲಿ ಸ್ವಲ್ಪದರಲ್ಲಿ ಹೇಗೆ ಹೇಳಲಿ ? ನಾವು ಕನ್ನಡ-ಮರಾಠಿ ವಾದದ ಮಾತು ಕೇಳುತ್ತೇವೆ. ವಿರೋಧ ಸುಮ್ಮನೆ ಬೆಳೆಯುವದಿಲ್ಲ. ಇಲ್ಲಿಯೇ ಒಬ್ಬ ವೃದ್ಧ ಗೃಹಸ್ಥರು ಅಂದರು 'ನಾವು ಪುಣೆಯಲ್ಲಿ ಕಲಿಯಲಿಕ್ಕೆ ಇರುತ್ತಿದ್ದೆವು. ಆಗ 'ಕಾನಡಿ ಅಪ್ಪಾ' ಎಂದು ನಮ್ಮ ಚೇಷ್ಟೆ ಮಾಡುತ್ತಿದ್ದರು. ಕನ್ನಡದಲ್ಲಿ ಕವಿತೆ ಅವೆ ಏನು ಎಂದು ಕೇಳುವರು. ಓರ್ವ ಪ್ರಾಧ್ಯಾಪಕನಂತೂ ಕನ್ನಡನಾಡು ಅಂದರೆ 'ಅನಾರ್ಯರ ದೇಶ' ಎಂದೆನ್ನುವನು. ನಾವು ವಿದ್ಯಾರ್ಥಿಗಳು ಬಹಳ ರೊಚ್ಚಿಗೆದ್ದೆವು " ಅನಾರ್ಯ ಇದರ ಅರ್ಥ ಗೀತೆಯಲ್ಲಿ 'ಕಾಡು ಜನರು' ಅಸಂಸ್ಕೃತರು ಎಂದಿದೆ. ಯಾರಿಗೆ ಗೊತ್ತು. ಆ ಪ್ರಾಧ್ಯಾಪಕರಿಗೆ ದ್ರಾವಿಡ ದೇಶ ಅನ್ನುವಂತೆ ಏನೋ? ಇನ್ನೊಬ್ಬ ಮಿತ್ರರೆಂದರು, " ಧಾರವಾಡದಲ್ಲಿ ಪ್ರಾರಂಭವಾದ ಮೊದಲನೇ

ವರ್ತಮಾನ ಪತ್ರ ಮರಾಠಿಯಲ್ಲಿ ಇದ್ದಿತು!" ಮೊಟ್ಟಮೊದಲಿನ ಶಿಕ್ಷಣಾಧಿಕಾರಿಗಳೆಲ್ಲ ಮರಾಠಿಗರೇ ಇದ್ದರು. ಅವರು ಧಾರವಾಡದಲ್ಲಿ ಮರಾಠಿಗೆ ಉತ್ತೇಜನ ಕೊಡುವರು. ಮುಂದೆ ವ್ಹಿ. ಬಿ. ಜೋಶಿ ಎಂಬವರು ಶಿಕ್ಷಣಾಧಿಕಾರಿಯಾದರು. ಅವರು ಈ ಅನ್ಯಾಯವನ್ನು ತಡೆದರು ಸುತ್ತಮುತ್ತಲೂ ಮರಾಠಿ ಸಂಸ್ಥಾನಿಕರ ಚಿಕ್ಕದೊಡ್ಡ ವಿಭಾಗಗಳು. ಪ್ರಜೆಗಳ ಭಾಷೆ ಕನ್ನಡವಿದ್ದರೂ ರಾಜಭಾಷೆ ಮರಾಠಿ!" ಹೀಗೆ ನಾನು ಅನೇಕ ಮಾತುಗಳನ್ನು ಇಲ್ಲಿ ಅರಿತೆ. ಧಾರವಾಡದಲ್ಲಿ ಒಂದು ಕಾಲೇಜು ಪ್ರಾರಂಭಿಸಿರಿ ಎಂದು ಸರಕಾರಕ್ಕೆ ಜನ ಕೇಳಿಕೊಂಡಿತು. ಆಗ 'ನೀವು ಎರಡು ಲಕ್ಷ ರೂಪಾಯಿ ಕೂಡಿಸಿರಿ' ಅಂದರೆ ನಾವು ಕಾಲೇಜ ಪ್ರಾರಂಭಿಸುತ್ತೇವೆಂದು ಸರಕಾರವು ಹೇಳಿತು ಆಗ ಇಬ್ಬರು ಕನ್ನಡಿಗರು ಅದನ್ನು ಕೂಡಿಸಿಕೊಟ್ಟರು. ಅನೇಕ ಜನರು ತಮ್ಮ ಒಂದು ತಿಂಗಳದ ಉತ್ಪನ್ನವನ್ನು ಕೊಟ್ಟರು.

ಕನ್ನಡ ಸಾಹಿತ್ಯವೂ ಸುಂದರ ಮತ್ತು ಸಮೃದ್ಧವಾಗಿದೆ. ಭಾರತದಲ್ಲಿ ಲಘು ಕಥೆ ಪ್ರಾರಂಭವಾದದ್ದು ಮೊದಲು ಕನ್ನಡದಲ್ಲಿ ಅಂತೆ! ಹಳೆ ಕನ್ನಡ ಸಾಹಿತ್ಯದಲ್ಲಿ ದೊಡ್ಡ ದೊಡ್ಡ ಕವಿಗಳಾಗಿ ಹೋದರು. ನನ್ನ ಮಿತ್ರರು ನನಗೆ ಅನೇಕ ಕವಿಗಳ ಇತಿಹಾಸವನ್ನು ಹೇಳಿದರು. ಕನ್ನಡದಲ್ಲಿ ಬೇಂದ್ರೆ ಎಂಬ ಒಬ್ಬ ಕವಿಗಳಿದ್ದಾರೆ. ಅವರು ಸೊಲ್ಲಾಪುರದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಅವರ ಕವಿತೆ ಬಹಳ ಸುಂದರ. ಪ್ರತಿಭೆ ಮತ್ತು ಶಬ್ದಸಂಪತ್ತು ಇವರ ಕವಿತೆಯಲ್ಲಿ ಅಪಾರವಾಗಿವೆ. ಇವರು ಅರವಿಂದರ ಭಕ್ತರು. ಇವರ ಜೀವನ ಕಥೆ ನಾನು ಕೇಳಿದೆ. ಅವರ ಅನೇಕ ಕವಿತೆ ಕೇಳಿದೆ. ಸೀತಾರಾಮಯ್ಯನವರ 'ಅಭೀಃ ಅಭೀಃ' ಕವಿತೆ ಕೇಳಿದೆ. ಇದೊಂದು ಭವ್ಯಕವಿತೆ! ಈ ಕವಿತೆ ಕೇಳಿ ನಾನು ಪುಲಕಿತನಾದೆ. ಜಗತ್ತಿನ ಪ್ರಗತಿ ಅಭಯ ಎಂದಾಗಿದೆ. ಗೀತೆಯ ಹದಿನಾರನೇ ಅಧ್ಯಾಯದಲ್ಲಿ 'ಅಭಯ'ವು ಮೊದಲನೇ ಸದ್ಗುಣವೆಂದು ಹೇಳಿದೆ ಮಹಾತ್ಮರು ಕೊಟ್ಟ ಅತ್ಯಂತ ಮಹತ್ವದ ಕೊಡುಗೆ ಅಂದರೆ ಅಭಯತೆಯದು. "ನಿಃಶಸ್ತ್ರರಿದ್ದರೂ ಯಾವ ಅನ್ಯಾಯದೆದುರು ನಾವು ಬಾಗುವಂತಿಲ್ಲ" "ಮಡಿಯುವೆವು ಆದರೆ ಹೋಗಿರಿ" ಅನ್ನುವೆವು. ಇದನ್ನೆಲ್ಲ ಮಹಾತ್ಮರು ಕಲಿಸಿದರು. ನಿರ್ಭಯವಿದ್ದ ರಾಷ್ಟ್ರವು ಮುಕ್ತವಿದ್ದಂತೆ.

ಅದು ಎಲ್ಲ ಕ್ಷೇತ್ರಗಳಲ್ಲೂ ಪ್ರಯೋಗ ಮಾಡಿ ಮುಂದುವರಿಯುವದು. ಅಂಜುಬುರುಕನಿಗೆ ಮರಣ, ನಿರ್ಭಯನಿರುವವನೇ ಬಾಳುವನು.

ಧಾರವಾಡದ ಹವೆ ಸುಂದರವಾಗಿದೆ! ಬೇಸಿಗೆಯಲ್ಲು ನನಗೆ ಚಾದರ ಹೊದ್ದುಕೊಳ್ಳಬೇಕಾಯಿತು. ತಂಪಾದ ಸುಂದರ ಹವೆ! ಊರು ವಿಸ್ತಾರವಾದದ್ದು. ನಗರಪಾಲಿಕೆಯ ಉತ್ಪನ್ನ ಕಡಿಮೆ ನೀರಿನ ಸೌಕರ್ಯ ಅಷ್ಟೊಂದಿಲ್ಲ. ಇಲ್ಲಿ ಅನೇಕ ಕಾಲೇಜುಗಳಿವೆ. ಶಿಕ್ಷಣದ ಅರವಟ್ಟಿಗೆ. ಇದ್ರು ನೀರಿನ ಯೋಜನೆ ಇದೆ. ಆದರೆ ಎಂದು ಪ್ರತ್ಯಕ್ಷದಲ್ಲಿ ಬರುತ್ತವೆಯೋ ಏನೋ?

ಧಾರವಾಡದಲ್ಲಿ ವನಿತಾಸೇವಾಸಮಾಜ ಎಂಬ ಒಂದು ಸಂಸ್ಥೆ ಅದೆ. ೧೯೨೮ರಲ್ಲಿ ಓರ್ವ ವಿಧವೆಯು ತನ್ನ ಆಸ್ತಿಯನ್ನೆಲ್ಲ ಕೊಟ್ಟು ಇದನ್ನು ಪ್ರಾರಂಭಿಸಿದರು. ೧೦ನೇ ವರ್ಷ ಇವಳು ವಿಧವೆಯಾದಳು. ಇವರ ಹೆಸರು ಭಾಗಿರಥಿಬಾಯಿ ಸ್ತ್ರೀಯರ ಸೇವೆ ಮಾಡಬೇಕೆಂದು ಅವರ ಚಪಲ. 'ತನ್ನ ಆಸ್ತಿ ಕೊಡಲು ಬರುವದೇ' ಎಂದು ವಕೀಲರಿಗೆ ಕೇಳಿದರು. 'ಇಲ್ಲ' ಅಂದರು. ಆಗ ಅವರು ಒಬ್ಬರನ್ನು ದತ್ತಕ ತಗೊಂಡು ದತ್ತಕ ಮಗನ ಕಡೆಯಿಂದ ತಮ್ಮ ಆಸ್ತಿಯನ್ನೆಲ್ಲ ಸಂಸ್ಥೆಗೆ ಕೊಟ್ಟು ಅದನ್ನು ಪ್ರಾರಂಭಿಸಿದರು. ಅವರ ದತ್ತಕಮಗ ನಿಸರ್ಗೋಪಚಾರದ ಭಕ್ತನಿದ್ದಾನೆ. ಅನಾಥ ಸ್ತ್ರೀಯರಿಗೆ ಆಧಾರ ಕೊಡುವ ಸಂಸ್ಥೆ ಇದು. ಹೆಣ್ಣುಮಕ್ಕಳ ಹೆಜ್ಜೆ ತಪ್ಪಿ ಬಿದ್ದರೆ ಇಡೀ ಸಮಾಜವೇ ಅವರ ಮೇಲೆ ಕೈ ಎತ್ತಿಹೋಗುತ್ತದೆ. ಸ್ತ್ರೀಯರಷ್ಟೇ ಕೇವಲ ಅಪರಾಧಿಗಳೇ? ಪುರುಷರಲ್ಲವೇ? ಆದರೆ ಅವರು ಪಾರಾಗುತ್ತಾರೆ. ಅದರ ಫಲವನ್ನು ಸ್ತ್ರೀಯರಿಗೆ ಉಪಭೋಗಿಸಬೇಕಾಗುತ್ತದೆ ನಾವು ಇಂದಿಗೂ ಅಪಹೃತ ಸ್ತ್ರೀಯರನು ಹಿಂದೂಸಮಾಜವು ತಿರುಗಿ ತೆಗೆದುಕೊಳ್ಳಲು ಸಿದ್ಧವಿರದ್ದನ್ನು ಕಾಣುತ್ತೇವೆ. ಗಾಂಧೀಜಿಯವರು ಎಷ್ಟು ಕಳಕಳಿಯಿಂದ ಬರೆದರು. ನಾವು ಅನುದಾರರಿದ್ದೇವೆ. ಇಂಥ ಅಭಾಗಿ ಭಗಿನಿಯರಿಗೆ ಅಧಿಕಾರ ಕೊಡಲು ಈ ಭಗಿನಿ ನಿಂತಿದ್ದಾಳೆ. ಅನೇಕರು ಟೀಕಿಸಿದರು. ಇಲ್ಲಿ ಬಂದ ಭಗಿನಿಯರು ತಪ್ಪು ಮಾಡುತ್ತಾರೆ. ಆದರೆ ಮತ್ತೆ ಕ್ಷಮಿಸಿ ಅವರನ್ನು ಸುಧಾರಿಸುವ ಪ್ರಯತ್ನಮಾಡುತ್ತಾರೆ. ತಾಯಿ ಒಂದೇ ಅಪರಾಧ ಕ್ಷಮಿಸುವಳೇ? ವನಿತಾಸೇವಾ ಸಮಾಜ ತಾಯಿಯಂತಿದೆ. ಇದರ ಬಾಗಿಲು ತಪ್ಪಿತಸ್ಥ ಹೆಣ್ಣುಮಕ್ಕಳಿಗೆ ತೆರೆದದ್ದೇ ಇದೆ. ಇಲ್ಲಿ ಈಗ

ಸುಮಾರು ೪೦ ಹೆಣ್ಣುಮಕ್ಕಳಿದ್ದಾರೆ. ಅವರಿಗೆ ಕನ್ನಡ ಏಳನೇ ಈಯತ್ತೆಯು ವರೆಗೆ ಕಲಿಸುತ್ತಾರೆ. ಇಲ್ಲಿ ಎಲ್ಲವೂ ಸ್ವಾವಲಂಬನ ತತ್ವದ ಮೇಲೆ ನಡೆದದೆ. ಅನೇಕ ಉದ್ಯೋಗಗಳನ್ನು ಕಲಿಸುತ್ತಾರೆ. ನರ್ಸಿಂಗ, ಹೊಲಿಗೆ, ನೇಯು ವದು, ಇತ್ಯಾದಿ. ವ್ಯಾಯಾಮ ಶಿಕ್ಷಣವನ್ನು ಕೊಡುತ್ತಾರೆ. ಈ ಹುಡುಗಿ ಯರು ತಾವೇ ಬೀಸುತ್ತಾರೆ, ಭಾಂಡಿ ತಿಕ್ಕುತ್ತಾರೆ. ಕಾಯಿಪಲ್ಲೆಗಳ ತೋಟ ವಿದೆ. ನಾನು ಹೋದಾಗ ಅಲ್ಲಿ ಕಟ್ಟಡದ ಕೆಲಸ ನಡೆದಿತ್ತು. ಅಲ್ಲಿಯು ಹುಡುಗಿಯರೆ ಕಲ್ಲು ಮಣ್ಣು ಹೊರುತ್ತಿದ್ದರು. ಎರಡು ವರ್ಷದ ಓರ್ವ ಪರಿತ್ಯಕ್ತ ಹುಡುಗಿ 'ಜಯಹಿಂದ' ಅಂದಳು. ಎಂಥ ಹಿರಿದಾದ ಸೇವೆ ನಡೆದಿದೆ! ಭಾಗೀರಥಿಬಾಯಿ ದಿನಾ 'ಭಿಕ್ಷೆ' ಬೇಡಿ ಬರುತ್ತಾರೆ.

ನಿಂದೆ, ಉಪಹಾಸ, ಟೀಕೆ ಸಹನಮಾಡಿ ೬೩ ವರ್ಷದ ಭಾಗೀರಥಿಬಾಯಿ ಈ ಸಂಸ್ಥೆ ನಡೆಸುತ್ತಿದ್ದಾರೆ. ಸೇವಾಪರಾಯಣ ಜೀವನ ಇವರದು. ಅನಾಥ ಮಕ್ಕಳ ಸ್ನೇಹಮಯತಾಯಿ! ಸುಧಾ, ಇವರೇ ಸಮಾಜದ ಆಧಾರ! ನಾನು ಅಲ್ಲಿ ಮಾತಾಡಿದಾಗ ಅಂದೆ, "ಧಾರವಾಡದಲ್ಲಿ ಎಲ್ಲಿಯಾದರೂ ಪರಮೇಶ್ವರ ನಿದ್ದರೆ ಅವನು ಇಲ್ಲಿ ಇದ್ದಾನೆ. ತಾಯಿಗೆ ಉಪೇಕ್ಷಿತರ ಚಿಂತೆ. ಪರಮೇಶ್ವರ ಇಂಥವರಲ್ಲಿರುತ್ತಾನೆ. ಜಗತ್ತು ಯಾರನ್ನು ದೂರ ದೂಡುತ್ತದೆಯೋ, ಅವರನ್ನು ಪರಮೇಶ್ವರ ತನ್ನ ಹತ್ತಿರ ಕರೆದುಕೊಳ್ಳುತ್ತಾನೆ. ಇಂಥ ಸಮಾಜದಿಂದ ದೂಡಲ್ಪಟ್ಟ ಆದರೆ ದೇವರು ತನ್ನ ಸಮೀಪ ಮಾಡಿಕೊಂಡವರ ಸೇವೆ ಇಲ್ಲಿ ಆಗುತ್ತದೆ."

ಎಷ್ಟೊತ್ತು ನಾನು ಬರೆಯುತ್ತಿದ್ದೇನೆ. ನೀವು ಸುಖದಿಂದ ಇರ್ರಿ.

ನಿಮ್ಮ
**ಅಣ್ಣಾ**

---

# ವಿಚಾರ ಸಂಕಲನ

## ಭಾರತೀಯ ಸಂಸ್ಕೃತಿ

ಇದು ಬುದ್ಧಿ ಹೃದಯಗಳ ಪೂಜೆ ಮಾಡುವ ಸಂಸ್ಕೃತಿ. ಉದಾರಭಾವನೆ ನಿರ್ಮಲಜ್ಞಾನಗಳ ಸಾಧನಗಳಿಂದ ಜೀವನವನ್ನು ಸುಂದರ ಮಾಡುವ ಸಂಸ್ಕೃತಿ. ಜ್ಞಾನ ವಿಜ್ಞಾನಗಳಿಗೆ ಹೃದಯದ ಜೋಡನ್ನು ಕೊಟ್ಟು, ಜೀವನದಲ್ಲಿ ಮಾಧುರ್ಯವನ್ನು ಹರಡುವ ಸಂಸ್ಕೃತಿ. ಭಾರತೀಯ ಸಂಸ್ಕೃತಿಯೆಂದರೆ ಜ್ಞಾನ-ಕರ್ಮ-ಭಕ್ತಿಗಳ ಜೀವಂತ ಮಹಿಮೆ.

ಭಾರತೀಯ ಸಂಸ್ಕೃತಿಯೆಂದರೆ ವೈಶಾಲ್ಯ, ಸಹಾನುಭೂತಿ, ಸತ್ಯದ ಪ್ರಯೋಗ. ಭಾರತೀಯ ಸಂಸ್ಕೃತಿಯೆಂದರೆ ಒಂದೆಡೆ ಇರದೆ ಜ್ಞಾನದ ಶೋಧ ಮಾಡುತ್ತ ಮುಂದರೆಯುವದು. ಜಗತ್ತಿನಲ್ಲಿ ಎಲ್ಲೆಲ್ಲಿ ಸತ್ಯ, ಶಿವ ಮತ್ತು ಸುಂದರವಿದೆ ಅದನ್ನೆಲ್ಲ ಪಡೆದು ಬೆಳೆವ ಸಂಸ್ಕೃತಿ. ದೊಡ್ಡಿಸ್ತನ ಎಲ್ಲಿಯೇ ಇರಲಿ ಅದನ್ನು ಪೂಜಿಸುವದು; ಆದರದಿಂದ ಆನಂದದಿಂದ ಅವನ್ನು ಸಂಗ್ರಹಿಸುವದು. ಭಾರತೀಯ ಸಂಸ್ಕೃತಿಯು ಸಂಗ್ರಾಹಕವಿದೆ. "ಸರ್ವೇಷಾಮವಿರೋಧೇನ ಬ್ರಹ್ಮಕರ್ಮಸಮಾರಭೇತ್" ಯಾರ ವಿರೋಧ ವಿಲ್ಲದೆ ಬ್ರಹ್ಮಕರ್ಮವನ್ನು ಮಾಡುವೆನೆಂದೆನ್ನುವ ಸಂಸ್ಕೃತಿ ಇದು. ಸಂಕುಚಿತ ವೃತ್ತಿಯು ಬೇಡವಾದದ್ದು ಇದಕ್ಕೆ. ಕತ್ತಲಿಂದ ಪ್ರಕಾಶಕ್ಕೆ, ಭೇದದಿಂದ ಅಭೇದಕ್ಕೆ, ಗೊಂದಲದಿಂದ ವ್ಯವಸ್ಥೆಯತ್ತ ಹೋಗುವದೆಂದರೆ ಭಾರತೀಯ ಸಂಸ್ಕೃತಿ.

× × × ×

## ಅಂತರಭಾರತಿ

ಈ ವಿಶಾಲವಾದ ಭಾರತ ದೇಶದಲ್ಲಿ ಅನೇಕ ಪ್ರಾಂತಗಳಿವೆ. ದೊಡ್ಡ ಮನೆತನದಲ್ಲಿ ಅನೇಕ ಅಣ್ಣತಮ್ಮಂದಿರು ಇರುವಂತೆ, ಈ ವಿಶಾಲ ಭಾರತೀಯ ಮನೆತನದಲ್ಲಿ ಅನೇಕ ಅಣ್ಣತಮ್ಮಂದಿರಿದ್ದಾರೆ. ಇವರು ಸಂಯಮದಿಂದ ನಡೆಯಬೇಕು. ಒಂದೇ ಮನೆತನದಲ್ಲಿರಬೇಕಾದರೆ ಪ್ರತಿಯೊಬ್ಬನು ತನ್ನ ಏತಾವಾನಸ್ಯ ನಡೆಸಲಾರ. ಯುರೋಪದಲ್ಲಿ ಅನೇಕ ಚಿಕ್ಕ ಚಿಕ್ಕ ದೇಶ ಗಳಿವೆ. ಮತ್ತು ಪರಸ್ಪರರನ್ನು ಅವು ದ್ವೇಷಿಸಿ ರಕ್ತಪಾತಕ್ಕೆ ಒಳಗಾಗುತ್ತ ಲಿವೆ. ಭಾರತದಲ್ಲಿ ಹೀಗಾಗಬಾರದಿದ್ದರೆ ಭಾರತವು ಜಾಗೃತಿಯಿಂದಿರಬೇಕು.

ಏಕತ್ರ ಕುಟುಂಬದಲ್ಲಿ ಪರಸ್ಪರರ ಸುಖ ದುಃಖವನ್ನು ಮೊದಲು ನೋಡಬೇಕು. ಮೊದಲು ನಾನಲ್ಲ, ನೀನು ಎಂಬ ವೃತ್ತಿ ಇರಬೇಕು. ಮರಾಠಿಗನು ಗುಜರಾತಕ್ಕೆ ಅನ್ನಬೇಕು "ಧನ್ಯ ಗುಜರಾತ! ಮಹಾತ್ಮರಿಗೆ ಜನ್ಮಕೊಟ್ಟ ನೀನು ಧನ್ಯ" "ಲೋಕಮಾನ್ಯರಿಗೆ, ಶ್ರೀ ಶಿವಾಜಿಗೆ ಜನ್ಮಕೊಟ್ಟ ಶೂರ ಮಹಾರಾಷ್ಟ್ರ ನೀನು ಧನ್ಯ" ಎಂದು ಗುಜರಾತ ಎನ್ನಬೇಕು. ಬರಗಾಲಕ್ಕೆ ಅನ್ನಬೇಕು "ವಂಗದೇಶಾ! ಕೃತಾರ್ಥ ನೀನು. ಜಗದೀಶಚಂದ್ರ, ಪ್ರಫುಲ್ಲ ಚಂದ್ರ, ರವೀಂದ್ರರ ತಾಯಿ ನೀನು! ಶ್ರೀರಾಮಕೃಷ್ಣ ವಿವೇಕಾನಂದರಿಗೆ ಜನ್ಮ ಕೊಟ್ಟವನು ನೀನು! ಬಲಿದಾನವಿತ್ತ ನೂರಾರು ಸತ್ಪುರುಷರಿಂದ ಶೋಭೆ ಗೊಂಡ ನೀನು ಧನ್ಯ ಧನ್ಯ." ಹೀಗೆ ಎಲ್ಲ ಪ್ರಾಂತಗಳು ಪರಸ್ಪರರನ್ನು ಮುಕ್ತ ಕಂಠದಿಂದ ಹೊಗಳಬೇಕು, ಪರಸ್ಪರರನ್ನು ಗೌರವಿಸಬೇಕು, ಪರಸ್ಪರರಿಗೆ ಪ್ರಕಾಶ ಕೊಡಬೇಕು, ಪರಸ್ಪರರಿಂದ ಸ್ಫೂರ್ತಿಪಡೆಯಬೇಕು ಮತ್ತು ಸಹಾಯದ ಕೈಚಾಚಬೇಕು, ಇಂಥ ದೃಶ್ಯವನ್ನು ನಾವು ಈ ಭಾರತದಲ್ಲಿ ಕಾಣಬೇಕು ಇದಕ್ಕೆ ದೊಡ್ಡ ಮನಸ್ಸು ಬೇಕು, ಸಂಯಮ ಬೇಕು, ಅಹಂಕಾರವು ದೂರಾಗಬೇಕು.

× × × ×

## ರಾಷ್ಟ್ರದ ನಿಜ ಸಂಪತ್ತು

ಹುಟ್ಟುವ ಹೊಸ ಕೂಸೆಂದರೆ ದೇವರ ಹೊಸ ಸಂದೇಶ, ಮಾನವನ ಬಗ್ಗೆ ದೇವರಲ್ಲಿಯ ಹಿರಿದಾದ ಆಶೆ. ಮನುಷ್ಯ ಜಾತಿಯ ವಿಷಯದಲ್ಲಿ ದೇವರು ಇನ್ನೂ ಬೇಸರಗೊಂಡಿಲ್ಲ. ಇನ್ನೂ ಮನುಷ್ಯ ಜಾತಿಗೆ ಉಜ್ವಲ ಭವಿಷ್ಯವಿದೆ ಎಂಬುದರ ಕುರುಹು ಇದು. ಪುರುಷರು, ಸ್ತ್ರೀಯರು ಸುಧಾರಿಸುವರೆಂಬ ಆಶೆ ಇನ್ನೂ ದೇವರಿಗಿದೆ. ಅದಕ್ಕಾಗಿ ಕಳಿಸುತ್ತಾನೆ ಈ ಹೊಸ ಕೂಸುಗಳನ್ನು. ನಾವು ಅವನ ಆಶಾ-ಪತ್ರಗಳು. ಮಕ್ಕಳು ಸಂಸಾರದ ಶೋಭೆ. ಮಕ್ಕಳಿಲ್ಲದಿದ್ದರೆ ಭೀಷಣ ಪರಿಸ್ಥಿತಿಯಾಗುವದು. ಆದ್ದರಿಂದ ಮಕ್ಕಳನ್ನು ಜೋಪಾನಮಾಡಿರಿ. ಅವರಿಗೆ ದುಃಖಕೊಡಬೇಡಿರಿ. ಅವಿಚಾರದಿಂದ ಹೊಡೆಯಬೇಡಿರಿ. ಮಕ್ಕಳನ್ನು ಜೋಪಾನಮಾಡುವದು ಸುಲಭವಾದ ಕೆಲಸವಲ್ಲ. ಅದು ಕುಶಲವಾದ ಕೆಲಸವದೆ.

---

# ನನ್ನ ಪತ್ರಿ



ಎಲ್ಲಿಂದ ತರಲಿ ನಾ ಕಂಪಿನಾ ಹೂಗಳ
ನಲ್ಮೆಯ ತಾಯೇ ನಿನ್ನಯ ಪೂಜೆಗೆ?
ಇಲ್ಲ, ಈ ತೋಟವು ಹೂವೀಯಲಾರದು.
ಎಲ್ಲ ಹೂಗಿಡ-ಬಳ್ಳಿ ಒಣಗಿವೆ ಸೆಕೆಗೆ! ೧

ಮೊಲ್ಲೆ-ಜಾಜಿಗಳಿಲ್ಲ, ಚೆಂಗುಲಾಬಿಯು ಇಲ್ಲ,
ಮಲ್ಲಿಗೆ ನಿಶಿಗಂಧವಿಲ್ಲೇ ಇಲ್ಲ!
ಪಾರಿಜಾತಕವಿಲ್ಲ, ಬಕುಲವು ಬದುಕಿಲ್ಲ,
ಅವುಗಳ ಸಸಿ ಕೂಡ ಉಳಿವಾಸೆಯಿಲ್ಲ! ೨

ಒಳ್ಳೆಯ ತಳಿರನಾದರು ತಹೆನೆಲ್ಲಿಂದ?
ಎನಿತೋ ಮಕ್ಕಳು ಯತ್ನ ಮಾಡಿದರೂ—
ತುಲಸಿಗೆ ಎಡೆಯಿಲ್ಲ, ಬೆಲ್ಲವತ್ತ್ರವು ಇಲ್ಲ,
ಒಣಗರುಕೆಯೆ ಎಲ್ಲಿ ನೋಡಿದರೂ! ೩

ಒಳ್ಳೆಯ ಅಲರಿಲ್ಲ, ಒಳ್ಳೆಯ ತಳಿರಿಲ್ಲ,
ಎಲ್ಲೆಲ್ಲೂ ತಗ್ಗಿದ ತಲೆ ನನ್ನದು!
ನನ್ನ ಕೈ ಹೂಬುಟ್ಟಿ ಯಾವಾಗಲೂ ಬರಿದು,
ದುಡಿದರೂ ತೋಟವು ಫಲವೀಯದು! ೪

ನನ್ನೊಳಗೆ ತುಂಬಿಹ ಬತ್ತದಗ್ಗಣಿ ನೀರ
ನೀಡುವೆನೀಗಲು ಕಣ್ಣಾಲಿ ತುಂಬಿ,
ಆದರೂ ನನ್ನ ಈ ತೋಟ ಹೂ ಬಿಡದಮ್ಮಾ,
ಕಾಯುವುದೆನಿತು ಆಶೆಯ ಮನ ನಂಬಿ? ೫

ನಿನ್ನ ಪೂಜೆಯ ಮಾಡಬೇಕೆಂಬ ಹಂಬಲು!
ಮುನ್ನುಗ್ಗುತಿದೆ ಎದೆ ತವಕದಲಿ;
ಅದನೆಂತು ತಡೆವುದು? ಅದನೆಂತು ಹಿಡಿವುದು?
ಸಂತಸವಿಡುವೆನಾವ ಬೋಧದಲಿ? ೬

ಇನ್ನಾವ ದಾರಿಯ ನೋಡಲಾರೆನೆ ತಾಯೇ!
ತಡೆದಿಡಲಾರೆ ಮನವನು;
ನನ್ನ ತೋಟದೊಳು ಏನಿರುವುದೊ ಅದನೆಲ್ಲ
ನಿನ್ನಡಿಗೊಪ್ಪಿಸುತಿಹೆನು! ೭

ಎನಿತೆನಿತೋ ಕಸ-ಕೊಳೆ ಕೂಡಿದ ಬತ್ತಿದ
ಮಿನುಗು ಹಾರಿದ ಬಡವಾದ
ಬಣಗೆಲೆಗಳನೇ ಹೇಗೆಂತೋ ಆರಿಸಿ ತಂದು
ಬುಟ್ಟಿ ತುಂಬಿಹ ನಿನ್ನ ಕಂದ. ೮

ಅಂತರಂಗದೊಳಿಹ ಅಕ್ಷಯ ಜಲವನು
ಸಿಂಚಿಸಿ ಸಿಂಚಿಸಿ ತೊಳೆ ತೊಳೆದು
ನಿರ್ಮಲಗೊಳಿಸಿಹೆ ಬಣಗೆಲೆಗಳನಿದೊ
ಸವಿಮಾಡಿಕೊಳು ತಾಯೇ ಒಲಿದು! ೯

ನಗುವರೆಲ್ಲರು ನಗಲಿ ನನ್ನ ಈ ಪೂಜೆಗೆ
ನಗದಿರು ನೀ ನನ್ನ ಅರ್ಪಣೆಗೆ;
ಕೆಲಸಕ್ಕೆ ಬಾರದ ತರಗೆಲೆಯೆನಬೇಡ,
ಒಪ್ಪಿಸುವೆನು ನಿನ್ನ ಅಡಿಗಳಿಗೆ! * ೧೦

---

* '[illegible]' ಎಂಬ ಕವನಸಂಕಲನದೊಳಗಿನ ಕೊನೆಯ ಕವನದ ಅನುವಾದವಿದು

# ಇದುವೆ ನಿಜದ ಧರ್ಮ!



ಜಗಕೆ ಪ್ರೇಮ ಸಲಿಸಬೇಕು,
ಇದುವೆ ನಿಜದ ಧರ್ಮ!

ಎಲ್ಲಿ ಪತಿತ ಹೀನರಿಹರೊ
ಎಲ್ಲಿ ದಲಿತ ದೀನರಿಹರೊ,
ಅಲ್ಲಿಗೋಡಿ ಅವರನೆಲ್ಲ
ಮೇಲಕೆ ಎಬ್ಬಿಸುವುದೇ....
ಇದುವೆ ನಿಜದ ಧರ್ಮ! ೧

ಯಾರಳುವರೊ ಒಳಗೆ ಸದಾ
ದಿಕ್ಕು-ದೆಸೆಗಳೇನಿರದಾ
ದುಃಖಿತರಿಹ ನೆಲೆಯ ಸಾರಿ
ಸುಖವನು ನೀಡುವುದೇ....
ಇದುವೆ ನಿಜದ ಧರ್ಮ! ೨

ಎಲ್ಲರಿಗೂ ಧೈರ್ಯ ಕೊಡು,
ಸುಖವೀಯುವ ಮಾತನಾಡು
ಗತಿಯಿಲ್ಲದ ಜನರಿಗೆಲ್ಲ
ಹಿತದ ನೆರವನೀವುದೇ
ಇದುವೆ ನಿಜದ ಧರ್ಮ! ೩

ಯಾರು ಸದಾ ಮರುಗುವರೋ,
ಯಾರು ಪೀಡೆಗೊಳುತಿಹರೋ,
ಅವರಿರುವೆಡೆ ಸಾರಿ ಸೇರಿ
ಅವರನೆಲ್ಲ ನಗಿಸುವುದು ...
ಇದುವೆ ನಿಜದ ಧರ್ಮ! ೪

ಯಾರನು ಬೇಸರಿಸದಿರು!
ಯಾರನು ಹಂಗಿಸದೆ ಇರು!
ಜಗದೊಳಿರುವ ಜನರನೆಲ್ಲ
ಬಗೆ ಬಂಧುಗಳೆಂದು....
ಇದುವೆ ನಿಜದ ಧರ್ಮ! ೫

ದೇವನ ಹಸುಳೆಗಳೆಲ್ಲರು
ದೇವನಿಗೆಲ್ಲರು ಪ್ರಿಯರು!
ಯಾರನಾರು ಬೀಳುಗಳೆದು
ದುಡುಕದಿರುವುದೇ....
ಇದುವೆ ನಿಜದ ಧರ್ಮ! ೬

ಕತ್ತಲು ಔದಾಸ್ಯವೆಲ್ಲಿ—
ಅಲಸಿಕೆ ನೈರಾಶ್ಯವೆಲ್ಲಿ—
ಅಲ್ಲಿಗೆ ಹೊಸ ಬೆಳಕು ಹುರುಪು
ಒಯ್ದು ಸಂತವಿಡುವುದೇ
ಇದುವೆ ನಿಜದ ಧರ್ಮ! ೭

ಹಣವೆ ಇರಲಿ, ಗುಣವೆ ಇರಲಿ,
ನಿಮ್ಮ ಬಳಿಯೊಳೇನೆ ಇರಲಿ!
ಅದನೆಲ್ಲವ ಜನತೆಗಾಗಿ
ಸತತ ಬೀರುತಿರುವುದೇ
ಇದುವೆ ನಿಜದ ಧರ್ಮ! ೮

ವಿಶ್ವದಿ ಸುಖ ತುಂಬಬೇಕು
ಹಿಗ್ಗಿನ ಹೊಳೆ ಹರಿಯಬೇಕು!
ಎಂದೆಂದೂ ಈ ಗುರಿಯನು
ಮುಂದೆ ಇರಿಸಿ ನಡೆವುದೇ
ಇದುವೆ ನಿಜದ ಧರ್ಮ! ೯

ಧರ್ಮಸಾರವಹುದಿದುವೇ
ಸತ್ಯಸಾರ ಇಹುದಿದುವೇ
ಇನ್ನೊಬ್ಬರ ಸುಖಕಾಗಿಯೆ
ಜೀವ ಬಲಿಯ ಬೇಳ್ವುದೇ
ಇದುವೆ ನಿಜದ ಧರ್ಮ! ೧೦

ಧರ್ಮ ನಂಬಿ ಯಾರಿಹರೋ
ದೇವರನಾರೊಪ್ಪುವರೋ
ಅವರೆಲ್ಲರು ಮೊದಲು ಮನದಿ
ಪ್ರೇಮ ತುಂಬಿಕೊಂಬುದೇ
ಇದುವೆ ನಿಜದ ಧರ್ಮ! ೧೧

ಜಗಕೆ ಪ್ರೇಮ ಸಲ್ಲಿಸುವುದೆ
ಇದುವೆ ಒಟಿದ ಧರ್ಮ! *

---

* 'ಪತ್ರೀ' ಎಂಬ ಕವನಸಂಕಲನದೊಳಗಿರುವ 'ಖರಾ ಧರ್ಮ' ಎಂಬ ಕವನದ ಅನುವಾದವಿದು.

# ಕಂಬನಿ



ನನ್ನ ಕಂಬನಿಯಿದೆ ನನಗೊಂದು ಸಂಪತ್ತು
ದೇವಾ, ನೀನಿದನೆಂದು ಕೊಳ್ಳದಿರು!
ಇನ್ನಾವ ಧನ-ಮಾನ ಸುಖಗಳ ನೀ ಕೊಳ್ಳು,
ಕಣ್ಣ ತೇವಕೆ ಮಾತ್ರ ಕೈಯ ಹಚ್ಚದಿರು!

ನನ್ನ ರೂಪವನು ತೋರಿಸುವುದೆ ಕಂಬನಿ—
ಆದಕೆಂದೇ ಇದು ನನ್ನ ತಾಯಿ-ತಂದೆ!
ನನ್ನ ಕಂಬನಿ ಜ್ಞಾನದಾತೃ ಸದ್ಗುರು, ಕಲ್ಪ-
ವಲ್ಲರಿ, ದಾರಿಯ ದೀಪವೆಂದೆ!

ಕಣ್ಣಹನಿಯು ನನಗೀವುದು ಸವಿನಗೆ,
ನನ್ನನೊಯ್ಯುವುದಿದೆ ಗುರಿಯೆಡೆಗೆ—
ಕಣ್ಣೀರೇ ಜೀವ, ಕಣ್ಣೀರೇ ಪ್ರಾಣವು ದೇವಾ,
ನೀನದನೊಯ್ದರೆ ಬದುಕಿಲ್ಲ ನನಗೆ!

ಬದುಕಿಸುವುದು, ನಗಿಸುವುದು ಕಂಬನಿ; ನನ್ನ
ಬದುಕುಬಳ್ಳಿಯ ಹೂವನರಳಿಪುದು;
ಇದರ ಹನಿಯು ಒಂದು ನನ್ನ ಸೌಖ್ಯದ ಸಿಂಧು,
ಇದನೊಯ್ಯದಿರು ತಂದೇ ನೀನೆಂದೆಂದು!

ಜಗವೆಲ್ಲ ನನ್ನ ಕೀಳ್ಗಣ್ಣಿಂದ ಕಾಂಬಾಗ
ನನ್ನ ನಿಜದ ಗೆಳೆಯನೀ ಕಂಬನಿ!
ಅರ್ಜಿಸುವೆನು ಇದನೇ ಸಂಗ್ರಹಿಸಿಡುವೆನು,
ಮನದ ಕೋಶವ ತುಂಬಲೀ ಕಂಬನಿ!

× × × ×

ಕಿರುವನಿ ಕಂಬನಿ ಹಿರಿಬೆಟ್ಟ ಮುಳುಗಿಸಿ,
ಮುಕ್ತಿಪದವಿಗೊಯ್ಯುವುದು ಜೀವವ!
ಕಿರುವನಿ ಕಂಬನಿ ವಜ್ರದ ಹರಳೆಂಬೆ,
ಅರೆಯ ಮಾಡುವುದದು ನವನೀತವ!

ಕಿರುವನಿ ಕಂಬನಿ ಉಪ್ಪುಪ್ಪು ಹುಳಿಹುಳಿ!
ನಿರ್ಮಿಸಬಲ್ಲದು ಅಮೃತಸಾಗರವ!
ಕಿರುವನಿ ಕಂಬನಿ! ಅದರ ತೇವವು ಎಷ್ಟು?
ಬೆಳೆವುವು ನನ್ನ ತೋಟವು ಬಹುಫಲವ!

ಕಿರುವನಿ ಕಂಬನಿ, ಅದರೊಡಲಲಿ ಕೋಟಿ-
ಕೋಟಿ ಕತೆಗಳವು ಅಡಗಿಹವು;
ಕಿರುವನಿ ಕಂಬನಿ ಎಂಥ ಮಾತಿನ ಜಾಣೆ?
ಮೂಕಿಯದರ ಮುಂದೆ ವಾಗ್ದೇವಿಯು!

× × × ×

ಕಿರುವನಿ ಕಂಬನಿಯೆಂದು ಜರಿಯದಿರು,
ಬಾಳಲ್ಲಿ ಅದರಾ ಗದ್ದುಗೆ ದೊಡ್ಡದು!
ಕಿರಿಯದಲ್ಲವೆ ತಾರೆ? ದೂರದಿ ಕಾಂಬುದು!
ಅದರಳತೆ ನಮಗೆಲ್ಲಿ ತಿಳಿದಿಹುದು?

ಬಾಲಕೃಷ್ಣನ ಚಿಕ್ಕ ಬಾಯಲಿ ಅವರಮ್ಮ
ಬೆರಗುಗೊಂಡಳು ನೋಡಿ ಬ್ರಹ್ಮಾಂಡವ;
ಬಾಲಕನಲ್ಲವೆ ವಟುವಾಮನ ಮೂರ್ತಿ?
ಅಳೆದನು ಅಡಿಯಿಂದ ಮೂಲೋಕವ!

ಕಿರಿದಾದ ಎಸಳೊಂದನೀಯಲು ದ್ರೌಪದಿ
ಬ್ರಹ್ಮಾಂಡದೊಡೆಯನು ತೃಪ್ತನಾದ!
ಕಿರಿಯ ತುಲಸಿದಲವಿರಿಸಲು ರುಕ್ಮಿಣಿ
ವಿಶ್ವಂಭರನು ಅದಕೆ ಸರಿದೂಗದ!

ಕಿರುವನಿ ಕಂಬನಿ ನನ್ನದೂ ಅಂತಿದೆ
ಇದರೊಳೇ ಹುದುಗಿದೆ ನನ್ನೆಲ್ಲ ಭಾಗ್ಯ !
ಇದರೊಳೇ ಅಡಗಿದೆ ಸಿರಿಯು ಸೌಭಾಗ್ಯ !

× × × ×

ಇನಿತಹ ಕಿರುವನಿ ಗೈವುದಪೂರ್ಣವ
ಪೂರ್ಣವನಾಕ್ಷಣ, ಹೇಳಲೇನು ?
ಕಿರುವನಿ ಕಂಬನಿ ಜೀವನಗ್ರಂಥದ
ಮುಗಿತದ ಸವಿಹಾಡ ಹೇಳದೇನು ?

ಕಿರುವನಿ ಕಂಬನಿ ನನ್ನದು ನನಗಿರಲಿ !
ಅದರಗಲಿಕೆ ಬೇಡ ನನಗೆ !
ಕಿರುವನಿ ಕಂಬನಿಯಿರುವ ವರೆಗೆ ಎಲ್ಲಾ
ಭಾಗ್ಯವು ನನ್ನ ಬಾಳ್ವಿಕೆಗೆ !

× × × ×

ಕಂಬನಿ ನನ್ನಾಶೆ, ಕಂಬನಿಯೇ ಬಲ
ಹಸನು ಕಂಬನಿ ತೋಯಿಸಿರಲಿ ಕಣ್ಣು;
ಕಂಬನಿ ಕಿರಿಯದು, ಕಂಬನಿ ಹಿರಿಯದು,
ಕಂಬನಿಯೇ ದೇವನಾರಾಯಣ !

ಒಡಲೊಳಗಿಡುವೆನು ಕಣ್ಣೊಳು ಹಿಡಿವೆನು
ಬಿಟ್ಟಿರಲಾರೆನಾ ಕಂಬನಿಯ—
ಬಿಟ್ಟಿರಲಾರೆನಾ ಕಂಬನಿಯ ! *

---

* 'ಪತ್ರೀ' ಎಂಬ ಕವನಸಂಕಲನದೊಳಗಿನ 'ಅಶ್ರು' ಎಂಬ ಕವನದ ಅನುವಾದವಿದು.

# ಸ್ವಾತಂತ್ರ್ಯದಿನ



ಮಂಗಲ ಮಂಗಲ ತ್ರಿವಾರ ಮಂಗಲ
ಪಾವನ ದಿನವಿದು ಧನ್ಯವಲಾ !
ಒಲವಿನ ಭಾರತ ಬಿಡುಗಡೆಯೊಂದಿತು
ಜಯ ಜಯ ಜಯ ಜಯವೆನ್ನಿರಲಾ !

ನದಿಗಳದೇತಕೆ ತುಂಬಿ ನಿಂದಿಹವು ?
ಹರಿವುದನೇತಕೆ ಮರೆತಿಹವು ?
ಕಡೆಯಿಲ್ಲದ ಕಡಲುಗಳುಕ್ಕೇರುತ
ಬೇಲೆಗಳನು ಬಿಟ್ಟೆದ್ದಿಹವು ?

ನಾರದ-ತುಂಬರರೀ ಗೀತದ ಧ್ವನಿ ?
ಸುರ-ಮುನಿಗಳು ಹಿಗ್ಗಿಹರೇಕೆ ?
ಡಮರುನಾದ ಕೈಲಾಸದ ಮೇಲಿದ್ದೊ,
ಶಿವಶಂಕರ ಕುಣಿಯುವನೇಕೆ ?

ಆನಂದದಿ ಆನೆಯನಾಡಿ !
ಒಡೆಯಲಿ ನಲ್ಗಂಬನಿ ಕೋಡಿ !
ತೆರೆಯಿರಿ ಹೃದಯದ ಕದವನ್ನು
ಕಟ್ಟಿರಿ ಚಿತ್ಸುಖತೊಟ್ಟಿಲನು !

ಉಯ್ಯಾಲೆಯಾಡುತ ಕುಣಿಯುತ ಕುಣಿಯುತ
ಜಯ ಜಯ ಭಾರತವೆನ್ನಿರಲಾ !
ಮಂಗಲ ಮಂಗಲ ತ್ರಿವಾರ ಮಂಗಲ
ಪಾವನ ದಿನವಿದು ಧನ್ಯವಲಾ !



# ಅಮರಜಾಗೃತಿ ಗೀತ



ಶೋಷಿಸದಿರು, ಬೇಗನೆ ಎದ್ದೇಳು !
ಸುತ್ತ ನೋಡು ನಡೆದಿಹುದೇನು ?
ಗುಡುಗು ಹೊಡೆಯುತಿದೆ ಗಗನದಿ ಕೇಳು,
ಮುಂದಡಿಯಿಡು, ಮುಂಬರಿ ನೀನು !

ಕಹಳೆ ರಣಭೇರಿ ಮೊಳಗುತಲಿರುವುವು
ನಿನ್ನ ಕಿವಿಗೆ ಕೇಳಿಸವೇನು ?
ಬಿದ್ದುಕೊಂಡಿರುವೆ ಮೊದ್ದುಹೆಣದಂತೆ,
ಮುಂದಡಿಯಿಡು, ಮುಂಬರಿ ನೀನು !

ಹೆಂಗುಸರೂ ಸಂಗರಕಣಿಗೊಂಡರು,
ಗಂಡುಸು ಹಿಂಜರಿವರೆ ನೀನು ?
ನಿದ್ದೆಯಿಂದೆದ್ದ ಸಿಂಗದೊಲೇಳೈ !
ಮುಂದಡಿಯಿಡು, ಮುಂಬರಿ ನೀನು!



# ಕಾದಂಬರಿ ವಿಭಾಗ



ಶ್ರೀ ಸಾನೆ ಗುರೂಜಿಯವರು ವಿಶಿಷ್ಟ ರಾಷ್ಟ್ರೀಯ ತತ್ವಗಳನ್ನಿಟ್ಟುಕೊಂಡು, ಕಾದಂಬರಿಗಳನ್ನು ರಚಿಸಿದ್ದಾರೆ. ಶ್ಯಾಮಾಚಿ ಆಯಿ, ಆಸ್ತಿಕ, ಸೋನ್ಯಾ-ಮಾರುತಿ, ಮೊದಲಾದ ಕೃತಿಗಳು ಜನಾದರಣೆಗೆ ಪಾತ್ರವಾಗಿ ೪-೫ ಆವೃತ್ತಿಗಳನ್ನು ಕಂಡಿವೆ. ಇದರಲ್ಲಿಯ ಆಸ್ತಿಕ ಕಾದಂಬರಿಯನ್ನು ಆರಿಸಲಾಗಿದೆ.

ಆಸ್ತಿಕ

# ಆಸ್ತಿಕ



## ೧

ಭಗವಾನ್ ನಾರಾಯಣನು ಧ್ಯಾನಮಗ್ನನಾಗಿದ್ದಾನೆ. ವಿಶ್ವ ವಿಕಾಸದ ವಿಚಾರದಲ್ಲಿ ತನ್ಮಯನಾಗಿದ್ದಾನೆ. ಪ್ರಯೋಗಪತಿಯು ಆಕಸ್ಮಾತ್ತಾಗಿ ಬಂದು, “ದೇವ ದೇವಾ! ಪ್ರಯೋಗವು ಯಶಸ್ವಿಯಾಗುವ ಮೊದಲೇ ಅದೆಲ್ಲಿ ಕುಸಿದು ಬೀಳುವದೋ ಎಂದು ಭೀತಿಯು ಬರುತ್ತಿದೆ. ಎಂದು ಎಚ್ಚರಿಸಿದನು. ದೇವಾ! ಮೊದ ಮೊದಲು ಯಾವ ಧ್ಯೇಯದ ಸಲುವಾಗಿ ಈ ಭಾರತವನ್ನು ನೀನು ನಿರ್ಮಿಸಿದೆಯೋ, ಆ ಧ್ಯೇಯವು ಅಂಕುರಿಸಿ, ಬೇರು ಬಿಟ್ಟು ಭರದಿಂದ ಬೆಳೆಯುವದೆಂದು ನಾನು ನಲಿಯುತ್ತಲಿದ್ದೆ. ಈ ದೇಶದ ನಿರ್ಮಿತಿಗಾಗಿ, ಸಕಲ ಸೌಂದರ್ಯವನ್ನು ಎರಕ ಹೊಯ್ದಿರುವಿ! ಭಾರತದಲ್ಲೆಲ್ಲ, ಅನಂತತೆಯನ್ನು ಪಸರಿಸಿರುವಿ. ಶಿರೋಭಾಗದಲ್ಲಿ ಗಗನಭೇದಿಯಾದ ಹಿಮಧವಲ ರಾಜನು ನಿಂತಿದ್ದಾನೆ, ಉಳಿದ ಮೂರೂ ದಿಕ್ಕುಗಳಲ್ಲಿ ನಿನ್ನ ಕೀರ್ತಿಯನ್ನು ಘೋಷಿಸುವ, ಸರ್ವ ಪ್ರವಾಹಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳುವ, ಸರ್ವ ಪ್ರಾಣಿಗಳಿಗೂ ಆಶ್ರಯವನ್ನೀಯುವ, ರತ್ನಾಕರನು ಪಸರಿಸಿದ್ದಾನೆ. ಕಾಲ ಕೆಳಕ್ಕೂ ಬಾಹುಗಳ ಮಗ್ಗಲಿಗೂ ವಿಶಾಲ ಹೃದಯನಾದ ಸಮುದ್ರನಾಥನು. ಶಿರೋಭಾಗದಲ್ಲಿ ನಾಗಾಧಿರಾಜನಾದ ಹಿಮವತ್-ಪರ್ವತನು! ಕೈ ಕಾಲುಗಳು ನಾನಾಪ್ರಕಾರದ ಉದ್ಯೋಗಗಳಲ್ಲಿ ಶ್ರಮಿಸಲಿ, ಪ್ರಯತ್ನಿಸಲಿ, ಪ್ರಯೋಗವನ್ನು ಮಾಡಲಿ, ಎಂಬಪೇಕ್ಷೆ ನಿನಗೆ. ಈ ಪ್ರಯೋಗಗಳ ಧೋರಣವೂ ನಿಶ್ಚಿತವಾಗಿರಲಿ, ತಲೆಯಲ್ಲಿ ಒಂದೇ

ವಿಚಾರವಿರಲಿ, ಚಂಚಲತೆಯು ಸೋಂಕದಿರಲಿ, ಒಂದೇ ಧ್ಯೇಯದತ್ತ ಎಲ್ಲ ಉದ್ದೇಶಗಳು ಬೆಳೆಯಲಿ, ಎಂಬುದನ್ನು ಭಾರತೀಯರಿಗೆ ಕಲಿಸುವದಕ್ಕಾಗಿಯೇ ಈ ಎರಡು ಮಹಾನ್ ಶಕ್ತಿಗಳನ್ನು ಭಾರತಕ್ಕೆ ದಯಪಾಲಿಸಿರುವೆ. ದೇವಾಧಿ ದೇವಾ! ಈ ದೇಶ ನಿರ್ಮಿಸುವಾಗ ಸರ್ವ ಕುಶಲತೆಯನ್ನೂ ಸೌಂದರ್ಯವನ್ನೂ ಉಪಯೋಗಿಸಿರುವಿ. ಎಲ್ಲ ಬಗೆಯ ಹವೆಗಳೂ ಈ ಪ್ರದೇಶದಲ್ಲಿ ಬೀಸುತ್ತಲಿವೆ. ಸರ್ವ ಪ್ರಕಾರದ ವನಸ್ಪತಿಗಳಿಗೂ ಇಲ್ಲಿ ಜನ್ಮವಿತ್ತಿರುವೆ. ಅನಂತ ಪ್ರಕಾರದ ಫಲ ಪುಷ್ಪಗಳಿಗೆ, ತವರುಮನೆ ಈ ದೇಶ. ಚಿತ್ರ ವಿಚಿತ್ರವಾದ ಬಣ್ಣಗಳ ಪಶು ಪಕ್ಷಿಗಳ ವಿಹಾರ ಸ್ಥಾನವಿದು. ಪ್ರಾತಃಕಾಲ, ವಿಶೇಷತಃ ಸಾಯಂಕಾಲದ ನೀಲಾಕಾಶದಲ್ಲಿ ಅನಂತ ಬಣ್ಣಗಳ ಸೊಬಗು ರಾರಾಜಿಸುತ್ತದೆ. ಸೂರ್ಯ ಚಂದ್ರರ ಸ್ವಚ್ಛವಾದ ಪ್ರಕಾಶವನ್ನು ಈ ಪುಣ್ಯ ಭೂಮಿಗೆ ಇತ್ತಿರುವೆ. ಮಂಜು ಮುಸುಕಿದ ವಾತಾವರಣವನ್ನು ಯಾವಾಗಾದರೊಮ್ಮೆ ನಿರ್ಮಿಸುವೆ. ಎಷ್ಟೆಂದು ಹೇಳಲಿ, ಈ ಸೊಬಗನ್ನು. ದೇವಾ, ಇಲ್ಲಿಯ ಈ ವಿವಿಧತೆ ಹಾಗೂ ಸ್ವಚ್ಛತೆಯನ್ನು ನಿರ್ಮಿಸುವಲ್ಲಿ ನಿನ್ನ ಪವಿತ್ರವಾದ ಒಂದು ಉದ್ದೇಶವಿದೆ.

ಪ್ರಭುವೇ! ಮಾನವ ಜನಾಂಗವನ್ನು ನಿರ್ಮಿಸಿ, ದಶದಿಕ್ಕುಗಳಲ್ಲಿ ಹಬ್ಬಿಸಿದೆ. ಭಿನ್ನ ಭಿನ್ನ ಸ್ಥಳಗಳಲ್ಲಿ ಭಿನ್ನ ಭಿನ್ನ ರೀತಿಯಿಂದ, ಅವುಗಳನ್ನು ಬೆಳೆಯಿಸಿದೆ. ಅವೆಲ್ಲವುಗಳನ್ನು ಒಂದೆಡೆಯಲ್ಲಿ ನೋಡಬೇಕೆಂಬುದೇ ನಿನ್ನ ಇಚ್ಛೆಯಲ್ಲವೇ! ಬಗೆ ಬಗೆಯ ಹೂಗಳಿಂದ ಹೆಣೆದ ಹಾರವು ಸುಂದರ ಕಾಣುವದಿಲ್ಲವೇ! ಹಾಗೆಯೇ, ಭಿನ್ನ ಭಿನ್ನ ದೇಶಗಳಲ್ಲಿ ಭಿನ್ನ ಭಿನ್ನ ಪರಿಸ್ಥಿತಿಯಲ್ಲಿ ಬೆಳೆದ ಮಾನವ ಪ್ರವಾಹಗಳನ್ನು ಒಂದೆಡೆಯಲ್ಲಿ ತಂದು ಅವುಗಳ ಸುಮಧುರುವಾದ ಐಕ್ಯದ ಸೌಂದರ್ಯವನ್ನು ನೋಡಬೇಕೆಂಬುದೇ ನಿನ್ನ ಉದ್ದೇಶ. ಈ ಪ್ರಯೋಗವನ್ನು ಯಾವ ಸ್ಥಳದಲ್ಲಿ ಮಾಡಬೇಕೆಂದು ನಿನ್ನ ಇಚ್ಛೆಯೋ ಆ ಸ್ಥಳವನ್ನು ಅನುಪಮ ರೀತಿಯಿಂದ ಮೊದಲೇ ಸಜ್ಜುಗೊಳಿಸಿರುವಿ. ಸರ್ವ ಪ್ರಕಾರದ ವೈವಿಧ್ಯದಿಂದ ಸುಶೋಭಿಸುವ ಈ ಭಾರತವೇ ಆ ರಂಗಭೂಮಿಯೆಂದು ನೀನು ನಿಶ್ಚಯಿಸಿರುವಿ.

ಪ್ರಭೋ! ರಂಗಭೂಮಿಯನ್ನು ನಿರ್ಮಿಸಿ, "ಪ್ರಯೋಗವನ್ನು ಪ್ರಾರಂಭಿಸು! ಪ್ರಯೋಗವು ಕೊನೆಯ ಮಟ್ಟಕ್ಕೆ ಎಂದು ಮುಟ್ಟುವದೋ

ಆಗ ಮಹಾನ್ ದೃಶ್ಯವನ್ನು ನೋಡಲು ನನ್ನನ್ನು ಎಬ್ಬಿಸು!" ಎಂದು ಆಜ್ಞಾಪಿಸಿದಿ. ಅನಂತದ ಚಿಂತನೆಯಲ್ಲಿಯೂ, ಮನನ ದಲ್ಲಿಯೂ, ಪುನಃ ಮಗ್ನನಾದಿ.

ಆದರೆ, ದೇವದೇವಾ! ಪ್ರಯೋಗವು ಯಶಸ್ವಿಯಾಗುತ್ತ ನಡೆಯಿತು. ಬೀಜಕ್ಕೆ ಅಂಕುರ ಒಡೆಯಹತ್ತಿತು. ಕಾಲಾಂತರದಲ್ಲಿ ಈ ಬೀಜವೇ ಮಹಾನ್ ವೈಭವಶಾಲಿ ವೃಕ್ಷವಾಗುವದೆಂಬ ಸವಿಗನಸುಗಳನ್ನು ನಾನು ಹಾಗೂ ನನ್ನ ಸಹಕಾರಿಗಳು ಕಾಣಹತ್ತಿದೆವು. ಆದರೆ, ಒಂದು ದೊಡ್ಡ ವಿಪತ್ತು ಬರುತ್ತಲಿದೆ. ಈ ದೇಶದಲ್ಲಿ ಆರ್ಯ ಹಾಗೂ ನಾಗರನ್ನು ಒಂದೆಡೆ ತರಲಾಯಿತು. ಇಲ್ಲಿಯ ನಾಗ ಜಾತಿಯ ಮಾನವ ಪ್ರವಾಹದಲ್ಲಿ, ಪ್ರಬಲ ವಾದ ಆರ್ಯ ಜಾತಿಯ ಪ್ರವಾಹವು ಬಂದಪ್ಪಳಿಸಿತು. ಮೊದ ಮೊದಲು ಭಯಂಕರವಾದ ವಿರೋಧವು, ಉಂಟಾಯಿತು. ಒಂದನ್ನೊಂದು ಎದುರಿಸ ಹತ್ತಿದವು. ಎರಡೂ ಪ್ರವಾಹಗಳು ಕೂಡಲೊಲ್ಲವು. ಆದರೆ ಈ ವಿರೋಧದ ಸ್ಥಿತಿಯಲ್ಲಿಯೂ ಆಶೆಯು ಕಾಣುತ್ತಿದ್ದಿತು. ಈ ಮಹಾಪೂರದ ಕಲಕು ಕೆಳಕ್ಕೆ ಕೂಡಹತ್ತಿತು. ದೊಡ್ಡ ದೊಡ್ಡ ಜನರು ಹೋರಾಡುತ್ತಿದ್ದರೂ ಸಾಮಾನ್ಯ ಜನರು, ಒಬ್ಬರನ್ನೊಬ್ಬರು ಪ್ರೇಮದಿಂದ ಆಲಿಂಗಿಸುತ್ತಿದ್ದರು. ಒಬ್ಬರ ಸಂಗಡೊಬ್ಬರು ಜಗಳಾಡುತ್ತಿದ್ದರೂ ಕೂಡ ಪ್ರೇಮ ಸಂಬಂಧವು ಬೆಳೆಯ ಹತ್ತಿತು. ಆದರೆ, ದೇವಾ! ಈಗ ಎಲ್ಲ ಕಡೆಗೂ ಕ್ಷುದ್ರ ಮನೋವೃತ್ತಿಯೇ ಕಾಣಹತ್ತಿದೆ. ಈ ಮಹಾನ್ ವಿಭೂತಿಗಳು ಅಸ್ತಂಗತರಾಗಹತ್ತಿದ್ದಾರೆ. ಎಲ್ಲೆಡೆಯಲ್ಲಿ ಹುಡುಗಾಟಿಕೆ ನಡೆದಿದೆ. ಉದಾತ್ತ ಭಾವನೆಯೂ ಕೂಡ ಯಾರಿಗೆ ಸೋಂಕಿಲ್ಲವೋ ಅಂತಹ ಕ್ಷುದ್ರವ್ಯಕ್ತಿಗಳೇ ಈಗ ಭಾರತದಲ್ಲಿ ಕಾಣ ಹತ್ತಿದ್ದಾರೆ.

ಆಕಾಶದಲ್ಲಿಯ ಎತ್ತರದ ಮೇಲಿನ ಸ್ವಚ್ಛ ಹಾಗೂ ನಿರ್ಮಲವಾದ ಹವೆಯನ್ನು ಕ್ಷುದ್ರ ಪಕ್ಷಿಗಳು ಅಪೇಕ್ಷಿಸದೆ ಧೂಳಿನಿಂದ ತುಂಬಿದ ಹವೆ ಯಲ್ಲಿಯೇ, ಆನಂದ ಪಡುವಂತೆ, ಇಂದು ಭಾರತೀಯರಿಗೆ, ಉಚ್ಚ, ಉದಾತ್ತ ಧ್ಯೇಯವಾದವು ರುಚಿಸದಾಗಿದೆ. ಧ್ಯೇಯವಾದವು ಇಂದು ಚೇಷ್ಟೆಯ ವಿಷಯ ವಾಗಿದೆ. ಭೇದ ಭಾವದಲ್ಲಿಯೇ ಆನಂದಿತರಾಗಹತ್ತಿದ್ದಾರೆ. ಆರ್ಯ ಹಾಗೂ ನಾಗ ಜಾತಿಯ ತರುಣರು ಅಲ್ಲಲ್ಲಿ ಒಬ್ಬರನ್ನೊಬ್ಬರು ಸಮೂಲ ನಾಶ

ಮಾಡುವ ಸಂಕಲ್ಪದಿಂದ ಸಂಘಟಿತರಾಗಹತ್ತಿದ್ದಾರೆ. ಆಯಾ ಜಾತಿಗಳಲ್ಲಿಯ ಋಷಿಗಳೂ ಕೂಡ ದ್ವೇಷಧರ್ಮದ ಪುರಸ್ಕರ್ತರಾಗಹತ್ತಿದ್ದಾರೆ. ಯಾರು ಮಾರ್ಗದರ್ಶನ ಮಾಡಬೇಕೋ ಯಾರು ಧ್ಯೇಯದತ್ತ ಜನಾಂಗವನ್ನು ತಿರುಗಿಸಬೇಕೋ ಅವರೇ ಸ್ಖಲಿತ ಮತಿಗಳೂ ಧ್ಯೇಯಚ್ಯುತರೂ ಆಗಿದ್ದಾರೆ. ಇಂಥಮೇಲೆ, ದೇವಾ! ಮುಂದೇನು ಗತಿ? ಈ ದ್ವೇಷಾಗ್ನಿಯು ಒಮ್ಮೆ ಹೊತ್ತಿತೆಂದರೆ, ಎಂತಹ ಅನರ್ಥವು ಸಂಭವಿಸುವದೋ ಏನೋ? ನನ್ನ ಆಶೆಯು ನಿರಾಶೆಯಾಗುವದು. ನನ್ನ ಪ್ರಯೋಗವು ಹಾಳಾಗುವದು: ಎರಡು ಮಾನವ ಜನಾಂಗಗಳು ಒಂದೆಡೆ ಸುಖದಿಂದ ಬಾಳಲು ಬರದಿದ್ದರೆ, ನೂರಾರು ಜನಾಂಗಗಳು ಒಂದೆಡೆಯಲ್ಲಿ ವಾಸಿಸುವದೆಂತು?

ಪ್ರಭೋ! "ಈ ಪವಿತ್ರ ಪ್ರಯೋಗದತ್ತ ಲಕ್ಷವನ್ನೀಯಲು ನೀನು ಆಜ್ಞಾಪಿಸಿದೆ. ನಾನು ಬಹಳ ಎಚ್ಚರಿಕೆಯಿಂದ ಪ್ರಯೋಗವನ್ನು ಪ್ರಾರಂಭಿಸಿದೆ. ಆದರೆ ಧೈರ್ಯವು ಸಾಲಲೊಲ್ಲದು. ಆದುದರಿಂದಲೇ ನಿನ್ನನ್ನು ಎಬ್ಬಿಸಿರುವೆ. ದೇವಾ ಕ್ಷಮಿಸು. ಮುಂದೆ ಹೇಗೆ ಸಾಗಬೇಕೆಂಬದನ್ನು ನನಗೆ ಹೇಳು."

ಪ್ರಯೋಗಪತಿಯ ಮಾತುಗಳನ್ನು ಶಾಂತ ರೀತಿಯಿಂದ ಪ್ರಭುವು ಕೇಳಿದನು. ಅವನನ್ನು ಹತ್ತಿರ ಕರೆದು ಪ್ರಸನ್ನದೃಷ್ಟಿಯಿಂದ ಆತನ ಕಡೆಗೆ ನೋಡಿದನು. ಮಂಗಲಕರವಾದ ತನ್ನ ಹಸ್ತಗಳನ್ನು ಆತನ ಬೆನ್ನಮೇಲೆ ಆಡಿಸಿದನು. ತಲೆಯ ಮೇಲೆ ವರದ ಹಸ್ತವನ್ನಿಟ್ಟನು. ಪ್ರಭುವಿನ ಹಸ್ತಸ್ಪರ್ಶದಿಂದ ಪ್ರಯೋಗಪತಿಯ ನಿರಾಶೆಯು ಆಶೆಯಾಗಿ ಪರಿಣಮಿಸಿತು. ಸೂರ್ಯೋದಯವಾದೊಡನೆ ಮಂಜು ಉಳಿಯುವದೇ?

ಆಗ ದೇವದೇವನು "ವತ್ಸಾ ಅಂಜಬೇಡ, ನೀನು ಪ್ರಯೋಗವನ್ನು ಮುಂದರಿಸು. ಯಾವ ಕ್ಷಣದಲ್ಲಿ ಪ್ರಯೋಗವು ಕುಸಿಯುವದೆಂದೆನಿಸುವದೋ ಆ ಕ್ಷಣದಲ್ಲಿಯೇ ಅದು ಸಫಲವಾಗುವದೆಂದು ತಿಳಿ. ಅತ್ಯಂತ ಬೇಸಿಗೆ ಎನಿಸಹತ್ತಿದರೆ ಮಳೆಗಾಲವು ಸಮೀಪಿಸಿತೆಂದು ತಿಳಿಯಬೇಕು. ಚಳಿಗಾಲವು ಮಿತಿ ಮೀರಿ ಭಾಸವಾದರೆ ಬೇಸಿಗೆಯು ತಲೆಯೆತ್ತುವದೆಂದರಿಯಬೇಕು. ಅಮಾವಾಸ್ಯೆಯ ಕಗ್ಗತ್ತಲೆಯು ಹಬ್ಬಿದಂತೆ ಪ್ರಕಾಶಮಾನನಾದ ಚಂದ್ರನ ಉದಯವು ತೀರ ಸಮೀಪಿಸಿತೆಂದು ತಿಳಿಯಬೇಕು. ತಾಯಿಯು ಅತ್ಯಂತ

ವೇದನೆಯನ್ನು ಅನುಭೋಗಿಸಹತ್ತಿದೊಡನೆಯೇ ಆಕೆಗೆ ಮುದ್ದು ಮಗುವಿನ ಮುಖಕಮಲವನ್ನು ನೋಡುವ ಸಮಯವು ಸಮೀಪಿಸಿತೆಂದು ತಿಳಿಯಬೇಕು. ಅತ್ಯಂತ ವಿರೋಧದ ಹೊಟ್ಟೆಯಿಂದಲೇ ವಿಕಾಸವು ಹೊರಬೀಳುವದು." ಎಂದನು.

ದೇವಾ ನೀನು ಹೇಳುವದು ಅತ್ಯಂತ ಸತ್ಯ. ಚಿಕ್ಕ ಮಕ್ಕಳಿಗೆ ಹಾಲು ಹಲ್ಲುಗಳು ಬರುವಾಗ ಜ್ವರ ಬರುತ್ತವೆ. ಅನುಭವವಿಲ್ಲದ ತಾಯಿಯು ಗಾಬರಿಯಾಗುತ್ತಾಳೆ. ಅನುಭವಿಕಳಾದ ಅಜ್ಜಿಯು ಹಲ್ಲು ಬರುವಾಗ ಜ್ವರ ಬಂದೇ ಬರುತ್ತದೆ ಎಂದು ಸಮಾಧಾನ ಮಾಡುವಳು. ಕಪ್ಪು ಮೋಡಗಳು ಆಕಾಶದಲ್ಲಿ ಕವಿದಾಗಲೇ ನಿರ್ಮಲವಾದ ರಜತ ಸದೃಶ ಜೀವನ ಧಾರೆಯು ಜಗತ್ತಿಗೆ ದೊರೆಯುವದು. ಎಂದು ಪ್ರಯೋಗಪತಿಯು ಉತ್ತರಿಸಿದನು.

' ಅಹುದು! ನೀನು ಸರಿಯಾಗಿ ತಿಳಿದಿರುವಿ. ನಾಗ ಹಾಗೂ ಆರ್ಯರಲ್ಲಿ ದ್ವೇಷಾಗ್ನಿಯು ಹೊತ್ತುವದೆಂದು ನಿನಗನಿಸುತ್ತದೆ. ಆದರೆ ಈ ದ್ವೇಷವು ಬಾಳಲಾರದು. ಹೊಟ್ಟೆಯೊಳಗಿನ ವಿಷವು ಒಮ್ಮೆ ಹೊರಬಿದ್ದರೆ ಒಳ್ಳೇದು. ಕಾರಿಕೊಳ್ಳಲಿ ಒಮ್ಮೆ ದ್ವೇಷಾಗ್ನಿಯನ್ನು. ಆದರೆ ಈ ದ್ವೇಷದ ಪ್ರದರ್ಶನದೊಡನೆಯೆ ಪರಸ್ಪರರಲ್ಲಿ ಪ್ರೇಮ ಸಂಬಂಧವು ಬೆಳೆಯಬೇಕೆಂದು ಜನಸಾಮಾನ್ಯರು ಕಾತರಗೊಂಡಿದ್ದಾರೆ. ಸಾಮಾನ್ಯ ಆರ್ಯ ಹಾಗೂ ನಾಗರು ಸಂತೋಷದಿಂದಿರಲು ಇಚ್ಛಿಸುತ್ತಿದ್ದಾರೆ. ಅವರವರಲ್ಲಿ ಲಗ್ನಸಂಬಂಧಗಳಾಗಹತ್ತಿವೆ. ಪ್ರತಿಷ್ಠಿತ ಜನರು ಮಾತ್ರ ಬೇರೆ ಉಳಿಯಲು ಯತ್ನಿಸುತ್ತಿದ್ದಾರೆ. ಜನತೆಯ ಈ ಆಶೆ ಆಕಾಂಕ್ಷೆಗಳಿಂದಲೇ ಮಹಾನ್ ಶಕ್ತಿಯು, ತೇಜಸ್ಸು ಉತ್ಪನ್ನವಾಗುವದು. ದ್ವೇಷದ ಶಕ್ತಿಯು ಅತ್ಯಲ್ಪ! ಅಪಾರವಾದ ಕತ್ತಲೆಯನ್ನು ಒಂದೇ ಒಂದು ಪ್ರಕಾಶದ ಕಿರಣವು ಓಡಿಸುತ್ತದೆ. ಅದ್ಭುತವಾಗಿ ಹಬ್ಬಿದ ದ್ವೇಷವನ್ನು ಪ್ರೇಮ ಸೂರ್ಯನ ಒಂದು ಕಿರಣವು ನಷ್ಟ ಪಡಿಸುವದು. ಗಾಬರಿಗೊಳ್ಳಬೇಡ. ನಿರಾಶನಾಗಬೇಡ. ಧ್ಯೇಯದಲ್ಲಿ ಧೃಡವಾದ ಶ್ರದ್ಧೆಯನ್ನಿಡು. ಅತ್ಯುತ್ಕಟವಾದ ಶ್ರದ್ಧೆಯೇ ಇಂಥ ಸಂಕಟ ಸಮಯದಲ್ಲಿ ಉಪಯೋಗ ಬೀಳುವದು. ಧ್ಯೇಯವು ಎಷ್ಟು ದೊಡ್ಡದೋ ಅಷ್ಟೇ ಅದು ದೂರ ಮತ್ತು ಕಷ್ಟ ಸಾಧ್ಯ.

ನಾನು ಪುನಃ ಸಮಾಧಿಸ್ಥನಾಗುವೆ. ಪ್ರಯೋಗದ ಮೊದಲನೆಯ ಹೆಜ್ಜೆಯು ಯಶಸ್ವಿಯಾದೊಡನೆಯೆ ನನ್ನನ್ನು ಎಬ್ಬಿಸು. ಯಶವು ಕಟ್ಟಿಟ್ಟಿದ್ದು. ಅದು ನನಗೆ ಕಾಣುತ್ತದೆ. ಮೊದಲನೆಯ ಪಾವಟಿಗೆಯನ್ನು ಹತ್ತುವದೇ ಕಠಿಣ. ಆ ಹೆಜ್ಜೆಯೊಂದನ್ನು ಹಾಕಿದರೆ ಅವನು ನೂರಾರು ಗಾವುದಗಳನ್ನು ನಡೆಯುವನೆಂದು ತಿಳಿ. ಹಿಮಾಲಯವನ್ನು ಏರಿ ಆಕಾಶಕ್ಕೆ ಅವನು ಕೈ ಹಚ್ಚಬಹುದು. ತಿಳಿಯಿತೇ ? ನಾನು ಸಮಾಧಿಸ್ಥನಾಗಲೋ ? ಎಂದು ಪ್ರಭುವು ಪ್ರೇಮದಿಂದ ಕೇಳಿದನು.

ದೇವಾ! ಧ್ಯಾನಸ್ಥನಾಗು. ನಾನು ಪ್ರಯೋಗವನ್ನು ಪ್ರಾರಂಭಿಸುವೆ. ಚಿಕ್ಕ ಪುಟ್ಟ ತೊಂದರೆಗಳಿಗೆ ಬೆದರುವದಿಲ್ಲ. ಆರ್ಯ ಹಾಗೂ ನಾಗ ಜಾತಿಗಳಲ್ಲಿ ಮಧುರ ಬಾಂಧವ್ಯವು ಬೆಳೆದು ಸಂಗಮವಾದೊಡನೆಯೇ ನಿನ್ನನ್ನು ಎಬ್ಬಿಸುವೆ. ನನ್ನ ಪ್ರಯತ್ನಕ್ಕೆ ಬಂದ ಫಲವನ್ನು ತೋರಿಸುವೆ. ನಿನ್ನ ಆಶೀರ್ವಾದವನ್ನು ಪಡೆಯುವೆ. ಮತ್ತೆ ಮುಂದರಿಯುವೆ. ಈ ಭವ್ಯ ಭಾರತದಲ್ಲಿ, ಸಾಗರಗಳ ಸಾನ್ನಿಧ್ಯದಲ್ಲಿ, ಹಿಮಾಲಯದ ಛತ್ರದಲ್ಲಿ, ವಿವಿಧ ಪ್ರಕಾರದ ವನಸ್ಪತಿಗಳ ಮಧ್ಯದಲ್ಲಿ, ನಿರ್ಮಲವಾದ ನೀಲಾಕಾಶದ ಸುಂದರ ಪ್ರಕಾಶದಲ್ಲಿ, ವಿವಿಧ ಸಂಸ್ಕೃತಿಗಳ ಮಾನವರು ಆನಂದದಿಂದ ನಲಿಯುತ್ತಿರುವ ಮಂಗಲ ಸಮಯವೊಂದು ಬರಲಿರುವದು. ಎಂದು ಪ್ರಯೋಗಪತಿಯು ಅತ್ಯಂತ ಆಶೆಯಿಂದ ನುಡಿದನು.



# ೨

ವೃದ್ಧ ಸುಶ್ರುತೆಯೊಬ್ಬಳೇ ಮನೆಯಲ್ಲಿ ಚಿಂತಾಮಗ್ನಳಾಗಿ ಕುಳಿತಿದ್ದಳು. ಮುಖ ಲಕ್ಷಣವನ್ನು ನೋಡಿದರೆ, ಆಕೆ ಅನೇಕ ದುಃಖಗಳನ್ನನುಭೋಗಿಸಿ ದಂತೆ ಕಾಣುತ್ತಲಿತ್ತು. ಮಾನವರ ಮುಖ ಮುದ್ರೆಯು ಅವರ ಜೀವನ ಗ್ರಂಥ ಜೀವನದಲ್ಲಿಯ ಅನೇಕ ಅನುಭವಗಳ ಗೆರೆಗಳು ಮೋರೆಯ ಮೇಲೆ ಮೂಡಿರುತ್ತವೆ. ಅವುಗಳಲ್ಲಿ ಕೆಲವು ಸ್ಪಷ್ಟವಾಗಿಯೂ ಕೆಲವು ಅಸ್ಪಷ್ಟ ವಾಗಿಯೂ ಕಾಣುವವು. ಕಣ್ಣುಗಳೆಂದರೆ ಅವರ ಅನುಭವದ ಖಣಿಯೆಂದು ಹೇಳಬಹುದು.

‘ ಅಜ್ಜೀ ಸುಶ್ರುತಾ ಇಂದೇಕೆ ನೀನು ನಗುವದಿಲ್ಲ! ನಮ್ಮ ಮನೆಗೆ ಏಕೆ ಬಂದಿಲ್ಲ ? ನಾವು ಇಂದು ನದಿಗೆ ಹೋದಾಗ ದೊಡ್ಡ ಹೊಡೆದಾಟವಾಯಿತು. ಅದು ನಿನಗೆ ತಿಳಿಯಿತಷ್ಟೆ! ’ ಎಂದು ನೆರೆಮನೆಯ ಕಾರ್ತೀಕನು ವಿಚಾರಿಸಿದ.

‘ ಹೊಡೆದಾಟ ಯಾರೊಡನೆ ನಡೆಯಿತು ಕಾರ್ತೀಕ? ನಿನ್ನೊಡನೆ ಯಲ್ಲವಷ್ಟೇ ? ಇಂತಹ ಚಿಕ್ಕ ಪುಟ್ಟ ಜಗಳಗಳಲ್ಲಿಯೇ ಯುದ್ಧದ ಕಿಡಿಗಳು ಹೊರ ಹೊಮ್ಮುವವು. ಊರು ಸುಡಲಿಕ್ಕೆ ಒಂದು ಕಿಡಿಯೇ ಸಾಕು’ ಎಂದಳು ಸುಶ್ರುತೆ.

‘ ನೀನು ಯುದ್ಧದ ಮಾತುಗಳನ್ನು ಎತ್ತಿದೊಡನೆಯೆ ನನಗೆ ಬಹಳ ಕೆಡಕೆನಿಸುತ್ತಿದೆ. ಒಮ್ಮೊಮ್ಮೆ ಸಿಟ್ಟು ಬರುತ್ತದೆ. ಅದನ್ನು ಕೇಳಿ ವೀರನಾಗ ಬೇಕೆಂದು ಅನಿಸುವದು. ನನಗೆ ವತ್ಸಲೆಯ ಅಜ್ಜನ ಕತ್ತಿಯನ್ನು ಕೊಡು ವಿಯಾ ? ಆಕೆಯ ತಂದೆಯ ಧನುಷ್ಯವನ್ನು ಕೊಡು ’ ಎಂದು ಕಾರ್ತೀಕನು ಹಿಂದಿನದನ್ನು ನೆನಪು ಮಾಡಿದನು.

"ಕಾರ್ತೀಕಾ! ನನಗೆ ಒಬ್ಬನೇ ಒಬ್ಬ ಮಗ, ಅವನು ಬಹು ಗುಣವಂತ. ಬೆಂಕಿಯಿಂದ ನಾಗರ ಮಕ್ಕಳನ್ನು ಉಳಿಸುವದಕ್ಕಾಗಿ ಯತ್ನಿಸಿ ಸುಟ್ಟುಕೊಂಡು ಸತ್ತ. ನಾಗರ ಒಂದು ಚಿಕ್ಕವಸತಿಗೆ ಆರ್ಯರು ಬೆಂಕಿ ಹಚ್ಚಿದರು. ವತ್ಸಲೆಯ ತಂದೆಯು ಬೇಟೆಗೆ ಹೋಗಿದ್ದನು. ಅವನು ಆರ್ತಸ್ವರವನ್ನು ಕೇಳಿ ಹೋಗಿ ನೋಡುತ್ತಾನೆ. ಊರೇ ಉರಿಯುತ್ತಲಿವೆ. ಒಂದು ಮನೆಯಲ್ಲಿ ಎರಡು ಎಳೆ ಮಕ್ಕಳು ಚೀರುತ್ತಲಿವೆ. ತಾಯಿಯು ಹೊರಗಡೆ ಬಡಕೊಳ್ಳುತ್ತಲಿದ್ದಾಳೆ. ಅಗ್ನಿ ನಾರಾಯಣನು ತನ್ನ ನಾಲಗೆಯನ್ನು ಚಾಚುತ್ತಲಿದ್ದಾನೆ. ತನ್ನ ಮಕ್ಕಳು ತನ್ನ ಎದುರಿಗೆ ಸುಡುವದನ್ನು ನೋಡಲಾರದೆ, ತಾಯಿಯು ಮೂರ್ಛೆ ಹೋದಳು. ಇದನ್ನು ಕಂಡು ಆತನು ಬೆಂಕಿಯಲ್ಲಿ ಹಾರಿದನು. ಮನೆಒಳ ಹೊಕ್ಕು ಆ ಎರಡೂ ಮಕ್ಕಳನ್ನು ಅರಿವೆಯಲ್ಲಿ ಸುತ್ತಿ ಹೊರತಂದು ತಾಯಿಗೆ ಒಪ್ಪಿಸಿದನು. ರತ್ನಾಕರನು ಮನೆಗೆ ಬಂದನು. ಆದರೆ ಅವನು ಬೆಂಕಿಯಲ್ಲಿ ಬೆಂದು ಹೋಗಿದ್ದನು. ಏನು ಉಪಾಯ ಮಾಡಿದರೂ ಅವನು ಬದುಕಲಿಲ್ಲ. ನಾನು ಪುತ್ರಹೀನಳಾದೆ. ಆದರೆ ಆತನು ಎರಡನೇ ತಾಯಿಗೆ ಆನಂದವನ್ನಿತ್ತನು. ಎರಡನೆಯ ತಾಯಿಯನ್ನು ಪೂಜಿಸುವವನೇ ನಿಜವಾದ ಮಾತೃಭಕ್ತ. ಎರಡನೇ ಧರ್ಮವನ್ನು ಆದರದಿಂದ ನೋಡುವವನೇ ನಿಜವಾದ ಧಾರ್ಮಿಕ. ರತ್ನಾಕರನು ಎಂದೂ ನಾಗರನ್ನು ನಿಂದಿಸುತ್ತಿರಲಿಲ್ಲ. ನಾಗ ಪೂಜೆಯ ವೇಳೆಯಲ್ಲಿ, ಅವರೊಡನೆ ಅವರ ಉತ್ಸವದಲ್ಲಿ ಭಾಗವಹಿಸುತ್ತಿದ್ದನು. ಆರ್ಯ ಜಾತಿಯವರು ಅವನನ್ನು ಕಂಡರೆ ಆಗುತ್ತಿರಲಿಲ್ಲ. ಅವನಿಗೆ ಹೆಸರು ಇಡುತ್ತಿದ್ದರು. ಆದರೆ ಅವನು ಶಾಂತನಾಗಿಯೇ ಇರುತ್ತಿದ್ದ. ಬಹಳ ಗುಣಿ" ಎಂದು ಸುಶ್ರುತೆಯು ಕಣ್ಣೀರು ಸುರಿಸಹತ್ತಿದಳು.

ಅಜ್ಜೀ! ವತ್ಸಲೆಯ ತಾಯಿಯನ್ನು ಸಾಯಲು ಏಕೆ ಬಿಟ್ಟಿ? ನಿನ್ನಂತೆಯೇ ಆಕೆಯೂ ಮಗಳನ್ನು ಜೋಪಾನ ಮಾಡುತ್ತ ಇರುತ್ತಿದ್ದಳು, ಎಂದನು ಕಾರ್ತೀಕ.

"ನನ್ನ ಗಂಡ ಕುರುಕ್ಷೇತ್ರದಲ್ಲಿ ಮಡಿದ, ಯುದ್ಧಕ್ಕೆ ಹೊರಡುವಾಗ ನಾನು ಬಸಿರಿದ್ದೆ. ಹೋಗುವ ಮುಂದೆ ಗಂಡನು "ನಾನು ಯುದ್ಧದಲ್ಲಿ ಸತ್ತರೆ, ನೀನು ಸತಿ ಹೋಗಬೇಡ. ನಿನಗೆ ಕೂಸು ಆಗುವದು. ಅದನ್ನು ರಕ್ಷಿಸು, ಅದರ ಸೇವೆಯೇ ನನ್ನ ಸೇವೆ. ಕುಲದ ತಂತುವನ್ನು ಹರಿದೊಗೆಯ

ಬೇಡ. ನಮ್ಮ ಪರಂಪರೆಯು ನಡೆಯಬೇಕು. ಇವರಿಂದಲೇ ಪಿತೃ ಋಣ ತೀರುವದು" ಎಂದನು. "ಹೀಗೇಕೆ ಅಮಂಗಲ ಮಾತನಾಡುವಿರಿ, ವಿಜಯಿಗಳಾಗಿ ತಿರುಗುವಿರಿ" ಎಂದೆ. ರಣದಿಂದ ಆವರು ಮರುಳಲಿಲ್ಲ, ಆವರ ಆಜ್ಞೆಯನ್ನು ನಾನು ಪಾಲಿಸಿದೆ. ಮಗುವು ಜನಿಸಿತು, ರತ್ನಾಕರನೆಂದು ಹೆಸರಿಟ್ಟೆ. ಅತ್ಯಂತ ಪ್ರೇಮದಿಂದ ಬೆಳೆಯಿಸಿದೆ. ಒಮ್ಮೆ ಅಂಗಳದಲ್ಲಿ ಮಗುವನ್ನು ಮಲಗಿಸಿದ್ದೆ. ಹೊರಬಂದು ನೋಡುತ್ತೇನೆ, ಹುಲಿ ಬಂದು ನಿಂತಿದೆ. ಎದೆಯೊಡೆಯಿತು. ಆದರೆ ಒಮ್ಮೊಮ್ಮೆ ಪಶುಗಳು ಕೂಡ ಮಾನವನು ತಲೆ ಬಾಗುವಂತೆ ವರ್ತಿಸುತ್ತವೆ. ಹಸಿವೆಯಾಗಿದ್ದರೆ ಮಾತ್ರ ಹುಲಿಯು ಬೇಟೆಯಾಡುತ್ತದೆ. ಸ್ವೈರನಾಗಿ ಹಿಂಸೆಮಾಡುವವನು ಮಾನವನೇ! ನಾನು ಹೊರಬಂದೆ. ಹುಲಿಯು ಹೊರಟುಹೋಯಿತು. ಮಗುವನ್ನೆತ್ತಿ ಮುದ್ದಿಟ್ಟೆ. ಆವನನ್ನು ಬೆಳೆಸಿದೆ. ಆವನು ಕುದುರೆ ಹತ್ತುವವನು, ನೀರಲ್ಲಿ ಜಿಗಿಯುವವನು ಗುರಿ ಹೊಡೆಯುವವನು. ಹೀಗೆ ಎಲ್ಲದರಲ್ಲಿಯೂ ಬಲ್ಲಿದನಾದ, ಪರಾಕ್ರಮಿಯಾದ. ಒಬ್ಬ ನಾಗಕನ್ಯೆಯೊಡನೆ ಮದುವೆಯಾಗಲು ಅಪೇಕ್ಷಿಸಿದ. ಆದರ ನಾನು ಪಾಪಿ ಬೇಡವೆಂದೆ, ಬಿಟ್ಟುಬಿಟ್ಟ ಒಳ್ಳೇ ಮಾತೃ ಭಕ್ತ. ನಾನು ಇನ್ನೊಂದು ಹೆಣ್ಣು ತೆಗೆದು ಮದುವೆ ಮಾಡಿದೆ. ಆಕೆಯೊಡನೆ ಆನಂದದಿಂದ ಸಂಸಾರ ಮಾಡಿದ. ವತ್ಸಲಾ ಹುಟ್ಟಿದಳು. ಆದರೆ ರತ್ನಾಕರನು ಹೋದ. ಆವನೊಡನೆ ಅವನ ಪತ್ನಿಯೂ ಸತಿ ಹೋದಳು.

'ನನ್ನಂತೆಯೇ ಕೂಸನ್ನು ಜೋಪಾನ ಮಾಡಿಕೊಂಡಿರು' ಎಂದು ಬೇಕಾದಷ್ಟು ಹೇಳಿದೆ. 'ನೀವು ಇರುವಿರಲ್ಲ? ಜೋಪಾನ ಮಾಡಿರಿ. ಆವರನ್ನು ಬಿಟ್ಟು ಅರಗಳಿಗೆ ಕೂಡ ನಾನಿರಲಾರೆ' ಎಂದಳು. ಈ ಹುಡುಗೆಯನ್ನು ರಕ್ಷಿಸುವವರಾರು? ನಾನು ಮುದಿಕಿ ಎಂದೆ. ನಾವು ಮಾನವರು ಏನು ರಕ್ಷಿಸಬಲ್ಲೆವು? ಪಾಲನಕರ್ತನು ಆ ಜಗದೀಶ್ವರನು. ಯಾರು ಸಮುದ್ರವನ್ನು ತುಂಬಿರುವರೋ, ಪರ್ವತವನ್ನು ಸ್ಥಿರಗೊಳಿಸಿರುವರೋ ಅಂತರಿಕ್ಷದಲ್ಲಿ ಕೋಟ್ಯಾವಧಿ ನಕ್ಷತ್ರಗಳನ್ನು ಆಧಾರವಿಲ್ಲದೆ ನಿಲ್ಲಿಸಿರುವರೋ, ಕೋಗಿಲೆಗೆ ಕಂಠವನ್ನೀಯುವರೋ ಆಕಳುಗಳಿಗೆ ವಾತ್ಸಲ್ಯವನ್ನು ಕೊಡುವರೋ ಆ ಪ್ರಭುವೇ ಸರ್ವರಕ್ಷಕನು. ಕ್ಷಣಭಂಗುರವಾದ ಈ ತಂದೆತಾಯಿಗಳಲ್ಲಿಯು

ಪಾಲಕರು? ಶಾಶ್ವತನಾದ ಅವನೇ ತಂದೆ ಅವನೇ ತಾಯಿ! ಆಕೆಯು ಹೋದಳು. ಅಮರಳಾದಳು, ಅಭಾಗಿನಿಯಾದ ನಾನು ಮಾತ್ರ ಉಳಿದಿರುವೆ. ಆದರೆ ನಾನು ವತ್ಸಲೆಯನ್ನು ಬೆಳೆಯಿಸಿದ್ದೇನೆ. ಆಕೆಯ ಸಂಸಾರವಾದರೂ ಸುಖಮಯವಾಗಲಿ. ನನ್ನ ಕೈಗುಣವೆಂತಹದೋ ಏನೋ! ನನ್ನ ಗಂಡ ಹೋದ, ಮಗ ಹೋದ, ಸೊಸೆಯೂ ಹೋದಳು, ಮೊಮ್ಮಗಳು ಮಾತ್ರ ಉಳಿದಿದ್ದಾಳೆ. ಈಕೆಯೂ ಹೋಗುವಳೋ ಏನೋ ಎಂಬ ವಿಚಾರಗಳು ಇಂದು ಬಂದವು, ದೇವಾ! ಈಕೆಯಾದರೂ ಅನುರೂಪನಾದ ಗಂಡನ ಮನೆಗೆ ಹೋಗಲಿ! ನಾನು ಸುಖದಿಂದ ಕಣ್ಣು ಮುಚ್ಚುವೆನು ಎಂದು ಪ್ರಾರ್ಥಿಸಿದೆ. ಕಾರ್ತಿಕಾ! ನಾನು ಒಬ್ಬಳೇ ಕುಳಿತೆನೆಂದರೆ, ನೂರಾರು ನೆನಪುಗಳು ಮನಸ್ಸಿನಲ್ಲಿ ಬರುತ್ತವೆ. ಈ ಕತ್ತಿ, ಈ ಢಾಲು, ಆ ಧನುಷ್ಯ, ಇವೆಲ್ಲ ನಿರ್ಜೀವ ವಸ್ತುಗಳೆಂದು ತಿಳಿಯಬೇಡ. ಇವು ಹಿಂದಿನ ಎಷ್ಟೆಷ್ಟೋ ಕಥೆಗಳನ್ನು ಹೇಳುವವು. ನಾನು ಒಂದು ನೆನಪನ್ನು ಹೇಳಲಾ! ಕುರುಕ್ಷೇತ್ರದ ಯುದ್ಧಕ್ಕೆ ಹೋಗುವ ಮುನ್ನಾದಿವಸ, ಅವರು ಅಡವಿಯಿಂದ ಸುಂದರ ವಾದ ಅಶೋಕ ಗುಚ್ಛವನ್ನು ತಂದು, "ಇದು ನೋಡು ಎಷ್ಟು ಅಂದ ವಾಗಿದೆ. ನಿಲ್ಲು, ನಿನ್ನ ಕಿವಿಯಲ್ಲಿ ಇದನ್ನು ಇರಿಸುವೆ" ಎಂದರು. ಆಗ ನಾನು ಬೇಡತಿಯಂತೆ ಕಾಣಿಸುವೆ. ಅಲ್ಲದೆ ಈ ಅಶೋಕಪುಷ್ಪವು ಕೊನೆಗೆ ಶೋಕದಲ್ಲಿ ಪರಿಣಮಿಸುವದು. ಸೀತೆಯ ನಿಟ್ಟುಸಿರಿನಿಂದಲೂ ಕಣ್ಣೀರಿ ನಿಂದಲೂ ಇದು ಬೆಳೆದಿದೆ ಎಂದೆ. ಅವರು ನಕ್ಕು ಹುಚ್ಚೀ! ಈ ಜಗತ್ತಿನಲ್ಲಿ ಅಶುಭವೆನ್ನುವದು ಯಾವುದೂ ಇಲ್ಲ. ನಾನು ರಣಾಂಗಣದಲ್ಲಿ ಮಡಿದರೂ ಅದೂ ಮಾಂಗಲ್ಯವೇ! ಇಲ್ಲದ್ದೊಂದು ಮನಸ್ಸಿನಲ್ಲಿ ತರುವಿ, ಈ ಹೂವನ್ನು ಕಿವಿಯಲ್ಲಿ ಹಾಕಿಕೋ ಎಂದರು. ನಾನು ಹಾಕಿಕೊಂಡೆ. ನೋಡಿ ನಗ ಹತ್ತಿದರು. ಚೇಷ್ಟೆ ಮಾಡಿದರು. ಇದೇ ಅವರ ಕೊನೆಯ ಪ್ರೇಮದ ಗುರುತಾಯಿತು. ಆ ಹೂವನ್ನು ನಾನು ಒಳ್ಳೇ ಜೋಪಾನದಿಂದ ಇಟ್ಟಿರುವೆ. ಅವರು ರಣದಿಂದ ಮರುಳಲಿಲ್ಲ. ಅಶೋಕಪುಷ್ಪವು ನನ್ನ ಪಾಲಿಗೆ ಶೋಕ ವಾಗಿಯೇ ಪರಿಣಮಿಸಿತು. 'ನಾನು ಸತ್ತರೂ ಶೋಕ ಮಾಡಬೇಡ' ಎಂಬ ಸಂದೇಶವನ್ನು ಕೊಡುವದಕ್ಕಾಗಿಯೇ ಈ ಅಶೋಕಪುಷ್ಪವನ್ನು

ಕೊಟ್ಟರೋ ಏನೋ! ಕರ್ತವ್ಯವನ್ನು ಮಾಡಬೇಕು, ಶೋಕ ಮಾಡಬಾರದು, ದುಃಖದಿಂದ ಕರ್ತವ್ಯವು ಮರೆಯುವದು. ಪ್ರೇಮವು ಕರ್ತವ್ಯದಲ್ಲಿ ಪರಿಣಿತವಾಗಬೇಕು. ಬೆಳೆದ ಕರ್ತವ್ಯವೇ ಪ್ರೇಮ. ಬೆಳೆದ ಪ್ರೇಮವೇ ಕರ್ತವ್ಯ. ಎಂಬುದೇ ಈ ಅಶೋಕ ಪುಷ್ಪದ ಪಾಠವೇ ? ಸನ್ಯಾಸಿಯ ವೇಷದಿಂದ ಅದು ಶೋಭಿಸುವದು. ಅಶೋಕರಾಗಬೇಕಿದ್ದರೆ, ಆಸಕ್ತಿಯನ್ನು ತೊರೆಯಿರಿ ಎಂದೋ ಈ ಪುಷ್ಪದ ಹೇಳಿಕೆ? ಈ ಮಾತಿಗೆ ನಾಲ್ವತ್ತು ವರ್ಷಗಳಾದವು. ಆ ಹೂವೂ ಬಾಡಿರುವದು. ಆದರೆ ಈ ಚಂದನದ ಪೆಟ್ಟಿಗೆಯಲ್ಲಿ ಅದನ್ನು ಇಟ್ಟಿರುವೆ. ನಾನು ದುಃಖಸಾಗರದಲ್ಲಿ ಮುಳುಗಿದಾಗೆಲ್ಲ ಅದನ್ನು ಸ್ಮರಿಸುವೆ. ಅದು ನನಗೆ ದುಃಖಸಾಗರದಿಂದ ಪಾರುಮಾಡುವ ಈಸಗುಂಬಳವಾಗಿದೆ. ಇದೇ ನನಗೆ ಸೇತುವೆ. ಇದೇ ನನಗೆ ಆಧಾರ. ಇಕೋ! ನೋಡು ಇಲ್ಲಿಯೇ ನನ್ನ ಮುಸುಕಿನಲ್ಲಿದೆ. ಆ ಚಂದನದ ಪೆಟ್ಟಿಗೆ. ನೀನು ಬರುವ ಮೊದಲು ನನ್ನ ಮನವು ಅಲ್ಲೋಲ ಕಲ್ಲೋಲವಾಗಿತ್ತು. ನಾನು ಈ ನಾವೆಯ ಸಹಾಯವನ್ನೇ ಪಡೆದೆ. ನೋಡು ಇದೇ ಆ ಪೆಟ್ಟಿಗೆ. ಈ ಸುಂದರವಾದ ಪೆಟ್ಟಿಗೆಯನ್ನು ಒಬ್ಬ ನಾಗಮಿತ್ರನು ರತ್ನಾಕರನಿಗೆ ಕೊಟ್ಟಿದ್ದನು. ರತ್ನಾಕರನು ನಾಗರನ್ನು ಪ್ರೀತಿಸುತ್ತಿದ್ದನು. ಅವನು ಜೀವಂತನಿರುವಾಗ ಅವನ ಹೃದಯವನ್ನು ನಾನು ತಿಳಿಯಲಿಲ್ಲ. ಈಗ ನಾನು ತಿಳಿಯಬಲ್ಲೆ. ಅವನ ವಿಚಾರಗಳು ಆ ಕಾಲದ ಜನರಿಗೆ ರುಚಿಸುತ್ತಿರಲಿಲ್ಲ. ತಿಳಿಯುತ್ತಲೂ ಇರಲಿಲ್ಲ. ನಾಗಮಿತ್ರರು ರತ್ನಾಕರನಿಗೆ ಕಾಣಿಕೆಯಾಗಿ ಕೊಟ್ಟ ಈ ಚಂದನದ ಪೆಟ್ಟಿಗೆಯಲ್ಲಿ ನಾನು ಪತಿಯ ಕಾಣಿಕೆಯನ್ನು ಇಟ್ಟಿದ್ದೇನೆ. ಈ ಪೆಟ್ಟಿಗೆಯ ಅಂತರ್ಬಾಹ್ಯದಲ್ಲಿ ನನ್ನ ಪತಿಯ ಹಾಗು ಮಗನ ಜೀವನವು ತುಂಬಿ ತುಳುಕುತ್ತಲಿದೆ. ಅಲ್ಲದೆ ಆರ್ಯ ಹಾಗು ನಾಗ ಜಾತಿಯ ಪ್ರೇಮವು ಇದರಲ್ಲಿ ಪ್ರತಿಬಿಂಬಿತವಾಗಿದೆ. ನನ್ನ ಜೀವನದ ಸರ್ವಸ್ವವೇ ಈ ಪೆಟ್ಟಿಗೆಯು." ಎಂದು ಆ ಚಂದನದ ಪೆಟ್ಟಿಗೆಯನ್ನು ತಲೆಯ ಮೇಲೆ, ಇಟ್ಟುಕೊಂಡಳು. ಕಣ್ಣು ಮುಚ್ಚಿದಳು. ಭಾರತದ ಧ್ಯೇಯ ಚಿಂತನೆಯನ್ನು ಮಾಡಹತ್ತಿದಳು.

ಕಾರ್ತಿಕನು ಎಲ್ಲವನ್ನು ಕೇಳುತ್ತಿದ್ದನು. ನೋಡುತ್ತಿದ್ದನು. ಆಕೆಯು ಸಮಾಧಿಸ್ಥಳಾದಳು. ಮೆಲ್ಲಮೆಲ್ಲನೆ ಎಚ್ಚರವಾದಳು. ಮಸ್ತಕದ ಮೇಲಿನ ಪೆಟ್ಟಿಗೆಯನ್ನು ಕೈಯಲ್ಲಿ ತೆಗೆದುಕೊಂಡಳು.

"ಗಂಧದ ಪರಿಮಳವು ಬರುತ್ತಿದೆ ಅಜ್ಜೀ" ಎಂದನು ಕಾರ್ತೀಕ.

ಆಗ ಅಜ್ಜಿಯು 'ಏನು ಗಂಧದ ಸುವಾಸನೆಯೋ? ನಾಗಬಂಧುಗಳ ಪ್ರೇಮದ ಪರಿಮಳವೋ, ಎಂದಳು. 'ಅಜ್ಜೀ! ಏನು ಹೇಳಲಿ! ನಾಗ ಹಾಗು ಆರ್ಯರ ಜಗಳವು ವಿಕೋಪಕ್ಕೆ ಹೋಗಿದೆ. ರತ್ನಾಕರನು ಈಗ ಜೀವಂತವಿದ್ದರೆ ಯಾವ ಪಕ್ಷವನ್ನು ಹಿಡಿಯುತ್ತಿದ್ದನೋ! ಏನು ಮಾಡ ಬೇಕು ತಿಳಿಯದಾಗಿದೆ. ನಾನಿರುವ ಆಶ್ರಮದಲ್ಲಿ, ನಾಗರ ದ್ವೇಷದ ಹೊರತು ಮತ್ತೊಂದು ಮಾತಿಲ್ಲ. ದಿನಾಲು ಅದೇ ಪಾಠ. ಅಲ್ಲಿರುವುದೇ ನನಗೆ ಬೇಡವಾಗಿದೆ. ಆದರೆ ಮಾಡುವುವೇನು? ಹಿರಿಯರ ಆಗ್ರಹ ಮನೆಯಲ್ಲಿಯೂ ಅದೇ! ನನ್ನ ತಮ್ಮನು ನಾಗರವಿರುದ್ಧವಾಗಿ ಅಖಂಡ ಮಾತಾಡುತ್ತಿದ್ದಾನೆ. ಏಕೆಂದರೆ ತಂದೆಯವರ ಶಿಕ್ಷಣವೇ ಇದು. ನಾಗರು ಕೆಡುಕು ಏಕೆ? ನೋಡಲು ಸ್ವಲ್ಪ ಕಪ್ಪು ಕಾಣುವರೆಂದು ಕೆಡುಕೋ? ಅವರಲ್ಲಿಯೂ ತ್ಯಾಗಿ ಗಳಿದ್ದಾರೆ, ವೀರರಿದ್ದಾರೆ, ಪ್ರೇಮಿಗಳಿದ್ದಾರೆ, ಗುಣಿಗಳಿದ್ದಾರೆ, ಅಂದ ಮೇಲೆ ಜಗಳವೇಕೆ? ಅಂದು ನದಿಯ ಮೇಲೆ ದೊಡ್ಡ ಹೊಡೆದಾಟ. ಆರ್ಯ ತರುಣನೊಬ್ಬನು ಈಸುತ್ತಲಿದ್ದ, ಅಲ್ಲಿ ನಾಗನೊಬ್ಬನು ಬಂದನು. ಅಲ್ಲಿ ನೀರು ಸ್ವಲ್ಪ ಆಳವಿದ್ದ ಮೂಲಕ, ಅಲ್ಲಿ ಈಸಲು ಮನಸ್ಸಿಗೆ ಉಲ್ಲಾಸ ಹೆಚ್ಚು. ಆದರೆ ಆರ್ಯಕುಮಾರನು ನಾಗನನ್ನು ಹೊರದೂಡಿದ. ಕೂಡಲೇ ನಾಗ ಕುಮಾರರ ಒಂದು ತಂಡವೇ ಬಂದು ಮುತ್ತಿತು. ಇಬ್ಬರೂ ಕೂಡಿದರು. ಸುರುವಾಯಿತು ಹೊಡೆದಾಟ! ಇಬ್ಬರಿಗೂ ಶಾಂತರಾಗಲು ಹೇಳಿದೆ. 'ನದಿಯಾದರೋ ಇಬ್ಬರಿಗೂ ಸ್ವಾಗತವೀಯುವದು. ಯಾರಿಗೂ ಬೇಡ ವೆನ್ನುವದಿಲ್ಲ, ಇಬ್ಬರ ಜಗಳವನ್ನು ನೋಡಿ ಆ ನದಿಗೆ ಏನೆನಿಸಬಹುದು? ಆಕೆಯು ಅಳಬಹುದು! ಎಂದು ನಾನೆಂದೆ. ಆದರೆ ಇಬ್ಬರಲ್ಲಿ ಮಳೆಹನಿ ಗಳು ಉದರಹತ್ತಿದವು. ಜಗಳವು ನಿಂತಿತು. ನಾನು ನಿಮ್ಮೆಲ್ಲರನ್ನು ನನ್ನ ಮುಸುಕಿನಲ್ಲಿ ತೆಗೆದುಕೊಳ್ಳಲು ಸಿದ್ಧವಿರಲು ನೀವೇಕೆ ಜಗಳವಾಡುವಿರಿ! ಎಂದು ಮೌನಾಕಾಶವು ಹನಿಗಳನ್ನುದುರಿಸಿ ನಮಗೆ ಕಲಿಸಿತೇ? ಅಜ್ಜೀ ಪರಿಸ್ಥಿತಿಯು ಕೈಮೀರುತ್ತಲಿದೆ. ನಾನು ನನ್ನ ಆಶ್ರಮವನ್ನು ಬಿಟ್ಟುಬಿಡಲಾ! ಆದರೆ ತಂದೆಯವರು ರೇಗುವರು. ಆಶ್ರಮವನ್ನು ಬಿಟ್ಟರೆ ಮನೆಯನ್ನೂ ಬಿಡಲು ಸಿದ್ಧನಾಗಬೇಕು" ಎಂದನು ಕಾರ್ತೀಕ.

" ಪೂರ್ಣ ವಿಚಾರಮಾಡಿ ಏನೆಂಬುದನ್ನು ನಿರ್ಣಯಿಸು" ಕಾರ್ತಿಕಾ! ಈ ವಿಶಾಲವಾದ ಜಗತ್ತಿನಲ್ಲಿ ಎಲ್ಲಿಯಾದರೂ ಕಾಯ ಕಷ್ಟಮಾಡಿ ಹೊಟ್ಟೆ ಹೊರೆಯಬಹುದು. ' ಎಂದು ಅಜ್ಜಿಯು ಉತ್ತರಿಸಿದಳು.

' ಅಜ್ಜೀ ! ಹೊಟ್ಟೆಯ ಪ್ರಶ್ನೆಯೊಂದೇ ಇಲ್ಲ. ತಂದೆ ತಾಯಿಗಳ ಪ್ರೇಮಕ್ಕೂ ಎರವಾಗಬೇಕಾಗುತ್ತದೆ. ವತ್ಸಲೆಯು ತಾಯಿ ಇಲ್ಲವೆಂದು ಅಳುವದಿಲ್ಲವೇ! ಇದ್ದ ತಂದೆ ತಾಯಿಗಳನ್ನು ಕಳೆದುಕೊಳ್ಳಬೇಕೇ! ಎಂಬುದೇ ಪ್ರಶ್ನೆ ಅಜ್ಜೀ !

" ಕಾರ್ತಿಕಾ! ನಾನು ಹಾಗೆ ಹೇಳುವದಿಲ್ಲ. ಆದರೆ ತಂದೆ ತಾಯಿಗಳಿಗಿಂತಲೂ ಧ್ಯೇಯವು ದೊಡ್ಡದೆಂದೆನಿಸಹತ್ತಿದರೆ, ತಂದೆತಾಯಿಗಳ ಇಚ್ಛೆಗಿಂತಲೂ ಆತ್ಮನಕರೆಯು ಬಹು ಮಹತ್ವದ್ದೆಂದು ಅನಿಸಹತ್ತಿದರೆ, ಆಗ ಅವರ ತ್ಯಾಗವು ವಿಹಿತವೆನಿಸುವದು. ಆತ್ಮ ದರ್ಶನಕ್ಕಾಗಿ, ವಿಶ್ವದ ತ್ಯಾಗವನ್ನು ಕೂಡ ಮಾಡಬಹುದೆಂದು, ಜ್ಞಾನಿಗಳು ಹೇಳುತ್ತಾರೆ" ಎಂದು ಸುಶ್ರುತೆಯು ಗಂಭೀರವಾಗಿ ನುಡಿದಳು.

'ವತ್ಸಲೆಯು ಆಶ್ರಮದಿಂದ ಯಾವಾಗ ಬರುವಳು? ಆಕೆಯು ಇನ್ನೂ ಕಲಿಯುವಳೋ! ಆಕೆಯ ಭೆಟ್ಟಿಯಾಗದೆ ಎಷ್ಟೋ ದಿನಗಳಾದವು. ಇಲ್ಲಿಗೆ ಆಕೆ ಯಾವಾಗ ಬಂದಿದ್ದಳು ? ವಸಂತೋತ್ಸವಕ್ಕೆ ಕೂಡ ಆಕೆಯು ಬರಲಿಲ್ಲ. ಎಂದು ಕಾರ್ತಿಕನು ಉತ್ಸುಕತೆಯಿಂದ ವಿಚಾರಿಸಿದನು.

" ನಾನು ಕಲಿಯುವೆ, ಬ್ರಹ್ಮವಾದಿನಿಯಾಗುವೆ. ನನಗೆ ಲಗ್ನಬೇಡ, ಸಂಸಾರ ಬೇಡ. ನಾನು ವಿಶ್ವದ ಸಂಸಾರ ಮಾಡುವೆನು. ಚಿಕ್ಕಮಕ್ಕಳ ತಾಯಿಯಾಗುವದಕ್ಕಿಂತ; ವಿಶ್ವಮಾತೆಯಾಗುವೆ. ನನ್ನ ಈ ಜೀವನದಲ್ಲಿ ಈಶ್ವರನನ್ನು ನೋಡುವೆ. ನನ್ನ ಜೀವನದಲ್ಲಿ ಒಳಹೊರಗೆ ವ್ಯಾಪಿಸಿದ ಬ್ರಹ್ಮನ ಅನುಭವವನ್ನು ಪಡೆಯುವೆ." ಎಂದು ಆಕೆಯು ಮಾತನಾಡುತ್ತಾಳೆ. ತಾನು ಏನು ಮಾತನಾಡುತ್ತಿರುವೆ ಎಂಬುದು ಆಕೆಗೆ ತಿಳಿಯುತ್ತದೆಯೋ ಇಲ್ಲವೋ ಯಾರಿಗೆ ಗೊತ್ತು! ದೊಡ್ಡ ದೊಡ್ಡ ಮಾತುಗಳನ್ನಂತೂ ಆಡುವಳು. ನಾನಂತೂ ಆಕೆಯ ವಿರುದ್ಧ ಹೋಗುವದಿಲ್ಲ. ಲಗ್ನದ ಮಾತನ್ನು ನಾನೆಲ್ಲಿ ಎತ್ತುವೆನೋ ಎಂದು ಆಕೆಯು ಮನೆಗೆ ಬರುವದನ್ನೇ ಕಡಿಮೆ ಮಾಡಿದ್ದಾಳೆ ಕಾರ್ತಿಕಾ!" ಎಂದಳು ಅಜ್ಜಿ.

'ಅಜ್ಜೀ! ವತ್ಸಲೆಯ ವಯವೆಷ್ಟು?' ಎಂದು ಮೆಲ್ಲನೆ ಕಾರ್ತೀಕನು ನುಡಿದ.

"ಪರೀಕ್ಷಿತ ರಾಜ, ಜನಮೇಜಯ, ಹಾಗು ವತ್ಸಲೆ ಒಂದೇ ದಿವಸ ಹುಟ್ಟಿದ್ದಾರೆ. ಆಕೆಗೆ ಇದೇ ೧೭ ವರ್ಷ. ಇನ್ನೂ ಚಿಕ್ಕ ಹುಡಿಗೆ. ಕಲಿಯಲಿ! ಕಲಿಯಲು ಬೇಸರಬಂದು, ಇನ್ನು ಮೇಲೆ ಸಂಸಾರ ಮಾಡಬೇಕೆಂಬ ಒಂದು ಕ್ಷಣವೂ ಬರಬಹುದು. ಆಗ ಆಕೆಗೆ ಚಿಕ್ಕ ಮಕ್ಕಳಲ್ಲಿ ಪರಮಾತ್ಮನ ಸಾನ್ನಿಧ್ಯವು ಹೆಚ್ಚಿಗಿರುವದೆಂದು ಅನಿಸಬಹುದು. ಅದು ನಿಜವೂ ಇದೆ. ದೇವರು ಎಲ್ಲೆಡೆ ವ್ಯಾಪಿರುವ. ಅಂದ ಮೇಲೆ ಅವನು ನನ್ನ ಮಕ್ಕಳಲ್ಲಿಲ್ಲವೆ? ನಮ್ಮ ಮಕ್ಕಳಲ್ಲಿಯೂ ಇರುವ. ನಾಗರ ಮಕ್ಕಳಲ್ಲಿಯೂ ಇರುವನು. ಇಬ್ಬರೂ ಬೆಳೆಯಲಿ. ನಗುತ್ತ, ನಲಿಯುತ್ತ, ಇಬ್ಬರೂ ಸುಖಿಗಳಾಗಲಿ. ಅಲ್ಲವೇ ಕಾರ್ತೀಕಾ! ನೀನು ತಿರುಗಿ ಆಶ್ರಮಕ್ಕೆ ಯಾವಾಗ ಹೋಗುವಿ? ನಿನ್ನ ಹುಟ್ಟಿದ ಹಬ್ಬವಂತೂ ಮುಗಿಯಿತು. ಏನೋ! ಇನ್ನೂ ಮನೆಯಲ್ಲಿ ತಿಂಡಿ ತಿನಿಸುಗಳು ಉಳಿದಿವೆಯೋ? ಎಂದು ಅಜ್ಜಿಯು ನಕ್ಕಳು.

'ವತ್ಸಲೆಯು ಬರುವಳೆಂದು ನನ್ನ ಕಿವಿ ಮೇಲೆ ಬಿತ್ತು. ಆಕೆಯ ಭೆಟ್ಟಿಗೆಂದು ನಿಲ್ಲುವವನಿದ್ದೆ. ಭೆಟ್ಟಿಯಾಗದೆ ಬಹಳ ದಿವಸವಾಯಿತು. ಬರುವವಳು ಇದ್ದಾಳೆಯೋ ಅಜ್ಜೀ?' ಎಂದು ಕುತೂಹಲ ಪೂರ್ಣವಾಗಿ ಕೇಳಿದನು.

'ಇಲ್ಲಪ್ಪಾ ಇಲ್ಲ,' ಎಂದಳು.

'ಅಜ್ಜೀ, ವತ್ಸಲೆಯು ನಾಗ ಜಾತಿಯವರನ್ನು ಪ್ರೀತಿಸುವಳೇ ಅಥವಾ ತಿರಸ್ಕರಿಸುವಳೇ?' ಈ ವಿಷಯದಲ್ಲಿ ಆಕೆಯ ಮತವೇನು?

"ಆಕೆಯು ಅವರನ್ನು ಪ್ರೀತಿಸುವಳು. ಆಕೆಯ ತಂದೆಯು ನಾಗ ಕನ್ಯೆಯನ್ನು ಮದುವೆಯಾಗುವವನಿದ್ದ, ಎಂಬ ಮಾತನ್ನು ಕೇಳಿ, ಆಕೆಯ ಜೀವನದಲ್ಲಿ ಕ್ರಾಂತಿ ಉಂಟಾಯಿತು. ಒಮ್ಮೆ ಆಕೆಯು 'ಅಜ್ಜೀ ನನಗೆ ಲಗ್ನವು ಬೇಡವೇ ಬೇಡ. ಎಂದಾದರೂ ಮಾಡಿಕೊಳ್ಳುವದೇ ಆದರೆ, ನಾಗ ಕುಮಾರನನ್ನೇ ಮಾಡಿಕೊಳ್ಳುವೆ. ನೀನು ವಿರೋಧ ಮಾಡುವದಿಲ್ಲವಷ್ಟೆ? ಏಕೆಂದರೆ ನಾಗ ಕನ್ಯೆಯೊಡನೆ ನನ್ನ ತಂದೆಗೆ ನೀನು ಲಗ್ನವಾಗಗೊಟ್ಟಿಲ್ಲ. ಮೊಮ್ಮಗಳಿಗಾದರೂ ಮಾಡಗೊಡುವಿಯಾ' ಎಂದು ನನ್ನನ್ನು ವಿಚಾರಿಸಿದಳು.

ಆಗ ನಾನು 'ಇಲ್ಲ ಕಾಯಿ ನಾನು ವಿರೋಧಿಸುವದಿಲ್ಲ. ನಾಗರೇನು ಆರ್ಯ ರೇನು ಎಲ್ಲರೂ ಮನುಷ್ಯರೇ ಅಲ್ಲವೇ? ಗುಣವಿದ್ದರೆ ತೀರಿತು. ನಾನು ಮೊದಲು ಹುಚ್ಚಿ ಇದ್ದೆ. ಅಶಿಕ್ಷಿತಳಿದ್ದೆ. ಆದರೆ ನಿನ್ನ ತಂದೆಯು ಯಾವ ನಾಗರಿಗಾಗಿ ಅಗ್ನಿಯಲ್ಲಿ ಬೆಂದನೋ ಅಂತಹ ನಾಗರನ್ನು ನಾನು ಹೇಗೆ ದ್ವೇಷಿಸಲಿ? ನನ್ನ ಮಗನು ತನ್ನ ಬಲಿದಾನವನ್ನು ಕೊಟ್ಟು, ನನಗೆ ವೇದಾಂತ ವನ್ನೂ ಬ್ರಹ್ಮಜ್ಞಾನವನ್ನೂ ಕಲಿಸಿರುವನು. ಅವನು ಜೀವಂತನಿರುವಾಗ ನಾನು ಇದನ್ನು ಕಲಿಯಲಿಲ್ಲ. ಅವನ ಮರಣದಿಂದ ಇದನ್ನು ನಾನು ಕಲಿತಿದ್ದೇನೆ. ವತ್ಸಲೆ, ಲಗ್ನಮಾಡಿಕೊ ಹಾಗೆಯೆ ಇರಬೇಡ, ತಮ್ಮ ಕುಲವು ನಾಶವಾಗಬಾರದೆಂದು ನಿನ್ನ ಅಜ್ಜನು ಯಾವಾಗಲೂ ಇಚ್ಛಿಸುತ್ತಿದ್ದನು. ಆದುದರಿಂದಲೇ ಅವರು ನನಗೆ ಸತಿ ಹೋಗಗೊಡಲಿಲ್ಲ. ಲಗ್ನಮಾಡಿ ಕೊಳ್ಳುವಿಯಲ್ಲವೇ'? ವತ್ಸಲೆಯು ನಕ್ಕಳು. ನಾನು ಲಗ್ನವನ್ನು ಮಾಡಿಕೊಳ್ಳು ವದಿಲ್ಲ. ನಾನು ದೇವರೊಡನೆ ಲಗ್ನವಾಗುವೆ, ಜ್ಞಾನದೊಡನೆ ಲಗ್ನವಾಗುವೆ. ಎಂದು ಪ್ರೇಮದಿಂದ ನಕ್ಕಳು. ನನ್ನ ತೊಡೆಯಮೇಲೆ ಮಲಗಿದಳು. ಆಕೆಯ ಧ್ವನಿ ಎಷ್ಟು ಮಧುರವಾದುದು! ಆಕೆಯು ಹಾಡನ್ನು ಕಲಿಯುತ್ತಿದ್ದಳು. ಎಲ್ಲ ವಿಷಯಗಳಲ್ಲಿಯೂ ಆಕೆಗೆ ಪ್ರೀತಿ. ಕತ್ತಿ ತಿರುವಲು ಕಲಿತಳು, ಈಸಲು ಕಲಿ ತಳು. ಆದರೆ ಮಹಾಪೂರದಲ್ಲಿ ಹೋಗಲು ಮಾತ್ರ ಅಂಜುತ್ತಿದ್ದಳು. ಒಮ್ಮೊಮ್ಮೆ ಗಿಡವನ್ನು ಹತ್ತುವಳು. 'ಅಜ್ಜೀ ನಾನು ಮಂಗ, ನಾನು ಗುಬ್ಬಿ, ನಾನು ಗಿಳಿ, ನಾನು ಮೈನಾಕ, ನಾನು ಕೋಕಿಲೆ' ಎಂದು ಎಲ್ಲ ಪಕ್ಷಿಗಳ ಹೆಸರನ್ನು ತೆಗೆದುಕೊಳ್ಳುತ್ತಿದ್ದಳು. 'ಅಜ್ಜೀ, ಗಿಡದ ಮೇಲಿಂದ ಆಕಾಶವು ಕೈಗೆ ಹತ್ತುವದಿಲ್ಲ. ಸುಮ್ಮನೆ ನಮಗೆ ಆಕಾಶವು ತೀರ ಕೆಳಕ್ಕಿರುವಂತೆ ಅನಿಸುವದು'ಹೀಗೆ ಎಂತಹ ಮಾತುಗಳು! ಎಂತಹ ಆಕೆಯ ನಗೆ! ಕಾರ್ತೀಕಾ "ಒಮ್ಮೆ ಆಕೆಯ ಸುಖದಸಂಸಾರ ನೋಡಿದೆನೆಂದರೆ ಮುಗಿಯಿತು. ನನಗೆ ಉಳಿದಾವ ಇಚ್ಛೆಯಿಲ್ಲ." ಎಂದು ಸುಶ್ರುತೆ ಹೇಳಿದಳು.

'ಅಜ್ಜೀ ನಾನು ಇಂದು ಬೆಳಿಗ್ಗೇ ಹೋಗಿಬರುವೆ. ತಿರುಗಿ ಭೆಟ್ಟಿ ಯಾಗಲಿಕ್ಕಿಲ್ಲ' ಎಂದು ಕಾರ್ತೀಕನು ಅಜ್ಜಿಗೆ ನಮಸ್ಕರಿಸಿದನು.

ಕಾರ್ತೀಕನು ಹೋದನು. 'ವತ್ಸಲೆಯ ಮೇಲೆ ಅವನ ಪ್ರೇಮ ವಿದೆಯೋ? ಅವನ ಅಂತಃಕರಣದಲ್ಲಿ ವತ್ಸಲೆಯು ಹೇಗೆ ಸೇರಿದಳು? ಹುಟ್ಟಿದ

ಹಬ್ಬಕ್ಕೆಂದು ಅವನು ಬಂದಿದ್ದನೇ ಅಥವಾ ವತ್ಸಲೆಯು ಅಕಸ್ಮಾತ್ತಾಗಿ ಭೆಟ್ಟಿಯಾಗುವಳೆಂದು ಬಂದಿದ್ದನೇ? ವತ್ಸಲೆಯು ಬರುವಳೆಂಬ ಸುದ್ದಿಯನ್ನು ಕೇಳಿ ಅವನೇಕೆ ಬಂದಿರಬಾರದು? ವತ್ಸಲೆಯು ಅವನನ್ನು ಪ್ರೀತಿಸುವಳೇ? ಅವನ ಮನೆಯಲ್ಲಾದರೋ ನಾಗರ ದ್ವೇಷ. ಅವರ ತಂದೆಯಂತೂ ನಾಗರನ್ನು ಬಾಗಿಲಮುಂದೆ ಕೂಡ ಹಾಯಗೊಡುವದಿಲ್ಲ. ವತ್ಸಲೆಯು ಇಂಥ ಮನೆಯಲ್ಲಿ ಹೇಗೆ ಇರುವಳು? ಆದರೆ ಕಾರ್ತೀಕನು ಹಾಗಿರುವದಿಲ್ಲ. ಅವನು ನಾಗ ಹಾಗೂ ಆರ್ಯ ತರುಣರಲ್ಲಿ ಹೊಡೆದಾಟವಾಗಗೊಡಲಿಲ್ಲ. ಅವನು ಸಮನ್ವಯವಾದಿ. ಆದರೆ ಅವನು ಆರ್ಯ. 'ಲಗ್ನವಾದರೆ ನಾಗತರುಣನನ್ನೇ ಆಗುವೆ' ಎಂಬ ವತ್ಸಲೆಯ ನಿಶ್ಚಯವನ್ನು ಕೇಳಿ ಅವನು ನಿರಾಶೆಯಾದ ಸಂಗತಿಯು ಸುಶ್ರುತೆಯ ಲಕ್ಷದಲ್ಲಿ ಬಂದಿತ್ತು. ಆಗ ಆಕೆಯು ಕಾರ್ತೀಕನು ಸೌಮ್ಯ ವೃತ್ತಿಯ ತರುಣ, ಅವನಲ್ಲಿ ಚಪಲತೆಯು ಕಡಿಮೆ. ಧೈರ್ಯವೂ ಸ್ವಲ್ಪ ಕಡಿಮೆ. ಆದರೆ ಪ್ರಸಂಗವಿಶೇಷದಲ್ಲಿ ಅವನಲ್ಲಿ ತೇಜವು ಪ್ರಕಟವಾಗುವದು. ಆದರೆ ಅವನು ಕ್ರೂರ ಹೃದಯಿಯಲ್ಲ. ಚಿಕ್ಕಂದಿನಲ್ಲಿ ವತ್ಸಲೆ ಹಾಗೂ ಕಾರ್ತೀಕ ಇಬ್ಬರೂ ಕೂಡಿಯೇ ಆಡುತ್ತಿದ್ದರು. ಕೂಡಿಯೇ ಈಸಲು ಹೋಗುತ್ತಿದ್ದರು. ಸುಶ್ರುತೆಯ ಮನೆಯಲ್ಲಿ ಇಬ್ಬರೂ ಎಷ್ಟೋಸಲ ಉಂಡಿದ್ದರು. ವತ್ಸಲೆಯು ಕಾರ್ತೀಕನ ಮನೆಯಲ್ಲಿ ಅನೇಕಸಲ ಊಟ ಮಾಡಿದ್ದಳು. ಆದರೆ ಇದೆಲ್ಲವೂ ಚಿಕ್ಕಂದಿನ ಚೆಲ್ಲಾಟ. ಚಿಕ್ಕಂದಿನಲ್ಲಿ ಇಬ್ಬರೂ ಕೂಡಿದ್ದರೆಂದು ದೊಡ್ಡವರಾದಮೇಲೆ ಕೂಡಬಹುದೇ! ಚಿಕ್ಕಂದಿನಲ್ಲಿ ಇಬ್ಬರೂ ಕೂಡಿ, ಉಂಡಿರುವರೆಂದು ಈಗಲೂ ಉಣ್ಣಬಹುದೇ? ಈ ಸಮಯದಲ್ಲಿ, ಇಬ್ಬರೂ ಕೂಡಿ ಇರಬಹುದೇ? ಅದರಲ್ಲಿಯೂ ಪತಿ-ಪತ್ನಿಯರೆಂದು ಇಬ್ಬರೂ ಜೀವಿಸಲು ಶಕ್ಯವಿದೆಯೇ? ಎಂಬ ವಿಚಾರಗಳು ಸುಶ್ರುತೆಯ ತಲೆಯಲ್ಲಿ ಬಂದು ಹೋದವು.

ಸುಶ್ರುತೆಯು ಒಂದು ದಿನ, ಒಂದು ತೊಡೆಯ ಮೇಲೆ ವತ್ಸಲೆಯನ್ನೂ ಇನ್ನೊಂದು ತೊಡೆಯ ಮೇಲೆ ಕಾರ್ತೀಕನನ್ನೂ ಮಲಗಿಸಿಕೊಂಡಿದ್ದಳು. ಅಂದು ಕಾರ್ತೀಕನ ತಂದೆಯು ಅವನನ್ನು ಹೊಡೆದಿದ್ದನು. ಅಳುವ ಕಾರ್ತೀಕನನ್ನು 'ಕಾರ್ತೀಕಾ! ನಿನ್ನ ತಂದೆ ಬಹಳ ಕ್ರೂರನಿರುವ. ನಡೆ ನಮ್ಮ ಮನೆಗೆ' ಎಂದು ಅವನನ್ನು ಸಮಾಧಾನ ಪಡಿಸಿ, ವತ್ಸಲೆಯು ಮನೆಗೆ ಅವನನ್ನು ಕರೆ

ತಂದಿದ್ದಳು. ಅವನು 'ನಿನಗೆ ತಂದೆಯಿಲ್ಲ ಎಷ್ಟು ಚೆನ್ನಾಗಿದೆ! ಏಕೆಂದರೆ ನಿನಗೆ ಹೊಡೆಯುವವರು ಯಾರೂ ಇಲ್ಲ' ಎಂದು ಅನ್ನುವಷ್ಟರಲ್ಲಿ ಸುಶ್ರುತೆಯು ಅವನ ಬಾಯಿಯ ಮೇಲೆ ಕೈಯಿಟ್ಟು ಹಾಗೆಲ್ಲ ಮಾತನಾಡಬಾರದು ಎಂದು ಸಮಾಧಾನ ಪಡಿಸಿದ್ದಳು. ಇಬ್ಬರನ್ನೂ ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡಿದ್ದಳು. ಆ ದಿನ ಕಾರ್ತೀಕನು ಮನೆಗೆ ಹೋಗಲೇ ಇಲ್ಲ. ರಾತ್ರಿ ಸುಶ್ರುತೆಯ ಹತ್ತರವೇ ಮಲಗಿದ್ದನು. ಒಂದೆಡೆಗೆ ಕಾರ್ತೀಕ, ಒಂದೆಡೆಗೆ ವತ್ಸಲೆ.

ಈ ಎಲ್ಲ ಮಾತುಗಳು ಸುಶ್ರುತೆಗೆ ಒಂದರ ಹಿಂದೊಂದು ನೆನಪಾಗ ಹತ್ತಿದವು. ಆದರೆ ಅಂದಿನ ವತ್ಸಲೆಯು ಇಂದಿರಲಿಲ್ಲ. ಆಕೆಯು ಸ್ವತಂತ್ರ ವಿಚಾರದ, ತೇಜಸ್ವಿಕಲ್ಪನೆಗಳ ನವತಾರುಣ್ಯದಲ್ಲಿ ನಡೆಯುತ್ತಲಿದ್ದಾಳೆ. ಆಕೆಯು ಬಂಧನಕ್ಕೊಳಗಾಗಲು ಇಚ್ಛಿಸುವದಿಲ್ಲ. ಆಕಾಶದಲ್ಲಿ ಸ್ವತಂತ್ರ ಹಕ್ಕಿಯಂತೆ ಹಾರಾಡಲು ಇಚ್ಛಿಸುತ್ತಿರುವಳು. ದಿಕ್ಕಾಲಾತೀತವಾದ ತತ್ವದ ದರ್ಶನವನ್ನು ತೆಗೆದುಕೊಳ್ಳಲು ಅಪೇಕ್ಷಿಸುತ್ತಿರುವಳು. ಕೊನೆಗೆ ಆ ಹುಚ್ಚಿ ವತ್ಸಲೆಗೆ ಪರಬ್ರಹ್ಮನು ಒಂದು ಮೂರ್ತಿಯಲ್ಲಿಯೂ ಇರುವನು. ಒಬ್ಬರ ಸೇವೆಯಲ್ಲಿಯೇ ಅವನು ದೊರೆಯುವನು. ಒಬ್ಬರ ಕಟಾಕ್ಷದಲ್ಲಿಯೇ ಅವನಿರುವನು. ಅನಂತ ಕಾಲವು ಒಂದು ಕ್ಷಣದಲ್ಲಿಯೇ ಇದೆ. ಎಂಬ ಸಂಗತಿಯನ್ನು ಆಕೆಯು ಕಲಿಯಬಹುದು ಎಂದು ಸುಶ್ರುತೆಯು ನಗಹತ್ತಿದಳು. ಒಂದುದಿನ ಬಂಧನ ದಲ್ಲಿಯೇ ಮೋಕ್ಷವಿದೆಯೆಂದು ವತ್ಸಲೆಯು ತಿಳಿಯಬಹುದೆಂಬ ಕಲ್ಪನೆಯು ಬಂದೊಡನೆಯೇ ಸುಶ್ರುತೆಯು ದೊಡ್ಡ ದನಿಯಿಂದ ನಗಹತ್ತಿದಳು.

---

೩

ರಾಜಾ ಪರೀಕ್ಷಿತನು ಚಿತ್ರಶಾಲೆಯಲ್ಲಿ ಕುಳಿತಿದ್ದಾನೆ. ಆ ಚಿತ್ರಶಾಲೆಯು ಅತ್ಯಂತ ಸುಂದರವಾಗಿದೆ. ಸ್ವತಃರಾಜನೇ ಅದನ್ನು ಸಿದ್ಧಗೊಳಿಸಿದ್ದನು. ಅನೇಕ ಮಹತ್ವದ ಪ್ರಸಂಗಗಳ ಚಿತ್ರಗಳನ್ನು ಹೆಸರಾಂತ ಚಿತ್ರಗಾರರಿಂದ ಬರೆಯಿಸಿದ್ದನು. ಕೌರವ ಪಾಂಡವರ ಸೈನ್ಯಗಳೆರಡೂ ರಣಸನ್ನದ್ಧವಾಗಿ ರಣಾಂಗಣದಲ್ಲಿ ಎದುರು ಬದರು ನಿಂತಿವೆ. ಅರ್ಜುನನು 'ರಥವನ್ನುಹೊಡೆ' ಎಂದು ಶ್ರೀ ಕೃಷ್ಣನಿಗೆ ಹೇಳುತ್ತಿದ್ದಾನೆ. ರಥವನ್ನು ರಣಮಧ್ಯದಲ್ಲಿ ನಿಲ್ಲಿಸಿದೊಡನೆ ಅರ್ಜುನನು ರಥದಲ್ಲಿ ಎದ್ದುನಿಂತು, ಸುತ್ತು ಮುತ್ತಲೂ ನೋಡುತ್ತಾನೆ. ಅವನಿಗೆ ತನ್ನ ಕುಲಕ್ಷಯವು ಕಾಣಹತ್ತಿತ್ತು. 'ಯುದ್ಧಬೇಡ, ವೆಂದು ಅವನು ಅನ್ನಹತ್ತಿದನು. ಕೈಯಲ್ಲಿಯ ಗಾಂಡೀವಿ ಕಳಚಿ ಬಿದ್ದಿದೆ. ಇಂತಹ ಪ್ರಸಂಗದ ಒಂದು ಸುಂದರವಾದ ಚಿತ್ರವೊಂದಿತ್ತು. ಭೀಷ್ಮನು ಶರಪಂಜರದ ಮೇಲೆ ಮಲಗಿದ್ದಾನೆ, ಅವನಿಗೆ ನೀರಡಿಕೆಯಾಗಿದೆ, ಅರ್ಜುನನು ಬಾಣವನ್ನು ಹೊಡೆದು, ಪಾತಾಳ ಗಂಗೆಯುನ್ನು ತಂದು ಆತನ ಬಾಯಿಯಲ್ಲಿ ಬಿಡುವ ಪ್ರಸಂಗವನ್ನು ಅಲ್ಲಿ ಚಿತ್ರಿಸಿದ್ದರು. ಒಂದು ಚಿತ್ರದಲ್ಲಿ ಭಗವಾನ್ ಶ್ರೀ ಕೃಷ್ಣನು ಗೋಕುಲದಲ್ಲಿ ದನಗಳನ್ನು ಮೇಯಿಸುತ್ತಿದ್ದಾನೆ. ಕೃಷ್ಣಶಿಷ್ಟಾಯಿಯ ಚಿತ್ರವೂ ಅಲ್ಲಿ ಚಿತ್ರಿಸಲ್ಪಟ್ಟಿತ್ತು. ಊರ್ವಶಿಯು ಅರ್ಜುನನ್ನು ಮೋಹದಲ್ಲಿ ಕೆಡವಿದ ಪ್ರೇಮದ ಚಿತ್ರ ಒಂದಿದ್ದಿತು. ವಿರಾಟನಗರದಲ್ಲಿ ರಾಜಾ ವಿರಾಟನು ಧರ್ಮರಾಜನ ತಲೆಗೆ ಪಗಡೆ ಒಗೆಯಲು ರಕ್ತಬಂದಿತು. ಆ ರಕ್ತವು ಕೆಳಗೆ ಬೀಳಬಾರದೆಂದು ಅದನ್ನು ಅಂಗೈಯಲ್ಲಿ ಹಿಡಿದ ಪ್ರಸಂಗವನ್ನು

ರಮಣೀಯವಾಗಿ ಚಿತ್ರಿಸಿದ್ದಾರೆ. ವೀರನಾದ ಅಭಿಮನ್ಯು ಒಬ್ಬನೇ ಕರ್ಣದ್ರೋಣರೊಡನೆ ಯುದ್ಧಮಾಡುವ ಸುಂದರ ಚಿತ್ರವು ಇದೆ. ಅರ್ಜುನನು ಖಾಂಡವವನವನ್ನು ದಹಿಸಿ ಅಗ್ನಿಯೆಂಬ ಋಷಿಗೆ ಅದನ್ನು ಅರ್ಪಿಸಿದನು. ಆಗ ಆ ಋಷಿಯು ಅರ್ಜುನನಿಗೆ "ವಿಜಯರಥ"ವನ್ನು ಪ್ರಸನ್ನನಾಗಿ ಕೊಡುವ ದೃಶ್ಯವನ್ನು ಬಹು ಸುಂದರವಾಗಿ ಚಿತ್ರಿಸಿದ್ದಾರೆ ಈ ಚಿತ್ರಶಾಲೆಯು ಒಂದು ಚಿತ್ರಮಯ ಇತಿಹಾಸವೇ ಇದ್ದಿತು. ಈ ಚಿತ್ರಗಳ ದರ್ಶನದಿಂದ ವಿವಿಧ ಭಾವನೆಗಳು ಮನಸ್ಸಿನಲ್ಲಿ ಹುಟ್ಟುವವು. ಒಮ್ಮೆ ಕಾರುಣ್ಯವು ಉಕ್ಕೇರಿಬಂದು, ಅಶ್ರುಧಾರೆ ಸುರಿಯುತ್ತದೆ ಒಮ್ಮೆ ಮೈಮೇಲೆ ಮುಳ್ಳು ಏಳುತ್ತವೆ. ಒಮ್ಮೊಮ್ಮೆ ಮನದಲ್ಲಿ ವೀರರಸ ಸಂಚಾರವಾದರೆ, ಇನ್ನೊಮ್ಮೆ ಗಂಭೀರ ಭಾವನೆಯು ಹೃದಯವನ್ನು ತುಂಬುತ್ತದೆ. ಅನೇಕ ಮಹಾನ್ ವಿಭೂತಿಗಳು ಕಣ್ಣೆದುರು ನಿಲ್ಲುತ್ತಾರೆ. ಸತ್ವಶೀಲನಾದ ಧರ್ಮರಾಜನು, ಪರಾಕ್ರಮಿಯಾದರೂ ಕೂಡ ಶಿಷ್ಟಾಯಿಗೆ ಹೋಗುವಾಗ ‘ ದೇವಾ ! ಶಕ್ಯವಿದ್ದಷ್ಟು ಯುದ್ಧವನ್ನು ತಪ್ಪಿಸು, ಎಂದು ಹೇಳುವ ಉದಾರ ಹೃದಯಿಯಾದ ಭೀಮ, ವೀರ ಶಿರೋಮಣಿ ಅರ್ಜುನ, ಪ್ರೇಮಮೂರ್ತಿಗಳಾದ ನಕುಲ ಸಹದೇವರು, ತೇಜಸ್ವಿನಿಯೂ ಕಾರುಣ್ಯ ಮೂರ್ತಿಯೂ ಆದ ದ್ರೌಪದಿ, ಅಮರನಾದ ಅಭಿಮನ್ಯು, ಗಂಡನು ಕುರುಡನೆಂದು ತನ್ನ ಕಣ್ಣುಗಳನ್ನು ಕಟ್ಟಿಕೊಂಡು ಯಾವಾಗಲೂ ವ್ಯವಹರಿಸುತ್ತಿದ್ದ ಪತಿವ್ರತೆ ಗಾಂಧಾರಿ, ಸ್ವಾಭಿಮಾನಿಯಾದ ದುರ್ಯೋಧನ, ಭೀಮನ ಗದೆಯಿಂದ ತೊಡೆಮುರಿದು ರಣದಲ್ಲಿ ಮಲಗಿದ್ದರೂ ಕೂಡ, "ನನಗೇನು ಕೆಡುಕಾಗಿದೆ ? ಕ್ಷತ್ರಿಯನಿಗೆ ಮರಣವು ನಿಶ್ಚಿತವು, ನಾನು ಸಾಮ್ರಾಜ್ಯವನ್ನು ಭೋಗಿಸಿದೆ. ಭೀಮನಂಥವನಿಗೆ ಕೈಯಲ್ಲಿ ಅಡಿಗೆಯ ಸವಟು ಹಿಡಿಸಿದೆ. ಅರ್ಜುನನಿಗೆ ಬೃಹನ್ನಳೆಯನ್ನಾಗಿ ಮಾಡಿದೆ. ಇನ್ನೇನು ನನಗೆ ಬೇಕು?" ಎಂಬ ದುರ್ಯೋಧನನ ಉದ್ಗಾರಗಳು! ಉದಾರ ಧೀರನಾದ ಕರ್ಣ, ಇಚ್ಛಾಮರಣಿಯಾದ ಭೀಷ್ಮ, ಯಮನಂತೆ ಯುದ್ಧಮಾಡುವ, ಆದರೆ ಮಗನ ಮರಣವಾರ್ತೆ ಕೇಳಿ ಮರಣವನ್ನಪ್ಪಿಕೊಳ್ಳಲು ಸಿದ್ಧನಾದ ಪ್ರೇಮಮೂರ್ತಿ ದ್ರೋಣ, ಕರ್ಮಯೋಗಿ ಶ್ರೀಕೃಷ್ಣ, ಅವನ ಗೆಳೆಯನಾದ ವಿದುರ, ಹಾಗು ಪಾಂಡವರು ಅರಣ್ಯದಲ್ಲಿರುವಾಗ, ವಿದುರನಲ್ಲಿ ದಾರಿದ್ರ್ಯದಲ್ಲಿ ಕಾಲಕಳೆಯುತ್ತಿದ್ದ ಸ್ವಾಭಿಮಾನಿ ಕುಂತಿ; ಎಲ್ಲರಿಗೂ ನಮಸ್ಕಾರಗಳು; ಎಲ್ಲ

ಸ್ತ್ರೀಪುರುಷರಿಗೆ ಪ್ರಣಾಮುಗಳು. ಎಂತಹ ವೈಭವಶಾಲಿ ಸಂತತಿಯಿದು. ಆದರೆ ಈ ಎಲ್ಲರೂ ಕುರುಕ್ಷೇತ್ರದಲ್ಲಿ ಸಂಹರಿಸಲ್ಪಟ್ಟರು. ಕಾರಣವೇನು? ಅಣ್ಣ ತಮ್ಮಂದಿರ ಜಗಳ! ಭಾರತ ವರ್ಷದಲ್ಲಿಯ ಲಕ್ಷಾವಧಿ ಕ್ಷತ್ರಿಯರು ಹೋರಾಡಿ ಧಾರಾತೀರ್ಥದಲ್ಲಿ ಮಡಿದರು. ಲಕ್ಷಾಂತರ ಸ್ತ್ರೀಯರು ವಿಧವೆಯರಾದರು. ಲಕ್ಷಾವಧಿ ಚಿಕ್ಕಮಕ್ಕಳು ಪಿತೃಹೀನರಾದರು.

ಪರೀಕ್ಷಿತನು ಮಹಾಭಾರತವನ್ನೇ ಬಣ್ಣ ಬಣ್ಣಗಳಲ್ಲಿ ಬರೆಯಿಸಿದ್ದನು. ಕಣ್ಣೀರು ಹಾಗು ರಕ್ತದಿಂದಲೇ ಈ ಭಾರತವು ಬರೆಯಲ್ಪಟ್ಟಿತ್ತು. ಮೂಕ-ಆಕೃತಿಗಳು ಮೂಕ–ಪ್ರಸಂಗಗಳು. ಆದರೆ ಆ ಮೂಕತನಕ್ಕೆ ಅನಂತ ನಾಲಗೆಗಳಿವೆ. ಪರೀಕ್ಷಿತನು ಬೇಸತ್ತಾಗ ಬಂದು, ಈ ಚಿತ್ರಶಾಲೆಯಲ್ಲಿ ಕೂಡುವನು. ಆನಂದಿಸುವನು. ವರ್ತಮಾನ ಕಾಲವನ್ನು ಮರೆತು, ಭೂತ ಕಾಲದಲ್ಲಿ ತನ್ಮಯನಾಗುವನು.

ಒಂದು ಚಿತ್ರದ ಎದುರು ನಿಂತಿದ್ದಾನೆ. ಅಶ್ರುಧಾರೆಯು ಸುರಿಯುತ್ತಲಿದೆ. ಅದನ್ನು ನೋಡಿಯೇ ನೋಡುತ್ತಿದ್ದಾನೆ. ತಾಯಿಯಾದ ಉತ್ತರೆಯು ಸತಿ ಹೋಗಬೇಕೆನ್ನುತ್ತಿದ್ದಾಳೆ. ಧರ್ಮ, ಭೀಮ, ಅರ್ಜುನ, ಸುಭದ್ರಾ, ಎಲ್ಲರೂ ಶೋಕಮಗ್ನರಾಗಿದ್ದಾರೆ. ಶ್ರೀ ಕೃಷ್ಣನು ಉತ್ತರೆಯನ್ನು ಸಮಾಧಾನಪಡಿಸುತ್ತಿದ್ದಾನೆ. ಪರಾವೃತ್ತಗೊಳಿಸುತ್ತಿದ್ದಾನೆ. ಇಂತಹ ಪ್ರಸಂಗದ ಚಿತ್ರವದು. ಪರೀಕ್ಷಿತನು ಅದನ್ನು ನೋಡುವದರಲ್ಲಿ ವೈಮರೆತಿದ್ದನು.

ಮೆಲ್ಲಗೆ ಹೆಜ್ಜೆಯನ್ನಿಕ್ಕುತ್ತ ಒಬ್ಬನು ಒಳಗೆ ಬಂದನು: ಅವನ ಮುಖ ಮುದ್ರೆಯು ಪ್ರಸನ್ನವಿರಲಿಲ್ಲ. ಮೋರೆಯ ಮೇಲೆ ಮನುಷ್ಯತ್ವವೇ ಇದ್ದಿಲ್ಲ. ಉಗ್ರವಾಗಿ ಕಾಣುತ್ತಿದ್ದಾನೆ. ಈ ಕಪಟಿಯು ಯಾರು?

"ಪರೀಕ್ಷಿತ! ಅಂಥದೇನನ್ನು ನೋಡುವಿ ಆ ಚಿತ್ರದಲ್ಲಿ?" ಎಂದು ಬಂದವನು ವಿಚಾರಿಸಿದ.

"ಯಾರು ವಕ್ರತುಂಡನೇ, ಯಾವಾಗ ಬಂದಿ?, ಎಂದು ಪರೀಕ್ಷಿತನು ತಿರುಗಿ ನೋಡಿ ವಿಚಾರಿಸಿದನು.

"ಬಹಳ ಹೊತ್ತಾಯಿತು, ರಾಜನೀತಿಗೃಹದಲ್ಲಿ ನಿಮ್ಮ ದಾರಿಯನ್ನು ಕಾದೆ. ಕೊನೆಗೆ ಸೇವಕನಿಂದ ನೀವು ಇಲ್ಲಿರುವಿರಿ ಎಂದು ತಿಳಿಯಿತು. ಇಲ್ಲಿಗೆ

ಬಂದೆ, ನಿಮ್ಮ ಅನುಗ್ರಹದಿಂದ ಯಾರೂ ನನ್ನನ್ನು ತಡೆಯಲಿಲ್ಲ. ಯಾಕೆ ಇಂದು ನಿಮ್ಮ ಮೈಯಲ್ಲಿ ನೆಟ್ಟಗಿಲ್ಲವೆ? ಕಣ್ಣೀರು ಸುರಿಸುತ್ತಿರುವುದೇಕೆ? ಎಂದು ವಕ್ರತುಂಡನು ಸವಿಮಾತುಗಳ ಮಳೆಗರೆದನು.

' ವಕ್ರತುಂಡಾ! ಈ ಚಿತ್ರವನ್ನು ನಾನು ಮೇಲಿಂದ ಮೇಲೆ ನೋಡುತ್ತೇನೆ. ನನ್ನ ತಾಯಿಯು ಸತಿ ಹೋಗಿದ್ದರೆ, ನಾನು ಹುಟ್ಟುತ್ತಲೇ ಇರಲಿಲ್ಲ. ನಾನು ಹುಟ್ಟಿದ್ದೇನೋ ನಿಜ! ಆದರೆ ನನ್ನ ತಾಯಿಯ ಹಾಸ್ಯ ಮುಖವನ್ನು ಒಮ್ಮೆಯೂ ನಾನು ನೋಡಲಿಲ್ಲ. ಆಕೆಯು ಜೀವಂತ ಳಿದ್ದರೂ ಮೃತಪ್ರಾಯಳಾಗಿದ್ದಳು. ಆಕೆಯ ಮನಸ್ಸು ಆಕೆಯದೇಹದಲ್ಲಿರಲಿಲ್ಲ. ಆಕೆಯ ವಿಚಾರಗಳು, ಆಕೆಯ ಭಾವನೆಗಳು, ಆಕೆಯ ಆತ್ಮಾ ಎಂದೋ ಹೊರಟು ಹೋಗಿದ್ದವು. ನನ್ನ ತಾಯಿಯು ಕ್ಷಣಕ್ಕೊ ಸತಿ ಹೋಗುತ್ತಿದ್ದಾಳೆ ಎಂದು ಭಾಸವಾಗುತ್ತಿತ್ತು. ನನ್ನ ಸಲುವಾಗಿ ಆಕೆಯು ಬದುಕಿದ್ದಳು. ನಾನು ದುರ್ಭಾಗ್ಯ! ತಾಯಿಯ ಹೊಟ್ಟೆಯಲ್ಲಿ ಬಂದೆ. ವೀರನಾದ ತಂದೆಯನ್ನು ಕೊಂದೆ. ನಾನು ಕರಿಗಾಲ, ಅಭದ್ರ! ಹುಟ್ಟುವಾಗಲೂ ಸತ್ತಂತೆಯೇ ಹುಟ್ಟಿದೆ. ಆದರೆ ಶ್ರೀ ಕೃಷ್ಣನು ಸಜೀವನನ್ನಾಗಿ ಮಾಡಿದನು. ಈ ಚಿತ್ರವೆಂದರೆ ನನ್ನ ಜನ್ಮದ ಕಥೆಯು. ಈ ಚಿತ್ರವೆಂದರೆ ನನ್ನ ಜನ್ಮ. ಆದರೆ ಹುಟ್ಟಿ ನಾನು ಮಾಡಿದ್ದೇನು. ?"

" ಏನೂ ಮಾಡಿರದಿದ್ದರೆ ಮಾಡು. ಏನಾದರೂ ಅಪೂರ್ವವಾದುದನ್ನು ಮಾಡು! ತೇಜಸ್ವಿಯಾದ ಕಾರ್ಯವನ್ನು ಮಾಡು. ನನ್ನ ತಲೆಯಲ್ಲಿ ಅನೇಕ ದಿನಗಳಿಂದ ಒಂದು ವಿಚಾರವು ಸುಳಿಯುತ್ತಲಿದೆ. ಆದರೆ ಅದು ಯಾರಿಗೂ ರುಚಿಸುವದಿಲ್ಲ. ನಾನು ಮಾತ್ರ ಪ್ರಚಾರ ಮಾಡುತ್ತಲೇ ಇರುವೆ. ರಾಜ್ಯಾಧಿಕಾರದ ಸಹಾಯವಿಲ್ಲದೆ ಅದು ಕಾರ್ಯಕಾರಿಯಾಗಲಾರದು. ' ಯಥಾ ರಾಜಾ ತಥಾ ಪ್ರಜಾ, ! ' ರಾಜಾ ಕಾಲಸ್ಯ ಕಾರಣಂ, ಎಂಬುದು ನಿಜ ರಾಜನೆಂದರೆ ಪ್ರಜೆಗಳ ದೈವತ ' ಪ್ರಜೆಗಳ ಮಂಗಲವೆಲ್ಲ, ಪುಣ್ಯವೆಲ್ಲ ರಾಜನ ಕೈಯಲ್ಲಿದೆ, ಎಂದೆನ್ನುವದು ಒಂದು ದೃಷ್ಟಿಯಿಂದ ಸರಿಯಿದೆ. ಏಕೆಂದರೆ ಮೊದಲು ಪ್ರಜೆಗಳೇ ರಾಜನನ್ನು ನೇಮಿಸುತ್ತಿದ್ದರು. ರಾಜನೆಂದರೆ ನಮ್ಮ ಧ್ವನಿ, ರಾಜನೇ ನಮ್ಮ ಸಂಪತ್ತು,

ಆತನೇ ನಮ್ಮ ದೈವತವೆಂದು ಮುಂದೆ ಪ್ರಜೆಗಳು ಮನ್ನಿಸಹತ್ತಿದರು. ಸಮಾಜದ ಮೇಲೆ ರಾಜ ಶಾಸನದ ಪರಿಣಾಮವು ಬಹಳವಾಗುವದು. ರಾಜನ ಮನಸ್ಸಿನಲ್ಲಿರುವದನ್ನೇ ಆವನ ಜನರು ಮನ್ನಿಸುವರು. ಮಂತ್ರಿಗಳು, ಸೇನಾಪತಿಗಳು, ರಾಜದೂತರು, ಎಲ್ಲರೂ ರಾಜನಿಗೆ ಸೇರುವದನ್ನೇ ಮಾಡಹತ್ತುವರು. ಪ್ರಜೆಗಳಿಗೆ ಸಂಬಂಧ ಬರುವದು, ಈಅಧಿಕಾರಿ ವರ್ಗದ್ದೆ. ಆದುದರಿಂದ ಈ ಅಧಿಕಾರಿವರ್ಗದ ಕೃಪೆಯು ತಮ್ಮ ಮೇಲಿರಲಿ ಎಂದು ಪ್ರಜೆಗಳು ಬಯಸುವದು ಸ್ವಾಭಾವಿಕ; ಆದುದರಿಂದಲೇ ಪ್ರಜೆಗಳು ಅಧಿಕಾರಿಗಳ ಮನಸ್ಸಿನಂತೆ ನಡೆದುಕೊಳ್ಳುವರು. ಯಾರಾದರೂ ಈ ಅಧಿಕಾರಿಗಳ ವಿಚಾರದ ವಿರುದ್ಧ ನಡೆಯುವರೆಂದು ಕಂಡರೆ ಅಧಿಕಾರಿಗಳು ಕೂಡಲೇ ಅವರನ್ನು ದಂಡಿಸುವರು. ಅವರು ದೇಶ ಬಿಟ್ಟು ಹೋಗುವಂತೆ ಮಾಡುವರು. ದೇಹವನ್ನು ದಂಡಿಸುವರು. ಕೊನೆಗೆ 'ಹೇಗೆ ರಾಜನೋ ಹಾಗೆ ಪ್ರಜೆಗಳು, ಎಂಬ ಮಾತು ಸತ್ಯವಾಗುತ್ತಿದೆ. ನನ್ನ ವಿಚಾರಗಳು ಏಕೆ ಕಾರ್ಯಕಾರಿಯಾಗುವದಿಲ್ಲೆಂಬುದನ್ನು ನಿನಗೆ ಹೇಳಿಯೇ ಇದ್ದೇನೆ. ಈಗ ನಾಗ ಜಾತಿಯ ಉಚ್ಚಾಟನೆಯು ಆಗಲೇಬೇಕು. ನೀನು ಎಲ್ಲ ಆರ್ಯರಲ್ಲಿ ಇದನ್ನು ಪ್ರಚಾರ ಮಾಡು. ನಿನ್ನ ಮಾಂಡಲೀಕರಿಗೆಲ್ಲ ಇದನ್ನು ಉಪದೇಶಿಸು. ಅಲ್ಲದೆ ನಿನ್ನನ್ನು ಮನ್ನಿಸುವ, ನಿನ್ನ ಮಾತುಗಳನ್ನು ಕೇಳುವ ರಾಜರನ್ನೆಲ್ಲ ಈ ಸಂಘಟನೆಯಲ್ಲಿ ತೆಗೆದುಕೋ! ರಾಜಾ, ಆರ್ಯರ ರಕ್ತವು ಶುದ್ಧ ಉಳಿಯಲೇಬೇಕು. ಎಷ್ಟೋ ಆರ್ಯ ತರುಣರು ನಿಶ್ಶಂಕರಾಗಿ ನಾಗ ಕನ್ನೆಯರನ್ನು ಮದುವೆಯಾಗತೊಡಗಿದ್ದಾರೆ. ಅದೂ ಹೋಗಲಿ ಏನಿದು? ಆರ್ಯ ತರುಣಿಯರೂ ನಾಗ ತರುಣರೊಡನೆ ಲಗ್ನವಾಗತೊಡಗಿದ್ದಾರೆ! ಆದುದರಿಂದ ತಂದೆ ತಾಯಿಗಳು, ಮಕ್ಕಳು ಚಿಕ್ಕವರಿರುವಾಗಲೇ ಲಗ್ನ ಮಾಡಿಬಿಡಬೇಕೆಂದು, ನನಗೆ ಅನಿಸುವದು. ಅಂದರೆ ಮಾತ್ರ ಈ ಅವಿವೇಕವು ನಿಲ್ಲುವದು. ಆದರೆ ನನ್ನ ಈ ವಿಚಾರಗಳನ್ನು ಕೇಳಿ ಜನರು ನಗುವರು. ಅನೇಕ ಆಶ್ರಮಗಳಲ್ಲಿಯ ಕುಲಪತಿಗಳೊಡನೆ ಈ ವಿಚಾರವನ್ನು ಮಾಡಿದ್ದೇನೆ. ಅವರಿಗೆ ಈ ಬಾಲ ವಿವಾಹವು ಸರಿ ಎನಿಸಲೊಲ್ಲದು. 'ಲಗ್ನವೆಂದರೆ ಚೇಷ್ಟೆಯಲ್ಲ,ವೆಂದು ಅವರು ಅನ್ನುತ್ತಾರೆ. ಆದರೆ, ನನ್ನ ಮತ

ದಂತೆ ಈಗ ನಡೆದಿರುವದೇ' ಚೇಷ್ಟೆಯಾಗಿದೆ. ಯಾರು ಬೇಕಾದವರು ಬೇಕಾದವರನ್ನು ಮದುವೆಯಾಗುವದು ಗಂಭೀರತನವೇ? ಸ್ವೈರಾಚಾರ ಪರೀಕ್ಷಿತಾ! ಆರ್ಯ ಕನ್ಯೆಯರು ನಾಗರೊಡನೆ ಮದುವೆಯಾಗಕೂಡ ದೆಂದೂ ನಾಗ ತರುಣರು ಆರ್ಯ ಕನ್ಯೆಯರೊಡನೆ ಮದುವೆಯಾಗುವ ಸಾಹಸಕ್ಕೆ ಕೈ ಹಾಕಬಾರದೆಂದೂ ಒಂದು ರಾಜಾಜ್ಞೆಯನ್ನು ಹೊರಡಿಸು. ನನಗಂತೂ ಈ ಸಂಕರವು ಸಹನವಾಗಲೊಲ್ಲದು. ಆರ್ಯ ಸಂಸ್ಕೃತಿಯು ಉಚ್ಚವಾದುದು. ನಾಗರೊಡನೆ ಮಿಶ್ರವಾಗುವದರಿಂದ ಆರ್ಯ ಸಂಸ್ಕೃತಿಯು ಹಾಳಾಗುವದು. ಆರ್ಯ ಸಂಸ್ಕೃತಿಯ ಪ್ರಸಾರವಾಗಲೇಬೇಕು. ಅಲ್ಲಲ್ಲಿ ಆರ್ಯರ ವಸಹಾತುಗಳಾಗಬೇಕು. ನಮ್ಮ ಸಂಸ್ಕೃತಿಯ ಪ್ರಸಾ ರದ ಆಶ್ರಮಗಳು ಹೊರಡಬೇಕು. ಮೊದಲಾದರೋ ಈ ಉಚ್ಚ ಧ್ಯೇಯ ವನ್ನು ಕಾರ್ಯಕಾರಿ ಮಾಡಲು ಅನೇಕ ಜನರು ಇರುತ್ತಿದ್ದರು. ಆದರೆ ಏನು ಮಾಡುವದು? ಎಲ್ಲವೂ ಗೊಂದಲಮಯವಾಗಿದೆ. ಉದಾರತೆಯ ಹೆಸರಿನಲ್ಲಿ ಭ್ರಷ್ಟಾಕಾರವು ನಡೆದಿದೆ. ಈ ನಾಗರನ್ನು ಸುಟ್ಟುಹಾಕ ಬೇಕೆನಿಸುತ್ತದೆ. ಆದರೆ ನನ್ನೊಬ್ಬನ ಮನಸ್ಸಿನಲ್ಲಿ ಬಂದು ಉಪಯೋಗ ವೇನು?" ಎಂದು ವಕ್ರತುಂಡನು ನಿಟ್ಟುಸುರು ಬಿಟ್ಟನು.

"ವಕ್ರತುಂಡಾ! ಅನೇಕ ದಿನಗಳಿಂದ ನೀನು ಈ ಮಾತನ್ನು ಹೇಳು ತ್ತಿರುವಿ. ಆದರೆ ನಿನ್ನ ವಿಚಾರಗಳು ನನಗೆ ರುಚಿಸಲೊಲ್ಲವು. ನನ್ನ ಅಜ್ಜನೇ ನಾಗಕನ್ಯೆಯೊಡನೆ ಮದುವೆಯಾಗಿರಲಿಲ್ಲವೇ? ಉಲೂಪಿ, ಹಾಗು ಚಿತ್ರಾಂಗದೆಯರು ನಾಗಕನ್ನೆಯರೇ ಅಲ್ಲವೇ! ಇಂಥಹ ವಿವಾಹಗಳು ನಿಷಿದ್ಧ ವೆಂದು ಅವರಿಗೆ ಅನಿಸಿದ್ದರೆ, ಅವರು ಲಗ್ನವಾಗುತ್ತಲೇ ಇರಲಿಲ್ಲ;" ಎಂದು ಪರೀಕ್ಷಿತನು ನುಡಿದನು.

'ರಾಜಾ, ಅರ್ಜುನನು ನಾಗ ಕನ್ನೆಯರೊಡನೆ ಮದುವೆಯಾದುದು ನಿಜ. ಆದರೆ ಅವರನ್ನು ಇಂದ್ರಪ್ರಸ್ಥಕ್ಕೆ ಎಂದೂ ಕರೆತರಲಿಲ್ಲ. ಸುಭದ್ರೆ, ದ್ರೌಪದಿಯರಿಗಿದ್ದ ಮರ್ಯಾದೆಯನ್ನು ಅವರಿಗೆ ಎಂದೂ ಕೊಡಲಿಲ್ಲ. ಇಂತಹ ಸಂಬಂಧಗಳನ್ನು ಪ್ರಾಚೀನ ಆರ್ಯರು ಶ್ರೇಷ್ಠವೆಂದು ತಿಳಿಯುತ್ತಿ ದ್ದಿಲ್ಲ. ಅಶ್ವಮೇಧದ ಸಮಯದಲ್ಲಿ ಬಬ್ರುವಾಹನನು ಎದುರು ನಿಂತಾಗ ಅರ್ಜುನನು ಏನೆಂದು ಹೇಳಿದ? ನೆನಪುಂಟೇ! "ಆ ಅಭಿಮನ್ಯುವೊಬ್ಬನೇ

ನನ್ನ ಮಗ. ನನ್ನ ಮಗನೆಂದು ನೀನು ಹೇಳಿಕೊಳ್ಳಬೇಡ! ನರಿಯ ಮರಿಯು ಸಿಂಹದ ಮರಿಯಾಗಲು ವ್ಯರ್ಥವಾಗಿ ಯತ್ನಿಸಬಾರದು, ಎಂದು ಉದ್ಗಾರ ತೆಗೆದನು. ಅದನ್ನು ಕೇಳಿ ಬಭ್ರುವಾಹನನು ಸಂತಪ್ತನಾದನು. ಇದು ತಾಯಿಯ ಅಪಮಾನವೆಂದು ತಿಳಿದನು. ಇಬ್ಬರಲ್ಲಿಯೂ ತುಮುಲಯುದ್ಧವು ನಡೆಯಿತು. ಇದರಿಂದ ನಿನ್ನ ಅಜ್ಜನು ಇಂತಹ ವಿವಾಹಗಳಿಗೆ ಏನು ಬೆಲೆ ಕೊಡುತ್ತಿದ್ದನೆಂಬುದು ತಿಳಿಯುವದಿಲ್ಲವೇ! ಇಕೋ ಇಲ್ಲಿ ನೋಡು, ನಿನ್ನ ಅಜ್ಜನು ಖಾಂಡವವನವನ್ನು ದಹಿಸುತ್ತಿದ್ದಾನೆ. ನರ್ಮದೆಯ ತೀರದಲ್ಲಿ ತಕ್ಷಕುಲದ ನಾಗರ ದೊಡ್ಡವಸತಿಯಿದ್ದಿತು. ಆದರೆ ಮಹಾನ್ ಅಗ್ನಿಗೆ ಅಲ್ಲಿ ಆಶ್ರಮವನ್ನು ಸ್ಥಾಪಿಸಬೇಕಾಗಿದ್ದಿತು. ನದಿಗಳೆಂದರೆ ವಸಹಾತುಮಾಡಲು ಯೋಗ್ಯವಾದ ಸ್ಥಳ. ಎಲ್ಲ ನದಿಗಳ ತೀರದ ಮೇಲೆಯೂ ಆರ್ಯರ ಆಶ್ರಮಗಳಾಗಬೇಕೆಂದು, ಅಗ್ನಿ ಮಹರ್ಷಿಗೆ ಅನಿಸುತ್ತಿತ್ತು. ಆಶ್ರಮದ ಬೆನ್ನು ಹಿಂದೆಯೇ ಜನವಸತಿ ಹಬ್ಬುತ್ತಿತ್ತು. ಆಗ ನಿನ್ನ ಅಜ್ಜನು ನಾಗರವಸತಿಯನ್ನೆಲ್ಲ ಭಸ್ಮಮಾಡಿ, ಅಗ್ನಿಯನ್ನು ತೃಪ್ತಪಡಿಸಿದನು. ಆಗ ಆ ಮಹರ್ಷಿಯು 'ವಿಜಯ ರಥವನ್ನು ಅರ್ಜುನನಿಗೆ ಕೊಟ್ಟನು. ವಿಜಯರಥದ ಕಥೆಯಿದು. ನಿನ್ನ ಅಜ್ಜನ ಕಿರ್ತಿಯನ್ನೇ ನೀನು ತೀಡು. ರಾಜಾ! ಶ್ರೀ ಕೃಷ್ಣನು ಕೂಡ ವೃಂದಾವನ–ಮಥುರಾ ಮತ್ತು ಗಂಗಾ ಯಮುನೆಗಳ ಸಮೃದ್ಧ ಪ್ರದೇಶದಿಂದ, ನಾಗರನ್ನು ದೂರಹೋಗಲು ಹೇಳಲಿಲ್ಲವೇ? ಕಾಲಿಯಾನು ಹೋಗಲಿಲ್ಲ. ಅವನು ಬಲಾಢ್ಯನಿದ್ದನು. ಯಮುನೆಯ ಮಧ್ಯದಲ್ಲಿ ವಿಲಾಸ ಮಂದಿರವನ್ನು ಕಟ್ಟಿಕೊಂಡು ಇರುತ್ತಿದ್ದನು. ಶ್ರೀಕೃಷ್ಣನು ಅವನ ಎದೆಯ ಮೇಲೆ ಕುಳಿತು, ಅವನನ್ನು ಹಣ್ಣುಮಾಡಿ, ಅವನಿಗೆ ಜೀವದಾನವನ್ನಿತ್ತು, ಸಮುದ್ರ ತೀರಕ್ಕೆ ಹೋಗಲು ಆಜ್ಞಾಪಿಸಿದನು. ಆಗ ಕಾಲಿಯಾನು, ಅಲ್ಲಿ ಗರುಡನ ಹಾವಳಿ ಇದೆ, ಅವನು ನನ್ನನ್ನು ಕೊಲ್ಲುವನು ಎಂದು ಅನ್ನಲು, ಶ್ರೀಕೃಷ್ಣನು ನಾನು ಅವನಿಗೆ ಹೇಳುವೆನು, ನೀನು ಇಲ್ಲಿಂದ ಹೊರಡು, ಎಂದು ಆಶ್ವಾಸನವಿತ್ತನು. ಪರೀಕ್ಷಿತಾ! ಇದು ನಿನ್ನ ಪೂರ್ವಜರ ಇತಿಹಾಸವು. ನಾಗರನ್ನು ಓಡಿಸಿದ ಇತಿಹಾಸವೇ ನಿಮ್ಮದು. ನಿನ್ನ ಅಜ್ಜ ಹಾಗೂ ಶ್ರೀಕೃಷ್ಣನು ಮಾಡಿದ್ದನ್ನೇ ನೀನು ಮಾಡು. ಅದೇ ನಿನ್ನ ಜೀವನ ಕಾರ್ಯ, ಅದಕ್ಕಾಗಿಯೇ ನಿನ್ನ ಹುಟ್ಟು, ಹುಟ್ಟುವಾಗಲೇ ನೀನು ಸತ್ತು ಹುಟ್ಟಿರುವಿ. ನಾಗ

ಸಂಹಾರಕನಾಗು, ಒಮ್ಮೆ ನೀನು ಈ ವಿಷಯವನ್ನು ಮನಸ್ಸಿನ ಮೇಲೆ ತೆಗೆದುಕೊಂಡರೆ ಸಾಕು. ಮುಂದೆ ನೋಡು ಅದರ ಪರಿಣಾಮವನ್ನು. ಆಗ ಈ ಆಸ್ತಿಕನ ಕೈಕಾಲುಗಳು ನಡುಗುವವು. ಅವನು ಸಮನ್ವಯವಾದಿ, ಇರುವನು. ಸಂಗ್ರಾಹಕಮತದ ಸಮರ್ಥನೆಯನ್ನು ಮಾಡುವನು. ಸಂಗ್ರಾಹಕಮತ! ಹೊಟ್ಟೆಗೆ ಏನು ಹಿತವೋ ಅದನ್ನೇ ಸೇವಿಸಬೇಕು. ಸಿಕ್ಕ ಸಿಕ್ಕದ್ದನ್ನು ಸೇವಿಸಬೇಕೆ? ಅಹಿತವಾದದ್ದನ್ನು ತಿಂದರೆ ಮರಣವು ಸಿದ್ಧ. ಯಾವುದು ನಮಗೆ ಪೋಷಕವೋ ಅದನ್ನೇ ಸಂಗ್ರಹಿಸಬೇಕು. ನಮ್ಮ ಸಂಸ್ಕೃತಿಗೆ ಮಾರಕವಾದುದನ್ನು ತ್ಯಾಗಮಾಡಲೇಬೇಕು" ಎಂದು ವಕ್ರತುಂಡನು ಅತ್ಯಂತ ದ್ವೇಷದಿಂದ ಮಾತಾಡಿದನು.

'ನನ್ನ ಅಂತಃಕರಣದಲ್ಲಿ ಆಸ್ತಿಕನ ಬಗೆಗೆ ಅತ್ಯಂತ ಆದರವಿದೆ. ಅವನ ದರ್ಶನ ಮಾಡೊಡನೆಯೇ ಪವಿತ್ರವಾದಂತೆ ಎನಿಸುವದು. ಒಮ್ಮೆ ನಾನು ಅವನ ಆಶ್ರಮಕ್ಕೆ ಹೋಗಿದ್ದೆ. ಅಲ್ಲಿಂದ ಮರಳಿಬಾರದೆಂದು ಅನಿಸಿತು. ರಾಜ್ಯವನ್ನು ಬಿಟ್ಟು ಅಲ್ಲಿಯೇ ವಾಸಿಸಬೇಕೆಂದೆನಿಸಿತು. ಆಗ ಅವರು "ರಾಜಾ ರಾಜನಿದ್ದು ಸನ್ಯಾಸಿಯಾಗು. ಸರ್ವರ ಕಲ್ಯಾಣವನ್ನು ಮಾಡು. ಮಾನವ ಧರ್ಮದ ಉಪಾಸಕನಾಗು. ನಮ್ಮ ಪೂರ್ವಜನೂ ನಮ್ಮ ಸಂಸ್ಕೃತಿಯ ಆದ್ಯ ಸಂಸ್ಥಾಪಕನೂ ಆದ ಭಗವಾನ್ ಮನುವು ತನ್ನ ಧರ್ಮ ಸೂತ್ರಗಳಿಗೆ ಮಾನವ ಧರ್ಮಸೂತ್ರಗಳೆಂದು ಹೆಸರಿಟ್ಟಿರುವನು" ಎಂದು ಆಸ್ತಿಕನು ಉಪದೇಶಿಸಿದ. ನನಗೆ ಆಶ್ಚರ್ಯವಾಗುತ್ತಿದೆ. ಆಸ್ತಿಕನ ಆಶ್ರಮಕ್ಕೆ ಹೋದರೆ, ಅವನಂತೆಯೇ ಅನಿಸುವದು. ನಿನ್ನ ಹತ್ತಿರ ಬಂದರೆ ನಿನ್ನದೇ ನಿಜವೆನಿಸುವದು. ಅನಾರ್ಯರ ಬಗೆಗೆ ಒಮ್ಮೊಮ್ಮೆ ನನಗೆ ತಿರಸ್ಕಾರವೆನಿಸುವದು. ಯಾರು ಪ್ರೇತಗಳನ್ನು ಪೂಜಿಸುವರು, ಯಾರು ಭೂತಗಳನ್ನು ಭಜಿಸುವರು. ಕೆಲವರು ಗಿಡಗಳಿಗೆ ಪ್ರದಕ್ಷಿಣೆ ಹಾಕುವರು, ಕೆಲವರು ಹಾವುಗಳನ್ನು ಪೂಜಿಸುವರು. ಕೆಲವರಂತೂ ಲಿಂಗ ಪೂಜಕರೇ ಇದ್ದಾರೆ. ಜನನೇಂದ್ರಿಯದ ಕಲ್ಲಿನ ಮೂರ್ತಿಯನ್ನು ಮಾಡಿ ಪೂಜಿಸುವರು, ಇವೆಲ್ಲವನ್ನು ನೋಡಿ ಮನಸ್ಸಿಗೆ ಹೇಸಿಕೆ ಬರುವದು. ನಾವು ಆರ್ಯರು ಕೂಡ ಅವರಂತೆಯೇ ಹುಚ್ಚುಚ್ಚು ಕುಣಿಯಹತ್ತಿದ್ದೇವೆ. ನಿಜವಾಗಿಯೂ ತೇಜಸ್ವಿಯಾದ

ಪವಿತ್ರವೇ ನಮ್ಮ ದೇವರು. ಜ್ಞಾನೋಪಾಸನೆಯೆ ನಮ್ಮ ಧರ್ಮ. 'ಜ್ಞಾನವೆಂದರೆ ದೇವರು' ಎಂದು ನಮ್ಮ ವಾಕ್ಯ. ಆದರೆ ನಮ್ಮ ಆರ್ಯ ಧರ್ಮವನ್ನು ಇಂದು ಮಣ್ಣುಗೂಡಿಸುವದೆ? ಅಮೃತತ್ವದ ಧ್ವಜವನ್ನು ಕೈಯ್ಯಲ್ಲಿ ಹಿಡಿದು ಉದಯವಾಗುವ ಉಷಾ ಪೂಜೆಯನ್ನು ಬಿಟ್ಟು, ಕಲ್ಲಿನ ಪೂಜೆಯನ್ನು ಮಾಡುತ್ತ ಕೂಡ್ರಬೇಕೋ? ಈ ವಿಷಯವಾಗಿ ನಾನು ಭಗವಾನ್ ಆಸ್ತಿಕರನ್ನು ವಿಚಾರಿಸುವವನಿದ್ದೇನೆ. ಎಂದು ಪರೀಕ್ಷಿತನು ಉದ್ಗಾರ ತೆಗೆದನು.

'ರಾಜಾ, ಅವನ ಆಶ್ರಮಕ್ಕೆ ಹೋಗಬೇಡ. ವಿಶ್ವ ಪ್ರೇಮದ ಅವನ ಸವಿ ಸವಿ ಮಾತುಗಳಿಗೆ ನಾವು ಮುಗ್ಧರಾಗಿ ಹೋಗುತ್ತೇವೆ. ಮನುಷ್ಯನ ತಲೆಯು ಆಕಾಶವನ್ನು ಭೇದಿಸಿದರೂ ಕಾಲುಗಳು ನೆಲದ ಮೇಲೆಯೇ ಇರುತ್ತವೆ. ವ್ಯವಹಾರವನ್ನು ನೋಡಬೇಕಾಗುತ್ತದೆ. ಜಗತ್ತಿನಲ್ಲಿ ನಮ್ಮ ಸಂಸ್ಕೃತಿಯನ್ನು ಉಳಿಸಬೇಕಾಗಿದೆ. ಸಂಸ್ಕೃತಿಯು ಚೆನ್ನಾಗಿ ವಿಕಾಸವಾಗಬೇಕೆಂದು ನಾವು ಬದುಕಲೇಬೇಕು. ಹೊಲದಲ್ಲಿ ಧಾನ್ಯವು ಚೆನ್ನಾಗಿ ಬರಬೇಕೆಂದು ಹುಲ್ಲನ್ನು ಕಿತ್ತೊಗೆಯುತ್ತೇವೆ. ಹುಲ್ಲಿನ ಮೇಲೆ ಪ್ರೇಮ ಮಾಡಿದರೆ ಮುತ್ತಿನಂತಹ, ಬಂಗಾರದಂತಹ ಧಾನ್ಯಗಳು ಸಿಗುವದುಂಟೆ? ಉಚ್ಚವಸ್ತುಗಳ ವಿಕಾಸಕ್ಕಾಗಿ ನೀಚವಾದುದನ್ನು ನಷ್ಟಮಾಡಲೇಬೇಕು. ಆರ್ಯರ ಸಂಸ್ಕೃತಿಯು ಬೆಳೆಯಬೇಕು. ಆರ್ಯರಸಮಾಜವು ಸರ್ವತ್ರ ಹಬ್ಬಬೇಕು. ಆರ್ಯರ ಮಕ್ಕಳಿಗೆ ಇರಲು ಒಳ್ಳೇ ಮನೆಗಳು ಬೇಕು. ಉತ್ಕೃಷ್ಟವಾದ ಹೊಲಗಳು ಗದ್ದೆಗಳು ಬೇಕು. ಆದಕಾರಣ ಅನಾರ್ಯರು ನಷ್ಟವಾಗಲೇಬೇಕು. ನಾವು ಎಂದೂ ನಮ್ಮಲ್ಲಿ ಅವರನ್ನು ಕೂಡಿಸಿಕೊಳ್ಳಲಾರೆವು. ಅವರ ಹಾಗು ನಮ್ಮಲ್ಲಿ ಎಳ್ಳುಕಾಳಿನಷ್ಟು ಸಹ ಸಾಮ್ಯವಿಲ್ಲ. ನಾವು ಅವರೊಡನೆ ಬೆರೆಯುವದೆಂದರೆ, ನಾವು ಕೆಳಗಿಳಿದಂತೆಯೇ. ಎರಡನೆಯವರನ್ನು ತೇಲಿಸುವವನು ಅವನೊಡನೆಯೆ ಮುಳುಗಿದರೆ, ಪ್ರಯೋಜನವೇನು? ನಾವು ಬೇರೆ ಉಳಿಯಲೇಬೇಕು. ರಾಜಾ, ಆ ಆಸ್ತಿಕನು ದೊಡ್ಡ ಬುಡುಬುಡುಕಿ ಇರುವನು. ಅವನು ಆರ್ಯ ಹಾಗೂ ನಾಗ ತರುಣರಿಗೆ ಪ್ರೇಮದ ಉಪದೇಶವನ್ನು ಮಾಡಹತ್ತಿರುವನು. 'ಒಂದೆಡೆಯಲ್ಲಿ ಸೇರಿರಿ, ಪರಸ್ಪರರ ಒಳ್ಳೇಯದನ್ನು ತೆಗೆದುಕೊಳ್ಳಿರಿ' ಎಂದು ಅವನು ಪ್ರಚಾರ

ಪ್ರಾರಂಭಿಸಿರುವನು. ಇದರಿಂದಲೇ ನಮಗೆ ಧಕ್ಕೆ ತಗಲುವದು. ಆಸ್ತಿಕ ವೆಂಬ ಹೆಸರನ್ನೇ ನೋಡು. ಅದರಲ್ಲಿ ಎಷ್ಟು ಮಹತ್ವವಿದೆ. ಅವನ ಮೊದಲ ಹೆಸರು ಬೇರೆ ಇತ್ತೆಂದು ಹೇಳುವರು. ಆದರೆ ಅವನು ತನ್ನನ್ನು ಆಸ್ತಿಕ ನೆಂದು ಕರೆದುಕೊಳ್ಳುತ್ತಾನೆ. ಸರ್ವತ್ರದಲ್ಲಿಯೂ ಮಾಂಗಲ್ಯವನ್ನು ಮನ್ನಿಸುವವನೇ ಆಸ್ತಿಕನು. ನಾನು ಸರ್ವರಿಗೆ ಕಲ್ಯಾಣವಾಗಲೆಂದು ಅಪೇಕ್ಷಿಸುವೆ. ಆದುದರಿಂದ ನಾನು ಆಸ್ತಿಕ, ಉಳಿದವರು ನಾಸ್ತಿಕರು, ಎಂದು ಜಂಭಕೊಚ್ಚಿಕೊಳ್ಳುತ್ತಾನೆ. ರಾಜಾ, ಇಂಥವರ ನಾದಿಗೆ ಬೀಳ ಬೇಡ. ನಿನ್ನ ಹೃದಯದಲ್ಲಿಯ ಪ್ರೇರಣೆಯೆ ಸತ್ಯವೆಂದು ತಿಳಿ. ಕೋಟ್ಯಾವಧಿ ಆಸ್ತಿಕರಿಗಿಂತಲೂ ಅಂತಃಕರಣದ ಪ್ರೇರಣೆಯೇ ಬಹಳ ದೊಡ್ಡದೆಂದು ತಿಳಿ. ಆ ಪ್ರೇರಣೆಯನ್ನು ಕೊಲ್ಲಬೇಡ' ಎಂದು ವಕ್ರತುಂಡನು ತನ್ನ ಉಪನಿಷತ್ತನ್ನು ಹೇಳಿದನು.

ಆಗ ಪರೀಕ್ಷಿತನು ಆಸ್ತಿಕನ ತಂದೆ ತಾಯಿಗಳೇ ಅವನಿಗೆ ಆಸ್ತಿಕನೆಂಬ ಹೆಸರನ್ನಿಟ್ಟಿದ್ದರು. ಅವನ ತಾಯಿಯು ನಾಗಕನ್ಯೆ. ತಂದೆ ಆರ್ಯ ಋಷಿ. ಯಾವ ವೇಳೆಯಲ್ಲಿ ಈ ಸಂಕರಸಂಭವನಿಗೆ ಆರ್ಯರು ಹೆಸರಿಡ ಹತ್ತಿದರೋ ಆಗ 'ಇವನು ಆಸ್ತಿಕನಿದ್ದಾನೆ. ಸರ್ವರಲ್ಲಿಯೂ ಮಾಂಗಲ್ಯವನ್ನು ನೋಡುವನು. ಮತ್ತು ಎಲ್ಲರಿಗೂ ತೋರಿಸುವನು' ಎಂದು ಅವನ ತಂದೆಯು ಹೇಳಿದನು. ಅಂದಿನಿಂದ ಆಸ್ತಿಕನೆಂಬ ಹೆಸರು ಪ್ರಸಿದ್ಧವಾಗಿದೆ. ಏನೇ ಇರಲಿ. ಅವನಲ್ಲಿ ಅದ್ಭುತ ಸಾಮರ್ಥ್ಯವಿರುವದೆಂಬುದು ಮಾತ್ರ ನಿಜ. ಅವನ ತೇಜಸ್ವಿ ಕಣ್ಣುಗಳೆಂದರೆ ಪ್ರೇಮ ಸಮುದ್ರವೇ ಅನ್ನಿಸುವದು. ನನ್ನ ಜೀವನದಲ್ಲಿಯ ಎಲ್ಲ ವಿರೋಧಗಳು ಅವನ ದರ್ಶನದಿಂದ ಮಾಯವಾಗುವವು. ವಸಂತ ಗಾಳಿಯು ಬೀಸಿದೊಡನೆಯೆ ಒಣಗಿದ ಗಿಡಗಳೆಲ್ಲ ಚಿಗುತು ಜೀವಂತ ಕಾಣುವವು. ಅದರಂತೆಯೆ ಆಸ್ತಿಕನ ಕೃಪಾಕಟಾಕ್ಷವು ಬಿದ್ದೊಡನೆಯೇ ನಮ್ಮ ಜೀವನದಲ್ಲಿಯ ಅಸಂತೋಷವು ನಷ್ಟವಾಗಿ, ಅಲ್ಲಿ ಜೀವನಕ್ಕೆ ಮೊಳಕೆಯೊಡೆದಂತೆಯೂ ತೋಟದಲ್ಲಿಯ ಬಳ್ಳಿಗಳಿಗೆ ಹೂ ಬಿಟ್ಟಂತೆಯೂ ಭಾಸವಾಗುವದು. ವಕ್ರತುಂಡಾ ! ನಿಮ್ಮ ಪ್ರಚಾರವನ್ನು ನಿಮ್ಮ ನಿಮ್ಮ ಆಶ್ರಮಗಳಲ್ಲಿ ನಡೆಯಿಸಿರಿ. ಮೊದಲು ಋಷಿ ಮಹರ್ಷಿಗಳು ನಿಮ್ಮ ವಿಚಾರವನ್ನು ಒಪ್ಪಬೇಕು. ರಾಜನು ಒಮ್ಮೆಲೆ ಯಾವ ಪಕ್ಷವನ್ನೂ

ಹಿಡಿಯಕೂಡದು. ಜನತೆಯಲ್ಲಿ ಯಾವ ಪಕ್ಷದ ಗಾಳಿಯು ಬೀಸುವುದು ಎಂಬುದನ್ನು ರಾಜನು ನೋಡಬೇಕು ಎಂದನು.

ಆಗ ವಕ್ರತುಂಡನು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತ ' ರಾಜನು ನೋಡುವ ಕಾರಣವಿಲ್ಲ. ಅವನು ಮಾರ್ಗದರ್ಶನ ಮಾಡಬೇಕು. ತನಗೆ ಯಾವುದು ಯೋಗ್ಯವೆನಿಸುವದೋ ಅದನ್ನು ಜನತೆಗೆ ಮಾಡಲು ಹಚ್ಚ ಬೇಕು. ' ಎಂದು ಗರ್ಜಿಸಿದನು.

ಆಗ ಪರೀಕ್ಷಿತನು ' ಯೋಗ್ಯವು ಯಾವುದೆಂಬುದನ್ನು ನಿಶ್ಚಯಿಸು ವವರಾರು ? ಅದೇನು ಒಮ್ಮೆಲೇ ಹೇಳಲು ಬರುವಂತಹದೇ ? ಪ್ರಾಚೀನ ಕಾಲದಲ್ಲಿ ಇದಕ್ಕಾಗಿ ದೊಡ್ಡ ದೊಡ್ಡ ಚರ್ಚೆಗಳಾಗುತ್ತಿದ್ದವು. ವಿದ್ವತ್ ಸಭೆಗಳು ಕೂಡುತ್ತಿದ್ದವು. ಜನತೆಯು ಕೇಳಲು ಬರುತ್ತಿತ್ತು. ಸ್ತ್ರೀಯರೂ ವಾದಿಸುತ್ತಿದ್ದರು. ಅಂತಹ ವಿಚಾರ ಮಂಥನಗಳು ನಡೆಯಬೇಕು. ಅಂತಹ ವಿದ್ವತ್ ಪರಿಷತ್ತನ್ನು ನಾನು ಕರೆಯಲಾ ? ಆಸ್ತಿಕರಂತಹ ಮಹಾನ್ ಮಹಾನ್ ಆಚಾರ್ಯರಿಗೆ ಆಮಂತ್ರಣವನ್ನು ಕೊಡುವೆ. ಇದಕ್ಕೆ ನಿಮ್ಮ ಸಿದ್ಧತೆ ಇದೆಯೇ ? ಹೇಳಿರಿ. ' ಎಂದನು

' ರಾಜನೆ ಚರ್ಚೆಯು ನನಗೆ ರುಚಿಸುವದಿಲ್ಲ. ಅಲ್ಲಿ ತೌಡು ಕುಟ್ಟುವ ದಾಗುವದು. ಸತ್ಯವು ಚರ್ಚೆಯಲ್ಲಿ ಸಿಗುವದಿಲ್ಲ. ಅದು ಅವರವರ ಬುದ್ಧಿ ಯಲ್ಲಿಯೇ ಹುಟ್ಟುತ್ತದೆ. ನಾನು ಹೋಗಿಬರುವೆ, ಯೋಗ್ಯಕಾಲ ಬಂದೀತು! ಕಾಲವು ಅನಂತವಿದೆ. ಪೃಥ್ವಿಯು ವಿಪುಲವಿದೆ. ನನ್ನ ವಿಚಾರ ಸರಣಿಯ ದೃಷ್ಟಾರರು ಹುಟ್ಟಬಹುದು. ಅವರ ದಾರಿಯನ್ನು ಕಾಯುತ್ತ ಕೂಡ್ರು ವದು ಕೂಡ ಒಂದು ಸೇವೆಯೇ. ನೀನು ವಿಚಾರಮಾಡು. ನಿನ್ನ ಮಗ ನಾದ ಜನಮೇಜಯ ರಾಜನಾದರೂ ನನ್ನ ಉದ್ದೇಶವನ್ನು ಪೂರ್ತಿಗೊಳಿಸ ಬಹುದು. ಅವನು ರಾಜ್ಯಕ್ಕೆ ಬರುವನು. ನವ ಪೃಥ್ವಿಯನ್ನು ನಿರ್ಮಿಸು ವನು. ಇದರಲ್ಲಿ ನನಗೇನೂ ಸಂದೇಹವಿಲ್ಲ ' ಎಂದು ವಕ್ರತುಂಡನು ವಕ್ರವಾಗಿಯೇ ಮಾತನಾಡಿದನು.

' ಅಂದರೆ ನೀನು ನನ್ನ ಮರಣದ ದಾರಿಯನ್ನೇ ನೋಡುತ್ತಿರುವಿಯೋ ಏನು ? ನನ್ನ ವಧದ ಸಿದ್ಧತೆಯು ನಡೆದಿಲ್ಲವಷ್ಟೇ ?' ಎಂದು ಪರೀಕ್ಷಿತನು ನಗುತ್ತ ನುಡಿದನು.

'ನಾಗರು ಸಂಘಟನೆಯನ್ನು ಮಾಡುತ್ತಲಿದ್ದಾರೆ, ಅವರೇ ಒಂದು ದಿವಸ ನಿನ್ನನ್ನು ನುಂಗುವರು. ಹೀಗೆಯೇ ಎಚ್ಚರಿಲ್ಲದೇ ಇರು. ಸರ್ಪ ಪೂಜಕರಿಗೆ ಹೀಗೆಯೇ ಆಶ್ರಯವನ್ನು ಕೊಡು. ಹಾವು ಕಚ್ಚದೆ ಎಂದೂ ಬಿಡುವದಿಲ್ಲ. ನೀನು ನಾಗರನ್ನೇನೋ ಹತ್ತರ ಕರೆಯುವೆ. ಆದರೆ ನಾಗ ಕಡಿಯಲು ಮಾತ್ರ ಹತ್ತರ ಬರುವದು. ಅದು ದ್ವೇಷವನ್ನು ಎಂದೂ ಬಿಡುವದಿಲ್ಲ. ಸೇಡನ್ನು ತೀರಿಸಿಕೊಳ್ಳದೇ ಬಿಡುವದಿಲ್ಲ. ಖಾಂಡವ ವನದಲ್ಲಿ ಬದುಕಿದ ತಕ್ಷಕ ಕುಲದಲ್ಲಿಯ ಒಬ್ಬ ತರುಣನು ಕರ್ಣನ ಹತ್ತರ ಹೋಗಿ ಅರ್ಜುನನನ್ನು ಹೊಡೆಯುವಾಗ ನಾನು ನಿನಗೆ ಸಹಾಯವನ್ನು ನೀಡುವೆ ಎಂನು ಹೇಳಲಿಲ್ಲವೆ? ಆದರೆ ಕರ್ಣನು ಅದನ್ನು ತಿರಸ್ಕರಿಸಿದನು. ಹೀಗೆ ಈ ಜಾತಿಯೂ ಕುನಸಿನ ಮನಸ್ಸಿನದಿರುತ್ತದೆ. ಅದನ್ನು ಸಮೂಲ ನಾಶ ಮಾಡಲೇಬೇಕು. ನಿನಗೆ ಇದನ್ನು ಮಾಡಲು ಧೈರ್ಯವಿರದಿದ್ದರೆ, ನಿನ್ನ ಮಗನು ಆ ಧೈರ್ಯವನ್ನು ತೋರಿಸುವನು. ಕೋಮಲ ವೃತ್ತಿಯವರಿಂದ ಕ್ರಾಂತಿಯು ಎಂದೂ ಆಗಲಾರದು. ಸಮಾಜದಲ್ಲಿ ಯಾವದೇ ಬಗೆಯ ಕ್ರಾಂತಿಕಾರಕ ಬದಲಾವಣೆಗಳನ್ನು ಅವರು ಮಾಡಲಾರರು. ಅವರ ಮನಸ್ಸಿನಲ್ಲಿ ಇಚ್ಛೆ ಇದ್ದರೂ ಕೂಡ ಅವರ ಕೈಗಳಿಂದ ಕಾರ್ಯವಾಗಲಾರದು. ಜನಮೇಜಯನ ಕೈಗಳು ಅಷ್ಟು ದುರ್ಬಲನಾಗಲಾರವು. ವಜ್ರಾಯುಧದಂತೆ ನಾಗರನ್ನು ನಾಶಮಾಡಲು ಅವನ ಕೈಗಳು ಪ್ರವೃತ್ತವಾಗುವವೆಂದು ನಾನು ತಿಳಿಯುತ್ತೇನೆ. ನನ್ನ ವಿಚಾರಗಳು ಅವನಿಗೆ ಮನಗಾಣುವವು. ನೀನೇ ಮನಗಂಡಿದ್ದರೆ, ಆ ಕಾರ್ಯವು ತೀವ್ರವಾಗಿ ಆಗುತ್ತಿತ್ತು. ಇರಲಿ, ನಾನು ಹೋಗಿಬರುವೆ. ಈ ಚಿತ್ರಶಾಲೆಯಲ್ಲಿಯ ಖಾಂಡವವನ ದಹನವನ್ನು ತೋರಿಸುವ ಚಿತ್ರವನ್ನು ಮಾತ್ರ ನೋಡುತ್ತ ಕೂಡ್ರು. ಆರ್ಯರ ವಿಜಯ ರಥವು ಈ ಮಾರ್ಗದಿಂದ, ಈ ದಿಕ್ಕಿನಿಂದ ಹೋಗಬೇಕು. ತಿಳಿಯಿತೇ ?' ಎಂದು ವಕ್ರತುಂಡನು ಹೊರಟು ಹೋದನು.

ಪರೀಕ್ಷಿತನು ಹೊರಗೆ ಬಂದು ನೋಡುತ್ತ ನಿಂತನು. ವಕ್ರತುಂಡನು ಗಟ್ಟಿಯಾಗಿ ಕಾಲುಗಳನ್ನಪ್ಪಳಿಸುತ್ತ ನಾಗರನ್ನು ಕಾಲಕೆಳಗೆ ತುಳಿಯುತ್ತಿರುವನೋ ಏನೋ ಎಂಬಂತೆ ಹೋಗುತ್ತಿದ್ದನು. ವಕ್ರತುಂಡನು ಹೋದನು. ಅರಮನೆಯ ಉಪವನದಲ್ಲಿ ಹಾದು ಹೋದ. ಅರಮನೆಯ ತೋಟಕ್ಕೆ

ಪರೀಕ್ಷಿತನು, ಬಂದನು. ಆಗ ಸೂರ್ಯನು ಮೇಘ ಮಂಡಲವನ್ನು ದಾಟುತ್ತ ಸಾಗಿಹೋಗಿದ್ದನು. ಪರೀಕ್ಷಿತನು ವಿಚಾರ ಮಗ್ನನಾಗಿ ನಿಂತಿದ್ದನು. ' ನನ್ನ ಆಯುಷ್ಯದಲ್ಲಿಯೇ ನಾನು ಭಯಂಕರವಾದ ದೃಶ್ಯವನ್ನು ನೋಡಬಹುದೇ ? ನನ್ನ ರಾಜ್ಯದಲ್ಲಿಯೇ ಯಾದವಿಯು ಪ್ರಾರಂಭವಾಗಬಹುದೇ ? ನನ್ನ ಮಗನೇ ಈ ದ್ವೇಷಾಗ್ನಿಯನ್ನು ಹೊತ್ತಿಸಲು ಕಾರಣನಾಗುವನೇ ? ಇದಾಗುವ ಮೊದಲೇ ನನ್ನ ಕಣ್ಣು ಮುಚ್ಚಿದರೆ ಎಷ್ಟು ಒಳ್ಳೇದಾದೀತು ' ಎಂಬ ವಿಚಾರಗಳು ಅವನ ಮನಸ್ಸಿನಲ್ಲಿ ಸುಳಿಯ ಹತ್ತಿದವು. ಅವನು ಆಕಾಶದ ಕಡೆಗೆ ಮೋರೆಮಾಡಿ, ಕೈಜೋಡಿಸಿ 'ದೇವಾ ನನ್ನನ್ನು ತೆಗೆದುಕೊಂಡು ಹೋಗು ' ಎಂದು ಪ್ರಾರ್ಥಿಸಿದನು.



# ೪

“ ವತ್ಸಲಾ ! ಏಳು. ನೀನು ನದಿಗೆ ಸ್ನಾನಕ್ಕೆ ಬರುವಿಯುಲ್ಲವೇ ! ಏಳು. ಪೊತ್ತು ಏರಿದೆ ನೋಡು ! ಆಕಳುಗಳು ಅಡವಿಗೆ ಹೋದವು. ಹಕ್ಕಿಗಳು ಕಲಕಲ ಶಬ್ದ ಮಾಡುತ್ತಿರುವವು. ಎಲ್ಲರೂ ತಮ್ಮ ತಮ್ಮ ಅಂಗಳದಲ್ಲಿ ಥಳಿ, ರಂಗೋಲಿಗಳನ್ನು ಹಾಕಿರುವರು ನೋಡು ! ಏಳು, ಏಳು. ಎದ್ದಿಯಾ ! ” ಎಂದು ಸುಶ್ರುತೆಯು ಪ್ರೇಮದಿಂದ ಎಬ್ಬಿಸಿದಳು.

“ ಅಜ್ಜೀ ! ನನಗೆ ಮಲಗಗೊಡು. ನನಗೆ ಏನೂ ಬೇಡ. ನನಗೆ ಸ್ನಾನಬೇಡ, ಜ್ಞಾನಬೇಡ, ನಾನು ಎದ್ದಿರುವೆ. ಜ್ಞಾನದ ವಿಚಾರವನ್ನು ಮಾಡುತ್ತಿರುವೆ. ಜ್ಞಾನವೆಂದರೆ ಶೂನ್ಯ. ಪರಬ್ರಹ್ಮವೆಂದರೆ ಸತ್ತೂ ಅಲ್ಲ ಅಸತ್ತೂ ಅಲ್ಲ. ಈ ಎರಡರ ಆಚೆ ಆವನಿರುವ. ಅವನು ದುಷ್ಟನೂ ಅಲ್ಲ ಸುಷ್ಟನೂ ಅಲ್ಲ. ಎಂದು ಶ್ರುತಿಗಳು ಹೇಳುತ್ತಾರೆ. ಹೀಗಿದ್ದರೆ ನೀತಿಯ ಅರ್ಥವೇನು ? ನಾವು ಒಳ್ಳೇರೀತಿಯಿಂದಲೇ ಏಕೆ ನಡೆಯಬೇಕು? ಕೆಟ್ಟ ರೀತಿಯಿಂದ ಏಕೆ ನಡೆಯಬಾರದು? ಹೀಗೇಕೆ ? ಒಳ್ಳೇಯದು ಹಾಗೂ ಕೆಟ್ಟದು ಇವೆರಡೂ; ತತ್ವದ ದೃಷ್ಟಿಯಿಂದ ಒಂದೇ ಇದ್ದರೆ, ಮನುಷ್ಯನು ಮನ ಬಂದಂತೆ ನಡೆದರೆ, ತಪ್ಪೇನು ? ಬೆಳಿಗ್ಗೆ ಸ್ನಾನ ಮಾಡಿದರೇನು ? ಯಾವಾಗ ಮಾಡಿದರೇನು ? ಅವನು ಬೆಂಕಿ ಹಚ್ಚಿದರೇನು ? ಆರಿಸಿದರೇನು ? ಮೇಲಿನ ಬ್ರಹ್ಮೋಪದೇಶದ ಅರ್ಥವನ್ನು, ಎಲ್ಲವೂ ವ್ಯರ್ಥವೆಂದು ನಾನು ತಿಳಿದಿದ್ದೇನೆ ನಾನು ಬಿದ್ದುಕೊಂಡಿರುವೆ. ನನ್ನನ್ನು ಎಬ್ಬಿಸಬೇಡ ” ಎಂದಳು ವತ್ಸಲೆ.

“ ಹಾಗಿದ್ದರೆ ಮಲಗಿಕೊ. ಇನ್ನಷ್ಟು ಹೊದ್ದುಕೊಳ್ಳು. ನಿನಗೇಕೆ ತೊಂದರೆ. ವಿಚಾರಮಾತ್ರ ಬಹಳ ಮಾಡಬೇಡ. ಎಲ್ಲಿಯಾದರೂ ತಲೆ ಕೆಟ್ಟೀತು ?” ಎಂದು ಸುಶ್ರುತೆ ನುಡಿದಳು.

ಸುಶ್ರುತೆಯು ನದಿಗೆ ಹೋದಳು. ವತ್ಸಲೆಯು ಹಾಗೇ ಮಲಗಿದ್ದಳು. ಸ್ವಲ್ಪ ಸಮಯದಲ್ಲಿ ಕಾರ್ತಿಕನು ಅಲ್ಲಿಗೆ ಬಂದನು. "ಏಳು, ವತ್ಸಲಾ ಏಳು. ನೀನು ನದಿಗೆ ಈಸಲಿಕ್ಕೆ ಬರುವವಳಿದ್ದಿಯಲ್ಲವೇ ? ನಾನು ನದಿಯ ಮೇಲೆ ನಿನ್ನ ದಾರೀ ನೋಡಿದೆನು. ಆಜ್ಜಿ, ಸುಶ್ರುತೆಯನ್ನು ವಿಚಾರಿಸಿದೆ. ಆಕೆ ಇನ್ನು ಮಲಗಿರುವಳು ಎಂದಳು. ಇಂದು ನದಿಯ ಮೇಲೆ ಎಷ್ಟು ಗದ್ದಲ ! ಎಷ್ಟು ಹುಡುಗಿಯರು ಈಸು ಕಲಿಯಲು ಬಂದಿದ್ದಾರೆ ? ನೀನೂ ಕಲಿಯುವಿಯಲ್ಲವೇ ? ನಡೆ " ಎಂದು ಕಾರ್ತೀಕನು ನುಡಿದನು.

" ನಾನು ಬರುವದಿಲ್ಲ. ನೀನು ಹೋಗು " ಎಂದು ಮುಸುಕಿನಲ್ಲಿಯೇ ಹೇಳಿದಳು.

"ನೀನು ಎಂದೂ ನನ್ನ ಇಚ್ಛೆಯಂತೆ ನಡೆಯುವದಿಲ್ಲವೇ?" ಎಂದನು ಕಾರ್ತೀಕ.

"ನಾನು ಯಾರದಾದರೂ ದಾಸಿಯಿರುವೆನೇನು?" ಎಂದು ವತ್ಸಲೆಯು ರೇಗಿಗೆದ್ದಳು.

" ನೀನು ದಾಸಿಯಲ್ಲ. ಆದರೆ ನಾನು ಮಾತ್ರ ನಿನ್ನದಾಸ." ಎಂದನು ಕಾರ್ತೀಕ

" ದಾಸರು ಅಂಗಳದಲ್ಲಿರಬೇಕು. ಹೀಗೆ ಮನೆಯಲ್ಲಿ ಬಂದು, ಅಧಿಕಾರದಿಂದ ಮಾತನಾಡಬಾರದು. ಕಾರ್ತೀಕ ನೀನು ಮೂರ್ಖನಿರುವಿ. ಸ್ತ್ರೀಯರು ದಾಸ್ಯತ್ವವನ್ನು ಅಪೇಕ್ಷಿಸುತ್ತಾರೆ. ಅದು ಯಾರ ದಾಸ್ಯತ್ವವನ್ನು ಬಲ್ಲಿಯಾ ? ಯಾರು ತಮ್ಮ ದಾಸರಾಗುವರೋ ಅವರ ದಾಸ್ಯತ್ವವನ್ನು ಅವರು ಎಂದೂ ವಹಿಸುವದಿಲ್ಲ. ಯಾವದು ಸಿಗುವದಿಲ್ಲವೋ ಅದರ ಬೆನ್ನು ಹತ್ತಬೇಕು. ಯಾವದು ಸಿಗುವದೋ ಅದನ್ನು ತಿರಸ್ಕರಿಸಬೇಕು. ಸಹಜವಾಗಿ ಸಿಗುವ ವಸ್ತುವಿಗೆ ಬೆಲೆಯಿಲ್ಲ. ನೀನು ನನ್ನನ್ನು ಏನೂ ಬೆಲೆಯಿಲ್ಲದಲೆ ದೊರಕಿಸಬೇಕೆಂದಿರುವಿಯಾ ? ಆದರೆ ನಾನು ಯಾರ ಸಲುವಾಗಿ ನನ್ನ ಪ್ರಾಣವನ್ನೇ ಕೊಡಲು ಸಿದ್ಧಳಾಗುವೆನೋ ಅವನೇ ನನ್ನವನು. ನೀನು ನಿನ್ನ ಜೀವನಕ್ಕೆ ಏನು ಬೆಲೆ ಕೊಟ್ಟಿರುವಿ ? ಸ್ವತಃ ನೀನು ಒಂದು ಕಾಸಿನ ಬೆಲೆಯನ್ನೂ ಇಟ್ಟುಕೊಂಡಿರುವದಿಲ್ಲ. ಬೆಲೆಯಿಲ್ಲದ ವಸ್ತುವು ವತ್ಸಲೆಗೆ ಬೇಡ" ವತ್ಸಲೆ ಎಂದಳು.

"ನನಗೂ ಕೂಡ ಬೆಲೆಯಿಲ್ಲದ ವಸ್ತುವು ಬೇಡ. ನೀನು ಬಹಳ ಬೆಲೆಯುಳ್ಳವಳೆಂದೇ ನಾನು ನಿನ್ನ ಬೆನ್ನುಹತ್ತಿದ್ದೇನೆ. ಈ ಜನ್ಮದಲ್ಲಿ ಇಲ್ಲದಿದ್ದರೂ ಮುಂದಿನ ಜನ್ಮದಲ್ಲಿ ಸಿಕ್ಕೇಸಿಗುವಿ. ನಾನು ಆಶಾವಾದಿಯಿರುವೆ." ಎಂದನು ಕಾರ್ತೀಕ.

"ಮುಂದಿನ ಜನ್ಮವೇ ? ಯಾರು ನೋಡಿದ್ದಾರೆ ಮುಂದಿನ ಜನ್ಮ? ಹೋದವರಾರೂ ಮರಳಿ ಬಂದಿಲ್ಲ. ಅವರು ಬಂದು ಏನೂ ಹೇಳಿಲ್ಲ" ಎಂದು ವತ್ಸಲೆಯು ನುಡಿದಳು.

"ದೂರದ ತೋಟದಲ್ಲಿರುವ ಅರಳಿದ ಹೂಗಳನ್ನು ನಾವು ನೋಡಿರದಿದ್ದರೂ ಅಲ್ಲಿಯ ಸುಗಂಧವು ಬಂದೊಡನೆಯೇ ಹೂಗಳು ಅರಳಿವೆಯೆಂದು ನಾವು ಅನ್ನುವದಿಲ್ಲವೇ ? ಅದರಂತೆಯೇ ಜೀವನದಲ್ಲಿ ಅನೇಕ ಸಂಗತಿಗಳ ಅನುಭವಗಳು ( ಸುಗಂಧ ) ನಮಗೆ ಬರುತ್ತವೆ. ಆದರಿಂದ ನಾವು ಹೂಗಳು ಅರಳಿವೆಯೆಂದು ತಿಳಿಯುತ್ತೇವೆ. ಇಲ್ಲದಿದ್ದರೆ ಜೀವನದಲ್ಲಿ ಈ ಅನುಭವಗಳು ಯಾಕೆ ಬರಬೇಕು ? ವತ್ಸಲೆ, ನಾವು ಯಾವನನ್ನಾದರೂ ನೋಡುತ್ತೇವೆ. ನೋಡಿದೊಡನೆಯೆ ಅವನ ಬಗೆಗೆ ಆತ್ಮೀಯತೆ ಎನಿಸಿಬಿಡುತ್ತದೆ. ಇವರಲ್ಲಿ ಏನೂ ಅರ್ಥವಿಲ್ಲವೇ ? ಆದರೆ ನಾವು ಅದನ್ನು ಅನುಭವಿಸುತ್ತೇವೆ. ಅದನ್ನು ಸ್ವೀಕರಿಸುತ್ತೇವೆ. ಯಾವ ಯಾವ ವ್ಯಕ್ತಿಗಳು ಭೆಟ್ಟಿಯಾಗುವರೋ ಆಯಾ ವ್ಯಕ್ತಿಗಳ ಜೀವನದಲ್ಲಿಯ ಸುಗಂಧ ಕೋಶವು ಹೊರಬಂದು, ನಮ್ಮ ಜೀವನವನ್ನು ಅರಳಿಸುತ್ತದೆ." ಎಂದು ಕಾರ್ತೀಕನು ಉದ್ಗಾರ ತೆಗೆದನು.

"ನಿನ್ನನ್ನು ನೋಡಿ, ನನ್ನ ಜೀವನವು ಚಿಗುರೊಡೆಯುವದಿಲ್ಲ. ನನ್ನ ಜೀವನಕ್ಕೆ ಚಿಗುರೊಡೆಸುವ ವಸಂತನು ಇನ್ನೂ ಬರಬೇಕಾಗಿದೆ. ನನ್ನ ಜೀವನದಲ್ಲಿ ಇನ್ನೂ ಶಿಶಿರವೇ ಇದೆ. ಹೂಗಳಿಲ್ಲ, ಕಾಯಿಗಳಿಲ್ಲ, ಕಮಲಗಳಿಲ್ಲ, ಭೃಂಗಗಳಿಲ್ಲ, ಏನೂ ಇಲ್ಲ ಕಾರ್ತೀಕಾ, ನೀನು ಹೋಗು. ನನಗೆ ಸಂತಾಪವನ್ನು ಕೊಡಬೇಡ" ಎಂದು ವತ್ಸಲೆಯು ನಿಟ್ಟುಸುರು ಬಿಟ್ಟಳು.

"ನನ್ನ ಇರುವಿಕೆಯಿಂದ ನಿನಗೆ ತೊಂದರೆಯಾದರೂ ಆಗುವದು. ನನ್ನ ಅಸ್ತಿತ್ವದಿಂದ ನಿನಗೆ ಏನೂ ಪರಿಣಾಮವಾಗವೆಂದಿಲ್ಲ ಇಂದು

ತೊಂದರೆಯಾಗುವದು, ಅದೇ ನಾಳೆ ಸುಂದರವಾದೀತು. ನಾನಂತೂ ಆಶಾವಾದಿ. ಹೋಗಿಬರುತ್ತೇನೆ" ಎಂದು ಕಾರ್ತಿಕನು ಹೊರಟನು.

ವತ್ಸಲೆಯು ಮತ್ತೆ ಹಾಸಿಗೆಯ ಮೇಲೆ ಹೊರಳಾಡಹತ್ತಿದಳು. ಒಮ್ಮೆ ಏಳುವಳು, ಮತ್ತೆ ಮಲಗುವಳು. ಹೀಗೆಯೇ ನಡೆಯಿತು ಕೆಲವು ಹೊತ್ತು. ಆಕೆ ಇಂದು ಬಹಳ ಸುಂದಾಗಿದ್ದಳು. ಆಕೆಯ ಚಪಲತೆಯೆಲ್ಲ ಎಲ್ಲಿ ಹೋಗಿತ್ತೋ? ಆಕೆಯ ಉಲಕೋಚಿತನವು ಎಲ್ಲಿ ಅಡಗಿತ್ತೋ? ಆಕೆಯ ಮನಸ್ಸಿಗೆ ಏನು ಭಾರವಾಗಿತ್ತೋ? ಆಕೆಯ ಸ್ಫೂರ್ತಿಯನ್ನು ಏನು ಅಡಗಿಸಿತ್ತೋ? ಉನ್ಮಾದಿನಿಯಂತೆ ಆಕೆಯು ನಗಪತ್ತಿದಳು. ದೊಡ್ಡ ದನಿಯಿಂದ ನಗಹತ್ತಿದಳು. ಪುನಃ ಕಣ್ಣು ಮುಚ್ಚಿದಳು, ಗಂಭೀರಳಾದಳು. ಸ್ವಲ್ಪ ಸಮಯದಲ್ಲಿಯೇ ಎದ್ದು ನದಿಗೆ ಹೋದಳು. ನದಿಯ ಮೇಲೆ ಗದ್ದಲವು ಬಹಳವಿದ್ದಿತು. ಸುಶ್ರುತೆಯು ಸ್ವಲ್ಪ ದೂರದಲ್ಲಿ ಒಗೆಯುತ್ತಲಿದ್ದಳು. ವತ್ಸಲೆಯು ಆಕೆಯ ಎದುರಿಗೆ ಹೋಗಿ ನಿಂತಳು.

"ಬಂದೆಯಾ! ಬಾ. ನಿನಗೆ ಮೈಯಲ್ಲಿ ನೆಟ್ಟಗೆನಿಸದಿದ್ದರೆ ಸ್ನಾನ ಮಾಡಬೇಡ" ಎಂದು ಅಜ್ಜಿಯು ಹೇಳಿದಳು.

"ನದಿಯೆಂದರೆ ತಾಯಿ. ಈ ತಾಯಿಯ ಸಹಸ್ರ ತರಂಗಗಳು ನನ್ನ ಅಂಗಕ್ಕೆ ತಾಕಿ, ನನ್ನ ಉದಾಸೀನತೆಯು ದೂರವಾಗುವದು. ಈ ತಾಯಿಯ ಸಹಸ್ರಾರು ಕೈಗಳು ನನಗೆ ಸ್ನಾನಕ್ಕೆ ಹಾಕುವವು. ನನ್ನ ಮಾಲಿನ್ಯವನ್ನು ಕಳೆಯುವವು. ನಾನು ಜಿಗಿಯಲಾ?" ಎಂದು ಆಕೆಯು ವಿಚಾರಿಸಿದಳು.

"ಜಿಗಿಯಬೇಡ. ನಿನಗೆ ಈಸಲು ಚೆನ್ನಾಗಿ ಬರುವದಿಲ್ಲ. ಇಲ್ಲಿಯೇ ನಿಂತು ಮೈ ತೊಳೆದುಕೋ. ಈ ತಣ್ಣಗಿನ ನೀರಿನಲ್ಲಿ ಬಹಳ ವೇಳೆ ನಿಲ್ಲಬೇಡ" ಎಂದು ಸುಶ್ರುತೆಯು ಕಕ್ಕುಲತೆಯಿಂದ ನುಡಿದಳು.

"ನದಿಯು ಏಕೆ ಮುಳುಗಿಸುವಳು? ತಾಯಿಯ ಪ್ರೇಮಸಾಗರ ದಲ್ಲಿ ಮುಳುಗಿ, ಯಾರಾದರೂ ಮಡಿದಿರುವರೋ? ಅಮೃತಸಿಂಧುವಿನಲ್ಲಿ ಜಿಗಿಯಲು ಭೀತಿಯೇಕೆ? ಇಲ್ಲ! ಈ ಲೋಕಮಾತೆಯು ನನ್ನನ್ನು

ಮುಳುಗಿಸುವದಿಲ್ಲ. ನಾನು ಹಾರುವೆ” ಎಂದು ವತ್ಸಲೆಯು ನಗುತ್ತ ನುಡಿದಳು.

“ವತ್ಸಲೇ, ಮುದುಕಿಯಾದ ನನ್ನ ಪರೀಕ್ಷೆಯನ್ನು ಮಾಡಬೇಡ. ನಿನ್ನ ಸಲುವಾಗಿ ನಾನು ಜೀವಿಸಿರುವೆ” ಎಂದು ಸದ್ಗದಿತಳಾಗಿ ಸುಶ್ರುತೆಯು ನುಡಿದಳು.

“ಒಳ್ಳೇದು, ನೀನು ಅಳಬೇಡ. ನಾನು ಈ ಕಲಕಾದ ನೀರಿನಲ್ಲಿಯೇ ಮೈ ತೊಳೆಯುವೆ” ಎಂದಳು.

ವತ್ಸಲೆಯು ಬಹಳ ಮುಂದೆ ಹೋದಳು. ಅಲ್ಲಿ ನೀರು ಹೆಚ್ಚಿರಲಿಲ್ಲ. ಆದರೆ ಸೆಳವು ಮಾತ್ರ ಬಹಳವಿತ್ತು.

“ಅಜ್ಜೀ, ನದಿಯು ನನ್ನನ್ನು ಎಳೆಯುತ್ತಿದೆ. ಬಾ ಎಂದು ಕರೆಯುತ್ತಿದೆ. ಒತ್ತಾಯಪಡಿಸುತ್ತಿದೆ.” ಎಂದು ಚೇಷ್ಟೆಮಾಡುತ್ತ ವತ್ಸಲೆಯು ಮಾತನಾಡಿದಳು.

“ಇತ್ತ ಕಡೆಗೆ ಬಾ. ಅಲ್ಲಿ ಸೆಳವು ಬಹಳವಿದೆ. ಒಮ್ಮೆ ಕಾಲು ಜಾರಿದರೆ, ಸಾವರಿಸಿಕೊಳ್ಳಲು ಆಗಲಿಕ್ಕಿಲ್ಲ. ಮುಂದೆ ಮಡುವಿದೆ” ಎಂದು ಅಜ್ಜಿಯು ಒದರಿದಳು.

ಇಷ್ಟರಲ್ಲಿಯೇ ಸುಂಯ್ ಸುಂಯ್ ಎಂಬ ಸಪ್ಪಳವು ಕೇಳಬರಹತ್ತಿತು. ಏನು, ಇದು ಸಮುದ್ರದ ಸಪ್ಪಳವೇ? ನದಿಯು ಸಮುದ್ರದ ಕಡೆಗೇ ಹೋಗುತ್ತಿತ್ತು. ಏನು, ಆ ಚೋರನಾದ ಸಮುದ್ರನೇ ಆಕೆಯನ್ನು ಹಿಡಿಯಲು ಈ ಬಗೆಯಾಗಿ ಧ್ವನಿಗೈಯ್ಯುತ್ತಿರುವನೇ? ಅಥವಾ ನದಿಯ ತಂದೆಯಾದ ಪರ್ವತರಾಜನು ಸಿಟ್ಟಿಗೆದ್ದು, ಆಕೆಯನ್ನು ತಿರುಗಿ ಕರೆದುಕೊಂಡು ಹೋಗಬೇಕೆಂದು ಕೂಗುತ್ತಿರುವನೇ? ಎಲ್ಲಿಯದು ಈ ಸಪ್ಪಳ?

“ಅಜ್ಜೀ! ಕೇಳಿದಿಯಾ ಈ ಸುಂಯ್ ಸುಂಯ್ ಸಪ್ಪಳವನ್ನು. ನನ್ನ ಎದೆಯಲ್ಲಿಯೂ ಹಾಗೆಯೇ ಸಪ್ಪಳವಾಗುತ್ತಲಿದೆ. ಸಮುದ್ರವು ಬಿರುಗಾಳಿಯಿಂದ ಉಕ್ಕೇರುವಂತಿದೆ. ಏನಿದು? ಜೀವನದ ಈ ಧ್ವನಿಯು ಹೊರಗೆ ಕೇಳಿಸುತ್ತಿರುವದೇ! ಈ ಧ್ವನಿಯು ಮೋಜೆನಿಸಿದರೂ ಅಪಸ್ವರವಾಗಿದೆ. ಮೈಮೇಲೆ ಮುಳ್ಳುಬರುವಂತಹ ಸ್ವರವಿದು. ಮೈಯಲ್ಲಿ

ನಡುಗು ಹುಟ್ಟಿಸುವ ಸ್ವರವಿದು. ಆದರೆ ಅಜ್ಜೀ, ಈ ಸ್ವರವು ಉನ್ಮಾದವನ್ನುಂಟು ಮಾಡುತ್ತದೆ. ಎಂತಹ ಸ್ವರವಿದು!

ಓಡಿರಿ! ಓಡಿರಿ! ಪ್ರಚಂಡ ಮಹಾಪೂರವು ಬರತೊಡಗಿದೆ. ಓಡಿರಿ! ಎಲ್ಲರೂ ನೀರಿನಿಂದ ಹೊರಬನ್ನಿ! ಬನ್ನಿರಿ ಬೇಗನೆ! ಹುಡುಗರಿರಾ! ಹೆಣ್ಣುಮಕ್ಕಳೇ ಬೇಗಬನ್ನಿ, ನೋಡಿರಿ, ಹೊಲಸು ತೇಲಿಬರುತ್ತಲಿದೆ! ಪ್ರಚಂಡ ಮಹಾಪೂರವು ಬರುತ್ತದೆ, ನೀರು ಏರಹತ್ತಿತು. ಬಂದಿತು! ಬಂದಿತು!! ಸುಂಯ್ ಸಪ್ಪಳ ಮಾಡುತ್ತ ನೆರೆ ಬಂದಿತು! ಓಡಿರಿ, ಓಡಿರಿ!! ಎಂದು ಎಲ್ಲ ಕಡೆಗೂ ಗದ್ದಲ.

ಯಾರ ತಂಬಿಗೆಯು ಉಳಿಯಿತು, ಯಾರ ಸಾಮಾನಗಳು ಕಳಚಿ ಬಿದ್ದವು. ಬಟ್ಟೆಬರಿಗಳನ್ನೆಲ್ಲ ಬಿಟ್ಟೇ ಓಡಿದರು. ಜನ ಗಾಬರಿಗೊಂಡು ಓಡಹತ್ತಿತು. ನೀರಿನಲ್ಲಿ ಬೇಗನೆ ಓಡುವದು ಹೇಗೆ? ಯಾರು ಬಿದ್ದರು, ಎದ್ದರು, ಮುಂದೆ ನಡೆದರು. ಒಮ್ಮೆ ದಂಡೆಗೆ ಬಂದು ಹತ್ತಿದರು.

ಆದರೆ ವತ್ಸಲೆಯು ಎಲ್ಲಿದ್ದಳು? ನೀರಿನಲ್ಲಿಯೇ ಕುಣಿಯುತ್ತಿದ್ದಳು. ಆಕೆಗೆ ಬೆದರಿಕೆಗಿದರಿಕೆ ಇರಲಿಲ್ಲ. ಸಪ್ಪಳ ಹೇಗೆ ಕೇಳಿಸುತ್ತಿದೆ ನೋಡಿರಿ? ಒಳಗೂ ಹೊರಗೂ ಒಂದೇ ಶಬ್ದ! ಇದೇ ಸಮಾಧಿಯೇ! ಇದೇ ಏನು ಅನಾಹುತ ಧ್ವನಿ! ಇದು ಯಾರ ಧ್ವನಿಯು? ವಿಲಕ್ಷಣವಾದ ಧ್ವನಿಯು, ಎನ್ನುತ್ತ ಕುಣಿಯುತ್ತಿದ್ದಳು.

ಅಜ್ಜಿಯು ಗಾಬರಿಯಾಗಿ "ವತ್ಸಲೇ! ಬೇಗ ಬಾ! ನೀರು ಬಂದಿತು! ಹೀಗೇಕೆ ಕುಣಿಯುತ್ತೀ? ನಿನ್ನನ್ನು ಎಳೆತರಲು ನನಗೆ ಸಾಮರ್ಥ್ಯವಿಲ್ಲ. ನೀನು ಬರುವಷ್ಟರಲ್ಲಿಯೇ ನೀರು ಬರುವದು. ವತ್ಸಲೇ! ಏಳು ಬಾ! ಬೇಗ ಬಾ!,, ಎಂದು ಕೂಗುತ್ತಿದ್ದಳು. ಒದರುತ್ತಿದ್ದಳು. ಅಲ್ಲಿಗೆ ಕಾರ್ತೀಕನು ಬಂದನು. ಅವನು ಬಹಳ ಗಾಬರಿಯಾಗಿದ್ದಂತೆ ಕಾಣುತ್ತಿತ್ತು. 'ಕಾರ್ತೀಕಾ ಆ ಹುಡುಗೆಯನ್ನು ಎಳೆದುಕೊಂಡು ಬಾ! ಹೋಗು, ನೋಡುತ್ತೀ ಏನು? ನೋಡು ನೀರು ಏರಿತು! ಓಡು, ಎಂದು ಅಜ್ಜಿಯು ಹೇಳಿದಳು.

' ಕಾರ್ತೀಕನೇ ಬಾ! ಬೇಗ ಬಾ! ಈ ನೀರು ನನಗೆ ಮೇಲೆ ಬರಗೊಡಲೊಲ್ಲದು! ಇಲ್ಲಿ ಶೆಳವು ಬಹಳವಿದೆ. ನನ್ನ ಕಾಲುಗಳು ನಿಲ್ಲ

ಲೊಲ್ಲವು. ಬೇಗ ಬಾ! ಹಿಡಿ ನನ್ನ ಕೈಯನ್ನು. ಎಂದು ವತ್ಸಲೆಯು ಒದರಹತ್ತಿದಳು.

"ಕಾರ್ತೀಕಾ ಹೋಗಬೇಡ, ನೀರು ಬಂದಿತು ನೋಡು. ನೀನೂ ಸಾಯುವಿ, ನೀನೂ ಮುಣುಗುವಿ,, ಎಂದು ಯಾರೋ ಹೇಳಿದರು.

'ಬಾ! ಕಾರ್ತೀಕಾ! ಬಾ! ಕೈ ಕೈ ಹಿಡಿಯೋಣ ಬಾ! ನದಿಯು ಉಕ್ಕೇರಿ ಬರುತ್ತಲಿದೆ. ನೀನೂ ಉಕ್ಕೇರಿ ಬಾ! ನನ್ನ ಹೃದಯದಲ್ಲಿ ಸುಂಯ್ ಎಂಬ ಧ್ವನಿಯಾಗುತ್ತಿದೆ. ನಿನಗೆ ಅನಿಸುವದಿಲ್ಲವೇ?' ಎಂದು ವತ್ಸಲೆಯು ಕೂಗಿದಳು.

ಭಯಂಕರವಾದ ನೆರೆ ಬಂದಿತು. ಅಪಾರವಾದ ನೀರು, ಕೆಂಪು ನೀರು, ಕಾರ್ತೀಕನು ಬೆದರಿ ಹಿಂದೆ ಸರಿದನು. ಆದರೆ ವತ್ಸಲೆ? ಎಲ್ಲಿರುವಳು ವತ್ಸಲೆ?

"ಅಯ್ಯೋ ನನ್ನ ವತ್ಸಲಾ! ಯಾರಾದರೂ ಉಳಿಸಿರಿ, ಆ ಹುಚ್ಚು ಹುಡಿಗೆಯನ್ನು. ಯಾರಾದರೂ ನೀರಲ್ಲಿ ಧುಮಿಕಿರಿ. ಯಾರೂ ಇಲ್ಲವೇ ಇಲ್ಲಿ? ಕಾರ್ತೀಕಾ! ನೀನು ಮುಂದಕ್ಕೆ ಏಕೆ ಹೋಗಲಿಲ್ಲ? ಆಕೆಯನ್ನು ಎಳೆತರುತ್ತಿದ್ದಿ: ಆಕೆಯು ನಿನ್ನನ್ನು ಕರೆಯುತ್ತಿದ್ದಳು. ನೀನು ಆಕೆಯನ್ನು ತರಬಲ್ಲೆಯಾ! ಯಾರನ್ನಾದರೂ ಕರೆ. ಕೂಗು ಕೂಗು! ನೋಡು! ನೋಡು! ಆಕೆಯು ಹೋಗುತ್ತಿದ್ದಾಳೆ! ಅಯ್ಯೋ! ಅಯ್ಯೋ! ಒಬ್ಬಳೇ ಒಬ್ಬ ಮೊಮ್ಮಗಳು! ಯಾರಾದರೂ ಉಳಿಸಿರಿ! ಹಾಯ್, ದೇವಾ! ಆಕೆಯನ್ನು ಉಳಿಸುವವರು ಯಾರೂ ಇಲ್ಲವೇ? ಎಲ್ಲರೂ ಹೇಡಿಗಳೇ? ಎಲ್ಲರೂ ಷಂಢರೇ? ಯಾರೂ ತರುಣರಿಲ್ಲವೇ? ಅಯ್ಯೋ ನೋಡಿರಿ. ಯಾರಾದರೂ ಹೋಗಿ ಆಕೆಯ ಕೈಗಳನ್ನು, ಹಿಡಿಯಿರಿ? ಅದು ಆಕೆಯ ಸೆರಗು. ಎಳೆಯಿರಿ ಅದನ್ನು ಹಿಡಿದು. ಆಕೆಯ ಕೂದಲನ್ನು ಹಿಡಿದು ಎಳೆಯಿರಿ! ಯಾರಾದರೂ ಹೋಗಿರಿ! ಹಾರಿರಿ, ನೀರಿನಲ್ಲಿ, ಅಯ್ಯೋ! ವತ್ಸಲೆ ಹೋದಳು! ಹೋದಳು!! ಎಂದು ಸುಶ್ಯಕೆಯು ಅಳಹತ್ತಿದಳು.

'ನಾಗನನ್ನೆ ಮದುವೆಯಾಗುವೆ, ಎಂದು ಹೇಳುವ ಈಕೆ ಸಾಯಲಿ. ಯಾವನಾದರೂ ನಾಗನಿದ್ದರೆ ತೆಗೆದಾನು ಆಕೆಯನ್ನು! ಆರ್ಯಕುಮಾರರಾದ ನಾವು ಯಾಕೆ, ನೀರಲ್ಲಿ ಧುಮುಕಬೇಕು? ನಾಗರನ್ನು ಉಳಿಸಲು

ಹೋಗಿ ಇವಳ ತಂದೆ ತಾನೇ ಸತ್ತ. 'ನಾಗರನ್ನೇ ಮದುವೆಯಾಗುವೆ, ಎಂದೆನ್ನುವ ಈಕೆಯೂ ನಡೆದಳು ನದಿಯಲ್ಲಿ ತೇಲುತ್ತ. ಆರ್ಯರು ನಾಗರಿಂದ ದೂರವಿರಬೇಕೆಂದೇ ಈ ಸೃಷ್ಟಿಯ ಸಂದೇಶವಲ್ಲವೇ ಇದು!' ಎಂದು ನಾಗದ್ವೇಷಿಗಳು ಮಾತನಾಡಿದರು.

"ಜಗಳಕ್ಕೆ ಇದು ಸಮಯವೇ? ಅಯ್ಯೋ! ಗುಣಿಯಾದ ಆ ನನ್ನ ಮಗ ಹೋದ! ಯಾರಾದರೂ ಇಲ್ಲಿ ನಾಗರಿರುವಿರಾ! ಮನುಷ್ಯತ್ವವಿದ್ದ ಆರ್ಯದಾರಾವರೂ ಇರುವಿರಾ! ಉದಾರಚರಿತರಾದ ಆರ್ಯರಾರೂ ಇಲ್ಲವೇ? ನೋಡಿರಿ, ಅವೇ ಆಕೆಯ ಕೂದಲು, ಹಾರಿರಿ ಯಾರಾದರು?" ಎಂದು ಸುಶ್ರುತೆಯು ಅಳಹತ್ತಿದ್ದಳು.

ನೋಡ ನೋಡುತ್ತ ಯಾರೋ ಓಡಿಬಂದು ನೀರಲ್ಲಿ ಧುಮುಕಿದರು. ಉಕ್ಕೇರುತ್ತಿರುವ ಆ ಪ್ರಚಂಡ ಪ್ರವಾಹದಲ್ಲಿ ಧುಮುಕಿದರು. ವತ್ಸಲೆಗೆ ಆಧಾರವಾಗಬೇಕೆಂದು ತಮ್ಮ ದೇಹವನ್ನು ಪ್ರವಾಹದಲ್ಲಿ ಎಸೆದರು. ನದಿಯು ನೊರೆಯ ಹಾರವನ್ನು ಈ ಸಾಹಸಿಗೆ ಹಾಕಿತು. ಮಾರುಗೈಗಳನ್ನು ಹಾಕುತ್ತ ವೇಗದಿಂದ ನಡೆದ, ಆದದೇನು? ಅವನೂ ಕಾಣದಂತಾದ? ಅವನೂ ಮುಣುಗಿದನೇ? ಮತ್ತೆ ಮೇಲೆ ಬಂದನು. ನಡೆದನು ಮುಂದೆ. ನದಿಯು ಅಪಹರಿಸಿದ ಸ್ತ್ರೀರತ್ನವನ್ನು ಇವನು ತಿರುಗಿ ತರುವನೇ? ಆ ನದಿಯು ನಿರ್ಮಲವಾದ ಜೀವರತ್ನವನ್ನು ಒಯ್ದು, ಪ್ರಿಯಕರನಾದ ರತ್ನಾಕರನಿಗೆ ಅರ್ಪಿಸುವವಳಿದ್ದಳು. ಆದರೆ, ಈ ತರುಣನು ಅದನ್ನು ನಿಷ್ಫಲಗೊಳಿಸುವನೇ?

ದಂಡೆಯಮೇಲೆ ಜನ ನೋಡುತ್ತಲಿತ್ತು. ನದಿಗುಂಟ ಜನ ಓಡುತ್ತಿತ್ತು. 'ಅಲ್ಲಿ ನೋಡಿರಿ ಆಕೆ ಕಾಣುತ್ತಿದ್ದಾಳೆ! ಎಂದು ಹುಡುಗರು ಓಡುತ್ತಿದ್ದರು. ಅತ್ತ ನೀರಿನ ಪ್ರವಾಹ. ಇತ್ತ ಜನರ ಪ್ರವಾಹ.

ಆ ತರುಣನು ನದಿಯ ಪ್ರವಾಹದ ಸಂಗಡ ಹೋರಾಡುತ್ತಿದ್ದನು. ತನ್ನ ಗುರಿಯನ್ನು ಸಾಧಿಸಲು ಧಡಪಡಿಸುತ್ತಿದ್ದನು. ಅವನು ಒಮ್ಮೆಲೆ ದೊಡ್ಡ ಮಾರುಗೈಯ್ಯನ್ನು ಹಾಕಿದನು. ಆದರೆ ಅದು ಆಕೆಯ ಕೂದಲವಲ್ಲ. ಒಂದು ಬಳ್ಳಿಯಿದ್ದಿತು. ಮೋಸವಾಯಿತು. ಮತ್ತೆ ನೀರಲ್ಲಿ ಮುಳುಗಿದನು. ಏನು ಸಿಕ್ಕಿತು? ಸೀರೆಯ ಸೆರಗೋ ಅಲ್ಲ. ಅದು ಹಾವಸೆ. ಅವನಿಗೆ

ರತ್ನವು ಸಿಗುವದಿಲ್ಲವೇ ? ಸಿಕ್ಕಿತು, ಸಿಕ್ಕಿತು, ಏನೋ ಸಿಕ್ಕಿತು. ನೋಡಿರಿ, ಹಿಡಿಯುತ್ತಿದ್ದಾನೆ. ಅಹುದು, ವತ್ಸಲೆಯೇ ಆಕೆ. ಆಕೆಯ ತಲೆಯನ್ನು ಹಿಡಿದು ತರುತ್ತಿದ್ದಾನೆ. ಒಂದೇ ಕೈಯಿಂದ ತೆರೆಗಳೊಡನೆ ಹೋರಾಡುತ್ತಿದ್ದಾನೆ. ಅವನದು ಒಂದೇ ಕೈ ? ಸಿಟ್ಟಿಗೆದ್ದ ನದಿಯ ಸಹಸ್ರಾರು ಕೈಗಳು. ಆದರೆ ಆದೊಂದೇ ಕೈಯು, ನದಿಯ ಸಹಸ್ರಾರು ಕೈಗಳಿಗೆ ಭಾರಿಯಾಗಿದೆ ನಿಸ್ವಾರ್ಥ ಸೇವೆಯ ಶಕ್ತಿಯು ಆದರಲ್ಲಿ ತುಂಬಿತ್ತು. ' ಅಹೇತುಕ ಪ್ರೇಮ ಶಕ್ತಿಯು ಆ ಕೈಯಲ್ಲಿ ಸಂಚಾರವಾಗಿತ್ತು. ಜಗತ್ತಿನ ಸಲುವಾಗಿ ಹಾಲಾಹಲವನ್ನು ಕುಡಿಯುವ ಶಂಕರನ ಜಟೆಯಲ್ಲಿಯ ಒಂದು ಕೂದಲು, ಕುಬೇರನ ಸರ್ವಸಂಪತ್ತಿಗಿಂತಲೂ ಹೆಚ್ಚು ಬೆಲೆಯುಳ್ಳದ್ದೂ ಭಾರವುಳ್ಳದ್ದೂ ಅಲ್ಲವೇ ? ರುಕ್ಮಿಣಿಯ ಒಂದು ತುಳಸೀ ಪತ್ರವು ಸತ್ಯಭಾಮೆಯ ಅಪಾರ ಸಂಪತ್ತಿನಗಿಂತಲೂ ಹೆಚ್ಚಲ್ಲವೇ ? ಭಾರವು ವಸ್ತುವಿನದಿರದೆ, ಆ ವಸ್ತುವಿನಲ್ಲಿರುವ ಭಾವದಲ್ಲಿದೆ. ಆ ತರುಣನ ಕೈಯೇನೋ ಸಾದಾ ಕೈ. ನದಿಯ ಶಕ್ತಿಯ ಮುಂದೆ ಅದು ಅಶಕ್ತವೇ ಸರಿ. ಆದರೆ ಆ ಕೈಯು ಈಗ ಮಂತ್ರಿಸಲ್ಪಟ್ಟಿತ್ತು ಅಪಾರ ಸಾಮರ್ಥ್ಯವು ಆದರಲ್ಲಿ ಸಂಚಾರವಾಗಿತ್ತು. ಈ ದೊಡ್ಡ ತ್ಯಾಗದ ಮುಂದೆ, ನದಿಯು ಬಾಗಿತು. ನಾಚಿತು, ವೇಗವನ್ನು ಕಡಿಮೆ ಮಾಡಿತು. ನೋಡಿರಿ ! ಆ ತರುಣನು ದಂಡೆಯ ಕಡೆಗೆ ವೇಗವಾಗಿ ಬರುತ್ತಿದ್ದಾನೆ. ಎಲ್ಲ ಶಕ್ತಿಯನ್ನುಪಯೋಗಿಸಿ ಅವನು ಬರುತ್ತಿದ್ದಾನೆ. ಬಂದನು, ಬಂದನು, ಅಚೇತನಳಾದ ವತ್ಸಲೆಯನ್ನು ತೆಗೆದುಕೊಂಡು ಬಂದನು. ಈಗ ಅವನ ಕಾಲುಗಳು ನೆಲಕ್ಕೆ ಹತ್ತಿವೆ. ಈಗ ಅವನು ಆಕೆಯನ್ನು ಬೆನ್ನಮೇಲೆ ಹೊತ್ತನು. ಆಕೆಯ ಕಣ್ಣು ಮುಚ್ಚಿದ ಚೇತನರಹಿತವಾದ ಶರೀರವು ಅವನ ಹೆಗಲಮೇಲಿದ್ದಿತು.

ದಂಡೆಯ ಮೇಲೆ ಶಹಾಬಾಸ ! ಶಹಾಬಾಸ ! ಎಂದು ಸಾವಿರಾರು ಕಂಠಗಳು ಜಯಘೋಷವನ್ನು ಮಾಡಿದವು. ನಾಗದ್ವೇಷಿಗಳು ಮಾತ್ರ ಮನಸ್ಸಿನಲ್ಲಿ ಬೆಂದು ಕುದಿಯಹತ್ತಿದರು. ದಣಿದ ಆ ತರುಣನಿಗೆ ಸಹಾಯ ನೀಡಲು ಕಾರ್ತಿಕನು ಮುಂದೆ ಬಂದನು.

" ನಿಲ್ಲು, ನಾನು ಆಕೆಯನ್ನು ಎತ್ತಿಕೊಳ್ಳುವೆ. ನೀನು ದಣಿದಿರುವಿ." ಎಂದನು ಕಾರ್ತಿಕ.

" ಆಹುದು ನಾನು ದಣಿದಿರುವೆ. ಆಕೆಯನ್ನು ತೆಗೆದುಕೊ " ಎಂದು ಆ ತರುಣನು ನುಡಿದನು.

ಕಾರ್ತೀಕನು ವತ್ಸಲೆಯನ್ನೆತ್ತಿಕೊಂಡು ದಂಡೆಗೆ ಬಂದನು.

" ಕಾರ್ತೀಕಾ ! ಆಕೆಯ ಹೃದಯವು ಹಾರುತ್ತಿದೆಯೇ " ಎಂದು ಸುಶ್ರುತೆಯು ಕೇಳಿದಳು.

" ಆಕೆಯನ್ನು ಕುಂಬಾರನ ಚಕ್ರದಮೇಲೆ ಹಾಕುವಾ " ಎಂದನು ಕಾರ್ತೀಕ.

ಕಾರ್ತೀಕನು ವತ್ಸಲೆಯನ್ನು ತೆಗೆದುಕೊಂಡು ಕುಂಬಾರನ ಕಡೆಗೆ ಹೋದನು. ಸಂಗಡ ಸುಶ್ರುತೆಯಿದ್ದಳು. ಉಳಿದ ಜನರೂ ಇದ್ದರು. ಅಲ್ಲಿ ಜನ ಕೂಡಿತು. ಕುಂಬಾರನು ಚಕ್ರವನ್ನು ಗರಗರನೆ ತಿರುಗಿಸಿದನು. ಹೊಟ್ಟೆಯೊಳಗಿಂದ ನೀರು ಹೊರಬಿದ್ದಿತು. ವತ್ಸಲೆಯು ಉಸುರಾಡಿಸ ಹತ್ತಿದಳು. ಕಣ್ಣುಗಳನ್ನು ಆಕೆಯು ತೆರೆದಳು.

ವತ್ಸಲೆಯನ್ನು ಮನೆಗೆ ಕರೆದುಕೊಂಡು ಬಂದರು. ಉಣ್ಣೆಯ ವಸ್ತ್ರಗಳನ್ನು ಹೊಚ್ಚಿದರು. ಬಿಸಿನೀರನ್ನು ಕುಡಿಯಲು ಕೊಟ್ಟರು. ಸುಶ್ರುತೆಯು ಆಕೆಯ ಹತ್ತರವೇ ಕುಳಿತಿದ್ದಳು. "ಆದರೆ ಆ ಪ್ರಾಣದಾತನಾದ ತರುಣನೆಲ್ಲಿ ? ಆ ತ್ಯಾಗಿಯೆಲ್ಲಿ ? ಏನು, ಎಲ್ಲರೂ ಅವನನ್ನು ಮರೆತು ಬಿಟ್ಟರೋ ? ಹದವಿದ್ದಾಗ ಕದ ತೆಗೆ ಎಂಬುದೇ ಜಗತ್ತಿನ ರೀತಿ. ' ಕಾರ್ತೀಕಾ ಆ ತರುಣನು ಎಲ್ಲಿ ? ಪಾಪ, ಅವನು ತನ್ನ ಪ್ರಾಣವನ್ನು ಸಂಕಟದಲ್ಲಿ ನೂಕಿ, ವತ್ಸಲೆಯನ್ನುಳಿಸಿದ. ಪ್ರಚಂಡ ಪ್ರವಾಹದಲ್ಲಿ ಧುಮುಕಿ, ಆಕೆಯನ್ನು ಮೇಲೆ ತೆಗೆದುಕೊಂಡುಬಂದ. ಎಂತಹ ಸಾಹಸ. ಅವನು ಯಾರು ? ಎಲ್ಲಿಂದ ಬಂದ ? ಹೋಗು. ಅವನನ್ನು ಬೇಗನೆ ಕರೆದುಕೊಂಡು ಬಾ ' ಎಂದಳು. ಸುಶ್ರುತೆ.

ಕಾರ್ತೀಕನು ನದಿಗೆ ಹೋದನು. ಅಲ್ಲಿ ಯಾರೂ ಇರಲಿಲ್ಲ. ನದಿಯು ಮಾತ್ರ ತುಂಬಿ ಹರಿಯುತ್ತಿತ್ತು. ಅಷ್ಟರಲ್ಲಿ ದೂರದಲ್ಲಿ ಒಬ್ಬ ಮನುಷ್ಯನು ಕಂಡ. ಅವನೇ ಆ ತರುಣ. ಆ ಕೆಂಪು ನೀರಿನಿಂದ ತುಂಬಿ ಹರಿಯುವ ನದಿಯ ಕಡೆಗೆ ನೋಡುತ್ತ ಆ ತರುಣನು ನಿಂತಿದ್ದನು. ಯಾವ ನದಿ

ಯೊಡನೆ ಅವನು ಹೋರಾಡಿದ್ದನೋ ಆ ನದಿಯನ್ನೇ ನೋಡುತ್ತ ನಿಂತಿದ್ದನು. ಕಾರ್ತೀಕನು ಓಡುತ್ತ ಅವನೆಡೆಗೆ ಹೋದ.

"ಏನು ಮಾಡುತ್ತಿರುವಿ ಇಲ್ಲಿ? ನೀನು ಬಹಳ ದಣಿದಿರುವಿ" ಎಂದನು.

"ಅಹುದು ನಾನು ದಣಿದಿದ್ದೇನೆ. ನನಗೆ ವಿಶ್ರಾಂತಿಯು ಬೇಕಾಗಿದೆ. ವಿಶ್ರಾಂತಿಯನ್ನು ತೆಗೆದುಕೊಳ್ಳಲು ಹೋಗಬೇಕೆಂದಿದ್ದೇನೆ." ಎಂದನು ಆ ತರುಣ.

"ನಡೆ, ವಿಶ್ರಾಂತಿಯನ್ನು ತೆಗೆದುಕೊಳ್ಳಲಿಕ್ಕೆ. ಅಜ್ಜಿ ಸುಶ್ರುತೆಯು ನಿನ್ನನ್ನು ಕರೆದಿದ್ದಾಳೆ. ನೀನು ಯಾವ ಹುಡುಗೆಯನ್ನು ಬದುಕಿಸಿದೆಯೋ, ಆಕೆಯ ಅಜ್ಜಿಯೇ ಅವಳು. ಹುಡುಗೆಯು ಬದುಕಿದಳು. ಬೇಗನೆ ಆಕೆಗೂ ಗುಣವಾಗುವದು. ಬೆಚ್ಚಗಿನ ವಸ್ತ್ರಗಳಲ್ಲಿ ಆಕೆಯನ್ನು ಇಟ್ಟಿದ್ದಾರೆ. ನಡೆ, ಹೋಗುವಾ. ಅಲ್ಲಿಯೇ ವಿಶ್ರಾಂತಿಯನ್ನು ತೆಗೆದುಕೊಳ್ಳುವಿಯಂತೆ" ಎಂದನು ಕಾರ್ತೀಕ.

"ಅದೇನು ಕ್ಷಣಹೊತ್ತಿನ ವಿಶ್ರಾಂತಿ. ಅದರಿಂದ ನನಗೆ ಸಮಾಧಾನವಿಲ್ಲ. ನನಗೆ ಸ್ಥಿರವಾದ ವಿಶ್ರಾಂತಿಯು ಬೇಕಾಗಿದೆ. ಈ ನದಿಯು ಅದನ್ನು ಕೊಡುವಳು. ಆಕೆಯ ವಸ್ತುವೊಂದನ್ನು ನಾನು ಕಸಿದು ತಂದಿದ್ದೇನೆ. ಅದರ ಬದಲು ಇನ್ನೊಂದನ್ನು ಆಕೆಗೆ ಕೊಡುವೆ. ಬೆಲೆಯುಳ್ಳ ವಸ್ತುವನ್ನು ತಂದಿರುವೆ, ಬೆಲೆಯಿಲ್ಲದ್ದನ್ನು ಆಕೆಗೆ ಕೊಡುವೆ." ಎಂದನು ಆ ತರುಣ.

"ನಿನ್ನ ಜೀವವು ಕ್ಷುದ್ರವೆ ?" ಎಂದು ಕಾರ್ತೀಕನು ವಿಚಾರಿಸಿದನು.

"ಯಾವ ಜೀವನವು ಜಗತ್ತಿಗೆ ಉಪಯೋಗವಿಲ್ಲವೋ ಆ ಜೀವನವು ಕ್ಷುದ್ರವಲ್ಲವೇ ? ನನ್ನ ಜೀವನದ ಅವಶ್ಯಕತೆ ಯಾರಿಗಿದೆ ? ನನಗೆ ತಂದೆ ತಾಯಿಗಳಿಲ್ಲ, ಅಣ್ಣನಿಲ್ಲ, ಅಕ್ಕನಿಲ್ಲ, ಗೆಳೆಯರೂ ಇಲ್ಲ. ನಾನು ಯಾರ ಸಲುವಾಗಿ ಬದುಕಬೇಕು ?" ಎಂದು ಆ ತರುಣನು ಉತ್ತರಿಸಿದನು.

"ಮುಳುಗುವವರನ್ನು ಉಳಿಸುವದಕ್ಕಾಗಿ, ಸಾಯುವವರನ್ನು ಬದುಕಿಸುವದಕ್ಕಾಗಿ" ಎಂದನು ಕಾರ್ತೀಕ.

ಆ ತರುಣನು ಏನೂ ಮಾತನಾಡಲಿಲ್ಲ. ಕಾರ್ತಿಕನೇ ಅವನ ಕೈ ಹಿಡಿದನು. ಅವನು ಇನ್ನೂ ಒದ್ದೆಯಲ್ಲಿಯೇ ಇದ್ದನು. ಅವನ ಅರಿವೆಗಳಿಂದ ನೀರು ಬಸಿಯುತ್ತಿತ್ತು. ಕೂದಲುಗಳಿಂದ ನೀರು ಇಳಿಯುತ್ತಿತ್ತು. ಏನು! ಅವನ ಹೃದಯದಲ್ಲಿಯ ಕರುಣವೇ ಹೊರಹರಿಯುತ್ತಿತ್ತೋ?

"ಇವನೇ ಉಳಿಸಿದವನು. ಇವನೇ ನೀರಲ್ಲಿ ಧುಮುಕಿದನು. ಹೇಗೆ ಕಾಣುತ್ತಾನೆ ನೋಡಿರಿ. ಎಷ್ಟು ಸರಳವಾದ, ಸುಂದರವಾದ ಮೂಗು. ಎಂತಹ ತೇಜಸ್ವಿಯಾದ ಕಣ್ಣುಗಳಿವು? ಶ್ರೀ ಕೃಷ್ಣ ಪರಮಾತ್ಮನು, ಹೀಗೆಯೇ ಕಾಣಿಸುತ್ತಿರಬೇಕಲ್ಲವೇ?" ಎಂದು ಹೆಣ್ಣುಮಕ್ಕಳು ಬಾಗಿಲುಗಳಲ್ಲಿಯೂ ಕಿಡಿಕಿಗಳಲ್ಲಿಯೂ ನಿಂತು ಮಾತನಾಡುತ್ತಿದ್ದರು. ಎಷ್ಟೋ ಹುಡುಗಿಯರು, ಅವನ ಮೇಲೆ ಹೂ ಮಳೆಗರೆದರು. ಅವನು ಮೇಲೆ ನೋಡಿದನು.

"ನಾನು ನಾಗ, ಆರ್ಯನಲ್ಲ ಸುಮ್ಮನೆ ಏಕೆ ಹೂ ಮಳೆಗರಿಯುವಿರಿ?" ಎಂದನಾ ತರುಣ.

"ಆರ್ಯ ಕನ್ಯೆಯರಾದ ನಾವು, ಈ ಭೇದವನ್ನು ಮನ್ನಿಸುವದಿಲ್ಲ. ಉದಾರತೆಯನ್ನೂ ತ್ಯಾಗವನ್ನೂ ನಾವು ನೋಡುವೆವು. ಇಂದು ನೀನು ಈ ಊರಲ್ಲಿಯ ಸರ್ವ ಆರ್ಯರಿಗಿಂತಲೂ ದೊಡ್ಡವನಿರುವಿಯೆಂಬುದನ್ನು ತೋರಿಸಿಕೊಟ್ಟಿರುವಿ ನಿನ್ನ ಪೂಜೆಯನ್ನು ನಮಗೆ ಮಾಡಗೊಡು. ತೆಗೆದುಕೋ ಈ ಹೂಗಳನ್ನು' ಎಂದು ಒಬ್ಬ ಹುಡುಗೆಯು ಹೂಗಳನ್ನು ಅರ್ಪಿಸಿದಳು. ಯಾರಾದರೂ ಈ ಧೈರ್ಯವನ್ನು ತೋರಿಸುವ ಆವಶ್ಯಕತೆ ಇದ್ದಿತು. ಬೀದಿ ಬೀದಿಗಳಲ್ಲೆಲ್ಲ ಹುಡುಗ ಹುಡುಗಿಯರೆಲ್ಲರೂ ಅವನಿಗೆ ಮಾಲೆಯನ್ನು ಹಾಕಿದರು. ಅವನ ಮೇಲೆ ಹೂಗಳನ್ನು ತೂರಿದರು. ನಾಗದ್ವೇಷಿಗಳು ಮನಸ್ಸಿನಲ್ಲಿಯೇ ಇದನ್ನು ಕಂಡು ಕಳವಳಗೊಳ್ಳುತ್ತಿದ್ದರು. ಆದರೆ ಆ ಪ್ರಸಂಗವೇ ಅಂತಹ ಅಪೂರ್ವವಾದುದು. ದ್ವೇಷಭಾವನೆಯು ಹೊರಬರಲು ನಾಚುತ್ತಿತ್ತು. ಮಳೆಗಾಲದಲ್ಲಿ ಹೊಲಗಳಿಗೆ ಜವುಳು ಒಡೆಯುವದು. ಕಲ್ಲುಗಳೂ ಮೃದುವಾಗುವವು. ಹಸಿ ಎನಿಸುವವು. ವತ್ಸಲೆಯು ಮಲಗಿದ್ದಳು. ಕಾರ್ತಿಕನು ಆ ಪ್ರಾಣದಾತೃವನ್ನು ಕರೆದು

ಕೊಂಡು ಬಂದನು. ಸುಶ್ರುತೆಯು ಬಾಗಿಲಲ್ಲಿಯೇ ಅವನನ್ನು ಸ್ವಾಗತಿಸಿದಳು. ಆಕೆಯ ಕಂಠವು ತುಂಬಿಬಂದಿತು.

"ಈಕೆಯನ್ನು ನೀನು ಬದುಕಿಸಿದೆ. ನನ್ನವರೆಲ್ಲ ಹೋಗಿದ್ದಾರೆ. ಉಳಿದವಳೆಂದರೆ ಈಕೆಯೊಬ್ಬಳೇ ಈಕೆಯೂ ಇಂದು ಹೊರಟಿದ್ದಳು. ಆದರೆ ಮೃತ್ಯುಂಜಯನಾದ ನೀನು ಭೆಟ್ಟಿಯಾದೆ. ಅಮೃತವನ್ನು ಕೊಟ್ಟೆ. ಬಾ, ಕುಳಿತುಕೊ. ನಿನ್ನ ಉಪಕಾರವನ್ನು ಹೇಗೆ ತೀರಿಸಲಿ? ಹೇಗೆ ಮುಕ್ತಳಾಗಲಿ. ಬಾ, ಕೂಡು. ನೀನು ಬಹಳ ದಣಿದಿರುವಿ. ಆಕೆಯನ್ನು ಎಚ್ಚರಿಸುವ ಭರದಲ್ಲಿ ನಿನ್ನನ್ನು ಮರೆತುಬಿಟ್ಟೆ. ಆದರೆ ಕಾರ್ತೀಕನಿಗೆ ನಿನ್ನನ್ನು ಕರೆದು ತರಲು ಹೇಳಿದೆ. ತಾವು ಬಂದಿರಿ. ಈ ಮನೆಯು ನಿಮ್ಮದೇ ಇದೆ. ವಿಶ್ರಾಂತಿಯನ್ನು ಪಡೆಯಿರಿ. ಹಾಸಿಕೊಳ್ಳಲು ಕೊಡಲೋ? ಮೊದಲು ಈ ಬಿಸಿಯಾದ ಹಾಲನ್ನು ಕುಡಿಯಿರಿ ನಾನು ಕಾಸಿ ಇಟ್ಟಿರುವೆ. ಮೊದಲು ಒಣ ವಸ್ತ್ರಗಳನ್ನು ಉಟ್ಟುಕೊಳ್ಳಿರಿ. ತೆಗೆದುಕೊಳ್ಳಿರಿ ಈ ವಸ್ತ್ರಗಳನ್ನು" ಎಂದು ಸುಶ್ರುತೆಯು ಸ್ವಚ್ಛವಾದ ಒಣ ವಸ್ತ್ರಗಳನ್ನು ಕೊಟ್ಟಳು. ಆ ತರುಣನು ಒಣ ವಸ್ತ್ರಗಳನ್ನುಟ್ಟು ಮೈಮೇಲೆ ಹೊತ್ತುಕೊಂಡು, ವ್ಯಾಘ್ರಾಸನದ ಮೇಲೆ ಕುಳಿತುಕೊಂಡನು. ಬಿಸಿ ಬಿಸಿ ಹಾಲನ್ನು ಕುಡಿದನು. ಊಟ ಮಾಡಿ ಮಲಗಿಕೊಂಡನು.

"ಅಜ್ಜೀ, ಇನ್ನೂ ಇವರು ಏಕೆ ಏಳಲೊಲ್ಲರು? ಏನಾದರೂ ಅಪಾಯವಾಗಿದೆಯೇ? ಅತಿ ಶ್ರಮದಿಂದ ಗ್ಲಾನಿ ಬಂದಿದೆಯೇ? ಇಲ್ಲವೆ ಸುಮ್ಮನೆ ನಿದ್ರೆಮಾಡುತ್ತಿರುವರೇ?" ಎಂದು ವತ್ಸಲೆಯು ಕೇಳಿದಳು.

"ಈಗ ಏಳಬಹುದು. ಸಾಯಂಕಾಲದ ತಂಪು ಗಾಳಿಗೆ ಎಚ್ಚರವಾಗಬಹುದು. ಅವನ ಉಪಕಾರವೆಷ್ಟು?" ಎಂದಳು ಸುಶ್ರುತಾ.

"ಅಜ್ಜೀ, ಅವರ ಎದೆಯನ್ನು ನೋಡು, ಎಷ್ಟು ವಿಶಾಲವಿದೆ! ಇದು ಭಾಗ್ಯದ ಲಕ್ಷಣವೆಂದು ತಿಳಿಯುವದಿಲ್ಲವೇ?" ಎಂದು ವತ್ಸಲೆಯು ವಿಚಾರಿಸಿದಳು.

"ಯಾರು ತಮ್ಮ ಪ್ರಾಣವನ್ನು ಪರರಿಗೋಸ್ಕರವಾಗಿ ಸಂಕಟದಲ್ಲಿ ನೂಕುವರೋ ಅವರಿಗಿಂತ ಹೆಚ್ಚಿನ ಭಾಗ್ಯವಂತರಾರು? ನಿಜವಾಗಿಯೂ ಅವರೇ ಮಹಾತ್ಮರು" ಎಂದಳು ಸುಶ್ರುತೆ.

"ಅವರ ಹೆಗಲಮೇಲೆ ಎಂತಹ ಚಿನ್ಹವದು? ಸುಟ್ಟ ಕಲೆಯೋ ಅಥವಾ ಮತ್ತೇನಾದರೂ ಹತ್ತಿರಬಹುದೋ? ಈ ಕಲೆಯನ್ನು ನೋಡು. ಸತ್ಯವಲ್ಲವೇ?" ಎಂದು ವತ್ಸಲೆಯು ಮೆಲ್ಲನೆ ನೋಡುತ್ತ, ತೋರಿಸುತ್ತ ಮಾತನಾಡಿದಳು.

"ಅವನು ನಿನ್ನನ್ನು ನೀರಿನಿಂದ ಉಳಿಸಿದನು. ಮತ್ತೊಬ್ಬರನ್ನು ಬೆಂಕಿಯಿಂದ ಉಳಿಸಿರಬಹುದು. ಅದು ವೀರರಿಗೆ ಭೂಷಣ" ಎಂದಳು ಸುಶ್ರುತೆ.

ಆ ತರುಣನು ಎಚ್ಚತ್ತನು. ಒಮ್ಮೆಲೆ ಎದ್ದು ಕುಳಿತನು. "ನೀವು ಸುಖವಾಗಿರುವಿರಾ?" ಎಂದು ಸುಶ್ರುತೆಯು ವಿಚಾರಿಸಿದಳು.

"ಆಹುದು." ಎಂದು ಅವನು ಉತ್ತರಿಸಿದನು.

"ಅಕಸ್ಮಾತ್ತಾಗಿ ತಾವು ಎಲ್ಲಿಂದ ಬಂದಿರಿ? ದೇವರೇ ನಿಮ್ಮನ್ನು ಕರೆತಂದನು. ತಮ್ಮ ಊರು ಯಾವದು? ತಮ್ಮ ಹೆಸರೇನು?" ಎಂದು ಸುಶ್ರುತೆಯು ವಿಚಾರಿಸಿದಳು.

"ನನಗೆ ಊರು ಇಲ್ಲ. ನಾನು ಎಲ್ಲಿ ಹೋಗುವೆನೋ ಅದೇ ನನ್ನ ಊರು. ನಾನು ಒಬ್ಬನೇ ಇರುವೆ. ಜಗತ್ತಿನಲ್ಲಿ ಪ್ರೇಮವೆಲ್ಲಿರುವದೆಂಬ ದನ್ನು ನೋಡುತ್ತ, ತಿರಗುತ್ತಲಿರುವೆ. ಎಲ್ಲೆಡೆಯಲ್ಲ ದ್ವೇಷ ಹಾಗೂ ಮತ್ಸರಗಳು ತುಂಬಿ ತುಳುಕುತ್ತಿವೆ. ಆರ್ಯ ಹಾಗೂ ನಾಗರಲ್ಲಿ ಪ್ರಚಂಡ ಕಲಹಾಗ್ನಿಯು ಹೊತ್ತುತ್ತಲಿದೆ. ಬೇರೆ ಬೇರೆ ಸ್ಥಳಗಳಲ್ಲಿ ನಾನು ಅದನ್ನು ನೋಡುತ್ತಲಿದ್ದೇನೆ., ಆರ್ಯ ತರುಣರಲ್ಲಿ ದ್ವೇಷದ ಸಂಘಟನೆಯು ನಡೆ ದಿದೆ. ನಾಗರಲ್ಲಿಯೂ ನಡೆದಿದೆ. ನನಗೆ ದ್ವೇಷದ ಹವೆಯು ಮಾನಿಸುವ ದಿಲ್ಲ. ನನಗೆ ಸಂಕಟವಾಗುತ್ತಲಿದೆ. ನಾನು ಎಲ್ಲಿ ಹೋಗುವೆನೋ ಅಲ್ಲಿ ಈ ದ್ವೇಷವು ನನಗೆ ಕಾಣುತ್ತಲಿದೆ. ಈ ಊರ ಕಡೆಗೆ ನಾನು ಬಂದೆ. ನದಿಯ ಮೇಲೆ ನಿಂತಿದ್ದೆ. ಸುಂಯ್ ಎಂಬ ಸಪ್ಪಳ ಕೇಳಿದೆ.

ದೇವರ ಕರೆ ಬಂದಂತೆ ಭಾಸವಾಯಿತು. ಅನಂತ ಜೀವನವು ಕರೆಯುತ್ತಿದೆ. ಇಷ್ಟರಲ್ಲಿ ಗದ್ದಲವು ಕೇಳಿಸಿತು. ನೀರಲ್ಲಿ ಹಾರಿದೆ. ಬದುಕಿದರೆ ಇರ್ವರೂ ಬದುಕುವಾ. ಇಲ್ಲದಿದ್ದರೆ ನಾನೂ ಹೋಗಲು ಉತ್ಸುಕನಿದ್ದೆ. ಸುಂಯ್ ಎಂಬ ಸಪ್ಪಳವು ನನ್ನನ್ನು ಕರೆಯುತ್ತಲೇ ಇತ್ತು." ಎಂದನು ಆ ತರುಣ.

"ಆಸ್ತಿಕ ಋಷಿಯ ಆಶ್ರಮಕ್ಕೆ ನೀವು ಎಂದಾದರೂ ಹೋಗಿದ್ದಿರಾ ? ಅವರು ನವಸಂಸ್ಕೃತಿಯ ನಿರ್ಮಾತೃ. ನಾಗ ಹಾಗೂ ಆರ್ಯರಲ್ಲಿ ಐಕ್ಯವಾಗಬೇಕೆಂದು ಅವರು ಪ್ರಯತ್ನಿಸುವರು. ಅವರಿಗೆ ನಾವು ಸಹಾಯ ವನ್ನು ಮಾಡೋಣ! ಎಲ್ಲಿ ಎಲ್ಲಿ ದ್ವೇಷವು ಹಬ್ಬಿಸಲ್ಪಡುತ್ತಿದೆಯೋ ಆ ಸ್ಥಳಗಳಲ್ಲೆಲ್ಲ ಪ್ರೇಮದ ಪ್ರಸಾರ ಮಾಡುವಾ. ಪ್ರೇಮಧ್ವಜವನ್ನು ಹಿಡಿದು ಕೊಂಡು, ನಾರದರಂತೆ ಬ್ರಹ್ಮವೀಣೆಯನ್ನು ಬಾರಿಸುತ್ತ, ಐಕ್ಯದ ಗೀತವನ್ನು ಹಾಡುತ್ತ, ನಿರ್ಮಲ ವಾಯುವಿನಂತೆ, ಸಂಚರಿಸಬೇಕೆಂದು ಒಮ್ಮೊಮ್ಮೆ ಅನಿಸುತ್ತದೆ. ಸ್ನೇಹದ ಸಂದೇಶವನ್ನು ಬೀರುತ್ತ, ನಿರ್ಮಲ ವಾದ ಝುರಿಯಂತೆ ಎಲ್ಲ ಕಡೆಗೂ ಹೋಗಬೇಕೆನಿಸುವದು. ಆದರೆ ನನ್ನ ವಿಚಾರಗಳು ಮನಸ್ಸಿನಲ್ಲಿಯೇ ಉಳಿಯುತ್ತವೆ. ಸಮಾನಧರ್ಮಿ ಯಾರಾದರೂ ದೊರೆತರೆ ಮಾತ್ರ ಅವುಗಳಿಗೆ ಮೂರ್ತಸ್ವರೂಪವು ಬರುವದು. ಆಶ್ರಮ ದಲ್ಲಿಯ, ಸತ್-ಅಸತ್‌ಗಳ ಆಚೆಗಿರುವ ಬ್ರಹ್ಮನ ಬಗೆಗೆ ನನಗೆ ಬೇಸರ ಬಂದಿದೆ. ಪ್ರತ್ಯಕ್ಷ ಅನುಭೂತಿಗಾಗಿ ನಾನು ಹಾತೊರೆಯುತ್ತಿದ್ದೇನೆ. ಇಂದು ನೀವು ಅನುಭೋಗಿಸಿದಂತೆ! ಎರಡನೆಯವರ ಜೀವನದಲ್ಲಿ ಬೆರೆ ಯುವದೇ ಅನುಭೂತಿ," ಎಂದು ವತ್ಸಲೆಯು ಮಾತನಾಡಿ ಸುಮ್ಮನಾದಳು.

'ನಾನಿನ್ನು ಹೋಗಿಬರುವೆ. ನನಗೆ ಇನ್ನು ಅಪ್ಪಣೆ ಕೊಡಿ, ಎಂದನು ಆ ತರುಣ.

'ಈಗ ಎಲ್ಲಿಗೆ ಹೋಗುವಿರಿ. ? ಈ ಊರಲ್ಲಿ ಯಾರ ಪರಿಚಯವೂ ನಿಮ ಗಿಲ್ಲ. ರಾತ್ರಿ ಎಲ್ಲಿ ಹೋಗುವಿರಿ ? ಇಲ್ಲಿಯೇ ಇರ್ರಿ. ಊಟಮಾಡಿರಿ. ಹೋಗುವದಾದರೆ ಬೆಳಿಗ್ಗೆ ಹೋಗುವಿರಂತೆ. ಒಲ್ಲೆವೆನ್ನಬೇಡಿರಿ' ಎಂದು ಸುಶ್ರುತೆ ಆಗ್ರಹ ಪಡಿಸಿದಳು.

"ನನಗೆ ಭಯವಿಲ್ಲ. ನಾನು ರಾತ್ರಿಯೂ ಸಂಚರಿಸುವೆ. ನಾಗರಿಗೆ ಭಯವೆಲ್ಲಿಯದು ? ಘೋರಾರಣ್ಯದಲ್ಲಿ ನಾನೊಬ್ಬನೇ ಕಲ್ಲು ಬಂಡೆಯ ಮೇಲೆ, ರಾತ್ರಿ ಮಲಗುವೆ. ನನಗೆ ಮನೆ ಸೇರುವದಿಲ್ಲ. ಮನೆಯು

ಸಂಕುಚಿತವೆನಿಸುತ್ತದೆ. ಮನೆಯಕೊಂಡವಾಡೆಯು ಮನಸ್ಸನ್ನು ಮುದುಡುವದು. ನಾವು ಮನೆಮಾರುಗಳನ್ನು ಮಾಡಹತ್ತಿದರೆ, ದ್ವೇಷ, ಮತ್ಸರಗಳು ಬೆಳೆಯಹತ್ತುತ್ತವೆ. ಆಸಕ್ತಿಯು ಬೆಳೆಯುತ್ತದೆ. ಆರ್ಯರು ಮನೆಮಾರುಗಳ ಬೆನ್ನುಹತ್ತಿ, ನಾಗರನ್ನು ಓಡಿಸಹತ್ತಿದ್ದಾರೆ. ಒಳ್ಳೇ ಭೂಮಿಗಳೆಲ್ಲ ತಮಗೇ ಬೇಕೆಂದು ಅವರಹಟ. ಇಂದು ನಾಗರೊಡನೆ ಜಗಳಾಡುವರು. ನಾಳೆ ತಮ್ಮತಮ್ಮಲ್ಲಿಯೇ ಹೊಡೆದಾಡುವರು. ಕುರುಕ್ಷೇತ್ರದಲ್ಲಿ ಹೋರಾಡಿಲ್ಲವೇ! ಹೊಡೆದಾಡಿದರು, ಮಡಿದರು. ಒಮ್ಮೆ ಜಗಳದ ಚಟ ಬಿದ್ದರೆ, ಜಗಳವಾಡುವವರು ಯಾರಾದರೂ ಬೇಕೇ ಆಗುತ್ತದೆ. ಸರ್ವರೂ ಒಂದೆಡೆಯಲ್ಲಿ ನಮ್ರರಾಗಿ ಒಬ್ಬರನೊಬ್ಬರು ಕೂಡಿಕೊಂಡು ಇರಬೇಕೆಂದು ಮಾನವ ಜನಾಂಗಕ್ಕೆ ಒಂದು ದಿವಸ ಅನಿಸದೇ ಇರದು. ಸ್ವತಃ ಬದುಕ-ಬೇಕು, ಎರಡನೆಯವರಿಗೂ ಬದುಕಗೊಡಬೇಕು. ಸಹಕರಿಸಬೇಕು. ಆದರೆ ಅಂತಹ ಪವಿತ್ರದಿನವು ಯಾವಾಗ ಬರುವದು ? " ಎಂದು ಭವಿಷ್ಯದ ಕಡೆಗೆ ನೋಡುತ್ತ ಆ ತರುಣನು ಮಾತನಾಡಿದನು.

" ದೊಡ್ಡ ದೊಡ್ಡ ಮರಗಳು, ಕ್ಷಣದಲ್ಲಿ ಬೆಳೆಯಲಾರವು. ಕ್ಷಣದಲ್ಲಿಯೇ ಹುಟ್ಟುವಂಥವು, ಕ್ಷಣದಲ್ಲಿಯೇ ಸಾಯುವವು. ನಿಮಿಷಾರ್ಧದಲ್ಲಿ ಹುಟ್ಟುವ ಜೀವ ಜಂತುಗಳು, ಸಾಯುವದು ಕೂಡ ನಿಮಿಷಾರ್ಧದಲ್ಲಿಯೇ. ದೊಡ್ಡಧ್ಯೇಯ, ದೊಡ್ಡವಿಚಾರ, ಬೆಳೆಯಲು ಬಹಳ ಸಮಯವು ಬೇಕು. ಇದು ಸೃಷ್ಟಿಯ ನಿಯಮ. ಇದನ್ನು ಮನಸ್ಸಿನಲ್ಲಿಟ್ಟುಕೊಂಡೇ ನಾವು ಧೈರ್ಯದಿಂದ ನಡೆಯಬೇಕು. " ಎಂದು ಸುಶ್ರುತೆಯೆಂದಳು.

" ಅಜ್ಜೀ, ಹೊರಗೆ ನೋಡು, ಎಂತಹ ಸುಂದರ ಪ್ರಕಾಶ ಬಿದ್ದಿದೆ. ಹಳದಿಯ ಪ್ರಕಾಶ. ಇಂತಹದನ್ನು ನಾನು ಎಂದೂ ನೋಡಿಲ್ಲ. ಆಕಾಶಕ್ಕೆಲ್ಲ ಬಂಗಾರದ ನೀರನ್ನುಣಿಸಿದಂತಾಗಿದೆ. ಆ ದಿವ್ಯ, ಭವ್ಯ ನೋಟವನ್ನು ನೋಡಲು ಹೊರ ಅಂಗಳಕ್ಕೆ ನಡೆ. ಮೋಡಗಳು ಎಲ್ಲಿಯೂ ಕಾಣಿಸುವದಿಲ್ಲ. ಈ ಗಿಡಗಳು ಎಷ್ಟು ಚಂದ ಕಾಣುತ್ತಿವೆ. ಏನು ಬಂಗಾರದ ಮಳೆಯೇ ಆಗುತ್ತಿದೆಯೇ ? ಎಂದೂ ನಾನು ಇಂತಹ ದೃಶ್ಯವನ್ನು ನೋಡಿರಲಿಲ್ಲ" ಎಂದು ವತ್ಸಲೆಯು ಕುಣಿಯುತ್ತ ಚಪ್ಪಾಳೆಯನ್ನು ಬಾರಿಸಹತ್ತಿದಳು.

" ನಾನು ಹಿಮಾಲಯದಲ್ಲಿ ಇಂತಹ ದೃಶ್ಯವನ್ನೊಮ್ಮೆ ನೋಡಿದ್ದೆ. ಕೆಳಗೆ ಶುಭ್ರವಾದ, ಸ್ವಚ್ಛವಾದ ಬರ್ಫ. ಮೇಲೆ ಹಳದಿಯ ಬಣ್ಣದ ಅನಂತ ಆಕಾಶ. ಕೆಳಗೆ ಬೆಳ್ಳಿಯ ಶಿಖರ, ಮೇಲೆ ಬಂಗಾರದ ಛತ್ರಿ" ಎಂದನಾ ತರುಣ.

" ನಾವು ನದಿಗೆ ಹೋಗೋಣ. ಅಲ್ಲಿ ಈ ದೃಶ್ಯವು ಬಹಳ ರಮಣೀಯವಾಗಿ ಕಂಡೀತು. ನದಿಯಲ್ಲಿ ಅದರ ಪ್ರತಿಬಿಂಬವು ಬಿದ್ದಿದ್ದೀತು. ನದಿಯು ಬಂಗಾರದ್ದೇ ಆಗಿರಬೇಕು. ಥಳಥಳ ಹೊಳೆಯುತ್ತಿರಬೇಕು. ನೀವು ಬರುವಿರಾ ? ಅಜ್ಜೀ, ಬರುತ್ತೀಯಾ? " ಎಂದು ಉತ್ಸುಕಳಾಗಿ ವತ್ಸಲೆಯು ವಿಚಾರಿಸಿದಳು

" ನೀವು ಹೋಗಿರಿ, ನಾನು ಅಡಿಗೆಯನ್ನು ಮಾಡುವೆ. ಕತ್ತಲೆಯಾಗುವ ಮೊದಲೇ ಬನ್ನಿರಿ. " ಎಂದು ಸುಶೃತೆ ಹೇಳಿದಳು.

" ಇವರಿಗಂತೂ ಕತ್ತಲೆಯ ರೂಢಿಯೇ ಇದೆ. ಅವರು ಕತ್ತಲೆಯಲ್ಲಿಯೇ ತಿರುಗಾಡುವವರು. ಕತ್ತಲೆಯಲ್ಲಿಯೂ ಇವರು ಬೆಳಕು ಕೊಡುವರು. ಬೀಳುವವರಿಗೆ ಆಧಾರವನ್ನೀಯುವರು. ಕತ್ತಲೆ ಬಿದ್ದರೆ ಕೈ ಹಿಡಿಯುವಿರಲ್ಲವೇ ? '' ಎಂದು ನಗುತ್ತ ವತ್ಸಲೆ ನುಡಿದಳು.

" ನೀರಲ್ಲಿ ಮುಳುಗುವಾಗ ಎತ್ತಿರುವೆ. ಕತ್ತಲೆಯಲ್ಲಿ ಬಿದ್ದರೆ ಎತ್ತುವೆ. ಬೇಗನೆ ನಡೆ. ಇಲ್ಲದಿದ್ದರೆ ಆ ದೃಶ್ಯವು ಮಾಯವಾದೀತು. ಇಂತಹ ಬಂಗಾರದ ವರ್ಣವು ಬಹಳ ಸಮಯ ಇರುವದಿಲ್ಲ. ದೈವೀ ಕ್ಷಣವು ಕೂಡಲೇ ಹೋಗುವದು. ಕ್ಷಣ ಹೊತ್ತು ಮಾತ್ರ, ದೇವನು ಇಂತಹ ವೈಭವವನ್ನು ತೋರಿಸುವನು. ಮಾನವರಿಗೆ ತನ್ನ ವೈಭವದ ಕಲ್ಪನೆಯನ್ನು ತಂದು ಕೊಡವನು. ಮಾನವರಿಗೆ ತಮ್ಮ ಬೆಳ್ಳಿ, ಬಂಗಾರದ ಮೇಲಿನ ಗರ್ವವು ಕಡಿಮೆಯಾಗಲೆಂದು ಸೃಷ್ಟಿಯು, ಇಂತಹ ಭವ್ಯದರ್ಶನವನ್ನು ಮಾಡಿಸುತ್ತದೆ ಆಕಾಶದಲ್ಲಿ ಎಲ್ಲ ಮೋಡಗಳು ಸುವರ್ಣಘಟ್ಟೆಯಂತೆ ಕಾಣುತ್ತವೆ. ಭವ್ಯ ಬಂಗಾರದ ವರ್ಣದಿಂದ ಆಕಾಶವೇ ಬಳಿಯಲ್ಪಟ್ಟಿದೆ. ಮಹಾನ್ ವಸ್ತುಗಳ ಮುಂದೆ ವಿರೋಧವು ಅಡಗುತ್ತದೆ. ನಮಗೂ ಅದರೊಡನೆ ಬೆರೆಯ ಬೇಕೆನಿಸುತ್ತದೆ. ಇಲ್ಲದಿದ್ದರೆ ನಾವು ನಗೆಗೀಡಾಗುವೆವು. ಈ ಬಂಗಾರದಂತಹ ಆಕಾಶ

ದಲ್ಲಿ ಒಂದು ಕಪ್ಪು ನೋಡವು ಬೇರೆಯಾಗಿದ್ದರೆ ಅದು ನಮಗೆ ರುಚಿಸುತ್ತಿರ ಲಿಲ್ಲ" ಎಂದನಾ ತರುಣ.

"ತಮ್ಮ ಸ್ವತಃಹದ ಅಸ್ತಿತ್ವವನ್ನು ಕಾಯ್ದುಕೊಳ್ಳಬೇಕೆನ್ನುವವರ ಗತಿಯೇನು? ಅವರಿಗೆ ನಿಮ್ಮ ಬಂಗಾರಕ್ಕಿಂತಲೂ ತಮ್ಮ ಜೀವನದ ಮಣ್ಣೇ ಮೇಲೆನಿಸಿದರೆ ತಪ್ಪು ಏನು? ನಿಜವಾಗಿಯೂ ವಿಚಾರ ಮಾಡಿದರೆ, ಬಂಗಾರವೂ ಮಣ್ಣೇ ಅಲ್ಲವೇ? ಮಣ್ಣಿನ ಶುದ್ಧ ವಿಕಾಸವೇ ಬಂಗಾರ. ಒಂದೇ ಬಣ್ಣವು ಕಾಣಲಿ ಅಥವಾ ಅನೇಕ ಬಣ್ಣಗಳಾಗಿ ಕಾಣಲಿ ಅದರ ಮೂಲದಲ್ಲಿರುವ ವಸ್ತುವು ಒಂದೇ. ಆಕಾಶದಲ್ಲಿ ಈ ಬಣ್ಣವು ಬದ ಲಾಗಬಹುದು. ಆದರೆ ಮೂಲವಾದ ನೀಲ ಬಣ್ಣವು ಮಾತ್ರ ಎಂದೂ ಬದಲಾಗುವದಿಲ್ಲ. ಅಲ್ಲವೇ? ಓ ಹೋ! ನದಿ ಬಂದಿತು. ನಮ್ಮ ಹಿಂದೆ ಮಕ್ಕಳೂ ಬರುತ್ತಿದ್ದಾರೆ" ಎಂದಳು ವತ್ಸಲೆ.

ಇಬ್ಬರೂ ನದಿಯ ದಂಡೆಯ ಮೇಲೆ ನಿಂತಿದ್ದಾರೆ. ಮಾತು ದಣಿದಿದೆ. ಚಿಕ್ಕಮಕ್ಕಳು ಕುಣಿಯುತ್ತಿದ್ದಾರೆ. ಅವರ ಕಾವ್ಯ ಶಕ್ತಿಯು ಜಾಗೃತವಾಗಿತ್ತು. ಮಕ್ಕಳ ಪ್ರತಿಭೆಯು ಅಪ್ರತಿಹತವಿರುತ್ತದೆ. ಅವರ ಕಲ್ಪನೆಯು ಒಮ್ಮೆ ಮಿಂಚುತ್ತದೆ, ಮಾಯವಾಗುತ್ತದೆ. ದೇವದೂತರ ಚಿತ್ರಗಳನ್ನು ಚಿಕ್ಕಮಕ್ಕಳಂತೆ ತೆಗೆಯುತ್ತಾರೆ. ಆದರೆ ಅವರಿಗೆ ಪಕ್ಕೆ ಗಳಿರುತ್ತವೆ. ಪಕ್ಕವುಳ್ಳ ಮಕ್ಕಳೆಂದರೆ ದೇವದೂತರು. ಮಕ್ಕಳು ಹುಟ್ಟಿ ದಾಗ ಅವರಿಗೆ ಪಕ್ಕಗಳಿರುತ್ತವೆ. ಬರಬರುತ್ತ ಮೆಲ್ಲನೆ ಅವುಗಳನ್ನು ಕತ್ತರಿಸುತ್ತಾರೆ. ಆಕಾಶಕ್ಕೆ ಹಾರುವ ಮಕ್ಕಳ ಮನಸ್ಸು ನೆಲದ ಮೇಲೆಯೇ ಉಳಿಯುತ್ತದೆ. ವತ್ಸಲೆ ಹಾಗೂ ಆ ತರುಣ ಇಬ್ಬರೂ ಮೌನವಾಗಿದ್ದರು. ಇಬ್ಬರ ಅಂತಃಕರಣವೂ ಉಕ್ಕೇರುತ್ತಿತ್ತು. ಬೊಂಬೆ ಯಂತೆ ಸ್ಥಿರವಾಗಿ ಕುಣಿಯುತ್ತಿದ್ದರು. ಮಾತಿಲ್ಲದೆ ಮಾತಾಡುತ್ತಿದ್ದರು. ಚಿತ್ರದಂತೆ ಅವರಿಬ್ಬರು ತೋರುತ್ತಿದ್ದರು. ಚಿತ್ರದಲ್ಲಿ ಭಾವಗಳ ಮೂಕ ದರ್ಶನವಾಗುತ್ತದೆ. ಹೃದಯದಲ್ಲಿಯ ಭಾವಗಳ ದರ್ಶನವು ಅವರ ಮುಖ ಮುದ್ರೆಯ ಮೇಲೆ ಆಗುತ್ತಿತ್ತು. ಅವರ ಆನಂದವು ಹಾಡುವದರಲ್ಲಿಯೂ ಕುಣಿಯುವದರಲ್ಲಿಯೂ ಪರಿಣಮಿಸಿತು. ಮಕ್ಕಳಿಗೆ ಹೊಟ್ಟೆಯಲ್ಲಿಟ್ಟು ಕೊಳ್ಳುವದಾಗುವದಿಲ್ಲ. ಅವರು ಪ್ರಕಟಿಸುತ್ತಾರೆ. ಕೇಳಿರಿ ಮಕ್ಕಳ ಗಾಯನವನ್ನು. ನೋಡಿರಿ ಅವರ ಕುಣಿತವನ್ನು.

ಆಯಿತು ಬಾನು ಹೊನ್ನೋ ಹೊನ್ನು !
ಯಾರದು ಯಾರದು ಮೆರೆವೀ ಬಾನು ?
ಆಯಿತು ಬಾನು ಹೊನ್ನೋ ಹೊನ್ನು !
ದೇವರಾಯನದು ಮೆರೆವೀ ಬಾನು !

ಸುರಿಯುತಿದೆ ಹಾ ! ಚಿನ್ನದ ಸರಿಯು !
ಸಲ್ಲದು ನನಗೀ ಸೆಡವಿನ ಪರಿಯು !
ಸರಿಯುತಿದೆ ಹಾ ! ಚಿನ್ನದ ಸರಿಯು !
ಸಲ್ಲದು ನನಗೀ ತಿರುಪೆಯ ಪರಿಯು !

ಒಂದು ಹಾಡು ಮತ್ತೊಂದು ಹಾಡಿಗೆ ಜನ್ಮವೀಯಿತು. ದೀಪವು ದೀಪವನ್ನು ಹೊತ್ತಿಸುವದು. ಒಂದು ದೀಪ ಹತ್ತಿದರೆ, ಲಕ್ಷಾಂತರ ದೀಪಗಳು ಹತ್ತುವವು. ಒಂದು ನಕ್ಷತ್ರ ಕಂಡೊಡನೆಯೇ ಅನಂತ ನಕ್ಷತ್ರಗಳು ಕಾಣುವವು. ಎಲ್ಲವೂ ಒಂದೇ ರೀತಿ.

ಎರಡನೆಯ ಹಾಡನ್ನು ಮಕ್ಕಳು ಹಾಡುತ್ತಲಿದ್ದಾರೆ. ಅವರಿಬ್ಬರ ಸುತ್ತಲೂ ಕುಣಿಯುತ್ತಲಿದ್ದಾರೆ. ನೋಡಿರಿ, ಎಷ್ಟು ಮಧುರವಿದೆ ಆ ಹಾಡು!

## ಬಂಗಾರದ ಬೆಳೆ

ಬಂತು ಬಂಗಾರದ ಬೆಳೆ
ಬಂತು ಬಂಗಾರದ ಬೆಳೆ
ಅದ ಕೊಯ್ಯಲು ಕಲಿ ಮಗಳೆ
ಅದ ನಾಯಲು ಕಲಿ ಮಗಳೆ

ಹೊಂಬಣ್ಣವು ತುಂಬಿ ಬಂತು
ತನುವೆಲ್ಲಾ ಪೀತವಾಯ್ತು
ಹೊಂಬಣ್ಣವು ತುಂಬಿ ಬಂತು
ಕುಣಿ ಕುಣಿ ಮೈಯ ಮರೆತು

ಹೊಂಬಣ್ಣವು ತುಂಬಿ ಬಂತು
ಆಡು ಆಡು ಮೈಯ-ಮರೆತು
ಸಾಕು ಬಿಡು, ಆಟ ಬೇಡ
ಮನೆ ಸೇರಲಾಯ್ತು ತಡ

ತಾಯಿಯೆನ್ನ ಕರೆಯುತಿಹಳು
ಎಂಬ ಭೀತಿ ಮನಕೆ ಮಿಗಿಲು
ಇಲ್ಲಿ ಹೊನ್ನಹೊಳೆಯ ಪೂರ
ನಮ್ಮ ಮನೆಯೋ—ದೂರ ದೂರ

ಮನೆ ದೂರ ಇರಲೇಳಿ
ಹೊನ್ನರಾಶಿ ಸೂರೆಗೊಳ್ಳಿ
ಹೊನ್ನರಾಶಿ ಸೂರೆಗೊಳ್ಳಿ
ಜನುಮಕಾಗುವ ಹೊನ್ನಿದು ಮಗಳೆ

ಆಡಗಿತು ಅಕೋ ಬಾನೊಳಗಿನ ಚಿನ್ನ
ಒಡನೇ ನಿಂತಿತು ನಮ್ಮಯ ಗಾನ

ಆಕಾಶದಲ್ಲಿಯ ಆ ಸುಂದರದೃಶ್ಯವು ಕ್ಷಣಾರ್ಧದಲ್ಲಿ ಅದೃಶ್ಯವಾಯಿತು. ಬಂಗಾರದ ವರ್ಣವು ಕಾಣದಂತಾಯಿತು. ಮಕ್ಕಳ ಹಾಡೂ ಮುಗಿಯಿತು. ಎಲ್ಲಿಯ ವರೆಗೆ ಬಂಗಾರವ್ರೋ ಅಲ್ಲಿಯ ವರೆಗೆ ಹಾಡು. ಆದರೆ ಆ ತರುಣನು ಒಮ್ಮೆಲೇ ಕುಣಿಯಹತ್ತಿದನು. ಹಾಡಹತ್ತಿದನು. ಆ ಮಕ್ಕಳ ಚರಣಗಳನ್ನೇ ಅನ್ನುತ್ತಾ ಕುಣಿಯಹತ್ತಿದನು.

ಸುರಿಯುತಿದೆ ಹಾ ! ಚಿನ್ನದ ಸರಿಯು !
ಸಲ್ಲದು ನಿನಗೀ ಸೆಡವಿನ ಪರಿಯು !
ಸರಿಯುತಿದೆ ಹಾ ! ಚಿನ್ನದ ಸರಿಯು !
ಸಲ್ಲದು ನಿನಗೀ ತಿರುಪೆಯ ಪರಿಯು !

" ನಾವೆಲ್ಲರೂ ಕುಣಿಯೋಣ ಬನ್ನಿ, ಎಲ್ಲ ಮಕ್ಕಳೂ ಬನ್ನಿ " ಎಂದು ವತ್ಸಲೆಯು ಕರೆದಳು.

" ನೀವಿಬ್ಬರೂ ನಡುವೆ ನಿಲ್ಲಿರಿ" ನಿಮ್ಮ ಸುತ್ತಲೂ ನಾವು ತಿರುಗುವೆವು. ನೀವು ಚಿಗಿತ ಮಾಮರವಾಗಿರಿ, ನಾವು ಗುಂಯಿ ಗುಂಯಿ ಧ್ವನಿಗೈಯುವ ಮಧುಕರಗಳಾಗುವೆವು. ನೀವು ಕಮಲ, ನಾವು ಭೃಂಗ" ಎಂದರು ಮಕ್ಕಳು.

" ನಾವು ನಡುವೆ ನಿಲ್ಲುವೆವು. ನೀವು ಕುಣಿಯಿರಿ, ಹಾಡಿರಿ" ಎಂದಳು ವತ್ಸಲೆ.

ಮಕ್ಕಳ ಉತ್ಸಾಹ ಉಕ್ಕೇರಿತು. ಆ ತರುಣ ಹಾಗು ವತ್ಸಲೆ ನಡುವೆ ನಿಂತರು. ಮಕ್ಕಳ ತಾಳದಂತೆ, ಅವರೂ ತಾಳ ಹಾಕುತ್ತಿದ್ದರು. ತರುಣನು ವತ್ಸಲೆಯ ಕೈಹಿಡಿದಿದ್ದನು. ಅವರಿಬ್ಬರೂ ಕುಣಿಯಹತ್ತಿದರು. ನದಿಯ ನೀರೂ ಕುಣಿಯುತ್ತಿದ್ದಿತು. ಆಕಾಶದಲ್ಲಿಯ ಬೆಳದಿಂಗಳೂ ಕುಣಿಯ ಹತ್ತಿತು. ದೂರದಲ್ಲಿ ದೀಪಗಳು ಕುಣಿಯಹತ್ತಿದವು. ಮಕ್ಕಳು ದಣಿದರು. ಆಟವು ನಿಂತಿತು. ನಿಂತಿತೋ ಅಥವಾ ಪ್ರಾರಂಭವಾಯಿತೋ ? ಕುಣಿತವು ನಿಂತಿತು. ನಿಂತಿತೋ ಅಥವಾ ಸುರುವಾಯಿತೋ ? ಇಬ್ಬರ ಕೈಗಳು ದೂರ ಸರಿದವು. ಸರಿದವೋ ಅಥವಾ ಸ್ಥಿರವಾಗಿ. ಬೆರೆತವೊ ?

ಎಂತಹ ಮೋಜು ! ಎಂತಹ ಚಂದ ! ಅವನೆಷ್ಟು ಚೆನ್ನಾಗಿ ಕುಣಿಯು ತ್ತಿದ್ದ ? ಗೋಕುಲದಲ್ಲಿಯ ಕೃಷ್ಣನಂತೆ ಕಾಣುತ್ತಿದ್ದ ! ಕೃಷ್ಣನೂ ಹೀಗೆಯೇ ಕುಣಿಯುತ್ತಿರಬೇಕು" ಹೀಗೆ ಮಾತನಾಡುತ್ತ ಮಕ್ಕಳು ಮನೆಗೆ ನಡೆದರು. ಆದರೆ ಅಲ್ಲಿ ದೂರ ನಿಂತವರು ಯಾರು? ಇಂತಹ ನೃತ್ಯದಲ್ಲಿ ಅವನೇಕೆ ಭಾಗ ವಹಿಸಲಿಲ್ಲ ? ಅವನಿಗೆ ಸ್ಫೂರ್ತಿಯೇ ಆಗಲಿಲ್ಲವೇ ?

' ಯಾರು ಕಾರ್ತೀಕನೇ ! ಹೀಗೇಕೆ ನಿಂತಿರುವಿ. ಇಂದು ಬಂಗಾರದ ಮಳೆಯಾಯಿತು. ಅದನ್ನು ಸವಿಯದವನೇ ದುರ್ಭಾಗ್ಯ. ನೀನೇಕೆ ಕುಣಿ ಯಲು ಬರಲಿಲ್ಲ ? ಎಂದು ವತ್ಸಲೆಯು ವಿಚಾರಿಸಿದಳು.

'ನಾಗರಂತೆ ಆರ್ಯರು ಕುಣಿಯುವವರಲ್ಲ' ಎಂದನು ಕಾರ್ತೀಕ.

'ನಾಗರು ನೃತ್ಯಪ್ರಿಯರು. ನಾಗರದೇವರೂ ಕೂಡ ಗಾನಪ್ರಿಯ-ನೃತ್ಯಪ್ರಿಯ. ನಾಗದೇವರ ಯಾತ್ರೆಯಲ್ಲಿ ದೇವರ ಮುಂದೆ, ನೃತ್ಯ ಗಾಯನ ಗಳು ನಡೆಯುತ್ತವೆ. ಆಗ ನಾಗಗಳೂ ಕೂಡ ಬಂದು ತಲೆದೂಗುತ್ತವೆ. ಎಂದು ಆ ತರುಣ ಉತ್ತರಿಸಿದನು.

'ಕಾರ್ತೀಕ ! ಆರ್ಯನಾದ ಅರ್ಜುನನಂತೂ ಊರ್ವಸಿಯ ಬಳಿಯಲ್ಲಿ ನೃತ್ಯ ಕಲಿತನು. ಶ್ರೀ ಕೃಷ್ಣನಂತೂ ನಟ ಸಾರ್ವಭೌಮ, ನೃತ್ಯವು ಕೀಳು ಏಕೆ ? ಇಡೀ ಸೃಷ್ಟಿಯೇ ಕುಣಿಯುತ್ತಲಿದೆ. ಬಿರುಗಾಳಿಯು ಬಂದೊಡನೆ, ಎಲೆಗಳು ಕುಣಿಯ ಹತ್ತುತ್ತವೆ. ಬಳ್ಳಿಗಳು ತಲೆಹಾಕುತ್ತವೆ. ನೀರು ಉಕ್ಕೇರುತ್ತದೆ. ಈ ಪೃಥ್ವಿಯು ಕೂಡ ಸೂರ್ಯನ ಸುತ್ತಲೂ ಕುಣಿಯುತ್ತಿದೆ. ಚಂದ್ರನು ಪೃಥ್ವಿಯ ಸುತ್ತಲೂ ಕುಣಿಯುತ್ತಿದ್ದಾನೆ ಶಿವ-ಪಾರ್ವತಿಯರ ನೃತ್ಯವಂತೂ ನಡೆದೇ ಇದೆ. ಎಂದು ಆಶ್ರಮದ ಆಚಾರ್ಯರು ಹೇಳುತ್ತಾರೆ. ಇವೆಲ್ಲವೂ ಬಂಧನದ ಆಟ ! ಪೃಥ್ವಿಗೆ ಸೂರ್ಯನು ಸಿಕ್ಕುವದಿಲ್ಲ. ಚಂದ್ರನಿಗೆ ಪೃಥ್ವಿಯು ಸಿಗುವದಿಲ್ಲ. ನಡೆದಿವೆ ಪ್ರದಕ್ಷಿಣೆ" ಎಂದಳು ವತ್ಸಲೆ

' ಈ ಪ್ರದಕ್ಷಿಣೆಯು ವ್ಯರ್ಥವಲ್ಲ. ಪೃಥ್ವಿಗೆ ಪ್ರಕಾಶ ದೊರೆಯುತ್ತದೆ. ಚಂದ್ರನಿಗೆ ಶೋಭೆಯುಂಟಾಗುತ್ತದೆ. ಪ್ರೇಮದ ಪ್ರದಕ್ಷಿಣೆಯು ಜೀವನಕ್ಕೆ ಪ್ರಕಾಶವೀಯುವದು.' ಎಂದನಾ ತರುಣ.

ಪ್ರಕಾಶದ ಹಿಂದೆ ಕತ್ತಲೆಯು ಬಂದೇ ಬರುವದು. ಆದುದರಿಂದ " ನನಗೆ ಪ್ರಕಾಶವೂ ಬೇಡ, ಕತ್ತಲೆಯೂ ಬೇಡ" ಎಂದನು ಕಾರ್ತೀಕ.

'ಎಲ್ಲಿ ಪ್ರಕಾಶವಿಲ್ಲವೋ ಅಲ್ಲಿ ಕತ್ತಲೆಯೂ ಇಲ್ಲವೆಂದು' ನಿನ್ನ ಅಭಿಪ್ರಾಯವೇ ? ಎಂದು ವತ್ಸಲೆ ಪ್ರಶ್ನಿಸಿದಳು.

' ಪರಬ್ರಹ್ಮನು ದ್ವಂದ್ವಾತೀತನಿರುವನು' ಎಂದನು ಕಾರ್ತೀಕ

'ಆ ನಿರ್ದ್ವಂದ್ವ ಬ್ರಹ್ಮನ ಬೇಸರ ಬಂದಿದೆ ನನಗೆ. ಈ ಕುಣಿಯುವ ಬ್ರಹ್ಮನಲ್ಲಿಯೇ ಆನಂದವಿದೆ. ನೀನು ಎಂದಾದರೂ ಈ ಆನಂದವನ್ನು ಸವಿದಿರುವಿಯಾ ಕಾರ್ತೀಕ! ಎಂದು ವತ್ಸಲೆಯು ನುಡಿದಳು.

'ವಿಷವನ್ನು ಎಲ್ಲರೂ ಸೇವಿಸುವ ಅವಶ್ಯಕತೆಯಿಲ್ಲ' ಎಂದನು ಕಾರ್ತೀಕ.

' ಆದರೆ ಒಮ್ಮೊಮ್ಮೆ ತಿಳಿಯದೆ, ಒಳ್ಳೇ ಫಲವನ್ನು ಕೂಡ ಕೆಟ್ಟದು ಎಂದು ಒಗೆದುಬಿಡಬಹುದು. ಆ ಬುದ್ಧಿವಂತನು ಮಾತ್ರ ಆದಕ್ಕೆ ಎರವಾಗುವನು. ಆದರೆ ಒಬ್ಬ ಭಿಕ್ಷುಕಳು ಅದನ್ನು ಸವಿಯಬಹುದು, ಎಂದಳು ವತ್ಸಲೆ.

' ನೀನು ನನ್ನ ಸಂಗಡ ಕುಣಿಯುವಿಯಾ? ನೋಡಲು ಈಗ ಮಕ್ಕಳಿಲ್ಲ. ಅವರಿರುವಾಗ ಕುಣಿಯಲು ನಾನು ನಾಚಿದೆ. ಬಾ, ಹಿಡಿ ನನ್ನ ಕೈಯನ್ನು. ಕುಣಿಯೋಣ!' ಎಂದು ಕಾರ್ತೀಕನು ತಾನಾಗಿಯೇ ಬಾಯಿ ತೆಗೆದ.

' ಈಗ ಬೇಡ, ಹೊತ್ತಾಯಿತು. ಅಜ್ಜಿಯು ಬೇಗ ಬರಲು ಹೇಳಿರುವಳು. ಕತ್ತಲೆಯಾಗುವದು, ನಡೆ ಹೋಗುವಾ.' ಎಂದಳು ವತ್ಸಲೆ.

' ನಿನ್ನ ಕೈ ಹಿಡಿಯುವೆ. ಎಲ್ಲಿಯಾದರೂ ಬಿದ್ದಿಗಿದ್ದಿ,! ಎಂದನು ಕಾರ್ತೀಕ.

' ಕುಣಿಯುವವರ ಕಾಲು ತಪ್ಪುವದಿಲ್ಲ. ಅವರಿಗೆ ಚೆನ್ನಾಗಿ ಹೆಜ್ಜೆ ಹಾಕಲು ಬರುವದು. ಹಿಡಿಯುವದಿದ್ದರೆ, ಅವರ ಕೈ ಹಿಡಿ. ಈ ಊರಿಗೆ ಅವರು ಹೊಸಬರು, ಅವರಿಗೆ ದಾರಿ ಗೊತ್ತಿಲ್ಲ. ಎಂದಳು ವತ್ಸಲೆ.

' ನಾನೀ ಊರಿಗೆ ಹೊಸಬನಲ್ಲ. ಈ ಜಗತ್ತಿನಲ್ಲಿ ಈ ಊರಿನಷ್ಟು ಪರಿಚಯ ನನಗೆ ಮೊತ್ತೊಂದೂರಿಲ್ಲ. ಈ ನದಿಯಷ್ಟು ಪರಿಚಯವಿದ್ದ ಬೇರೊಂದು ನದಿಯಿಲ್ಲ. ಈ ದಿನ್ನೆಯಷ್ಟು ಪರಿಚಿತ ಇನ್ನೊಂದಿಲ್ಲ, ಎಂದು ತರುಣನು ಅನ್ನುವಷ್ಟರಲ್ಲಿಯೇ ಈ ಹುಡುಗಿಯಷ್ಟು ಪರಿಚಯವು ಇನ್ನೊಬ್ಬಳದಿಲ್ಲವೆಂದು ಕಾರ್ತೀಕನು ದನಿಗೂಡಿಸಿದನು.

' ನಿನ್ನ ಮಾತು ನಿಜ. ನನ್ನ ಪರಿಚಯವು ಯಾರಿಗೂ ಇಲ್ಲ. ನಾನು ಕ್ಷಣಹೊತ್ತುಕೂಡ, ಯಾವ ಸ್ಥಳದಲ್ಲಿಯೂ ಇರುವದಿಲ್ಲ. ನಾನು ಯಾವ ಊರಲ್ಲಿಯೂ ಒಂದು ದಿವಸವೂ ಕೂಡ ಇಲ್ಲ. ನನ್ನ ಜೀವನದಲ್ಲಿ ಅಮರವಾಗುವ ಊರೆಂದರೆ ಇದೊಂದೇ ಎಂದನು.' ಆ ತರುಣ.

" ನಿಮ್ಮ ಹೆಸರೇನು ? ನಿಮ್ಮ ಊರು ಎಲ್ಲಿಯೂ ಇರದೆ ಇದ್ದರೂ ನಿಮಗೆ ಹೆಸರಾದರೂ ಇರಬೇಕಷ್ಟೇ ? ಹೇಳಿರಿ ನಿಮ್ಮ ಹೆಸರನ್ನು. ಆ ಹೆಸರು ನನ್ನ ಜೀವನದಲ್ಲಿ ಅಮರವಾಗಲಿ " ಎಂದಳು ವತ್ಸಲೆ.

" ನನ್ನ ಹೆಸರು ನಾಗಾನಂದ. " ಎಂದನು ತರುಣ.

" ನಾಗಾನಂದನು ವತ್ಸಲಾನಂದನೂ ಇರುವನು. ನಾಗಾನಂದ ! ಎಂಥಹ ಸುಂದರ ಹೆಸರು ! ಇದರಲ್ಲಿ ಎಲ್ಲ ಕಾವ್ಯವೂ ತುಂಬಿದೆ ! ಸರ್ವ

ಸಂಗೀತವೂ ಇದರಲ್ಲಿ ಅಡಕವಾಗಿದೆ! ಹೆಸರಿನಲ್ಲಿ ಎಷ್ಟು ಸವಿ ಇದೆ ನೋಡು ಕಾರ್ತೀಕಾ!" ಎಂದು ವತ್ಸಲೆಯು ತಲೆಬಾಗಿ ನುಡಿದಳು.

"ಯಾವುದು ನಮಗೆ ಸೇರುವದೋ ಅದು ಸವಿ ಇರುತ್ತದೆ." ಎಂದನು ಕಾರ್ತೀಕ.

"ಕಾರ್ತೀಕ ಎಂಬುದು ಎಷ್ಟು ಸುಂದರ ಹೆಸರು! ಕೃತ್ತಿಕಾ ನಕ್ಷತ್ರದ ಪುಂಜವು, ಕಾರ್ತೀಕ ತಿಂಗಳಲ್ಲಿ ಎಷ್ಟು ರಮಣೀಯವಾಗಿ ಕಾಣುವದು? ಅದೇನು, ಮುತ್ತುಗಳ ಗುಂಪೋ, ಅಥವಾ ಮಾಣಿಕಗಳ ಖಣಿಯೋ? ಎನಿಸುವುದು. ಕೃತ್ತಿಕಾ ನಕ್ಷತ್ರವನ್ನು ನೋಡುವದರಲ್ಲಿ ನನಗೆ ಬಹಳ ಆನಂದ. ಆಶ್ರಮದಲ್ಲಿರುವಾಗ ನಾನು ಬೆಳಿಗ್ಗೆ ಸ್ನಾನಕ್ಕೆ ಹೋಗುತ್ತಿದ್ದೆ. ಮತ್ತು ಸ್ನಾನ ಮಾಡುತ್ತಿರುವಾಗ ಆ ಕೃತ್ತಿಕಾ ನಕ್ಷತ್ರಪುಂಜದ ಕಡೆಗೆ ನೋಡುತ್ತಲಿದ್ದೆ! ಪುಣ್ಯವಂತ ಆತ್ಮಗಳ ಸಭೆಯೇ ಸೇರಿದಂತೆ ಆ ನಕ್ಷತ್ರ ಪುಂಜವು ಕಾಣುತ್ತಲಿತ್ತು. ಮೊದಲು ನನಗೆ ಆ ನಕ್ಷತ್ರ ಪುಂಜದ ಹೆಸರು ಗೊತ್ತಿದ್ದಿಲ್ಲ. ಆದರೆ ಆಚಾರ್ಯರು ಅದನ್ನು ಹೇಳಿದರು." ಎಂದನು ನಾಗಾನಂದ.

"ನೀವು ಆಶ್ರಮದಲ್ಲಿ ಇದ್ದಿರಾ? ಆಶ್ರಮದಲ್ಲಿರುವದು ನಾಗರಿಗೆ ಸೇರುತ್ತದೆಯೇ?" ಎಂದು ಕಾರ್ತೀಕನು ವಿಚಾರಿಸಿದ.

"ಸುಗಂಧವುಳ್ಳ ಪವಿತ್ರವುಳ್ಳ ಮತ್ತು ಸ್ವಚ್ಛವಾದ ಪದಾರ್ಥಗಳೆಲ್ಲ ನಾಗರಿಗೆ ಸೇರುತ್ತವೆ. ನಾಗರು ಸೌಂದರ್ಯೋಪಾಸಕರೂ, ಸಂಗೀತ ಪ್ರಿಯರೂ ಮತ್ತು ಸತ್ಯ ಪೂಜಕರೂ ಇರುತ್ತಾರೆ" ಎಂದನು ನಾಗಾನಂದ.

"ತಾವು ಆಶ್ರಮದಲ್ಲಿ ಎಷ್ಟು ದಿನಗಳವರೆಗೆ ಇದ್ದಿರಿ?" ಎಂದು ವತ್ಸಲೆ ವಿಚಾರಿಸಿದಳು

"ಕೆಲವು ದಿವಸ ಇದ್ದೆ. ಆ ಮೇಲೆ ಬಿಟ್ಟು ಬಿಟ್ಟೆ" ಎಂದ, ಅವನು.

"ಯಾಕೆ ಬಿಟ್ಟಿರಿ?" ಎಂದು ಕಾರ್ತೀಕನು ವಿಚಾರಿಸಿದ.

"ಸಂಪೂರ್ಣ ಜ್ಞಾನದ ಗುಟ್ಟು ತಿಳಿಯಿತೆಂದು" ಅವನೆಂದನು.

"ಆ ಗುಟ್ಟು ಯಾವದು?" ಎಂದು ವತ್ಸಲೆಯು ವಿಚಾರಿಸಿದಳು.

" ಪ್ರೇಮಮಯ ಸೇವೆಯೇ ಆ ಗುಟ್ಟು " ಎಂದು ಅವನು ಉತ್ತರ ವಿತ್ತನು.

" ಪ್ರೇಮಮಯ ಸೇವೆ ಅಂದರೇನು ? " ವತ್ಸಲೆ ವಿಚಾರಿಸಿದಳು.

" ಪೃಥ್ವಿಯ ಜ್ಞಾನವು ಆಗಬೇಕಾಗಿದ್ದರೆ, ಅದರ ಹೃದಯದಲ್ಲಿ ಸೇರಬೇಕು. ಪೃಥ್ವಿಯನ್ನು ಅಗಿದು ನೋಡು. ಗಿಡಗಳ ಜ್ಞಾನವು ಆಗ ಬೇಕಾಗಿದ್ದರೆ, ಅವುಗಳಿಗೆ ನೀರುಣಿಸಬೇಕು. ಅಂದರೆ ಅವುಗಳ ಜೀವನದಲ್ಲಿಯ ಸೌಂದರ್ಯವು ತಿಳಿದೀತು. ನಕ್ಷತ್ರಗಳ ಜ್ಞಾನವು ಆಗಬೇಕಾಗಿದ್ದರೆ, ಹಗಲಿರುಳು ಪ್ರೇಮದಿಂದ ಅವುಗಳ ಕಡೆಗೆ ನೋಡಬೇಕು. ಮನುಷ್ಯರ ಅಂತರಂಗವನ್ನು ತಿಳಿದುಕೊಳ್ಳಬೇಕಾಗಿದ್ದರೆ, ಪ್ರೇಮದಿಂದ ಅವರಿಗೆ ಉಪಕಾರ ಮಾಡಬೇಕು. " ಮಣ್ಣಿನಿಂದ ಭೂಮಿಯ ಕಸುವನ್ನು ತಿಳಿಯಬೇಕು. ಸಹವಾಸದಿಂದ ಮಾನವನ ಸ್ವಭಾವವನ್ನು ಅರಿಯಬೇಕು " ಎಂದು ನಾಗರ ನಾಣ್ಣುಡಿ ಇದೆ. ಭೂಮಿಯು ಒಳ್ಳೇಯದೇ ಅಥವಾ ಕೆಟ್ಟದಿದೆಯೇ ಎಂಬುದನ್ನು ತಿಳಿಯ ಬೇಕಾದರೆ ಅದನ್ನು ಸಾಗುಮಾಡಿದ ನಂತರವೇ ತಿಳಿಯುತ್ತದೆ. ಮನುಷ್ಯನು ಒಳ್ಳೆಯವನೇ ಅಥವಾ ಕೆಟ್ಟವನೇ ಎಂಬುದನ್ನು ತಿಳಿದುಕೊಳ್ಳಬೇಕಾಗಿದ್ದರೆ ಅವನ ಸಾನ್ನಿಧ್ಯದಲ್ಲಿ ವಾಸಿಸಬೇಕು. ಅಂದರೆ ಗೊತ್ತಾಗುತ್ತದೆ. ಕೇವಲ ಸಾನ್ನಿಧ್ಯದಲ್ಲಿದ್ದರೆ ಸಾಲದು, ಸ್ನೇಹಮಯ ಸಾನ್ನಿಧ್ಯವು ಬೇಕು. ಅಂದರೇನೇ ಅಂತರಂಗವು ತಿಳಿಯುತ್ತದೆ. " ಎಂದನು ನಾಗಾನಂದ.

" ನಿನಗೆ ಏನೇನು ಬರುತ್ತದೆ ? " ಎಂದು ಕಾರ್ತೀಕನು ವಿಚಾರಿಸಿದ.

" ನಾನು ಮಹಾಪೂರದಲ್ಲಿ ಈಸಲು ಬಲ್ಲೆ, ಬಾಣಗಳನ್ನು ಬಿಡಬಲ್ಲೆ, ಭಾಲೆಯನ್ನು ಒಗೆಯಬಲ್ಲೆ, ಒಕ್ಕಲತನವನ್ನು ಮಾಡಬಲ್ಲೆ, ಕೊಳಲೂದಲು ಬಲ್ಲೆ, ಹೂಗಳನ್ನು ಅರಳಿಸಬಲ್ಲೆ, ಬಳ್ಳಿಗಳ ಹಾಗೂ ಹುಲ್ಲಿನ ಸುಂದರ ಬುಟ್ಟಿಗಳನ್ನು ಹೆಣೆಯಬಲ್ಲೆ, ಆಶ್ರಮದಲ್ಲಿರುವಾಗ ನಾನು ಸುಂದರವಾದ ಹುಲ್ಲಿನಿಂದ ಹೆಣೆದ ಒಂದು ಬುಟ್ಟಿಯನ್ನು ಗುರುದೇವನಿಗೆ ಅರ್ಪಿಸಿದ್ದೆ. ಎಷ್ಟು ಸೊಗಸಾದ ಎಳೆಯ ಹುಲ್ಲು ಅದು ! " ಎಂದನು ನಾಗಾನಂದ.

" ನಿನಗೆ ಬುಟ್ಟಿಯನ್ನು ಹೆಣೆಯಲು ಯಾರು ಕಲಿಸಿದರು ? " ಎಂದನು ಕಾರ್ತೀಕ.

"ನನ್ನ ತಾಯಿ" ಎಂದನು ಆ ತರುಣ.

"ನಿಮ್ಮ ತಾಯಿಯು ನಿನಗೆ ಮತ್ತೇನು ಕಲಿಸಿರುವಳು ? ಎಂದು ಕಾರ್ತೀಕನು ಪ್ರಶ್ನಿಸಿದನು.

"ಆಕೆಯು ನನಗೆ ಎರಡನೆಯವರ ಸಲುವಾಗಿ ಸಾಯಲು, ಎರಡನೆಯವರ ಸಲುವಾಗಿ ದುಡಿಯಲು ಕಲಿಸಿರುವಳು." ಎಂದು ನಾಗನಂದನು ಹೇಳಿದ.

"ನಿಮ್ಮ ತಾಯಿಯು ಎಲ್ಲಿರುವಳು?" ಎಂದು ವತ್ಸಲೆಯು ಕೇಳಿದಳು.

"ನಾಗಲೋಕಕ್ಕೆ ಹೋದಳು. ದೇವರ ಸನ್ನಿಧಾನಕ್ಕೆ ಹೋದಳು" ಎಂದನು ನಾಗಾನಂದ.

"ಏನಾಗಿ ಸತ್ತಳು ?" ಎಂದು ಅತಿಶಯ ಕಳಕಳಿಯಿಂದ ವತ್ಸಲೆ ಪ್ರಶ್ನಿಸಿದಳು.

"ಸಿಡಿಲು ಬಡಿದು ಸತ್ತಳು." ಒಮ್ಮೆ ಮಳೆಗಾಲವಿತ್ತು. ಒಬ್ಬ ಹೆಣ್ಣು ಮಗಳು, ನಮ್ಮ ಊರಲ್ಲಿ ಬೇನೆ ಬಿದ್ದಿದ್ದಳು. ಆಕೆಗೆ ಭಯಂಕರ ಜ್ವರ ಬಂದಿತ್ತು. ನಾವು ಶೀತಳಾದೇವಿಯ ಹಾಡನ್ನು ಹಾಡಿದೆವು. ಆದರೆ ಜ್ವರ ಕಡಿಮೆಯಾಗಲಿಲ್ಲ. ಆಕೆಗೆ ತಾನು ಸಾಯುವೆನೆಂದು ಅನಿಸಹತ್ತಿತು. ಆಕೆಯ ಮಗನು ಪರವೂರಲ್ಲಿದ್ದನು. ಮಗನನ್ನು ಭೆಟ್ಟಿಯಾಗಬೇಕೆಂದು ಬಯಸಿದಳು. ಆದರೆ ಅವನನ್ನು ಕರೆತರುವವರಾರು ? ನನ್ನ ತಾಯಿಗೆ ತನ್ನ ಇಚ್ಛೆಯನ್ನು ತಿಳಿಸಿದಳು. ನೀನೂ ತಾಯಿ ಇರುವೆ, ತಾಯಿಯ; ಹೃದಯವು ನಿನಗೆ ಗೊತ್ತು. ನನ್ನ ಮಗನನ್ನು ಕರೆದುಕೊಂಡು ಬರಬಾರದೇ ? ಎಂದು ಬೇಡಿಕೊಂಡಳು. ನನ್ನ ತಾಯಿ ಹೊರಟಳು. ನಾನೊಬ್ಬನೇ ಮನೆಯಲ್ಲಿ ಮಲಗಿದ್ದೆ. ತಾಯಿಯು ನನ್ನನ್ನು ಎಬ್ಬಿಸಲಿಲ್ಲ. ಮಧ್ಯ ರಾತ್ರಿಯಲ್ಲಿಯೇ ಹೊರಟು ಹೋದಳು. ಮಳೆಯು ಭಯಂಕರವಾಗಿ ಸುರಿಯುತ್ತಲಿತ್ತು. ಆಕಾಶವು ಭೂಮಿದೇವಿಗೆ ನಮಸ್ಕರಿಸಲು ಕೆಳಗೆ ಬಾಗಿತ್ತು. ಪೂರ್ಣವಾಗಿ ಅಪ್ಪಿಕೊಳ್ಳಲು ಅದು ಗರ್ಜಿಸುತ್ತಿತ್ತು. ಅಳುತ್ತಿತ್ತು. ಆ ತಾಯಿಯ ಸಲುವಾಗಿ ನನ್ನ ತಾಯಿಯು ಹೋದಳು. ಕತ್ತಲೆಯಲ್ಲಿ ದಾರಿಯನ್ನು ತೋರಿಸಲು ಮಿಂಚನ್ನು ಕೇಳುತ್ತಲಿದ್ದಳು. ಬೆಳಿಗ್ಗೆ ಎದ್ದೆ. ತಾಯಿಯು ಇರಲಿಲ್ಲ.

ಜ್ವರ ಬಂದ ತಾಯಿಯ ಕಡೆಗೆ ಹೋದೆ. ಆಕೆಯು ಎಲ್ಲ ಸಂಗತಿಯನ್ನು ಹೇಳಿದಳು. ಬಹಳ ವೇಳೆಯಾದರೂ ತಾಯಿ ಬರಲಿಲ್ಲ. ಆದರಿಂದ ನನಗೆ ಸಮಾಧಾನ ಉಳಿಯಲಿಲ್ಲ. ಇಷ್ಟರಲ್ಲಿ ಬೇನೆ ಬಿದ್ದವಳ ಮಗನು ಬಂದನು. ಓಡುತ್ತ ಬಂದನು. ಅವನ ತಾಯಿಯು ಎದ್ದು ಕುಳಿತು ಅವನನ್ನು ಹತ್ತರ ಕೂಡಿಸಿಕೊಂಡಳು. ಆದರೆ ನನ್ನ ತಾಯಿಯೆಲ್ಲಿದ್ದಳು ? ನನ್ನನ್ನು ಹತ್ತರ ಕರೆಯುವ ನನ್ನ ತಾಯಿ ಎಲ್ಲಿ ? "ನಾವಿಬ್ಬರೂ ಕೂಡಿ ಬರುತ್ತಿದ್ದೆವು. ಕತ್ತಲೆಯಲ್ಲಿ ದಾರಿ ತಪ್ಪಿತು. ಮಳೆಯು ಬರುತ್ತಿತ್ತು. ನಾನು ಒಂದೆಡೆ ನಿಂತು ಅವಳನ್ನು ಒದರಿದೆ, ಆದರೆ ಉತ್ತರವು ದೊರೆಯಲಿಲ್ಲ. ಹಿಂದಿನಿಂದ ಬರುವಳೆಂದು ನಾನು ಮುಂದೆ ಬಂದೆ" ಎಂದು ಅವನು ಹೇಳಿದನು. ನಾನು ಕಕ್ಕಾವಿಕ್ಕಿಯಾದೆ. ಆ ಹುಡುಗ ಮತ್ತು ನಾನು ಅವಳನ್ನು ನೋಡಲು ಹೊರಟೆವು. ಮಳೆ ನಿಂತಿತ್ತು. ದಾರಿಯುದ್ದಕ್ಕೂ ಗಿಡಗಳು ಬಿದ್ದಿದ್ದವು. ಒಂದೆಡೆಗೆ ನನ್ನ ತಾಯಿಯ ದೇಹ ಬಿದ್ದಿತ್ತು. ಆದರೆ ಆಕೆಯ ಪ್ರಾಣವು ಹೋಗಿತ್ತು. ನಾನು ಆಕೆಯನ್ನು ಅಪ್ಪಿಕೊಂಡೆ. ಆದರೆ ಆಕೆಯು ನಗಲಿಲ್ಲ, ಏಳಲಿಲ್ಲ, ಮಾತನಾಡಿಸಲಿಲ್ಲ. ಆಗ ಸಿಡಿಲು ಬಡಿದು ಸತ್ತಿರುವಳೆಂದು ತಿಳಿದೆವು. ಎರಡನೆಯ ಒಬ್ಬ ತಾಯಿಗೆ ಆನಂದವನ್ನು ಕೊಡಲು, ನನ್ನ ತಾಯಿಯು ಮರಣವನ್ನು ಹೊಂದಿದಳು. ಆ ಪ್ರಳಯ ಕಾಲದ ರಾತ್ರಿಗೂ ಅವಳು ಬೆದರಲಿಲ್ಲ. ಅಂತಃಕರಣದಲ್ಲಿ ಅಪಾರ ಸೇವಾಭಾವವು ತುಂಬಿದ್ದರೆ, ಅವರಿಗೆ ಎಲ್ಲಕಡೆಗೂ ಮಿತ್ರರೇ ಕಾಣುವರು. ಕತ್ತಲೆಯು ಸಹ ಮಿತ್ರನಂತಾಗುವದು. ಮುಳ್ಳುಗಳು ಹೂವಿನಂತೆ ಅನಿಸುವವು. ಸಂಕಟವು ಗೆಳೆಯನಾಗುವದು. ತಾಯಿಯೇ! ತಾಯಿಯೇ! ಮತ್ತೆ ನೀನೆಂದು ದರ್ಶನವನ್ನು ಕೊಡುವಿ ! " ಎಂದು ನಾಗಾನಂದನು ಕರುಣಾಪೂರ್ಣ ಹೃದಯನಾದನು.

ಕ್ಷಣ ಹೊತ್ತು ಎಲ್ಲರೂ ಸ್ತಬ್ಧರಾದರು.

"ಶೀತಳಾದೇವಿಯ ಹಾಡನ್ನು ಹಾಡುವದೆಂದರೆ ಏನು ಮಾಡುವಿರಿ ?" ಎಂದು ವತ್ಸಲೆಯು ವಿಚಾರಿಸಿದಳು.

" ನಾವು ಚಿಗುರೆಲೆ ತರುವೆವು. ದೊನ್ನೆಗಳನ್ನು ಹಚ್ಚಿ ನೀರನ್ನು ತುಂಬುವೆವು. ಆ ಮೇಲೆ ಹಾಡುತ್ತ ಹಾಡುತ್ತ ಬೇನೆಬಿದ್ದವರ ಸುತ್ತಲೂ ತಿರು

ಗಾಡುವೆವು. ಆ ದೊನ್ನೆಯಲ್ಲಿಯ ನೀರನ್ನು ಆಕೆಗೆ ಸಿಂಪಡಿಸುವೆವು " ಎಂದು ನಾಗಾನಂದನು ಉತ್ತರಿಸಿದನು.

" ಆದರಲ್ಲಿಯ ಒಂದು ಹಾಡನ್ನು ಹಾಡುವಿಯಾ?" ಎಂದು ಆಗ್ರಹ ಪೂರ್ವಕವಾಗಿ ವತ್ಸಲೆ ಅಂದಳು.

ನಾಗಾನಂದನು ಹಾಡಹತ್ತಿದನು. ವತ್ಸಲೆ ಹಾಗೂ ಕಾರ್ತೀಕರು ಕೇಳಹತ್ತಿದರು. ಶಾಂತವಾಗಿ ಹರಿಯುವ ನದಿಯೂ ಕೇಳುತ್ತಲಿತ್ತು. ಆ ದಿನ್ನಿಯ ಮೇಲಿದ್ದ ನಿಸ್ತಬ್ಧ ಶಾಂತತೆಯೂ ಆದನ್ನು ಕೇಳುತ್ತಲಿತ್ತು.

## ತಂಪಿನ ತಾಯಿ

ತಂಪಿನ ತಾಯಿ, ಬಾರಮ್ಮ ||
ಉರಿಯಿಂದೊರಲುವ ಜೀವಜಾತಗಳ |
ಸಲುಹಲು ತ್ವರಿತದಿ ಬಾರಮ್ಮ || ಪಲ್ಲ ||

ಹಿಮಗಿರಿ ಮಂದಿರವಾಸವ ತೊರೆದು |
ಸಾಗರ-ನದಿ-ನಿರ್ಝರಗಳ ಮರೆದು |
ವೃಕ್ಷ-ವಲ್ಲಿ-ವಾಟಿಕೆಗಳ ಜರೆದು |
ತಡನಾಡದೆ ಬಳಿ ಸಾರಮ್ಮ ||

ವಾರಿತುಷಾರ-ತರಂಗಗಳಿಂದ !
ಚಂದನ-ತೃಣಪರ್ಣದ ಗೂಡಿಂದ ।
ಕಗ್ಗಾಡಿನ ಕಾಣದ ಬೀಡಿಂದ |
ಇಳೆಗಿಳಿದೊಡನೆಯೆ ಬಾರಮ್ಮ ||

ಆಣುಕದಿಂ ಬಾ, ಗಿರಿದರಿಯಿಂ ಬಾ |
ಅಮೃತ ಶಿಲೆಯಿಂದೊಸರುತ ಬಾ! ಬಾ! |
ಇಬ್ಬನಿಯಿಂ ಬಾ, ಕೆನೆವೊಸರಿಂ ಬಾ |
ನಲ್ಮೊಗ ಬೀರುತ ಬಾರಮ್ಮ ||

ರೋಗಿಯ ತಳಮಳ ತಣಿಸಲು ಬಾರೌ ! |
ಉರಿಯನ್ನಾರಿಪ ಕೈಯನು ತಾರೌ ! |
ಬೇಡುವುದೆಲ್ಲವ ಸಲಿಸೆವು ನಿನಗೌ ! |
ಸದ್ಭಕ್ತರ ಬಳಿ ಬಾರಮ್ಮ ! |

ಬಂದಳು ತಾಯಿ, ಗಾಳಿಯ ಬೀಸಿರಿ ! |
ಬಂದಳು ಅಕೋ, ಜಲಧಾರೆಯ ಸೂಸಿರಿ ! |
ಅರೆಚಣವಲ್ಲಾರುವುದೀ ದಳ್ಳುರಿ ! |
ತಂಪಿನ ತಾಯಿೂ ಹರಸಮ್ಮ ! |

'ತಂಪು ಪದಾರ್ಥಗಳಲ್ಲಿಯ ತಂಪನ್ನೆಲ್ಲ ಇಲ್ಲಿ ಆವ್ಹಾನಿಸಲಾಗಿವೆ. ವೇದದಲ್ಲಿಯೂ ಕೂಡ ಇಂತಹ ಮಂತ್ರಗಳಿವೆ.' ಎಂದನು ಕಾರ್ತೀಕ.

'ಮಾನವ ಸ್ವಭಾವವು ಒಂದೆ. ಮೇಲಿನ ತೊಗಲು ಕಪ್ಪು, ಕೆಂಪು' ಇದ್ದರೂ ಒಳಗಿನ ಭಾವವು ಒಂದೇ ಇರುವದು. ಆಶೆ, ಆಕಾಂಕ್ಷೆಗಳು, ನಾನಾ ಕಲ್ಪನೆಗಳು, ಎಲ್ಲವೂ ಸಾಮಾನ್ಯವಾಗಿ ಸಮಾನವಿರುತ್ತವೆ, ಎಂದನು ನಾಗಾನಂದ.

'ನಾವು ಇಲ್ಲಿಯೇ ನಿಂತೆವು. ಮನೆಗೆ ಹೋಗಬೇಕೆಂದು ಹೊರಟವರು ಇನ್ನೂ ಇಲ್ಲಿಯೇ ಇದ್ದೇವೆ. ಅಜ್ಜಿಯು ಹಾದೀ ಕಾಯುತ್ತಿರಬಹುದು' ಎಂದು ವತ್ಸಲೆಯು ನುಡಿದಳು.

'ಕಳ್ಳರ ಸಂಗಡ ಓಡಿ ಹೋದರೇ ?' ಎಂದು ಅಜ್ಜಿಗೆ ಸಂಶಯ ಬರಬಹುದು, ಎಂದನು ಕಾರ್ತೀಕ.

'ನಾನು ಇಲ್ಲಿಂದ ಓಡಿ ಹೋಗುವವನೇ ಇರುವೆ' ಎಂದನು ನಾಗಾನಂದ.

'ನನ್ನ ಅಜ್ಜಿಯ ಆಣೆಯಾಗಿದೆ, ನನ್ನ ಆಣೆ. ಓಡಿಹೋಗಬೇಡಿರಿ, ಎಂದಳು ವತ್ಸಲೆ. ಮೂವರೂ ಮರಳಿದರು.

'ನಿಲ್ಲಿರಿ, ಎಲ್ಲಿಯಾದರೂ ಬಿದ್ದೀರಿ' ಎಂದು ವತ್ಸಲೆಯು ನಾಗಾನಂದನ ಕೈಯನ್ನು ಹಿಡಿದಳು. ಎರಡನೇ ಕೈಯಿಂದ ಕಾರ್ತೀಕನನ್ನು ಹಿಡಿದಳು.

'ನೀವಿಬ್ಬರೂ ನನ್ನನ್ನು ಎರಡೂ ಕಡೆಗೆ ಎಳೆಯಬೇಡಿರಿ. ನಾನು ನಿಮ್ಮನ್ನು ಎಳೆದೊಯ್ಯುವೆ. ನೀವು ಸುಮ್ಮನೆ ಬನ್ನಿ, ನೀವಿಬ್ಬರೂ ಈಗ ನನ್ನ ವಶದಲ್ಲಿ. ಇಬ್ಬರು ಕಳ್ಳರನ್ನು ಹಿಡಿದಿರುವೆ'' ಎಂದು ಚೇಷ್ಟೆ ಮಾಡಿದಳು.

'ಕಳ್ಳನು ಓಡಲು ಹವಣಿಸುತ್ತಾನೆ. ಸುಮ್ಮನೆ ಬರುವದಿಲ್ಲ.' ಎಂದನು ನಾಗಾನಂದ.

'ಸಡಿಲು ಬಿಟ್ಟರೆ ಓಡಲು ನೋಡುವ. ಘಟ್ಟಿಯಾಗಿ ಕಟ್ಟಿ ಒಯ್ದರೆ, ಯಾವ ಗೊಂದಲವೂ ಇಲ್ಲ. ಕಾರ್ತೀಕನು ಪೂರ್ಣ ಕೈದಿಯಾಗಿದ್ದಾನೆ. ಅವನನ್ನು ಹಿಡಿಯದಿದ್ದರೂ ಬೆನ್ನಹಿಂದೆ ಬಂದೇ ಬರುವ. ನಿಮ್ಮನ್ನು ಮಾತ್ರ ಘಟ್ಟಿಯಾಗಿ ಹಿಡಿದುಕೊಂಡು ಹೋಗುವೆ. ನಿಮ್ಮೆರಡೂ ಕೈಗಳನ್ನು ಹಿಡಿದುಕೊಂಡು ಒಯ್ಯುವೆ.' ಎಂದಳು

'ಸ್ತ್ರೀಯರ ಒಂದೇ ಕೈಯಲ್ಲಿ, ಪುರುಷರ ಎರಡೂ ಕೈಗಳನ್ನು ಹಿಡಿಯುವಷ್ಟು ಸಾಮರ್ಥ್ಯವು ಎಲ್ಲಿರುವದು ?'' ಎಂದು ನಾಗನಂದನು ನಗುತ್ತ ನುಡಿದನು.

'ಇರುವದು. ಒಂದು ಸುಂದರವಾದ ಹೂವು, ಮಹಾನ್ ನಾಗನನ್ನು ಕೂಡ ಮುಗ್ಧಗೊಳಿಸುತ್ತದೆ. ಆ ಚಿಕ್ಕ ಹೂವಿನ ಸುಗಂಧಕ್ಕೆ ನಾಗನ ಹೆಡೆಯನ್ನು ಬಾಗಿಸುವ ಸಾಮರ್ಥ್ಯವಿರುತ್ತದೆ. ಅದನ್ನು ನೀವು ನೋಡಿರಬಹುದು ಎಂದು ಕೈ ಅಮುಕುತ್ತ ವತ್ಸಲೆ ನುಡಿದಳು.

'ನೋಡಿದ್ದೇನೆ. ಈಗ ನಾನು ಅನುಭವಿಸುತ್ತಿದ್ದೇನೆ.' ಎಂದನು ನಾಗಾನಂದ.

'ಕಾರ್ತೀಕನೆಲ್ಲಿರುವ ? ಕಾರ್ತೀಕನು ಹೋದಂತೆ ಕಾಣುತ್ತದೆ. ಅವನು ತಂದೆಗೆ ಬಹಳ ಅಂಜುವನು. ನನಗೆ ಅಂಜುಬುರುಕರು ಸೇರುವದಿಲ್ಲ. ನನಗೆ ಬೆಂಕಿಯೊಡನೆ ಹೋರಾಡುವವರು ಸೇರುತ್ತಾರೆ. ಅಂದು ನದಿಗೆ ಪೂರ

ಬರುತ್ತಲಿತ್ತು. ನಾನು ಕಾರ್ತೀಕನನ್ನು ಒದರುತ್ತಲಿದ್ದೆ. ಮರಣದೊಡನೆ ಹೋರಾಡುತ್ತಾ ನದಿಯ ಒಡಲೊಳಗೆಹೊಕ್ಕು ಹೊರಬರುತ್ತಿದ್ದೆನು. ಆದರೆ ಕಾರ್ತೀಕನು ಹೆದರಿದ. ನೀವು ಮಾತ್ರ ಧುಮುಕಿದಿರಿ! ಜೀವನವನ್ನು ಸಂಕಟದಲ್ಲಿ ನೂಕಿದಿರಿ ! ಜೀವಗಳ್ಳರು ಬೇಡ ನನಗೆ.'' ಎಂದಳು ವತ್ಸಲೆ.

'ಆದರೆ ವತ್ಸಲೇ ! ನೀನು ಮೆಲ್ಲಗೆ ನನ್ನ ಕೈಯಿಂದ ಜಾರುತ್ತಿರುವಿ.' ಎಂದನು ನಾಗಾನಂದ.

'ಮಾತಿನಲ್ಲಿ ಮರೆತೆ. ನಾಗವು ಕೈಗೆ ಸುತ್ತಿದರೆ ಅದನ್ನು ಕಡಿದೇ ಬಿಡಿಸಬೇಕಾಗುವದಂತೆ. ಹಾಗೆ ಗಟ್ಟಿಯಾಗಿ ಹಿಡಿಯುವೆ. ವತ್ಸಲೆಯ ಈ ವಜ್ರಮುಷ್ಟಿಯನ್ನು ಯಾರು ಬಿಡಿಸುವರು ನೋಡೋಣ.' ಎಂದಳು ವತ್ಸಲೆ.

ಇಬ್ಬರೂ ಮನೆಗೆ ಬಂದರು. ಅಜ್ಜಿಯು ಅಂಗಳದಲ್ಲಿ ದಾರೀ ಕಾಯುತ್ತಿದ್ದಳು.

'ಅಜ್ಜೀ, ಬಂದೆವು. ಕತ್ತಲೆಯಲ್ಲಿ ತೊಂದರೆಯಾಯಿತು. ಇವರು ಎತ್ತೋ ಹೋದರು. ಹುಡುಕಿಕೊಂಡು ಬಂದೆ. ನೀನು ಬಹಳ ಹಾದೀ ನೋಡಿರಬಹುದು' ಎಂದು ವತ್ಸಲೆಯು ನುಡಿದಳು.

"ನೀವು ಬಂಗಾರವನ್ನು ಸುಲಿಯಲು ಹೋಗಿದ್ದಿರಷ್ಟೇ ! ಅದು ನಿಮಗೆ ಭಾರವಾಗಿರಬಹುದು. ಸ್ವಲ್ಪ ತಂದರೆ ಭಾರವಾಗುವದಿಲ್ಲ. ದೇವರು ಕೊಟ್ಟನೆಂದು ಆತುರುಕರಾಗಬೇಕೆ ? ಹೆಚ್ಚು ಹೊತ್ತರೆ, ಜೋಳಿಗೆಯೂ ಹರಿದೀತು. ಎಲ್ಲವೂ ಮಣ್ಣುಪಾಲಾದೀತು. ಬಹಳ ಸೂರೆಗೊಂಡಿಲ್ಲವಷ್ಟೇ?" ಎಂದು ಅಜ್ಜಿ ಚೇಷ್ಟೆ ಮಾಡಿದಳು.

'ಅಜ್ಜೀ, ಬಂಗಾರವು ಕಾಣುತ್ತದೆ, ಆದರೆ ಮಾಯವಾಗುತ್ತದೆ' ಎಂದನು ನಾಗಾನಂದ.

'ಆದರೆ ಅದರ ನೆನಪು ಮಾತ್ರ ಕೊನೆಯವರೆಗೂ ಉಳಿಯುತ್ತದೆ' ಎಂದಳು ಅಜ್ಜಿ.

'ಅಜ್ಜೀ, ಇಂದು ಹಸಿವೆಯು ಬಹಳವಾಗಿದೆ, ನನಗೆ ಇಷ್ಟು ಹಸಿವೆ ಎಂದೂ ಆಗಿರಲಿಲ್ಲ. ನನ್ನ ಶರೀರಕ್ಕೆ ಹಸಿವೆಯಾಗಿದೆ. ಕಣ್ಣಲ್ಲಿ ಹಾಕು

ತುತ್ತು, ಕಿವಿಯಲ್ಲಿ ಹಾಕು ತುತ್ತು, ಬಾಯಿಯಲ್ಲಿ ಹಾಕು ತುತ್ತು, ಅಗ್ನಿಯು ಪ್ರಜ್ವಲಿತವಾಗಿದೆ. ಇಷ್ಟು ಹೊತ್ತಿನವರೆಗೆ ನನಗೆ ಅದರ ಅರಿವೇ ಇದ್ದಿಲ್ಲ. ಬೇಗ ಬಡಿಸು, ಇಲ್ಲದಿದ್ದರೆ ನಿನ್ನನ್ನು ತಿನ್ನುವೆನು' ಎಂದು ವತ್ಸಲೆಯು ಹುಚ್ಚಿಯಂತೆ ಬಡಬಡಿಸಹತ್ತಿದಳು.

"ಏ ಹುಚ್ಚೀ, ಹಾಗೆಲ್ಲ ಮಾತನಾಡಬಾರದು. ನಡೆ ಒಳಕ್ಕೆ. ನೀವೂ ನಡೆಯಿರಿ. ಈಕೆಯು ಹೀಗೆಯೇ ಮಾತನಾಡುತ್ತಾಳೆ. ಒಮ್ಮೊಮ್ಮೆ ಸುಮ್ಮನೆ ಕೂಡುತ್ತಾಳೆ. ಒಮ್ಮೊಮ್ಮೆ ಹೀಗೆಯೇ ಪುರಾಣ ಬಿಚ್ಚುತ್ತಾಳೆ. ಹುಚ್ಚು ಹುಡುಗಿ, ಆಶ್ರಮದಲ್ಲಿದ್ದೂ ಹೀಗಾಗಿದ್ದಾಳೆ ಹುಚ್ಚಿ." ಎಂದಳು ಸುಶ್ಮಿತೆ.

"ಆಶ್ರಮದಲ್ಲಿದ್ದು ಹುಚ್ಚರೇ ಆಗುತ್ತಾರೆ. ಜಗತ್ತಿನ ಆಶ್ರಮದಲ್ಲಿದ್ದು ಬುದ್ಧಿವಂತರಾಗುತ್ತಾರೆ" ಎಂದನು ನಾಗಾನಂದ.

"ಬುದ್ಧಿವಂತಿಕೆಯನ್ನು ಕಲಿಸುವ ಆಶ್ರಮವು ಒಂದೇ ಇದೆ" ಎಂದಳು ಸುಶ್ಮಿತೆ.

"ಅದು ಎಲ್ಲಿದೆ?" ಎಂದು ವತ್ಸಲೆ ಕೇಳಿದಳು.

"ಅದರ ಹೆಸರು ಏನು?" ಎಂದು ನಾಗಾನಂದನು ವಿಚಾರಿಸಿದನು.

"ಆಗ ಸುಶ್ಮಿತೆಯು ಗಂಭೀರಳಾಗಿ "ಗೃಹಸ್ಥಾಶ್ರಮ" ಎಂದಳು.



## ೨೫

ಆಸ್ತಿಕ ಮಹರ್ಷಿಯು, ಒಂದುದೊಡ್ಡ ಆಲದಮರದ ಕೆಳಗೆ ಬಂಡೆ ಗಲ್ಲಿನ ಮೇಲೆ ಕುಳಿತಿದ್ದಾನೆ. ಆ ವಟ ವೃಕ್ಷವು ಕೂಡ, ಒಬ್ಬ ತಪೋಧನನಂತೆ ಶೋಭಿಸುತ್ತಿದ್ದಿತು. ಅದರ ನೂರಾರು ಬೇರುಗಳು ಜೋತಾಡುತ್ತಲಿದ್ದವು. ಅವುಗಳಲ್ಲಿ ಎಷ್ಟೊ ನೆಲದಲ್ಲಿ ಸೇರಿ ಮತ್ತೆ ಚಿಗಿತು, ಹೆಮ್ಮರವಾಗಿ ಬೆಳೆಯುತ್ತಿದ್ದವು. ಹೀಗೆಯೇ ಹಬ್ಬುತ್ತ ನಡೆದ್ದಿತ್ತು ಆ ವೃಕ್ಷ. ಅದು ಕಾರ್ತಿಕ ಮಾರ್ಗಶಿರ್ಷ ಮಾಸ. ವಟ ವೃಕ್ಷವು ಫಲಭರಿತವಾಗಿತ್ತು. ಹಸುರೆಲೆಗಳ ಮಧ್ಯದಲ್ಲಿ, ಕೆಂಪು ಫಲಗಳಿಂದ ಶೋಭಿಸುವ ಆ ವೃಕ್ಷವು ರುದ್ರಾಕ್ಷಿಯನ್ನು ಧರಿಸಿದಂತೆ ಕಾಣುತ್ತಿದ್ದಿತು. ಆದೇ ಸೂರ್ಯೋದಯವಾಗಿತ್ತು ಆಶ್ರಮದ ಕುಮಾರರು ಕಸಗೂಡಿಸುವ ಮೊದಲೇ ಸೂರ್ಯನಾರಾಯಣನು ಕತ್ತಲೆ ರೂಪವಾದ ಹೊಲಸನ್ನೆಲ್ಲ ಉಡುಗಿ ತೆಗೆದಿದ್ದನು. ಔಷಧಕ್ಕೂಕೂಡ ಕತ್ತಲೆಯು ಅಲ್ಲಿ ಉಳಿದಿರಲಿಲ್ಲ. ಸೂರ್ಯನು ಕತ್ತಲೆಯನ್ನು ಹೊಡೆದೋಡಿಸಿದ್ದರೆ, ವಾಯುವು ಬೆಳಗಿನ ಜಾವದಲ್ಲಿಯೇ ಆಶ್ರಮದಲ್ಲಿಯ ಕಸಕಡ್ಡಿಗಳನ್ನು ಹಾಗು ಬಿದ್ದ ತರಗೆಲೆಗಳನ್ನೆಲ್ಲ ದೂರ ಸಾಗಿಸಿದ್ದನು. ಮಂಜು ಥಳಿಯನ್ನು ಹಾಕಿತ್ತು. ಹೂಗಳ ಮಕರಂದವು ಹಬ್ಬಿ ಪಾವಿತ್ರ್ಯ ಹಾಗು ಪ್ರಸನ್ನತೆಯನ್ನುಂಟು ಮಾಡಿತ್ತು, ಹಕ್ಕಿಗಳು ಉದಯಗೀತಗಳನ್ನು ಹಾಡುತ್ತಿದ್ದವು. ನಿರ್ಮಲವಾದ ಆಶ್ರಮವು ಪ್ರಸನ್ನವಿದ್ದಿತು. ವಟುಗಳು ಸ್ನಾನ ಮಾಡಿ ಶುಚಿರ್ಭೂತರಾಗಿ ಪಾಠಕ್ಕೆ ಬಂದು ಕುಳಿತಿದ್ದಾರೆ. ಎದುರಿಗೆ, ಆಸ್ತಿಕರು ಕುಳಿತಿದ್ದಾರೆ.

"ಓಂ ಅಸತೋಮಾ ಸದ್ಗಮಯ.
ಓಂ, ತಮಸೋಮಾ ಜ್ಯೋತಿರ್ಗಮಯ.
ಓಂ, ಮೃತ್ಯೋಮಾ ಅಮೃತಂ ಗಮಯ"

ಎಂಬ ಚಿಕ್ಕ ಹಾಗು ಅರ್ಥಗರ್ಭಿತವಾದ ಪ್ರಾರ್ಥನೆಯು ಶಾಂತಿ ಮಂತ್ರದ ಪಠಣದೊಡನೆ ನಡೆಯಿತು. ಆಸ್ತಿಕರು ಮಾತನಾಡ ಹತ್ತಿದ್ದರು.

"ನಾನಿಂದು ತೀರ ಸ್ವಲ್ಪ ಹೇಳುವವನಿರುವೆ. ಆ ಮೇಲೆ ನೀವು ನಿಮ್ಮ ನಿಮ್ಮ ಕಾರ್ಯಗಳಿಗೆ ಹೋಗಬಹುದು. ನಾನು ನಿಮಗೆ ಹೇಳುತ್ತಿರುವದೆಲ್ಲ ನಿಮ್ಮ ಜೀವನವನ್ನು ಉದ್ದೇಶಿಸಿಯೇ! ಪ್ರತಿಯೊಬ್ಬರ ಜೀವನಕ್ಕೂ ಉಪ ಯುಕ್ತವಾದ ಸಂಗತಿಗಳನ್ನೇ ನಾನು ಹೇಳುವೆ. ನೀವೆಲ್ಲರೂ ಬಿಲ್ಲು ವಿದ್ಯೆ ಯಲ್ಲಿ ಬಲ್ಲಿದರಾಗುವದಿಲ್ಲ. ಎಲ್ಲರೂ ಗಾಯಕರಾಗುವದಿಲ್ಲ. ನೀವೆಲ್ಲ ರಾಜಕಾರಣಿಗಳಾಗುವದಿಲ್ಲ. ಬ್ರಹ್ಮಜ್ಞಾನಿಗಳಾಗುವದಿಲ್ಲ. ಆದರೆ ನಾನು ಪ್ರಾರ್ಥನೆಯ ಸಮಯದಲ್ಲಿ ಹೇಳುವ ಉಪದೇಶವು, ನೀವು ಎಲ್ಲಿಯೇ ಇರಲಿ, ಯಾವ ಕೆಲವನ್ನೇ ಮಾಡುತ್ತಿರಲಿ, ನಿಮಗೆ ಉಪಯುಕ್ತವಾಗುವದು.

'ಅಜಿತಾ! ಒಂದು ಅತ್ತಿಯ ಹಣವನ್ನು ತೆಗೆದುಕೊಂಡು ಬಾ' ನೋಡೋಣ. ಅಜಿತನು ಕೂಡಲೆ ತಂದನು.

'ಒಂದನ್ನು ಒಡೆ' ಎಂದನು ಆಸ್ತಿಕ.

'ಒಡೆದೆ'

'ನಿನಗೆ ಅದರಲ್ಲಿ ಏನು ಕಾಣಿಸುವದು ?'

'ಒಳಗೆ ನೂರಾರು ಬೀಜಗಳು ಒಂದಕ್ಕೊಂದು ಹೊಂದಿಕೊಂಡು ಲಕಲಕ ಹೊಳೆಯುತ್ತಿವೆ. ಬಹು ಸುಂದರವಾದ ದೃಶ್ಯ ಇದು. ಅದರಲ್ಲಿರುವ ಹುಳಗಳನ್ನು ನೋಡಿರಿ, ಹಾಗು ಅದರಲ್ಲಿರುವ ಪದರುಗಳನ್ನು ನೋಡಿರಿ, ಎಂದು ಅಜಿತನು ಉತ್ತರಿಸಿದನು.

'ಈ ಒಂದೇ ಹಣ್ಣಿನಲ್ಲಿ, ನೂರಾರು ಬೀಜಗಳು ಆನಂದದಿಂದಿವೆ. ಸಹಕಾರದಿಂದ ಕೂಡಿಕೊಂಡಿವೆ. ಈ ಭೂತಲದಲ್ಲಿ ನೀವೆಲ್ಲರೂ ಕೂಡಿ ಕೊಂಡು ಆನಂದದಿಂದ ವಾಸಿಸಿರಿ. ನಾಗ ಹಾಗು ಆರ್ಯರು ಜಗಳವಾಡ ಬೇಡಿರಿ. ಪರಸ್ಪರರು ಸಹಕಾರಿಗಳಾಗಿ ಜೀವಿಸಿರಿ, ತಿಳಿಯಿತೆ ? ಎಂದನು. ಆಸ್ತಿಕ.

'ನನ್ನ ತಂತ್ರಿಯೂ ಇದನ್ನೇ ಹೇಳುತ್ತದೆ' ಎಂದನು ಸುಹಾಸ.

'ನಿನ್ನ ತಂತ್ರಿಯಲ್ಲಿ ಏನಿದೆ ? ಎಂದು ಕೇಳಿದ ಆಸ್ತಿಕ.

"ಅನೇಕ ತಂತಿಗಳು, ಆದರೆ ಎಲ್ಲವುಗಳ ಸಹಕಾರದಿಂದ, ಸಂಯಮೀಜೀವನದಿಂದ, ಮಧುರ ಸಂಗೀತವು ನಿರ್ಮಾಣವಾಗುವದು." ಎಂದನು ಸುಹಾಸ.

ಎಲ್ಲೆಡೆಯಲ್ಲಿಯೂ ಇದೇ ನಿಯಮ. ಈ ಆಶ್ರಮದಲ್ಲಿ ಅನೇಕ ವೃಕ್ಷಗಳಿವೆ. ಅವೆಲ್ಲವೂ ಆನಂದದಿಂದ ಇವೆ. ಅನೇಕ ಹೂ ಬಳ್ಳಿಗಳಿವೆ ಅವು ಜಗಳವಾಡುವದಿಲ್ಲ. ತದ್ವಿರುದ್ಧವಾಗಿ ಆನಂದವನ್ನೀಯುತ್ತವೆ. ನದಿಯಲ್ಲಿ ತೆರೆಗಳು ಒಂದನ್ನೊಂದು ಅಪ್ಪುತ್ತವೆ. ಒಂದರಮೇಲೊಂದು ಬೀಳುತ್ತವೆ. ಕುಣಿಯುತ್ತವೆ. ಆದರೆ ನೋಡಲು ಅದೆಷ್ಟು ಚಂದ! ಎಂದನು ಇನ್ನೊಬ್ಬನು.

'ವಾಮನಾ, ನೀನೊಂದು ಸಸಿಯನ್ನು ಕಿತ್ತುಕೊಂಡು ಬಾ ನೋಡೋಣ.' ಎಂದರು ಗುರುಗಳು.

ವಾಮನನು ಸಸಿಗಳನ್ನು ಕಿತ್ತುಕೊಂಡು ಬಂದನು

'ಎಲಾ, ನಾನು ಒಂದೇ ತರಲು ಹೇಳಿದ್ದಿಲ್ಲವೇ? ಇರಲಿ. ಅದರಲ್ಲಿ ಒಂದನ್ನು ಕೈಯಲ್ಲಿ ತೆಗೆದುಕೋ! ಅದಕ್ಕೆ ಬೇರು ಇವೆಯೋ?'

'ಬೇರು ಇಲ್ಲದೆ ಅದು ಇರುವದು ಹೇಗೆ?.' ಎಂದನು ವಾಮನ.

'ಎಷ್ಟು ಇವೆ?'

'ಅನೇಕ ಇವೆ?'

'ಅವು ಯಾವ ದಿಕ್ಕಿಗೆ ಇವೆ?;

'ಎಲ್ಲ ದಿಕ್ಕುಗಳಿಗೆ'

'ಇದರ ಅರ್ಥವೇನು ಗೊತ್ತಾಗಿದೆಯೋ ನಿಮಗೆ? ಈ ಸಸಿಯನ್ನು ಕಿತ್ತುತರಲು ಏಕೆ ಹೇಳಿದೆ? ಯಾರಿಗಾದರೂ ಇದು ಹೊಳೆದಿದೆಯೋ?' ಎಂದನು ಗುರುದೇವ!

ಶುದ್ಧಮತಿಯು 'ನಾನು ಹೇಳುವೆ' ಎಂದಳು.

'ಹೇಳು ಹಾಗಾದರೆ.' ಎಂದರು ಗುರುಗಳು.

'ಗಿಡವು ಯಾವ ರೀತಿಯಿಂದ ತನ್ನ ಬೇರುಗಳನ್ನು ಎಲ್ಲಕಡೆಗೆ ಹಬ್ಬಿಸಿ, ಸತ್ವವನ್ನು ಹೀರಿಕೊಂಡು, ತನ್ನ ಬೆಳವಣಿಗೆಯನ್ನು ಮಾಡಿಕೊಳ್ಳುವದೋ, ಹಾಗೆಯೇ ಮಾನವನೂ ಎಲ್ಲೆಲ್ಲಿ ಬೆಳಕು ಸಿಗುವದೋ,

ಒಳ್ಳೇದೆಂದು ತೋರುವದೋ ಅದೆಲ್ಲವನ್ನು ಸ್ವೀಕರಿಸಿ, ಸ್ವತಃದ ವಿಕಾಸವನ್ನು ಮಾಡಿಕೊಳ್ಳಬೇಕು. ಯಾವದು ತನ್ನ ಬೇರುಗಳನ್ನು ದೂರದವರೆಗೆ, ಹಬ್ಬಿಸುವದೋ ಅದು ದೃಢವಾಗಿ ಬಾಳುತ್ತದೆ. ಇದೇ ಅಲ್ಲವೇ ನಿಮ್ಮ ಅಭಿಪ್ರಾಯ ? ,,

' ಅಹುದು, ಆರ್ಯರು ನಾಗರಲ್ಲಿಯ ಒಳ್ಳೇ ಗುಣಗಳನ್ನೆಲ್ಲ ಸ್ವೀಕರಿಸಬೇಕು. ನಾಗರು ಆರ್ಯರ ಗುಣಗಳನ್ನು ಸ್ವೀಕರಿಸಬೇಕು. ಏನೂ ಗುಣವಿಲ್ಲದ ವಸ್ತುವಿಲ್ಲ, ಮನುಷ್ಯನಿಲ್ಲ. ಈ ಸೃಷ್ಟಿಯಲ್ಲಿ. ವಿಷದಲ್ಲಿಯೂ ಕೂಡ ಅಮೃತವಿದೆ. ಎಷ್ಟೋ ವಿಷಗಳು ಅಪ್ರತಿಮ ಔಷಧಿಗಳಿವೆ. ಉಪಯೋಗಿಸಿಕೊಳ್ಳುವವನ ಕೌಶಲವನ್ನು ಎಲ್ಲವೂ ಅವಲಂಬಿಸಿದೆ. ನಾವು ಎಲ್ಲ ವಸ್ತುಗಳ ಉಪಯೋಗವನ್ನು ಮಾಡಿಕೊಳ್ಳುವೆವು. ಆದರೆ ಮಾನವರ ಉಪಯೋಗವನ್ನು ಮಾಡಿಕೊಳ್ಳಲು ಆಗದಿರುವದು ಆಶ್ಚರ್ಯದ ಸಂಗತಿಯು ! ಈ ಆಶ್ರಮದಿಂದ ಹೊರಬೀಳುವ ತರುಣರಾದರೂ ಮಾನವರ ಉಪಾಸನೆಯನ್ನು ಮಾಡುವವರಾಗಬೇಕು.

ಈಗ ಎಲ್ಲ ಕಡೆಗೆ ಆರ್ಯ ಹಾಗು ನಾಗರಲ್ಲಿ ದ್ವೇಷಾಗ್ನಿಯನ್ನು ಹೊತ್ತಿಸುವ ಕಾರ್ಯವು ಪ್ರಕಟವಾಗಿಯೇ ನಡೆದಿದೆ. ಅಪ್ರತ್ಯಕ್ಷವಾಗಿಯೂ ನಡೆದಿವೆ. ದ್ವೇಷಸಂವರ್ಧನೆಯ ಸಂಘಗಳೂ, ಆಶ್ರಮಗಳೂ, ಶಾಲೆಗಳೂ ಪ್ರಾರಂಭವಾಗಿವೆ. ಇಂತಹ ಜಗತ್ತಿನಲ್ಲಿ ಶಾಂತಿಯ ದೂತರಾಗಿ ಹೊರಬೀಳಿರಿ,, ಎಂದು ಆಸ್ತಿಕನು ಗಂಭೀರವಾಗಿ ನುಡಿದನು.

" ಆದರೆ ಕೆಲವು ಜನರು ದುಷ್ಟರೇ ಇರುತ್ತಾರೆ ' ದುರ್ಜನಃ ಪರಿಹರ್ತವ್ಯಃ, " ಬೋಧಾಯನ ನೆಂದನು.

" ದುಷ್ಟತನವೆಂದರೆ ತೊಗಟೆ ಇದ್ದಂತೆ. ಯಾವದಾದರೊಂದು ಗಡ್ಡೆಯು ನೋಡಲು ಚನ್ನಾಗಿರದ್ದರೆ ಅದನ್ನು ನಾವು ಕೂಡಲೇ ಒಗೆದು ಬಿಡುವದಿಲ್ಲ. ಅದನ್ನು ಹೆಚ್ಚಿ ನೋಡುತ್ತೇವೆ. ಚೆನ್ನಾಗಿದ್ದಷ್ಟನ್ನು ಸ್ವೀಕರಿಸುತ್ತೇವೆ. ನಾವು ಈಗ ಒಂದು ವಿನೋದದ ಪ್ರಯೋಗವನ್ನು ಮಾಡುವಾ. ನಿಮ್ಮೊಳ್ಳರಲ್ಲಿ ನಿದ್ದೆಬಡಕರಾರಿದ್ದಾರೆ ? " ಎಂದು ನಕ್ಕು ಗುರುದೇವನು ವಿಚಾರಿಸಿದನು.

" ನಾಗೇಶ "ಎಂದು ಆರ್ಯವೃತನು ಹೇಳಿದನು.

" ಎಂದು ನೋಡಿರುವಿ ? ಆರ್ಯವೃತನೇ ಸೋಮಾರಿಯಾಗಿದ್ದಾನೆ " ಎಂದು ನಾಗೇಶನು ಸಿಟ್ಟಿನಿಂದ ನುಡಿದನು.

" ಸೋಮಾರಿಯೆಂದರೆ ನಿದ್ದೆಬಡಕನಲ್ಲ. ನಾನು ಬಿದ್ದುಕೊಂಡಿದ್ದರೂ ಎಚ್ಚರವಾಗಿಯೇ ಇರುವೆ " ಎಂದು ಆರ್ಯವೃತನು ಉತ್ತರಿಸಿದನು.

" ಆದಂತೂ ಬಹಳ ಕೆಟ್ಟದ್ದು. ನನಗೆ ನಿದ್ದೆಹತ್ತಿರುತ್ತದೆ. ನಾನು ಸುಮ್ಮನೆ ಅಡ್ಡಾಗುವದಿಲ್ಲ " ನಾಗೇಶನೆಂದನು.

" ಅಂದರೆ ನಿನಗೆ ನಿದ್ದೆ ಬಹಳವೆಂಬುದನ್ನು ನೀನೇ ಒಪ್ಪಿದಂತಾಯಿತು. " ಎಂದನು ಆಸ್ತಿಕ. ಹುಡುಗರೆಲ್ಲ ನಗತೊಡಗಿದರು.

" ನಿದ್ದೆ ಮಾಡುವದು ಕೆಡುಕೇ" ನಾಗೇಶನು ವಿಚಾರಿಸಿದ.

" ಅಲ್ಲ ! ಅವನು ಹೆಚ್ಚು ಅನ್ನಕ್ಕೆ ಆಶ್ರಯವನ್ನೀಯುತ್ತಾನೆ. ಅವನು ಅನ್ನಬ್ರಹ್ಮದ ಉಪಾಸಕನಾಗುತ್ತಾನೆ. " ಪ್ರದ್ಯುಮ್ನನೆಂದನು.

" ಬಹಳ ಉಣ್ಣುವವನು ಕೆಡುಕನೆ ?" ನಾಗೇಶನು ವಿಚಾರಿಸಿದನು.

" ಏನೂ ಇಲ್ಲ. ಹೊಡೆದಾಟದಲ್ಲಿ ಪ್ರಮುಖನಾಗುವನು. ಎಲ್ಲರನ್ನು ಆಳಿಸುವನು" ಎಂದನು ಹಲಧರ

" ಬರಲೇನು ಆಳಿಸಲಿಕ್ಕೆ, ಗುದ್ದೇನು ! " ನಾಗೇಶನೆಂದನು.

" ಆದರೆ ನಾಗೇಶನು ಅತ್ಯುತ್ತಮ ಸೇವಕನಿದ್ದಾನೆ. ಅಂದು ಪ್ರವಾಸಿಕರ ನಾವು ನದಿಯಲ್ಲಿ ತಿರುವಿ ಬಿದ್ದಿತು. ಹಾಹಾಕಾರ ವೆದ್ದಿತು ಅಂದು ನಾಗೇಶನು ಎಷ್ಟು ಜನರನ್ನು ಉಳಿಸಿದನು, ಬಲವು ಕೆಡುಕಲ್ಲ, ಬಲದ ಹಿಂದೆ ಪವಿತ್ರ ಉದ್ದೇಶವಿರಬೇಕು ಇಷ್ಟೇ ! ನಾಗೇಶಾ. ಒಮ್ಮೆ ನಗು ನೋಡೋಣ! ಸಿಟ್ಟು ಇಳಿಯಿತೇ ? ಈಗ ಒಂದು ಪ್ರಯೋಗವನ್ನು ಮಾಡುವಾ. ಇಲ್ಲಿ ನೀನು ಮಲಗು. ನಿನ್ನ ಮೇಲೆ ಬಹಳ ಕಂಬಳಿಗಳನ್ನು ಹೊಚ್ಚುತ್ತೇವೆ. ನಿದ್ದೆಹತ್ತಿದರೂ ಸರಿಯೆ. ನಿದ್ದೆ ಹತ್ತಿಯೇ ತೀರ ಬೇಕೆಂದೇನೂ ಇಲ್ಲ. ಮತ್ತು ಆರ್ಯ-ವೃತ ನೀನೂ ಬಾ, ನಿನ್ನ ಮೇಲೆಯೂ ಅಷ್ಟೇ ಕಂಬಳಿಗಳನ್ನು ಹೊಚ್ಚುತ್ತೇವೆ.

ಇಬ್ಬರೂ ಮಲಗಿರಿ. ನಗುತ್ತೀರೇನು ? ಮಲಗಿರಿ” ಎಂದನು ಆಸ್ತಿಕ. ಆ ಇಬ್ಬರೂ ಹುಡುಗರು ಮಲಗಿದರು.

“ನಾನು ನನ್ನ ಕೊಳಲು ಬಾರಿಸುತ್ತೇನೆ. ಅಂದರೆ ಇವರಿಗೆ ನಿದ್ದೆ ಹತ್ತೀತು” ಎಂದನು ಮುರಲೀಧರ.

“ನಾನು ಹಾಡುತ್ತೇನೆ. ಸಾಮವೇದದಲ್ಲಿಯ ಮಂತ್ರವನ್ನು ಅನ್ನುತ್ತೇನೆ” ಜಾನಶ್ರುತಿಯೆಂದನು.

ಅಲ್ಲಿ ಒಂದು ದೊಡ್ಡ ಪ್ರಯೋಗವು ನಡೆಯಿತು. ಎಲ್ಲರೂ ಶಾಂತರಾಗ ಹತ್ತಿದ್ದರು. ಸಂಗೀತವು ನಡೆದಿತ್ತು. ಕೊಳಲು ಬಾರಿಸುತ್ತಿದ್ದರು. ವೇದ ಮಂತ್ರವನ್ನು ಅನ್ನುತ್ತಿದ್ದರು. ಅಪೋ ನೋಡಿರಿ! ನಾಗೇಶನ ಕಣ್ಣುಗಳು ಮುಚ್ಚತೊಡಗಿದವು, ಸ್ವಲ್ಪ ತೆರೆದಿವೆ, ಮುಚ್ಚಿದವು ಮುಚ್ಚಿದವು. ಮತ್ತು ಆರ್ಯವ್ರತನಿಗೂ ನಿದ್ದೆಹತ್ತತೊಡಗಿತು. ಕಣ್ಣು ಮುಚ್ಚಿ ಮಲಗಿಕೊಂಡರು.

“ಇಬ್ಬರೂ ಮಲಗಿದರಲ್ಲವೇ ?” ಎಂದು ಆಸ್ತಿಕನು ಕೇಳಿದನು.

“ನಾಗೇಶನಂತೂ ಯಾವಾಗಲೋ ಮಲಗಿದ್ದಾನೆ. ಮಲಗು ಅಂದರೆ ಸಾಕು, ಅವನು ಮಲಗುತ್ತಾನೆ.” ಎಂದನು ಹೃಷಿಕೇಶ.

“ಆದರೆ ಏಳು ಎಂದರೆ ಮಾತ್ರ ಏಳುವದಿಲ್ಲ. ಅವನು ಅರ್ಜುನನ ಬಂಧುವಾಗಿದ್ದಾನೆ. ಅರ್ಜುನನಿಗೆ ‘ಗುಡಾಕೇಶ’ನೆಂದು ಹೆಸರು. ನಿದ್ರೆಯು ಅವನ ವಶದಲ್ಲಿತ್ತು. ಮಲಗಬೇಕೆಂದೆನಿಸಿದರೆ ಮಲಗುವನು, ಏಳಬೇಕೆನಿಸಿದರೆ ಏಳುವನು. ಇಚ್ಛಾಮರಣವೆಂದರೆ ಒಂದು ಪ್ರಕಾರದ ಇಚ್ಛಾಜೀವನವೇ. ನಾವೀಗ ಒಂದು ಮೋಜನ್ನು ಮಾಡುವಾ. ನೀವೆಲ್ಲರೂ ನೋಡಿರಿ” ಎಂದನು ಆಸ್ತಿಕ.

ಆಸ್ತಿಕನು ಆರ್ಯವ್ರತನ ಬಳಿಗೆ ಹೋದನು. ಅವನ ಮೈಮೇಲೆ ಹೊಚ್ಚಿದ ಹೊದಿಕೆಗಳನ್ನು ತೆಗೆಯ ಹತ್ತಿದನು. ಎರಡು ಹೊದಿಕೆಗಳನ್ನು ತೆಗೆಯುವಷ್ಟರಲ್ಲಿ, ಅವನು ಎಚ್ಚತ್ತನು. ಆಮೇಲೆ ಅಸ್ತಿಕನು ನಾಗೇಶನ ಕಡೆಗೆ ತಿರುಗಿದನು. ಅವನ ಮೈಮೇಲಿನ ಹೊದಿಕೆಗಳನ್ನೆಲ್ಲ ತೆಗೆದರೂ ಸಹ, ಅವನಿಗೆ ಎಚ್ಚರವಾಗಲಿಲ್ಲ “ನಾಗೇಶ, ನಾಗೇಶ” ಎಂದು ಮೆಲ್ಲಗೆ ಒದರಿದನು. ಆದರೂ ಎಚ್ಚರಿಯುಲಿಲ್ಲ. ಕಡೆಗೆ “ನಾಗೇಶ, ನಾಗೇಶ” ಎಂದು ಗಟ್ಟಿ

ಯಾಗಿ ಒದರಿ ಅವನನ್ನು ಅಲುಗಾಡಿಸಿದ ಮೇಲೆ ಅವನು ಕಣ್ಣನ್ನು ಸ್ವಲ್ಪ ತೆರೆದನು. ಆಮೇಲೆ ಗಟ್ಟಿಯಾಗಿ ಅಲುಗಾಡಿಸಿದ ನಂತರ ಅವನು ಎದ್ದನು.

"ಆರ್ಯವ್ರತನಿಗೆ ಬೇಗನೆ ಎಚ್ಚರಿಕೆಯಾಯಿತು. ನಾಗೇಶನಿಗೆ ಹಿಂದುಗಡೆ ಎಚ್ಚರವಾಯಿತು. ಆದರೆ ಇಬ್ಬರೂ ಎಚ್ಚರಾದರು. ಒಬ್ಬರಿಗೆ ಬೇಗ, ಒಬ್ಬರಿಗೆ ತಡ. ಹಾಗೆಯೇ ಮಾನಸಿಕ ಹಾಗೂ ಬೌದ್ಧಿಕ ಜಾಗೃತಿಯ ಸ್ಥಿತಿ ಕೆಲವರಿಗೆ ಬೇಗನೆ ತಿಳಿಯುತ್ತದೆ, ಕೆಲವರಿಗೆ ತಡವಾಗಿ ತಿಳಿಯುತ್ತದೆ. ಕೆಲವರಿಗೆ ಕೆಲವು ಸಂಗತಿಗಳು ಬೇಗನೆ ತಿಳಿದರೆ, ಬೇರೆ ಕೆಲವರಿಗೆ ಬೇರೆ ಕೆಲವು ಸಂಗತಿಗಳು ತಿಳಿಯುತ್ತವೆ. ಆದುದರಿಂದ ಮನೋಬುದ್ಧಿಗಳಿಗೆ ಸಂಸ್ಕಾರವಾಗುವಂತೆ ನಾವು ವಾತಾವರಣವನ್ನು ನಿರ್ಮಿಸಬೇಕು. ರೋಗಿಯ ಹತ್ತರ ಇನ್ನೊಬ್ಬ ರೋಗಿಯನ್ನೇಕೆ ನಿಲ್ಲಿಸಬೇಕು? ಅವನ ಹತ್ತರ ಹೂಗಳನ್ನೂ ಸುಗಂಧ ದ್ರವ್ಯವನ್ನೂ ಇಡಬೇಕು. ಅವನ ಮನಸ್ಸಿಗೆ ಉಲ್ಲಾಸ ಎನಿಸುವಂತೆ ಪ್ರಕಾಶ ಹಾಗೂ ಸ್ವಚ್ಛತೆಯನ್ನು ಕಾಯಬೇಕು. ಅಂದರೆ ಅವನಿಗೆ ಒಳ್ಳೆಯದಾಗುವದು. ಹಾಗು ಅವನ ಸೇವೆಯನ್ನು ಮಾಡಿದಂತಾಗುವದು. ಆದುದರಿಂದ ಯಾರ ಮನಸ್ಸು ದೋಷಯುಕ್ತವೆಂದು ನಮಗೆ ಅನಿಸುವದೋ, ಅಲ್ಲಿ ಸುಗುಣಗಳನ್ನು ಬೀರುವ ವಸ್ತುಗಳನ್ನೂ, ಪ್ರೇಮವನ್ನೂ ಅವನೆದುರಿಗಿಟ್ಟು ಅವುಗಳ ಉಗ್ರತೆಯು ಕಡಿಮೆಯಾಗುವಂತೆ ಪ್ರಯತ್ನಿಸುವದು ಅವಶ್ಯವಾಗಿದೆ. ಗಾಯಕರ ಮನೆಯ ನಾಯಿಯೂ ಹಾಡುವದಂತೆ ಹಾಗೆಯೇ ಸುಂದರವಾದ ವಾತಾವರಣವನ್ನು ನಿರ್ಮಿಸುವದೂ, ನಮ್ಮನ್ನೇ ಕೂಡಿದೆ. ಆರ್ಯರು ಸೇವಾಮಯ, ಸಹಕಾರ್ಯಮಯ, ಪ್ರೇಮಮಯ ಜೀವನವನ್ನು ನಾಗರೊಡನೆ ನಡೆಯಿಸಿದರೆ, ನಾಗರೂ ಇದೇ ಬಗೆಯ ಜೀವನವನ್ನೂ ಆರ್ಯರೊಡನೆ ಸಾಗಿಸಿದರೆ, ಪ್ರೇಮಸಾಗರವು ನಿರ್ಮಾಣವಾಗಲಿಕ್ಕಿಲ್ಲವೇ? ಇದರಿಂದ ಹೊಸ ವಾತಾವರಣವೇ ನಿರ್ಮಾಣವಾಗಬಹುದು. ಇಬ್ಬರಲ್ಲಿಯೂ ಸ್ನೇಹಮಯ ಜೀವನವು ಉತ್ಪನ್ನವಾಗಬಹುದು. ಇದೇ ಬಗೆಯಾಗಿ ಭಾರತದಲ್ಲಿಯ ಮಾನವ ಜಾತಿಗಳೆಲ್ಲ ಒಂದೆಡೆ ಸ್ನೇಹದಿಂದಲೂ ಪ್ರೇಮದಿಂದಲೂ ಬಂಧು ಭಾವದಿಂದಲೂ ನೆಲೆಸುವಂತೆ ಮಾಡುವಾ! ತಿಳಿಯಿತೇ. ಇದರಿಂದ ಪಾಪದ ಕವಚವು ಕಳಚೀತು? ಪ್ರೇಮವು ಎಲ್ಲರನ್ನೂ

ಬಂಧಿಸೀತು. ಸರ್ವರಲ್ಲಿಯ ಒಳಗಿನ ಸೌಂದರ್ಯವು ಎಲ್ಲರಿಗೂ ಕಂಡೀತು ! ಈ ದೃಷ್ಟಿಯಿಂದ ತಾವು ಇಲ್ಲಿಂದ ಹೊರಬೀಳಬೇಕು. ದ್ವೇಷ ದೃಷ್ಟಿಯುಳ್ಳ ನಮ್ಮ ಬಂಧುಗಳ ದೃಷ್ಟಿಯನ್ನು ಈ ಅಮೃತ ಕಲಶದಿಂದ ಪ್ರೇಮಮಯ ವಾಗಿ ಮಾಡಬೇಕು. ನಿಮಗೆ ರುಚಿಸುವ ವಿಷಯಗಳನ್ನು ಕಲಿಯಲು ಹೋಗಿರಿ. ಶಾಂತರೀತಿಯಿಂದ ನಡೆಯಿರಿ. ನಾಗೇಶನನ್ನು ರೇಗಿಸಬೇಡಿರಿ. ಇಲ್ಲದಿದ್ದರೆ ಅವನು ನಿಮ್ಮನ್ನು ಹೊಡೆಯಬಹುದು" ಎಂದು ನಗುತ್ತ ಆಸ್ತಿ ಕನು ಹೇಳಿದನು.

ಎಲ್ಲ ವಿದ್ಯಾರ್ಥಿಗಳು ಹೋದರು. ಆನಂದದಿಂದ ಬಿಚ್ಚು ಮನಸ್ಸಿನಿಂದ ಚರ್ಚಿಸುತ್ತ ನಡೆದರು. ಪಕ್ಕಬಲಿತ ಹಕ್ಕಿಯಂತೆ ಮನಬಂದಲ್ಲಿ ಹೋದರು. ಭಗವಾನ್ ಆಸ್ತಿಕನು ಎಲ್ಲಿಗೆ ನಡೆದನು ? ಎಲ್ಲೆಲ್ಲಿ ವಿದ್ಯಾರ್ಥಿಗಳು ಹೋಗಿ ದ್ದರೋ ಅಲ್ಲಲ್ಲಿ ಹೋಗಿ ಅವರ ಮೇಲೆ ಪ್ರೇಮ ವೃಷ್ಟಿಯನ್ನು ಸುರಿಸಲಿಕ್ಕೆ. ಸ್ಮಿತಮಯ ಆಶೀರ್ವಾದವನ್ನು ಮಾಡಲಿಕ್ಕೆ.



# ೬

“ ಅಜ್ಜೀ, ನಾಗಾನಂದರು ಯಾವಾಗ ಬರುವರು ? ಅವರು ಬರಬಹುದೇ ? ಗಾಳಿಯಂತೆ ಅವರು ತಿರುಗುತ್ತಲೇ ಇರುವರೇನು ? ನನ್ನನ್ನು ನೀರಿನಿಂದ ಯಾಕೆ ಉಳಿಸಿದರು ? ನೀರಿನಿಂದ ಹೊರಬಿದ್ದ ಮೀನಿನಂತೆ ನಾನು ತಳಮಳಿಸುತ್ತಿದ್ದೇನೆ. ನಾಗರು ನಿಜವಾಗಿ ದುಷ್ಟರೇ ? ಅವರಿಗೆ ಅಂತಃಕರುಣವಿಲ್ಲವೆ ? ಆದರೆ ಅವರು ದುಷ್ಟರೇ ಆಗಿದ್ದರೆ, ನನ್ನ ಸಲುವಾಗಿ ತಮ್ಮ ಜೀವನವನ್ನು ಸಂಕಟದಲ್ಲಿ ಏಕೆ ಹಾಕುತ್ತಿದ್ದರು ? ಅವರ ಈ ದಯೆಯೇ ಈಗ ನನ್ನನ್ನು ದಹಿಸುತ್ತಿರುವದು. ಅವರು ಯಾಕೆ ಹೋದರು ? ನೀನು ಅವರನ್ನು ಹೋಗಗೊಟ್ಟೆಯೇಕೆ ? ಬಕುಳ ಪುಷ್ಪದ ಹಾರವನ್ನು ರಚಿಸಿ, ಅವರ ಕೊರಳಲ್ಲಿ ಹಾಕಬೇಕೆಂದು ನಾನು ಬೇಗನೆ ಎದ್ದು ಹೋಗಿದ್ದೆ. ಅವರು ಇತ್ತ ಹೋಗಿಬಿಟ್ಟರು. ಅಲ್ಲಿ ನೋಡು, ಗೂಟಕ್ಕೆ ಹಾಕಿದ ಬಕುಳ ಪುಷ್ಪದ ಹಾರವು ಒಣಗಿ ಹೋಗಿದೆ. ಅಜ್ಜೀ ನಿನ್ನ ಹತ್ತರ ಒಣಗಿದ ಅಶೋಕ ಪುಷ್ಪವು ಮತ್ತು ಮೊಮ್ಮಗಳ ಹತ್ತರ ಒಣಗಿದ ಬಕುಳ ಪುಷ್ಪವು. ಈ ಒಣಗಿದ ಪುಷ್ಪಗಳನ್ನು ನೋಡುತ್ತಾ, ನಾವು ನಮ್ಮ ಆಯುಷ್ಯವನ್ನು ಸಾಗಿಸಬೇಕೇ ? ಅವರನ್ನು ನೀನು ತಡೆಯಲಿಲ್ಲವೇಕೆ ? ನಾನಿದ್ದರೆ ಕಟ್ಟಿಹಾಕುತ್ತಿದ್ದೆ. ನನ್ನ ಬಂಗಾರ ! ಆ ದಿವಸ ಸಿಕ್ಕ ಜೀವಂತ ಬಂಗಾರ. ಸಾದುಕಪ್ಪಿನ ನಗೆ ಮುಖದ ಸುಂದರ ಬಂಗಾರ ! ಅದನ್ನು ನೀನು ಕಳೆದೆ. ಅಂತಹ ಸುವರ್ಣ ದಿನವು ಎಂದು ಬರುವದು ? ಒಂದೊಂದು ಕ್ಷಣವು ಯುಗವಾಗತೊಡಗಿದೆ. ಎಲ್ಲಿ ಹೋಗಲಿ ? ಎಲ್ಲಿ ನೋಡಲಿ ? ಕ್ಷಣಹೊತ್ತು ಕಂಡರು, ಮಾಯವಾದರು. ನಾಗಾನಂದ ! ಆದರೆ ನನಗೆ ದಃಖವನ್ನು ಕೊಡುತ್ತಿರುವರು. ಅವರ

ನೆನಪುಗಳು ಮರೆಯಲು ಕೂಡ ಬರಲೊಲ್ಲವು. ಯಾವುದನ್ನು ನಾನು ಮರೆಯಬೇಕೆನ್ನುವೆನೋ ಅದರೊಡನೆ ಮತ್ತಿಷ್ಟು ತನ್ಮಯಳಾಗುವೆನು. ನಾನು ನನ್ನನ್ನು ಮರೆಯಬಹುದು. ಆದರೆ ಅವರನ್ನು ಮರೆಯಲಾರೆ. ಅವರು ಯಾವಾಗ ಬರಬಹುದು? ಬರಲೊಲ್ಲರೇಕೆ? ಅವರಿಗೆ ಇಲ್ಲಿ ಸಂಕೋಚವೆನಿಸುವದೇ? ಅವರಿಗೆ ಇಲ್ಲಿ ಆನಂದವಾಗಲಿಲ್ಲವೇ? ಮನಸ್ಸು ರಮಿಸಲಿಲ್ಲವೇ? ನಾನದರೋ ನಾಗರನ್ನು ದ್ವೇಷಿಸುವವಳಲ್ಲ ಈ ಊರಲ್ಲಿಯ ನನ್ನ ಗೆಳತಿಯರು ನಾಗರನ್ನು ದ್ವೇಷಿಸುವದಿಲ್ಲ. ಅವರು ಇವರ ಮೇಲಂತೂ ಪುಷ್ಪವೃಷ್ಟಿಯನ್ನೇ ಕರೆದರು. ಪುಷ್ಪಗಳ ಹಾರಗಳನ್ನು ಹಾಕಿದರು. ಇಂತಹ ಊರು ಅವರಿಗೆ ಎಲ್ಲಿ ಸಿಕ್ಕೀತು? ಮನವೇ ಹೋಗು! ಅವರನ್ನು ಹುಡುಕಲು ಹೋಗು! ನವಖಂಡ ಪೃಥ್ವಿಯನ್ನು ಸುತ್ತಾಡು. ಕೊನೆಗೆ ಅವರನ್ನು ಹುಡುಕಿ ಕೊಂಡು ಬಾ. ಅಜ್ಜೀ, ನನ್ನ ಮನಸ್ಸು ಹಾರಿಹೋದರೆ, ನಾನು ಉನ್ಮನ ಸ್ಥಿತಿಯಲ್ಲಿ ಇರಬಹುದೋ. ಇಲ್ಲವೇ ಸಮಾಧಿಸ್ಥಳಾಗಬಹುದೇ? ನೀನೇಕೆ ಮಾತಾಡಲೊಲ್ಲೆ? ಅಜ್ಜೀ, ನಿನ್ನ ಪ್ರೇಮವೂ ಇಲ್ಲವೇ ನನ್ನ ಮೇಲೆ? ನಿನ್ನ ಮೇಲೆ ಸಿಟ್ಟಾಗಲು ನನಗೆ ಅಧಿಕಾರವಿಲ್ಲವೇ? ನಾನು ಯಾರಮೇಲೆ ಸಿಟ್ಟಾಗಲಿ? ಯಾರಮೇಲೆ ಪ್ರೇಮಮಾಡಲಿ? ಯಾರಮೇಲೆ ರೇಗಿಗೇಳಲಿ? ಯಾರನ್ನು ನೋಡಿ ನಗಲಿ? ಕಾರ್ತೀಕನ ಮೇಲೆ ಸಿಟ್ಟಾಗಲು ಕೂಡ ನನಗೆ ಅಧಿಕಾರವಿಲ್ಲ. ನಾಗಾನಂದನು ಬಂದರೆ ಅವನ ಮೇಲೆ ಸಿಟ್ಟಾಗುವೆ. ಕೆಂಪು ಕಣ್ಣುಗಳಿಂದ ಅವನನ್ನು ನೋಡುವೆ. ಆದರೆ ಅವನು ಬಂದಾದರೂ ಬರಲಿ. ಅಜ್ಜೀ, ಅವನು ಬರುವನೇ? ಸವಿಮಾತುಗಳನ್ನಾಡು ಅಜ್ಜೀ? ನನ್ನೊಡನೆ ಮಾತಾಡು." ಎಂದು ಅಜ್ಜಿಯ ಕೊರಳಿಗೆ ಬಿದ್ದಳು.

"ವತ್ಸಲೇ ನಾನಾದರೂ ಏನು ಹೇಳಲಿ? ಅವನಿಗೆ ಇಲ್ಲಿ ಇರಬೇಕೆನಿಸಿದ್ದರೆ ಅವನು ಇರುತ್ತಿದ್ದ. ಸುಮ್ಮನೆ ಇಲ್ಲಿ ಇರುವದರಲ್ಲಿ ಏನು ಅರ್ಥವಿದೆ? ಆಗ್ರಹಪಡಿಸುವದರಲ್ಲಿಯೂ ಏನು ಸ್ವಾರಸ್ಯ? ನಾನು ಅವನನ್ನು ಹೋಗಗೊಟ್ಟೆ. ಅವನಿಗೆ ಇಲ್ಲಿ ಇರಲು ಪ್ರಶಸ್ತವೆನಿಸಲಿಲ್ಲ. ಏಕೆಂದರೆ ಮನೆಯಲ್ಲಿ ಯಾರೂ ಗಂಡಸರಿಲ್ಲ. ಅಲ್ಲದೆ ಅವನು ನಾಗ, ನಾವು ಆರ್ಯರು. ಆಹುದೋ ಅಲ್ಲವೋ" ಎಂದಳು ಅಜ್ಜಿ.

"ಆರ್ಯ ಹಾಗೂ ನಾಗ, ನಾಗ ಹಾಗೂ ಆರ್ಯ ಇದನ್ನು ತಕ್ಕೊಂಡು ನನಗೇನು ಮಾಡುವದಿದೆ ?" ಎಂದು ಸಿಟ್ಟಿಗೆದ್ದಳು ವತ್ಸಲೆ.

"ಸಮಾಜಕ್ಕೆ ಅಂಜಬೇಕಾಗುತ್ತದೆ. ಸಮಾಜದಲ್ಲಿಯ ಚಳವಳಿಯನ್ನು ತೀರ ಉಪೇಕ್ಷಿಸಿ ಉಪಯೋಗವಿಲ್ಲ." ಎಂದು ಅಜ್ಜಿಯು ನುಡಿದಳು.

"ಸಮಾಜದ ಚಳವಳಿಯ ಮೇಲೆಯೇ ನಾವು ಅವಲಂಬಿಸಿಗೊಂಡಿರಬೇಕೇ ? ಹಾಗಾದರೆ ಈ ಆಂದೋಲನವನ್ನು ನಾವು ಎದುರಿಸಬೇಕು. ಆಂದೋಲನವನ್ನು ಬೇರೆಯವರು ಮಾಡಬೇಕು. ನಾವು ಸುಮ್ಮನೆ ಇರಬೇಕು. ಅದನ್ನು ನಾವು ಮೋರೆ ತಗ್ಗಿಸಿಕೊಂಡು ಸಹನ ಮಾಡಬೇಕು. ಇದೆಲ್ಲಿಯ ನ್ಯಾಯ ? ನಾವೂ ಆಂದೋಲನವನ್ನು ಮಾಡೋಣ. ಕ್ರಿಯೆಗೆ ಪ್ರತಿಕ್ರಿಯೆ. ಆಂದೋಲನಕ್ಕೆ ಪ್ರತ್ಯಾಂದೋಲನ. ಕ್ರಾಂತಿಗೆ ಪ್ರತಿಕ್ರಾಂತಿ. ಒಂದು ಪಾವಟಿಗೆಯು ತಲೆಯ ಮೇಲೆ ಮತ್ತೊಂದು ಪಾವಟಿಗೆ" ಎಂದಳು ವತ್ಸಲೆ.

"ಆದರೆ ಎಲ್ಲ ಪಾವಟಿಗೆಗಳೂ ಮೇಲಕ್ಕೆ ಒಯ್ಯುವವಲ್ಲವೇ ? ಪಾವಟಿಗೆಗಳು ಸರಳವಿರಲಿ, ಸುತ್ತು ಸುತ್ತಾಗಿರಲಿ, ಎಲ್ಲವು ಮೇಲಕ್ಕೊಯ್ಯುವವು" ಎಂದಳು ಸುಶ್ರುತೆ.

"ಸರಳ ಹಾಗೂ ಎತ್ತರ ಪಾವಟಿಗೆಗಳಿಗಿಂತಲೂ ಸುತ್ತುಸುತ್ತಿನ ಪಾವಟಿಗೆಗಳೇ ಲೇಸು. ಸರಳ ಪಾವಟಿಗೆಗಳು ತಲೆತಿರುಗಿಸುತ್ತವೆ. ಸುತ್ತಿನ ಪಾವಟಿಗೆಗಳು ಸಹಜವಾಗಿ ಮೇಲಕ್ಕೊಯ್ಯುತ್ತವೆ ನಾಗರ ಕಟ್ಟಡಗಳಿಗೆಲ್ಲ ಹಾವಿನಂತಹ ಪಾವಟಿಗೆಗಳೇ ಇರುತ್ತವೆ. ಆರ್ಯರು, ನಾಗರ ಈ ಪದ್ಧತಿಯನ್ನು ತೆಗೆದುಕೊಂಡಿದ್ದಾರೆ. ಆ ಮಯಾಸುರನೇನು ಆರ್ಯನಿದ್ದಿಲ್ಲ. ಅಜ್ಜೀ ? ಆದರೆ ಅವನ ಕಲೆ ಎಂತಹದು ! ಅದನ್ನು ನೋಡಿ ಆರ್ಯರೂ ಬಟ್ಟೆ ಕಚ್ಚುತ್ತಿದ್ದಾರೆ." ಎಂದು ವತ್ಸಲೆಯು ನುಡಿದಳು.

"ಆ ಮಯಾಸುರನ ಸಭೆಯನ್ನು ನೋಡಲು ಹೋದಾಗ, ನಾನು ಚಿಕ್ಕವಳಿದ್ದೆ. ನೀರು ಇದೆಯೆಂದು ಉಟ್ಟದ್ದನ್ನು ಮೇಲಕ್ಕೆತ್ತಿದರೆ, ಅಲ್ಲಿ ನೀರಿಲ್ಲ. ಎಲ್ಲಿ ನೀರಿಲ್ಲವೆಂದು ನಾವು ಸುಮ್ಮನೆ ನಡೆದರೆ, ಅಲ್ಲಿ ನೀರು.

ಬಹಳ ದೊಡ್ಡ ಕಲಾವಂತ. ನಮ್ಮ ಫಜೀತಿಯಾಯಿತು. ಆದರೆ ಇದನ್ನು ನೋಡಿ ನಕ್ಕು ನಕ್ಕು ಹೊಟ್ಟೆ ಹುಣ್ಣಾಯಿತು " ಎಂದಳು ಅಜ್ಜೀ.

" ನಾಗರು, ಕೆಟ್ಟ ಜನರಲ್ಲ. ನಿನ್ನ ಮತವೇನು ಅಜ್ಜೀ ? " ಎಂದು ವತ್ಸಲೆಯು ಪ್ರಶ್ನಿಸಿದಳು.

" ಒಳ್ಳೇ ಹಾಗು ಕೆಟ್ಟ ಜನರು ಎಲ್ಲರಲ್ಲಿಯೂ ಇರುವರು. ಯಾರು ಕೆಟ್ಟ ಜನರಿರುವರೋ ಅವರನ್ನು ಸುಧಾರಿಸಬೇಕು. ಇದೇ ನಿಜವಾದ ಮಾನವ ಧರ್ಮ. " ಎಂದು ಸುಸ್ಮೃತಿಯು ನುಡಿದಳು.

" ಅಜ್ಜೀ, ನನ್ನ ತಂದೆಯು ಹಾವು ಚೇಳುಗಳನ್ನು ಕೊಲ್ಲುತ್ತಿರಲಿಲ್ಲವಂತೆ ನಿಜವೇ " ಎಂದು ವತ್ಸಲೆಯು ಕೇಳಿದಳು.

" ಅಹುದು, ಶತ್ರುವಿದ್ದಷ್ಟು ಕೊಲ್ಲುತ್ತಿರಲಿಲ್ಲ. ಅವುಗಳನ್ನು ಹಿಡಿದು, ದೂರ ಬಿಟ್ಟು ಬರುತ್ತಿದ್ದನು. ಒಮ್ಮೆ ಕಾರ್ತೀಕನ ಮನೆಯಲ್ಲಿ ದೊಡ್ಡದೊಂದು ಹಾವು ಬಂದಿತ್ತು. ಅದ ಭುಸುಗುಡುತ್ತಿತ್ತು. ಆದರೆ ನಿನ್ನ ತಂದೆಯು ಹೂಗಳು ತುಂಬಿದ ಒಂದು ಬುಟ್ಟಿಯನ್ನು ತೆಗೆದುಕೊಂಡು ಅದರ ಹತ್ತರ ಹೋದನು. ಅಲ್ಲಿಯ ಜನರಿಗೆಲ್ಲ ದೂರ ಸರಿಯಲು ಹೇಳಿದನು. ಆ ಹೂವಿನ ಬುಟ್ಟಿಯನ್ನು ಅದರ ಎದುರಿಗೆ ಕೋಲಿನಿಂದ ಸರಿಸಿದನು. ಹೂಗಳ ಮಕರಂದವು ಎಲ್ಲೆಡೆಗೆ ಪ್ರಸರಿಸಿತು. ಆ ಹಾವು,ಹೂವಿನ ಬುಟ್ಟಿಯನ್ನು ಹೊಕ್ಕಿತು. ಕೂಡಲೇ ಅದರ ಮೇಲೆ ಬಟ್ಟೆಯನ್ನು ಮುಚ್ಚಿ, ಅದನ್ನು ತೆಗೆದುಕೊಂಡು ಹೋಗಿ ಅಡವಿಯಲ್ಲಿ ಬಿಟ್ಟುಬಿಟ್ಟನು. ನಿನ್ನ ತಂದೆಯು ನಾಗರ ಮನಸ್ಸನ್ನು ನೋಯಿಸುತ್ತಿದ್ದಿಲ್ಲ. ಅವನ ಇಂತಹ ಕೃತಿಗಳಿಂದ ಊರಲ್ಲಿ ಜಗಳಗಳಾಗುತ್ತಿದ್ದಿಲ್ಲ. ಎರಡೂ ಸಮಾಜಗಳು ಆನಂದದಿಂದಿದ್ದವು ನಾಗರ ಪಂಚಮಿಯ ದಿವಸ ನಾವೂ ಜಾಗರಣೆಯನ್ನು ಮಾಡುತ್ತಿದ್ದೆವು. ಅವರ ಸಂಗಡ ಕುಣಿಯುತ್ತಿದ್ದೆವು. ಅವರ ಹಾಡುಗಳನ್ನು ಹಾಡುತ್ತಿದ್ದೆವು. ಆದರೆ ನಿನ್ನ ತಂದೆಯು ಹೋದನಂತರ ಅದೆಲ್ಲವೂ ಹಿಂದೆ ಬಿದ್ದಿದೆ. ಇಲ್ಲಿಯ ನಾಗರೆಲ್ಲ ಬೇರೆ ಕಡೆಗೆ ವಾಸಿಸಲು ಹೋದರು. ನಾಗರ ಹೆಣ್ಣುಮಕ್ಕಳು ಆನಂದಿಗಳೂ, ನಾನಾ ಪ್ರಕಾರದ ಆಟಗಳನ್ನಾಡುವರು. ಸುಂದರವಾಗಿ ಹಾಡುವರು. ಅಂದವಾಗಿ

ಕುಣಿಯುವರು. ಆದರೆ ಅಂದಿನ ಆನಂದ ಇಂದು ನನಗೆ ಉಳಿದಿಲ್ಲ.” ಎಂದಳು ಸುಶ್ರುತೆ.

“ಅಂದಿನ ರಾತ್ರಿ ನಾಗಾನಂದನು ಹೇಗೆ ಕುಣಿದ? ಅವನೊಡನೆ ನಾನೂ ಕುಣಿದೆ. ಅವನು ನನಗೆ ಕಲಿಸುತ್ತಿದ್ದಂತೆ ತೋರಿತು. ಒಳಗೆ ಹೃದಯವು ಕುಣಿಯುತ್ತಿತ್ತು, ಹೊರಗೆ ದೇಹವು ಕುಣಿಯುತ್ತಿತ್ತು. ಕೈ ಕೈ ಹಿಡಿದು ನಾವು ಕುಣಿದೆವು. ಒಮ್ಮೆ ಕೂಡುತ್ತಿದ್ದೆವು. ಒಮ್ಮೆ ಏಳುತ್ತಿದ್ದೆವು. ಒಮ್ಮೆ ಗಿರಕಿ ಹೊಡೆಯುತ್ತಿದ್ದೆವು. ಒಮ್ಮೆ ಕೈ ಮೇಲೆತ್ತುತ್ತಿದ್ದೆವು! ಒಮ್ಮೆ ಕೆಳಗೆ ಮಾಡುತ್ತಿದ್ದೆವು. ಏನು ಹೇಳಲಿ ಆ ಆನಂದವನ್ನು! ಹುಡುಗರಿಗೂ ಕೂಡ ಉತ್ಸಾಹವೇರಿತು. ನಮ್ಮ ಸುತ್ತುಮುತ್ತು ಹುಡುಗರು, ಹುಡುಗರ ಸುತ್ತುಮುತ್ತು ನಾವು ಕುಣಿಯುತ್ತಿದ್ದೆವು. ನಾಗರು, ಕಲಾವಂತರು. ಸೃಷ್ಟಿಯ ಸಾನ್ನಿಧ್ಯದಲ್ಲಿದ್ದು ಕಲೆಯನ್ನು ಕಲಿತಿದ್ದಾರೆ ಅವರು! ಅಜ್ಜೀ, ನಾಗಾನಂದನಿಗೆ ಎಲ್ಲವೂ ಬರುತ್ತದೆ. ಅವನಿಗೆ ದನಗೋಳಿತನವನ್ನು ಮಾಡಲು ಬರುತ್ತದೆ, ಒಕ್ಕಲುತನವನ್ನು ಮಾಡಲು ಬರುತ್ತದೆ. ಕೊಳಲನೂದಲು ಬರುವದು. ಬುಟ್ಟಿ ಹೆಣೆಯಲು ಬರುವದು. ಅವನು ಬಂದನೆಂದರೆ ಆವನ ಕೈಯಿಂದ ಒಂದು ಸುಂದರವಾದ ಬುಟ್ಟಿಯನ್ನು ಮಾಡಿಸಿಕೊಳ್ಳುವೆ. ಅದರಲ್ಲಿ ಹೂಗಳನ್ನು ತರುವೆ. ಆದರೆ ಅಜ್ಜೀ ಅವನು ಬರುವನೇ? ಅವನು ನಮ್ಮ ಕಡೆಗೆ ಏಕೆ ಬಂದಾನು? ನಮ್ಮ ಹತ್ತರ ಏನಿದೆ? ನಮ್ಮ ಹತ್ತರ ಹಣವಿಲ್ಲ, ಸಂಪತ್ತಿಲ್ಲ. ಅರಮನೆಯಿಲ್ಲ, ಐಶ್ವರ್ಯವಿಲ್ಲ. ಸಹಸ್ರಾರು ಗೋಧನವಿಲ್ಲ, ನೂರಾರು ಎಕರೆ ಭೂಮಿಯಿಲ್ಲ. ನಮ್ಮ ಹತ್ತರ ಏನು ಇದೆ? ಒಂದೇ ಒಂದು ಹೊಲವಿದೆ.” ಎಂದು ವತ್ಸಲೆಯು ನಿಟ್ಟುಸಿರು ಬಿಟ್ಟಳು.

ದಿನಗಳು ಹೋಗುತ್ತಿದ್ದವು. ವತ್ಸಲೆಯ ಆನಂದವೆಲ್ಲ ಕಳಚಿ ಹೋಗಿತ್ತು. ಖಿನ್ನಳಾಗಿದ್ದಳು. ಅವಳ ಮೋರೆಯ ಮೇಲಿನ ಕಳೆಯೆಲ್ಲ ಹೋಗಿತ್ತು. ಆಕೆಯ ಪ್ರಾಣವನ್ನಾರೋ ತೆಗೆದುಕೊಂಡು ಹೋಗಿದ್ದರು. ಆಕೆಯು ನದಿಯ ದಂಡೆಗೆ ಹೋಗುವಳು. ಅಲ್ಲಿ ಕುಳಿತು, ಅಳುವಳು. ಆ ನದಿಯ ಹೆಸರು ಕಪೋತಾಕ್ಷಿಯೆಂದು. ತಾಯೀ ಕಪೋತಾಕ್ಷಿ, ನನ್ನನ್ನು ಏಕೆ ಬಿಟ್ಟೆ? ಏಕೆ ಹೊರಗೊಗೆದೆ? ನೀನು ನನ್ನನ್ನು ಒಡಲೊಳಗೇಕಿಟ್ಟುಕೊಳ್ಳಲಿಲ್ಲ?

ನನಗೆ ಸ್ಥಿರವಾದ ನಿದ್ರೆಯನ್ನೇಕೆ ಹಚ್ಚಿಸಲಿಲ್ಲ? ನಿನ್ನ ವೇದಗೀತಗಳನ್ನು ಕೇಳುತ್ತ, ನಾನು ಸ್ಥಿರವಾಗಿಯೇ ನಿನ್ನ ಮಗ್ಗುಲಲ್ಲಿ ಮಲಗುತ್ತಿದ್ದೆ. ಆದರೆ ಮಾಡುವದೇನು? ಅವನು ಈ ದಿಕ್ಕಿನಿಂದಲೇ ಓಡಿ ಬಂದ. ಇಲ್ಲಿಂದಲೇ ಅವನು ನೀರಿನಲ್ಲಿ ಧುಮುಕಿದ. ಈ ಅಭಾಗಿನಿಯ ಸಲುವಾಗಿ ನೀರಿನಲ್ಲಿ ಜಿಗಿದ. ನನ್ನನ್ನು ಉಳಿಸಿದವನೇ ಇಂದು ನನ್ನನ್ನು ಕೊರೆಯು ತ್ತಿದ್ದಾನೆ. ಇದು ಯಾರಿಗಾದರೂ ಕಲ್ಪನೆ ಬರಬಹುದೇ? ನನ್ನನ್ನು ಉಳಿ ಸಿದ ಕೈಯೇ ನನಗೆ ಬೆಂಕಿಯನ್ನು ಹಚ್ಚುವದು ಎಂದು ಅವನಿಗಾದರೂ ಕಲ್ಪನೆ ಇದ್ದಿತೇ? ಜಗತ್ತಿನಲ್ಲಿ ಎಲ್ಲವೂ ವಿರೋಧವಾಗಿದೆ. ಆನಂದ ಬಡುವ ಕಣ್ಣುಗಳೇ ದುಃಖಾಶ್ರುಗಳನ್ನು ಸುರಿಸುವವು. ಅದು ಅಸಹ್ಯವಂತೂ ಆಗು ವದು. ಅದು ಆಗಬಾರದೆಂದು ಅನಿಸುವದು. 'ವತ್ಸಲೆ, ಅಳು, ಅಳು. ಈ ಕಪೋತಾಕ್ಷಿಯ ಪ್ರವಾಹದಲ್ಲಿ ನಿನ್ನ ಹೃದಯದಲ್ಲಿಯ ಪ್ರವಾಹವನ್ನು ಬೆರೆ ಯಿಸು. ಸಮುದ್ರಕ್ಕೆ ಕೂಡುವ ಈ ನದಿಯಲ್ಲಿ ನಿನ್ನ ಹೃದಯದಲ್ಲಿಯ ದುಃಖವನ್ನೆಲ್ಲ ಹರಿಸಿ ಬಿಡು' ಎಂದು ತನ್ನಷ್ಟಕ್ಕೆ ತಾನೇ ಮಾತನಾಡುವಳು

ಒಂದು ತುಂಬಿದ ಬಾವಿಯ ಹತ್ತರ ಹೋಗಿ 'ಬಾವಿಯೇ ನೀನೇನೋ ತುಂಬಿರುವಿ. ಆದರೆ ನನ್ನದು? ನನ್ನ ಜೀವನದ ಬಾವಿಯು ಎಂದು ತುಂಬು ವದು?" ಸುಂದರವಾದ ತೋಟದ ಎದುರಿಗೆ ನಿಂತು, ಉಪವನವೇ! ನೀನೇನೋ ಫಲಭರಿತಳಾಗಿ ಶೋಭಿಸುವೆ. ಆದರೆ ನಾನು? ನನ್ನ ತೋಟವು ಹೀಗೆಯೇ ಪಡ ಬೀಳಬೇಕೆ? ನನಗೆ ತೋಟಿಗನು ಸಿಕ್ಕಲಾರನೇ? ನನ್ನ ತೋಟಿಗ? ತೋಟ ಒಣಗ ಹತ್ತಿದೆ. ತೋಟಿಗನು ಬಂದೊಡನೆ, ಚಿಗಿ ಯುವದು, ಅರಳುವದು, ಹೂ ಕಾಯಿಗಳನ್ನು ಬಿಡುವದು. ಆದರೆ ಅವನ ದರ್ಶನ ಯಾವಾಗ?" ಊರಲ್ಲಿಯ ಹುಡುಗಿಯರು ಒಂದೆಡೆ ಹೂವಿನ ಹಾರ ವನ್ನು ಕಟ್ಟುತ್ತ ಕುಳಿತಿರುತ್ತಾರೆ. ಒಮ್ಮೆಲೆ ಅಲ್ಲಿಗೆ ಹೋಗುವಳು. 'ಈ ಹಾರವನ್ನು ಯಾರಿಗೆ ಹಾಕುವಿರಿ? ಗೆಳತಿಯರೇ! ಹೇಳಿರಿ. ಈ ಹಾರವು ಯಾರ ಕೊರಳಿಗೆ ಶೋಭಿಸುವದು? ನಿಮಗೆ ಯಾರಾದರೂ ಭೆಟ್ಟಿಯಾಗಿರು ವರೇ? ನಿಮ್ಮ ದಾರಿಯನ್ನು ಯಾರಾದರೂ ಕಾಯುತ್ತಿರುವರೇ? ಏನು! ನಿಮ್ಮ ಕೊರಳಲ್ಲಿ ನೀವೇ ಹಾಕಿಕೊಳ್ಳುವಿರೇ! ಇದೇನು ತಮ್ಮ

ಪೂಜೆ ! ನಮ್ಮನ್ನು ನಾವೇ ಪೂಜಿಸಿಕೊಳ್ಳುವದರಲ್ಲಿ ಅರ್ಥವೇನಿದೆ ? ಎರಡನೇಯವರು ನಮ್ಮ ಪೂಜೆಯನ್ನು ಮಾಡಬೇಕು. ಅದರಲ್ಲಿಯೇ ಸುಖವಿದೆ. ನಾನು ನನ್ನ ಕೊರಳಲ್ಲಿ ಎಂದೂ ಹಾರವನ್ನು ಹಾಕಿಕೊಳ್ಳುವದಿಲ್ಲ ! ನಾನು ಹೆಣೆದುದನ್ನು ಅವರ ಕೊರಳಿಗೆ ಹಾಕುವೆ. ದಿನಾಲು ಮಾಲೆ ಕಟ್ಟುವೆ. ನದಿಯ ಪ್ರವಾಹದಲ್ಲಿ ಬಿಟ್ಟುಬಿಡುವೆ. ಏಕೆಂದರೆ ಅದು ಬಾಡಬಾರದೆಂದು. ಅವರು ಹೋಗಿ ಎಷ್ಟೋ ದಿನಗಳಾದವು ? ದಿನಾಲು ಕುಂಬಿಯ ಮೇಲೆ ಒಂದೊಂದು ಗಂಧದ ಬೊಟ್ಟು ಇಡುತ್ತೇನೆ. ನಾನು ಅವುಗಳನ್ನು ನೋಡಹತ್ತಿದೊಡನೆ, ನನ್ನ ಕಣ್ಣುಗಳು ನೀರು ಸುರಿಸುವವು. ” ಎಂದು ಉನ್ಮಾದಿನಿಯಂತೆ ಮಾಡಹತ್ತಿದಳು.

ಒಂದು ದಿನ ಬಕುಳದ ಮರವನ್ನು ಏರಿ ಕುಳಿತಿದ್ದಾಳೆ. ಅಜ್ಜಿಯು ಹುಡುಕುತ್ತಿದ್ದಾಳೆ. ವತ್ಸಲೇ ಎಂದು ಕೂಗುತ್ತಿದ್ದಾಳೆ. ವತ್ಸಲೆಯು ಹಾಡಹತ್ತಿದಳು.

ಎಲ್ಲಿರುವನವ । ಎಲ್ಲಿರುವನವ ॥
ಕಲ್ಲೆದೆಯ ಕಳ್ಳ ಕೃಷ್ಣಾ ॥

ಎಂದು ಹಾಡಹತ್ತಿದಳು. ಅಜ್ಜಿಯು ಧ್ವನಿಯನ್ನು ಕೇಳಿ, ವತ್ಸಲೇ ಕೆಳಗೆ ಬಾ ! ಅಜ್ಜಿಗೆ ದುಃಖವನ್ನು ಕೊಡಬೇಡ ! ಎಂದು ಅಜ್ಜಿಯು ಕಣ್ಣೀರು ಸುರಿಸಹತ್ತಿದಳು.

‘ ಅಜ್ಜೀ, ನಾನು ಕೆಳಗೆ ಏಕೆ ಬರಲಿ ? ಇಲ್ಲಿಂದ ಕೂಡಲೇ ಮೇಲೆ ಹೋಗಲು ಬರುವದು. ದೇವರೆಡೆಗೆ ಹಾರಿ ಹೋಗುವೆ. ಅಳಬೇಡ ಅಜ್ಜೀ. ನಾನು ಇಲ್ಲಿಯೇ ಕುಳಿತಿರುವೆ. ಹೇಳಲೋ ? ಆ ಕಳ್ಳ ಒಮ್ಮೆಲೆ ಬರಬಹುದು. ಗಿಡದ ಮೇಲೆ ಇದ್ದರೆ, ನನಗೆ ಕಾಣಬಹುದು. ಅವರನ್ನು ನೋಡಿದೊಡನೆಯೇ ಸಿಳ್ಳು ಹಾಕುವೆ ಅವರು ಗುರುತಿಸಬಹುದು. ಅಂದು ಬಂಗಾರವನ್ನು ತರುವಾಗ ನಾನು ಸಿಳ್ಳುಹಾಕುತ್ತಿದ್ದೆ. ಅದು ಅವರಿಗೆ ಬಹಳ ರುಚಿಸಿತು. ಸಿಳ್ಳನ್ನು ಕೇಳಿ ಅವನು ಇತ್ತಕಡೆಗೆ ಬರಬಹುದು. ಗಿಡದ ಬುಡಕ್ಕೆ ಬಂದೊಡನೆ ಅವರ ಮೇಲೆ ಹೂಗಳ ಮಳೆಗರೆಯುವೆ. ಕಣ್ಣುಗಳಿಂದ ಹೂ ಮಳೆ ಸುರಿಸುವೆ. ಇವುಗಳಲ್ಲಿ ತಮಗೆ ಯಾವುದು

ಸೇರುವದೆಂದು ವಿಚಾರಿಸುವೆ. ಬಕುಳದ ಹೂಗಳೋ ಅಥವಾ ಕಣ್ಣು ಹೂಗಳೋ ಎಂದು. ಅಜ್ಜೀ ಮೇಲೆಯೇ ನೋಡಬೇಡ! ನಿನ್ನ ಗೋಣು ನೊಂದೀತು? ನಾನು ಕೆಳಗೆ ಜಿಗಿಯುಲಾ! ನನ್ನನ್ನು ಹಿಡಿಯುವಿಯಾ! ಶರಗನ್ನೊಡ್ಡಿ ಕರೆದುಕೊಳ್ಳುವಿಯಾ! ಬೇಡ, ನಾನೇ ಕೆಳಗೆ ಇಳಿಯುವೆ. ಮನೆ ಸೇರಿದರೆ ಇನ್ನು ನಾನು ಹೊರಬೀಳುವದೇಯಿಲ್ಲ. ಆದರೆ ಅದೂ ನಿನಗೆ ಸೇರುವದಿಲ್ಲ. ವತ್ಸಲಾ ಸ್ವಲ್ಪ ತಿರುಗಾಡಿ ಬಾ! ಬೇಕಾದರೆ ನಾನು ಬರುವೆ ನಿನ್ನ ಸಂಗಡ ಎನ್ನುವಿ; ಎಂದು ಗುಣಗುಟ್ಟುತ್ತ ವತ್ಸಲೆಯು ಕೆಳಗಿಳಿದಳು.

ವತ್ಸಲೆಯು ತೀರ ಸೊರಗಿದ್ದಳು. ಆಕೆಗೆ ಅನ್ನವು ಹೋಗದಂತಾಯಿತು. ಹಾಲು ಹೇಸಿಗೆ ಬರಹತ್ತಿತು. ಸುಶ್ರುತೆಯು ಚಿಂತೆಗೊಳಗಾದಳು.

"ವತ್ಸಲಾ, ನಿನ್ನ ಸಲುವಾಗಿ ಜೇನುತುಪ್ಪವನ್ನು ತಂದಿಟ್ಟೇನೆ. ಚಿಕ್ಕವಳಿರುವಾಗ ಅದು ನಿನಗೆ ಬಹಳ ಸೇರುತ್ತಿತ್ತು. ಅದನ್ನು ತೆಗೆದುಕೋ. ಆದರಿಂದ ನಿನ್ನ ಅಶಕ್ತತೆಯು ದೂರವಾಗುವದು. ಶಕ್ತಿಯು ಬರುವದು ಅನ್ನದಲ್ಲಿ ಜೇನುತುಪ್ಪವನ್ನು ಹಾಕಿ, ಹಾಲನ್ನು ಸೇರಿಸಿ ಊಟಮಾಡು. ಉಂಡಾದರೂ ನೋಡು, ಅದು ಹೇಗಿದೆ ಎಂಬುದನ್ನು. ಏನು! ತೆಗೆದುಕೊಳ್ಳುವಿಯಲ್ಲವೆ?" ಎಂದನು ಕಾರ್ತೀಕ.

"ಕಾರ್ತೀಕಾ, ನನ್ನ ಮಧುವಿನ ಕೊಡವು ಬೇರೆ ಇದೆ. ನೀನು ಹುಚ್ಚನಿರುವಿ. ನೀನು ಈ ಕೊಡದ ಬದಲು ಆ ಜೀವಂತ ಕೊಡವನ್ನು ತೆಗೆದುಕೊಂಡು ಬಾ. ಇದನ್ನು ತುಂಬಿಸಲು ಬರುವದೇ? ಅವನು ಬಂದರೆ ಮಣ್ಣು ಕೂಡ ನನಗೆ ಸವಿಯೆನಿಸೀತು. ಅವನು ಇಲ್ಲದಿದ್ದಲ್ಲಿ ಅಮೃತವು ಕೂಡ ವಿಷವಾಗುವದು. ಉಪನಿಷತ್ತುಗಳಲ್ಲಿ ಹೇಳಿಲ್ಲವೆ. ಅವನೊಬ್ಬನನ್ನು ತಿಳಿದರೆ, ಎಲ್ಲವೂ ತಿಳಿಯುವದೆಂದು. ಅವನ ಸವಿಯನ್ನು ಸವಿದರೆ, ಎಲ್ಲವೂ ಸವಿ ಹತ್ತುವದೆಂದು. ಅದರ ಅನುಭವವನ್ನು ತೆಗೆದುಕೊಳ್ಳುತ್ತಲಿದ್ದೇನೆ. ಬಾಹ್ಯಜ್ಞಾನವು ನಿರುಪಯೋಗವೆಂಬುದನ್ನು ನಾನು ಬಲ್ಲೆ. ಈ ಕೊಡವನ್ನು ಇಟ್ಟುಬಿಡು. ಕಾರ್ತೀಕಾ ಅಳಬೇಡ. ನಿನ್ನ ಸಲುವಾಗಿ ನಾನು ಬೇಕಾದ್ದನ್ನು ಮಾಡುವೆ." ಎಂದಳು

" ಈ ಜನ್ಮದಲ್ಲಿ ಏನೂ ಬೇಡ. ನಾನು ತಪಶ್ಚರ್ಯವನ್ನು ಮಾಡುವೆ. ತಪಶ್ಚರ್ಯ ಮಾಡದೆ ಏನೂ ಅಪೇಕ್ಷಿಸಕೂಡದು " ಎಂದು ನೊಂದ ಮನಸ್ಕನಾಗಿ ಕಾರ್ತಿಕನು ಹೇಳಿದನು.

" ಜಗತ್ತು ಹೀಗೆಯೇ ಇದೆ. ನಾನು ಒಬ್ಬರ ಸಲುವಾಗಿ ಅಳಬೇಕು. ಎರಡನೆಯವರು ನನ್ನ ಸಲುವಾಗಿ ಅಳಬೇಕು. " ಎಂದಳು ವತ್ಸಲೆ.

" ಆದರೆ ಆ ಎರಡನೆಯವರ ಸಲುವಾಗಿ ಯಾರು ಅಳುತ್ತಾರೆ. ತನ್ನ ಸಲುವಾಗಿ ಯಾರೂ ಅಳದಂತಹ ಅಭಾಗಿನಿಯು ಅವನಿರಬೇಕು." ಎಂದನು ಕಾರ್ತಿಕ.

" ಅವನ ಸಲುವಾಗಿ ಚರಾಚರ ಸೃಷ್ಟಿಯು ಅಳುತ್ತಿರಬಹುದು. ಅವನ ಸಲುವಾಗಿ ನದಿ ಅಳುತ್ತದೆ. ಮೋಡಗಳು ಅಳುತ್ತವೆ. ಇಬ್ಬನಿಯು ಅಳುತ್ತದೆ. ಹೀಗೆ ಅಜ್ಞಾತವಾದ ಅನಂತ ಅಶ್ರುಗಳಿವೆ. ಕಾರ್ತಿಕಾ, ನಾನು ಬದುಕಲಾರೆ. ನಾನು ಸಾಯುವೆ. ಸಾವು ಏನು ಕೆಡುಕೇ ? ಕೆಡುಕು ಇಂಥಹ ವಯಸ್ಸಿನಲ್ಲಿ ಸಾಯುವದು ಕೆಡುಕೇ ? ಪ್ರಜ್ವಲಿತವಾದ ಅಗ್ನಿಯಲ್ಲಿ ಸುಟ್ಟುಕೊಂಡು ಸಾಯುವದು ಕೆಡುಕು. " ವತ್ಸಲೆಯು ದುಃಖದಿಂದ ಮಾತನಾಡಿದಳು.

" ನಿನ್ನ ಬ್ರಹ್ಮಜ್ಞಾನವು ಎಲ್ಲಿ ಹೋಯಿತು ? ಎಂದ ಕಾರ್ತಿಕ.

" ಅದು ಗಿಳಿಪಾಠ ವಿದ್ದಿತು. ಅದೆಲ್ಲವೂ ಸುಟ್ಟು ಹೋಯಿತು. ಈ ಅಗ್ನಿಯಿಂದ ದಾಟಿದನಂತರ ಸಿಗುವ ಜ್ಞಾನವೇ ನಿಜವಾದ ಜ್ಞಾನ " ಎಂದಳು ವತ್ಸಲೆ.

ಸುಶ್ರುತೆಯು ಹೊರಗೆ ಹೋಗಿದ್ದಳು. ವತ್ಸಲೆಯು ಬಾಳೆಯ ಕಂಬ ವನ್ನು ಅಪ್ಪಿಕೊಂಡಿದ್ದಳು. ಅದು ಬಹಳ ತಣ್ಣಗಿತ್ತು ಅದನ್ನು ಅವಳು ಹಣೆಗೆ ಹಚ್ಚಿಕೊಂಡಳು. ಎದೆಗೆ ಹಚ್ಚಿಕೊಂಡಳು. ಗಲ್ಲಗಳಿಗೆ ಒತ್ತಿಕೊಂಡಳು. ಕೈಗಳಿಗೆ ಹಚ್ಚಿಕೊಂಡಳು. ಆದರೆ ಅವಳ ಹೊಟ್ಟೆಯಲ್ಲಿಯ ಉರಿಯು ಕಡಿಮೆ ಯಾಗುವದೆಂತು ?

ಓಹೊ. ಅಲ್ಲಿಯಾರು ಬಂದರು ! ಸಂಕೋಚದಿಂದ ಒಳಗೆ ಬಂದರು. ಒಳಗೆ ಬಂದು ನಿಂತರು. ಅವರು ಥರಥರ ನಡುಗುತ್ತಿದ್ದರು. ಅವರು

ಒಮ್ಮೆಲೇ ದೊಪ್ಪನೇ ಬಿದ್ದರು. ವತ್ಸಲೆಯು ಗಾಬರಿಯಾದಳು. ಹತ್ತರ ಹೋಗಿ ನೋಡಿದಳು.

" ಓಹೋ! ಬಾಗಿಲಲ್ಲಿ ಬಂದು ಬಿದ್ದರು. ನಾನು ದುರ್ದೈವಿ. ನನ್ನ ಭೆಟ್ಟಿಗೋಸ್ಕರ ದೂರಿಂದ ಬಂದರು. ಉಪವಾಸ ವನವಾಸ ಬಟ್ಟು ಬಂದರು. ಕೈಯಲ್ಲಿ ಜೀವವನ್ನು ಹಿಡಕೊಂಡು ಬಂದರು! ಕೋಮಲ ಮನಸ್ಸಿನ ನನ್ನ ರಾಜರು! ದೇವಾ, ಎಚ್ಚರಾಗಿರಿ. ಕಣ್ಣು ತೆರೆಯಿರಿ." ಎಂದು ವತ್ಸಲೆಯು ಅವರ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ಅಳಹತ್ತಿದಳು. ಅವಳ ಕಣ್ಣುಗಳಿಂದ ಸುರಿಯುತ್ತಿರುವ ಕಣ್ಣೀರು ಅವನ ಮುಖ ಕಮಲದ ಮೇಲೆ ಬೀಳುತ್ತಿದ್ದವು. ಅವಳು ತನ್ನ ಕೈಯಿಂದ ಅವನ ಕೂದಲನ್ನು ಸರಿಪಡಿಸುತ್ತಿದ್ದಳು. ಅವನ ತಲೆಯನ್ನು ತಟ್ಟುತ್ತಿದ್ದಳು. ಅವಳು ಮೌನಿಯಾಗಿದ್ದಳು. ಅವಳು ಕಣ್ಣು ಮುಚ್ಚಿದ್ದಳು. ಆದರೆ ಕಣ್ಣೀರು ಮಾತ್ರ ಸುರಿಯುತ್ತಿದ್ದವು. ಒಮ್ಮೆಲೆ ಅವಳ ಮುಖಕಮಲವು ಅರಳಿತು. ಅವನು ಕಣ್ಣು ತೆರೆದು ಅವಳ ಕಡೆಗೆ ನೋಡಿದನು.

ವತ್ಸಲೇ ಅಳಬೇಡ"

" ಅಳದಿದ್ದರೆ ಏನು ಮಾಡಲಿ? ನಿಮಗೆ ಸ್ವಸ್ಥವೆನಿಸುವದೇ?" ಎಂದು ಅವಳು ನಡುಗುವ ಧ್ವನಿಯಿಂದ ಕೇಳಿದಳು.

" ಅಹುದು. ಹೋದ ಜೀವ ಮತ್ತೆ ಬಂದಿತು. ಚೈತನ್ಯವು ಹುಟ್ಟಿತು. ಶಕ್ತಿಯು ಬಂದಿತು. ನೀನು ಅಳಬೇಡ"

" ಒಮ್ಮೆ ನೀವು ಹಸನ್ಮುಖರಾದರೆ, ನಾನು ಅಳುವದಿಲ್ಲ."

" ನಾನು ನಗುತ್ತೇನೆ. ಆದರೆ ನನ್ನ ತಲೆಯನ್ನು ಕೆಳಗಿಡು. ನೀನು ಸ್ವಲ್ಪ ದೂರ ಕೂತುಕೋ"

" ನಾಗರಿಗೆ ದೂರದಲ್ಲಿರುವದೇ ಸೇರುವದೇನು? ಅಡವಿಯಲ್ಲಿರುವ ಚಿಕ್ಕದಾದ ಹೊದರಗಳಲ್ಲಿರುವದೇ ಸೇರುವದೇ? ದೂರ ಕೂಡುವದಕ್ಕಾಗಿಯೇ ಇಲ್ಲಿಗೆ ಬಂದಿರೇನು? ದೂರಿಂದ ನಗೆಸಲು ಬಂದಿರೇನು? ದೂರವಿರುವದು ಶೂರತನವೇನೂ ಅಲ್ಲ. ನೀವು ಅಂಜುವಿರೇಕೆ? ಆರ್ಯರಿಗೆ ಅಂಜುವಿರೇನು?" ಎಂದು ಅವಳು ವಿಚಾರಿಸಿದಳು.

" ಅಂಜಿಕೆಯೆಂದರೆ ನನಗೆ ಗೊತ್ತೇ ಇಲ್ಲ. "

" ಹಾಗಿದ್ದರೆ "

" ನಾಗರು ಮೊದಲು ನೂರಾರುಸಲ ವಿಚಾರ ಮಾಡುವರು. ಕಾಡಿ ಕೊಡುವರು, ಕೂಡಿ ಬಿಡುವವರಲ್ಲ ಅದು ವಜ್ರದ ಬೆಸಿಗೆ "

" ಆರ್ಯರೇನು ಸಂಬಂಧವನ್ನು ಬಿಡುವರೇ ? "

" ನಾನು ನಾಗರ ಬಗ್ಗೆ ಹೇಳಿದೆ. ಆರ್ಯರದು ನಿನಗೆ ಗೊತ್ತು. "

" ಆರ್ಯರೂ ಧೃಢಪ್ರತಿಜ್ಞರಿರುತ್ತಾರೆ. ಸ್ಫೂರ್ತಿದಾಯಕವಾದ ಸಾವಿತ್ರಿಯ ಕಥೆಯನ್ನು ನಾಗರು ಕೇಳಿಲ್ಲವೇನು ? "

" ಕೇಳಿದ್ದಾರಷ್ಟೇ ಅಲ್ಲ, ವಟಸಾವಿತ್ರಿಯ ವ್ರತವನ್ನು ಸಹ, ನಾಗ ಸ್ತ್ರೀಯರು ಆಚರಿಸುತ್ತಾರೆ. ಒಳ್ಳೆಯದನ್ನೆಲ್ಲ ನಾಗರು ತಕ್ಕೊಳ್ಳುತ್ತಾರೆ. ಅದು ಆರ್ಯರದೇ ಇರಲಿ, ಇನ್ನಾರದಾದರೂ ಇರಲಿ. ಅದರ ವಿಚಾರವನ್ನು ಅವರು ಮಾಡುವದಿಲ್ಲ. "

" ತಿರುಕನು ಸಿಕ್ಕದ್ದನ್ನು ತಕ್ಕೊಳ್ಳುವನು. ಆದರೆ ಶ್ರೀಮಂತನು ಉತ್ತಮವಾದ ವಸ್ತುಗಳನ್ನಷ್ಟೇ ಸಂಗ್ರಹಿಸುವನು. "

" ತಿರುಕರಾರು, ಶ್ರೀಮಂತರಾರು ? ನಾವೆಲ್ಲರೂ ತಿರುಕರೂ ಹೌದು, ಶ್ರೀಮಂತರೂ ಹೌದು. ಕೆಲವು ವಿಷಯಗಳಲ್ಲಿ ಆರ್ಯರು ಬಲ್ಲಿದರಿದ್ದರೆ, ಬೇರೆ ಕೆಲವು ವಿಷಯಗಳಲ್ಲಿ ನಾಗರು ಮಿಗಿಲಾಗಿದ್ದಾರೆ. ಎಲ್ಲವನ್ನೂ ಬಲ್ಲವರಾರೂ ಇಲ್ಲ. ಅಹಂಕಾರಿಗಳಾಗಬಾರದೆಂದೇ, ದೇವರು ಎಲ್ಲರನ್ನು ಅಪೂರ್ಣವಾಗಿ ಇಟ್ಟಿದ್ದಾನೆ. ಇದು ಮಾನವನಿಗೆ ಎಂದು ತಿಳಿಯುವದೋ ಅದೇ ಸುದಿನವು "

" ಆರ್ಯರ ವಿವಾಹನೀತಿಯು ಸ್ಥಿರವಾದದ್ದಲ್ಲವೇನು ? " ಎಂದು ವತ್ಸಲೆಯು ಪುನಃ ಪ್ರಶ್ನಿಸಿದಳು.

" ನಾನು ಹಾಗೆ ಹೇಳಲಿಲ್ಲ. ಎಲ್ಲೆಲ್ಲಿ ನಾಗರಿಗೂ ಆರ್ಯರಿಗೂ ಸಂಬಂಧ ಬಂದಿದೆಯೋ ಅಲ್ಲೆಲ್ಲ, ಹೀಗಿಯೇ ಕಾಣಿಸುತ್ತದೆ. ಶ್ರೇಷ್ಠರಾದ ಆರ್ಯರೇ ಈ ಪ್ರಕಾರ ಮಾಡಿದ್ದಾರೆ. ಅವರು ನಾಗಕನ್ನೆಯರನ್ನು ಕ್ಷಣಕಾಲ ಭೋಗಿಸಿ, ಬಿಟ್ಟುಬಿಡುತ್ತಾರೆ. ದುರ್ದೈವಿಗಳಾದ ಆ ನಾಗಕನ್ನೆಯರು

ಆ ಕ್ಷಣಕಾಲದ ಸುಖವನ್ನೇ ನೆನೆಯುತ್ತ, ತಮ್ಮ ಜೀವನವನ್ನು ಕಳೆಯುತ್ತಿದ್ದಾರೆ. ಆರ್ಯರು ತಾವು ಜೇತೃಗಳೂ ಶ್ರೇಷ್ಠರೂ ಎಂದು ಬಗೆದು, ಆ ಭಾವನೆಯಿಂದಲೇ ನಾಗರ ಸಂಗಡ ವರ್ತಿಸುತ್ತಿದ್ದಾರೆ. ನಾಗಕನ್ಯೆಯರು ಭಾವಶೂನ್ಯವಾದ ವಸ್ತುವೆಂದೂ, ಕೇವಲ ವಿಲಾಸದ ವಸ್ತುವೆಂದೂ ಬಗೆಯುತ್ತಾರೆ. ಇದಕ್ಕಿಂತ ಹೆಚ್ಚಾಗಿ ಬೆಲೆಯನ್ನು ಅವರಿಗೆ ಕೊಡರು. ಆಸ್ತಿಕ ಋಷಿಯ ತಂದೆಯು ಮಾತ್ರ ಅಸಾಧಾರಣ ಧೈರ್ಯವನ್ನು ತೋರಿಸಿದನು. ಅವನು ನಾಗಕನ್ಯೆಯೊಡನೆ ಲಗ್ನವಾದನು. ಆದರಿಂದಲೆ ಆಸ್ತಿಕನು ಧ್ಯೇಯವಾದಿಯಾಗಿದ್ದಾನೆ. ತಂದೆಯ ಧ್ಯೇಯವಾದವು ಅವನಿಗೆ ಬಲವನ್ನೀಯುತ್ತದೆ. ಆದರೆ ವತ್ಸಲೆ, ನಿನ್ನ ಮಾತೇ ಬೇರೆಯಾಗಿದೆ. ನೀನು ಆರ್ಯಕನ್ಯೆ ಇರುವಿ. ಇನ್ನೂ ಆರ್ಯಕನ್ಯೆಯರು ಹೆಚ್ಚಾಗಿ ನಾಗರೊಡನೆ ಮದುವೆಯಾಗಿಲ್ಲ. ಜೇತೃಗಳೆಂದು ತಿಳಿದ ಆರ್ಯರಿಗೆ, ನಾಗರೊಡನೆ ಮದುವೆಯಾಗುವದು ಕೀಳುತನವೆನಿಸುತ್ತದೆ. ಯಾರಾದರೊಬ್ಬ ಆರ್ಯ ಕನ್ಯೆಯು ನಾಗನೊಡನೆ ವಿಹಾಹ ಮಾಡಿಕೊಂಡರೆ, ಆರ್ಯರು ಆ ಕುಟುಂಬವನ್ನೇ ಪೀಡಿಸುತ್ತಾರೆ. ಆದಕಾರಣ ನೀನು ಇನ್ನೂ ವಿಚಾರಮಾಡು. ಅವಸರದಿಂದ ಮಾಡಿದ್ದೆಲ್ಲವೂ ಕೆಡುವದು. ಯಾಕೆ? ನಿನ್ನ ಮೋರೆಯು ಹೀಗೇಕೆ ಕಪ್ಪಿಟ್ಟಿತು. ! ನಗಲು ನನಗೆ ಹೇಳಿದೆ, ಈಗ ನೀನೇ ನಗಬಾರದೇ"

"ಮೈಮೇಲೆ ಬೆಂಕಿಯ ಮಳೆಯನ್ನು ಸುರುವಿ, ನಗು ಎನ್ನುವಿರಾ"

"ಹಾಗಾದರೆ ನಾನು ಏನು ಮಾಡಲಿ ? ಕಾರ್ತೀಕನಿದ್ದಾನೆ. ಒಳ್ಳೆಯವನಿದ್ದಾನೆ, ಶಾಂತವೃತ್ತಿಯುವನೂ ಪ್ರೇಮ ಸ್ವಭಾವದವನೂ ಇದ್ದಾನೆ. ಏಕೆ ? ಕಾರ್ತೀಕನು ಚನ್ನಾಗಿಲ್ಲವೇ ?"

"ಕಾರ್ತೀಕ ಕೆಡುಕಲ್ಲ. ಶ್ರಾವಣ ಕೆಟ್ಟಿಲ್ಲ ಮಾಘವೂ ಕೆಟ್ಟದ್ದಲ್ಲ. ಫಾಲ್ಗುಣವೂ ಏನು ಕೆಟ್ಟ ? ಎಲ್ಲವೂ ಚನ್ನಾಗಿವೆ. ಆದರೆ ಕೋಕಿಲೆಗೆ ಧ್ವನಿಯು ಬರಬೇಕಾದರೆ ವಸಂತನೇ ಬೇಕು. ನಿಮಗೆ ನಿಜ ಸಂಗತಿಯನ್ನು ತಿಳಿಸಲಾ!" ನಮ್ಮ ಅಣ್ಣ ತಮ್ಮಂದಿರು ನಮ್ಮ ವಿರುದ್ಧವಾಗಿ ಎದ್ದರೂ ಕೂಡ, ನಾವೇನು ನಾಗರೊಡನೆ ಮದುವೆಯಾಗದೆ ಬಿಡುವವರಲ್ಲ, ಎಂದು ಆರ್ಯ ಕನ್ಯೆಯರು ಬಂಡು ಹೂಡುವವರಿದ್ದಾರೆ. ಕುರುಕ್ಷೇತ್ರದ ಯುದ್ಧದಿಂದ

ಆರ್ಯರಲ್ಲಿ ಗಂಡು ಸಂತತಿಯು ಕೊರತೆಯಾಗಿದೆ. ಹೆಣ್ಣು ಸಂತತಿಯು ಹೆಚ್ಚಾಗಿದೆ. ಹೆಚ್ಚಾದ ಈ ಯುವತಿಯರ ಗತಿಯೇನು ? ನನ್ನ ಅಜ್ಜಿಯನ್ನು ಕೇಳಿರಿ. ಆ ಕಾಲದಲ್ಲಿ ಸಹಸ್ರಾರು ಆರ್ಯಕನ್ನೆಯರು ನಾಗರನ್ನು ಮದುವೆಯಾದರು. ಅದನ್ನು ಕಂಡು ವೃದ್ಧ ವಕ್ರತುಂಡನು? ಚಡಪಡಿಸುತ್ತಿದ್ದಾನೆ. ನೀವು ಅವನ ಹೆಸರನ್ನು ಕೇಳಿರಬಹುದು. ನಾಗರ ದ್ವೇಷದ ಉಪದೇಶವನ್ನು ಗೈಯ್ಯುವದಕ್ಕಾಗಿ ನಾನಿದ್ದ ಆಶ್ರಮಕ್ಕೆ ಒಮ್ಮೆ ಅವನು ಬಂದಿದ್ದ. ನಾನು ಅವನ ಬಾಯಿ ಮುಚ್ಚಿಸಿದೆ. ಅವನು ಕಿಡಿಕಾರುತ್ತ ಹೊರಟು ಹೋದನು. ಗುರುದೇವನು ನನ್ನನು ಹೊಗಳಿದನು. ಆ ಸಾವಿರಾರು ಆರ್ಯಕನ್ನೆಯರ ಸಂತತಿಯನ್ನು ಹೀನವೆಂದು ಭಾವಿಸಬೇಕೆ ? ದೂರವಿದ್ದ ಸೃಷ್ಟಿಯನ್ನು ಹತ್ತಿರದಲ್ಲಿ ತರುವವರೇ ನಾವು, ಸ್ತ್ರೀಯರು. ಆ ವಕ್ರತುಂಡನ ವಿರುದ್ಧವಾಗಿ ಅನೇಕ ಆರ್ಯಮಾತೆಯರು ಪ್ರಚಾರಕ್ಕೆ ಹೊರಡುವವರಿದ್ದಾರೆ. ಮಕ್ಕಳ ಕುತ್ತಿಗೆ ಕೊಯ್ಯುವನು ಅದಾವ ತಾಯಿಯ ಕೈಯಿಂದಾದೀತು ? ತಾಯಂದಿರು ಹಾಗು ಅಕ್ಕತಂಗೆಯರು ಮನಸ್ಸು ಮಾಡಿದರೆ,ಜಗತ್ತಿನ ದ್ವೇಷವೆಲ್ಲ ಶಾಂತವಾದೀತು. ನಾಗಾನಂದ, ಈ ದ್ವೇಷದ ವಿರುದ್ಧವಾಗಿ ಹೋರಾಡುವ ಪ್ರತಿಜ್ಞೆಯನ್ನು ನಾವು ಮಾಡೋಣ. ಕೈಯಲ್ಲಿ ಕೈ ಹಾಕೋಣ. ಭರತಖಂಡದಲ್ಲೆಲ್ಲ ಪ್ರೇಮದ ಮಳೆಯನ್ನು ಸುರಿಸೋಣ. ಆಸ್ತಿಕನ ಧ್ಯೇಯವನ್ನು ಪ್ರಚಾರಮಾಡೋಣ ಈ ಧ್ಯೇಯ ಸಾಧಿಸುವಾಗ ಬರುವ ಸಂಕಟಗಳನ್ನೆದುರಿಸೋಣ. ಪ್ರಸಂಗ ಬಿದ್ದರೆ ಬೆಂಕಿಯಲ್ಲಿ ಹಾರೋಣ. ಬರುವಿರಾ ? ನನ್ನ ಕೈಯನ್ನು ಹಿಡಿಯುವಿರಾ ? ಹೀಗೆಂದು ಭಾವದ್ರೇಕದಿಂದ ತನ್ನ ಕೈಯನ್ನು ಮುಂಚೆ ಮಾಡಿದಳು

ಇಬ್ಬರೂ ಮೌನವಾಗಿದ್ದರು ಎರಡು ನಕ್ಷತ್ರಗಳು ಭೂಮಿಗಿಳಿದಂತಿತ್ತು. ಹಾಗೂ ಅವರು ನಡಗುತ್ತಿದ್ದರು. ಅವರಿಬ್ಬರೂ ಭಾರತದ ಭವಿಷ್ಯವನ್ನು ಚಿಂತಿಸುತ್ತಿರುವರೇ ? ದೊಡ್ಡ ಧ್ಯೇಯಗಳು ಮೌನದಿಂದಲೇ ಹುಟ್ಟುವವು. ಪರ್ವತವು ಅಕಸ್ಮಾತ್ತಾಗಿ ಸಮುದ್ರದಿಂದ ಹೊರಬರುತ್ತದೆ. ತೇಜಸ್ವಿಯಾದ ದೊಡ್ಡ ನಕ್ಷತ್ರವೊಂದು ಅಕಸ್ಮಾತ್ತಾಗಿ ಆಕಾಶದಲ್ಲಿ ಮಿನುಗು

ತ್ತದೆ. ಸುಂದರವಾದ ಮುತ್ತೊಂದು ಗಂಭೀರವಾದ ಸಮುದ್ರದಿಂದ ಆಕಸ್ಮಾತ್ತಾಗಿ ದಂಡೆಗೆ ಸಿಡಿದು ಬಿದ್ದು ಹೊಳೆಯುತ್ತದೆ.

ಅಜ್ಜಿ ಸುಶ್ರುತೆಯು ಬಂದಳು. ಇಬ್ಬರ ಕಡೆಗೂ ನೋಡುತ್ತ ನಿಂತಳು.

"ನೀವು ಯಾವಾಗ ಬಂದಿರಿ? ನಿಮ್ಮನ್ನು ಇವಳು ಬಹಳ ನೆನೆಸುತ್ತಲಿದ್ದಳು! ತೀರ ಹಣ್ಣಾಗಿದ್ದಳು. ಇತ್ತೀಚೆಗಂತೂ ಇವಳು ಹಾಸಿಗೆಯನ್ನೇ ಹಿಡಿದಿದ್ದಳು. ನೀವು ಬಂದದ್ದು ನೆಟ್ಟಗಾಯಿತು. ಇನ್ನು ಇವಳಿಗೂ ನೆಟ್ಟಗಾದೀತು." ಎಂದಳು ಸುಶ್ರುತೆ.

"ಇವರನ್ನು ನೋಡಿದೊಡನೆಯೇ ನನಗೆ ಶಕ್ತಿ ಬಂದಿತು. ನನ್ನ ಜೇನೆಯೆಲ್ಲ ಓಡಿಹೋಯಿತು. ಪ್ರೀತಿಯ ಮನುಷ್ಯರ ಭೆಟ್ಟಿಯೆಂದರೆ, ಧನ್ವಂತರಿಯ ದರ್ಶನವಾದಂತೆ. ಅಜ್ಜೀ, ಅವರು ಬಂದವರೇ ಬಾಗಿಲಲ್ಲಿ ಬಿದ್ದುಬಿಟ್ಟರು. ನಾನು ಹೆದರಿದೆ. ಹೋಗಿ ನೋಡುತ್ತೇನೆ, ಇವರು! ನಾನು ಗಾಬರಿಯಾದೆ. ಅವರ ಕಣ್ಣಿಗೆ ನೀರು ಹಚ್ಚಿದೆ, ಹಾಗೂ ಸೆರಗಿನಿಂದ ಗಾಳಿಯನ್ನು ಹಾಕಿದೆ. ಅವರು ಕಣ್ಣು ತೆರೆದರು, ಆಗ ನನಗೆ ಜೀವದಲ್ಲಿ ಜೀವ ಬಂದಂತಾಯಿತು." ಎಂದಳಾಕೆ.

"ನನ್ನ ಕಣ್ಣಿಗೆ ಹಚ್ಚಿದ ನೀರು ಎಂಥದು?" ಎಂದನು ನಾಗಾನಂದ.

"ಉಪ್ಪುನೀರು" ಅವಳು ನಗುತ್ತ ಹೇಳಿದಳು.

"ಉಪ್ಪುನೀರನ್ನೇಕೆ ಹಚ್ಚಿದೆ? ನೀನು ಹುಚ್ಚಿಯೇ ಇರುವೆ?" ಎಂದಳು ಅಜ್ಜಿ.

"ಉರಿಯಿತೇನು?" ಅವಳು ವಿಚಾರಿಸಿದಳು.

"ಉಪ್ಪುನೀರು ಉರಿಯುವದಿಲ್ಲ. ಅದರಿಂದ ಕಣ್ಣುಗಳು ಸ್ವಚ್ಛವಾಗುತ್ತವೆ. ಕಣ್ಣುಗಳನ್ನು ತೊಳೆಯುವದಕ್ಕಾಗಿ ದೇವರು ಉಪ್ಪುನೀರಿನ ಸಮುದ್ರವನ್ನೇ ನಿರ್ಮಾಣ ಮಾಡಿದ್ದಾನೆ. ಯಾವ ಬಗೆಯಾಗಿ ಭೀಷ್ಮರಿಗೆ ಪಾತಾಳಗಂಗೆಯು ಇಚ್ಛೆಯಾಗಿತ್ತೋ, ಅದೇ ಪ್ರಕಾರವಾಗಿ ಜನರಿಗೆ ಒಮ್ಮೊಮ್ಮೆ ಹೃದಯುದದಲ್ಲಿರುವ ಉಪ್ಪುನೀರಿನ

ಆವಶ್ಯವು ಇರುತ್ತದೆ. ಆದರಿಂದ ಅವರ ಕಣ್ಣುಗಳು ತೆರೆಯುವವು. ಮುಖವು ಅರಳುವದು. ನೀರಸವಾಗಿರುವ ಜೀವನದಲ್ಲಿ ಜೀವ ಬರುವದು. ರಸವು ಉತ್ಪನ್ನವಾಗುವದು.'' ಎಂದನು ನಾಗಾನಂದ.

"ನೀವೂ ಬೇನೆ ಬಿದ್ದಿದ್ದಿರಾ? ಸೊರಗಿದಂತೆ ಕಾಣುತ್ತೀರಿ?" ಎಂದಳು ಅಜ್ಜಿ.

"ಅವರು ದೂರದಿಂದ ಬಂದಿದ್ದಾರೆ. ಪ್ರವಾಸದಿಂದ ಅವರಿಗೆ ತೊಂದರೆಯಾಗಿರಬಹುದು. ಬೆಳಿಗ್ಗೆ ನೋಡು, ತರುಣರಂತೆ ಕಾಣುವರು. ಅರಳಿದ ದುಂಡುಮಲ್ಲಿಗೆಯ ಹೂವಿನಂತೆ ಕಂಡಾರು?" ಎಂದಳು ನಗುತ್ತ ವತ್ಸಲೆ.

"ಕಪ್ಪು ದುಂಡುಮಲ್ಲಿಗೆಯಂತಲ್ಲವೇ?" ಎಂದು ನಾಗಾನಂದನು ನಕ್ಕನು.

"ಕಪ್ಪು ದುಂಡುಮಲ್ಲಿಗೆ ಇರುವದೇ? ಅದು ನಾಗರ ತೋಟದಲ್ಲಿರುವಂತೆ ಕಾಣುತ್ತದೆ." ಎಂದು ಚೇಷ್ಟೆ ಮಾಡಿದಳು

"ನಾಗರ ತೋಟದಲ್ಲಿ ಎಲ್ಲವೂ ಇರುತ್ತದೆ. ಮನಸ್ಸಿಗೆ ಬಂದದ್ದನ್ನೆಲ್ಲ ಅಲ್ಲಿ ಅರಳಿಸಲು ಶಕ್ಯವಿದೆ. ಎಲ್ಲವೂ ಮನಸ್ಸಿನ ಪರಿಣಾಮ. ಮನಸ್ಸು ತನ್ನ ಬಣ್ಣವನ್ನು ವಸ್ತುವಿಗೆ ಕೊಡುತ್ತದೆ. ಮನಸ್ಸೆಂದರೆ ಜಾದುಗಾರ, ದೊಡ್ಡ ಚಿತ್ರಗಾರ, ಮನಸ್ಸೆಂದರೆ ಬ್ರಹ್ಮದೇವ, ಮನಸ್ಸೆಂದರೆ ಸೃಷ್ಟಿಯ ತತ್ವ. ಸಂಕಲ್ಪವಿಲ್ಲದೆ ಸೃಷ್ಟಿಯಿಲ್ಲ, ಮನವಿಲ್ಲದೆ ಸಂಕಲ್ಪವಿಲ್ಲ." ಎಂದನು ನಾಗಾನಂದ.

"ನೀವೇನು ಆಶ್ರಮದಲ್ಲಿದ್ದಿರೋ? ತತ್ವಜ್ಞಾನಿಯಂತೆ ಮಾತನಾಡುವಿರಿ? ವತ್ಸಲೆಯೂ ಮೊದಲು ಹೀಗೆಯೇ ಮಾತನಾಡುತ್ತಿದ್ದಳು. ಆದರೆ ಆಕೆಯ ಇಂಥ ಮಾತುಗಳು ಈಗ ಮಾಯವಾಗಿವೆ. ಈಗಿನ ಮಾತುಗಳೇ ಬೇರೆ. ಮನುಷ್ಯನು ಬೇರೆ ಬೇರೆ ಸಮಯದಲ್ಲಿ ಬೇರೆ ಬೇರೆ ಮಾತನಾಡುತ್ತಾನೆ.'' ಎಂದು ಸುಶ್ಮಿತೆಯು ನುಡಿದಳು.

" ಆದರೆ ಆ ಎಲ್ಲ ಮಾತುಗಳಲ್ಲಿ ಅವರ ಹೃದಯದ ಬಣ್ಣವು ಒಂದೇ ರೀತಿ ಕಾಣುತ್ತದೆ. ಒಬ್ಬನ ಹೃದಯದ ಬಣ್ಣ, ಆ ಆತ್ಮನ ನಾನಾವಿಧ ಜೀವನದ ದರ್ಶನ. ನಮ್ಮ ಎಲ್ಲ ವ್ಯವಹಾರಗಳಲ್ಲಿ ನಮ್ಮ ಜೀವನದ ಅನಂತ ಪ್ರಕಾರಗಳು ಪ್ರಕಟವಾಗುತ್ತವೆ. " ಎಂದನು.

" ತಾವು ಯಾವ ಆಶ್ರಮದಲ್ಲಿದ್ದಿರಿ ? ಹಿಂದಕ್ಕೆ ನಾನು ಆಶ್ರಮದಲ್ಲಿದ್ದೆನೆಂದು ನದಿಯ ದಂಡೆಯ ಮೇಲೆ ಕಾರ್ತೀಕನಿಗೆ ಹೇಳಿದ್ದಿರಿ. " ಎಂದು ವತ್ಸಲೆಯು ಪ್ರಶ್ನಿಸಿದಳು.

" ಆ ಆಶ್ರಮವು ಈಗ ಇರುವದಿಲ್ಲ. ಆ ಆಶ್ರಮದಲ್ಲಿ ಆರ್ಯ ಹಾಗೂ ಅನಾರ್ಯ ತರುಣರು ವಾಸಿಸುತ್ತಿದ್ದರು. ಒಂದು ದಿವಸ ಆರ್ಯರು ಆ ಆಶ್ರಮದ ಮೇಲೆ ದಂಡೆತ್ತಿ ಬಂದರು. ಆಶ್ರಮದ ಆಚಾರ್ಯರು ಅವರ ಸಮೀಪಕ್ಕೆ ಹೋಗಿ, 'ಹತ್ಯೆಯನ್ನು ಮಾಡಬೇಡಿರಿ. ನಾಳಿನಿಂದ ಆಶ್ರಮವು ಮುಚ್ಚಲ್ಪಟ್ಟೀತೆ ? ಆ ಆಶ್ರಮವು ಮುಚ್ಚಲ್ಪಟ್ಟರೂ ಕೂಡ, ಸತ್ಯವು ತನ್ನಷ್ಟಕ್ಕೆ ತಾನೇ ಪ್ರಸಾರವಾಗುವದು ಸತ್ಯವು ಆಶ್ರಮವನ್ನವಲಂಬಿಸಿಯೇ ಬದುಕುವದಿಲ್ಲ. ಸತ್ಯವು ಸಹಸ್ರಾರು ಮುಖದಿಂದ ಬೆಳೆಯುತ್ತಿರುತ್ತದೆ. ಸತ್ಯದ ಪ್ರಸಾರದ ನೇಮವು ಅತರ್ಕ್ಯವಿದೆ. ಸತ್ಯ ಬದುಕುವದರ ಚಿಂತೆ ನನಗಿಲ್ಲ. ಆಶ್ರಮವು ನಿಲ್ಲಿಸಲ್ಪಟ್ಟಿತೆಂದು ತಿಳಿಯಿರಿ' ಎಂದು ಉಪದೇಶಿಸಿ ನಮಗೆ ಅಪ್ಪಣೆಯನ್ನು ಕೊಟ್ಟರು. ಆಗ ನಮಗೆ ಅತ್ಯಂತ ದುಃಖವಾಯಿತು. ಆಗ ಅವರು 'ನೀವು ಒಬ್ಬೊಬ್ಬರು ಒಂದೊಂದು ಆಶ್ರಮವಾಗಿರಿ. ನೀವು ಎಲ್ಲೆಲ್ಲಿ ಹೋಗುವಿರೋ ಅಲ್ಲಲ್ಲಿ ಆಶ್ರಮದ ಧ್ಯೇಯಗಳನ್ನು ನಿರ್ಭಯದಿಂದ ಹಾಗೂ ನಮ್ರರೀತಿಯಿಂದ, ಪ್ರೇಮದಿಂದ ಹಾಗೂ ನಿಸ್ಪೃಹ ರೀತಿಯಿಂದ ಅವುಗಳನ್ನು ಪ್ರಸಾರಮಾಡಿರಿ. ತಾವು ದೂರ ಇದ್ದರೂ ಸಮೀಪವೇ ಇರುವಿರಿ. ಒಂದೇ ಧ್ಯೇಯದಿಂದ ಬಂಧಿಸಲ್ಪಟ್ಟ ನಾವು ಒಂದೆಡೆಯೇ ಇದ್ದಹಾಗೆ. ಜ್ಞಾನಮಯ ಸಂಬಂಧಕ್ಕೆ, ಚಿನ್ಮಯ ಸಂಬಂಧಕ್ಕೆ ದೇಶ, ಕಾಲಗಳು ಪ್ರತಿಬಂಧಕವಾಗುವದಿಲ್ಲ' ಎಂದರು. ನಮ್ಮ ಆಚಾರ್ಯರು ಎಲ್ಲಿಗೆ ಹೋದರೆಂಬುದು ತಿಳಿದಿಲ್ಲ. ಆದರೆ ಕೆಲವರು ಅವರ ಅವತಾರವು ಮುಗಿಯಿತೆಂದು ಹೇಳುತ್ತಾರೆ. ಅವರೇ

ನನ್ನ ತಂದೆ ತಾಯಿಗಳು. ಅವರು ನನಗೆ ಜ್ಞಾನವನ್ನು ಕೊಟ್ಟರು. ಪ್ರೇಮ ವನ್ನು ತೋರಿಸಿದರು. ಸರ್ವ ವಿದ್ಯಾರ್ಥಿಗಳ ಮೇಲೆ ಅವರ ಲೋಭ. ಆದರಲ್ಲಿಯೂ ನನ್ನ ಮೇಲಂತೂ ವಿಶೇಷ. ಏಕೆಂದರೆ ನಾನು ಚಿಕ್ಕವ ಹಾಗೂ ಪರದೇಶಿ. ನಾನು ಈ ವಿಶಾಲವಾದ ಜಗತ್ತಿನಲ್ಲಿ ಒಬ್ಬನೇ ಒಬ್ಬ. ಎಲ್ಲಿಯಾದರೂ ಒಂದು ಬೋರೆಹಣ್ಣು ಸಿಕ್ಕರೂ ಕೂಡ ಅವರು ಅದನ್ನು ನನ್ನ ಸಲುವಾಗಿ ತೆಗೆದಿಡುತ್ತಿದ್ದರು. ನಾನು ಎಷ್ಟೆಂದು ಹೇಳಲಿ ಅವರ ನೆನಪನ್ನು ! ಒಂದು ದಿವಸ ಕಟ್ಟಿಗೆಯನ್ನು ತರಲು ಅಡವಿಗೆ ಹೋಗಿದ್ದೆವು. ನಮ್ಮಲ್ಲಿ ಒಬ್ಬ ನಾಗಕುಮಾರನು ತೀರ ಅಶಕ್ತನಿದ್ದನು. ಆದರೆ ಉಳಿದವರೆಲ್ಲರೂ ದೊಡ್ಡ ಹೊರೆಯನ್ನು ಅವನೂ ಹೊರಬೇಕೆಂದು ಆಗ್ರಹ ಪಡಿಸಿದರು. ಅವನು ದಣಿದನು. ಮೆಲ್ಲಗೆ ನಡೆಯ ಹತ್ತಿದನು. ನಾನೂ ಮೆಲ್ಲಗೆ ನಡೆದೆ. ಉಳಿದವರೆಲ್ಲರೂ ಮುಂದೆ ಹೋದರು. ನಾನು ನನ್ನ ಹೊರೆಯನ್ನು ಕೆಳಕ್ಕೆ ಒಗೆದೆ. ಅವನಿಗೂ ಒಗೆಯಲು ಹೇಳಿದೆ. ಅವನು ಹೊರೆಯಲ್ಲಿಯ ಕಟ್ಟಿಗೆಗಳನ್ನು ತೆಗೆದು ನನ್ನ ಹೊರೆಯಲ್ಲಿ ಕಟ್ಟಿ ಕೊಂಡೆ. ಅದನ್ನು ಹಗರು ಮಾಡಿದೆ ಅವನು ಬೇಡವೆನ್ನುತ್ತಿದ್ದ. ಉಳಿದ ವರು ಛೇಡಿಸುವರು, ಹೆಸರಿಡುವರು, ಎಂದು ಅವನು ಅಂದ. ನೋಡೋಣ ಯಾರು ಹೆಸರಿಡುತ್ತಾರೆ? ಅಂಜಬೇಡ ಎಂದು ನಾನು ಹೇಳಿದೆ. ಚಿಕ್ಕದಾದ ಹಾಗು ಹಗುರಾದ ಹೊರೆಯನ್ನು ಅವನ ತಲೆಯ ಮೇಲೆ ಹೊರಿಸಿ, ಆ ದೊಡ್ಡ ಹೊರೆಯನ್ನು ನಾನು ಹೊತ್ತುಕೊಂಡು ನಡೆದೆವು. ಆಶ್ರಮದಲ್ಲಿ ಆಚಾರ್ಯರು ನಮ್ಮ ದಾರಿಯನ್ನು ನೋಡುತ್ತಿದ್ದರು. ಅವರಿಗೆ ಸಮಾ ಧಾನವಾಗಲೊಲ್ಲದು. ನಮ್ಮನ್ನು ನೋಡುವದಕ್ಕಾಗಿ ಅವರೇ ಹೊರಟರು. ಅವರೇ ಬಂದರು, ಬಂದರು ಎಂದು ಹುಡುಗರು ಚಪ್ಪಾಳೆಬಾರಿಸಿದರು. ನನ್ನ ತಲೆಯ ಮೇಲಿನ ದೊಡ್ಡ ಹೊರೆಯನ್ನು ನೋಡಿ ಆಚಾರ್ಯರು ಇಷ್ಟು ದೊಡ್ಡ ಹಾಗು ಜಡವಾದ ಹೊರೆಯನ್ನು ಏಕೆ ತರಬೇಕು? ಎಂದರು. ನಾನು ಸುಮ್ಮನಿದ್ದೆ. ಆದರೆ ಹಿಂದುಗಡೆ ಅವರಿಗೆ ಎಲ್ಲ ಸಂಗತಿಯನ್ನು ತಿಳಿಸಿದೆ. ಅವರಿಗೆ ಕೆಡುಕೆನಿಸಿತು. ಎರಡನೆಯ ದಿವಸ ಪ್ರಾರ್ಥನೆಯ ಸಮಯದಲ್ಲಿ ಮಕ್ಕಳಿರಾ, ಸಮಾನತೆ, ಸಮಾನತೆ ಎಂದು ನೀವು ಅನ್ನುವಿರಿ. ಆದರೆ ಅದರ ನಿಜವಾದ ಅರ್ಥವೇನು ? ನಾವು ಅನೇಕ ಶಬ್ದಗಳನ್ನು ಉಚ್ಚರಿಸುತ್ತೇವೆ.

ಆದರೆ ಅವುಗಳ ಅರ್ಥವನ್ನು ನಾವು ಅರಿಯುವದಿಲ್ಲ. ವೇದಾಭ್ಯಾಸ ಮಾಡುವಾಗ ಒಂದು ಸ್ವರವನ್ನು ತಪ್ಪಿದರೆ, ಅದರ ಅರ್ಥವು ಹೇಗೆ ವಿಪರೀತವಾಗುವದೆಂಬುದನ್ನು ನೀವು ತಿಳಿದಿರುವಿರಿ. ಸ್ವತಂತ್ರತೆ, ಸಮಾನತೆ ಈ ಶಬ್ದಗಳನ್ನು ನೀವು ಮೇಲಿಂದ ಮೇಲೆ ಉಪಯೋಗಿಸುವಿರಿ. ಸಮಾನತೆಯೆಂದರೆ ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವದು. ಎಲ್ಲರೊಡನೆ ಸಮದೃಷ್ಟಿಯಿಂದ ನಡೆಯುವದು ಅಂದರೆ ಇದರ ಅರ್ಥವೇನು? ಚಿಕ್ಕಮಕ್ಕಳಿಗೂ ಕೂಡ ದೊಡ್ಡವರಷ್ಟೇ ಕೆಲಸವನ್ನು ಹಚ್ಚುವದು ಎಂದೋ? ಈ ಸಮಾನತೆಯು ಮಕ್ಕಳಿಗೆ ಮಾರಕವಾಗುವದು. ನನ್ನಂತಹ ವೃದ್ಧನಿಗೆ ತರುಣರಷ್ಟು ಕೆಲಸವನ್ನು ಕೊಡುವದು ಸಮಾನತೆಯೇ. ಸಮಾನತೆಯೆಂದರೆ ಯಾವನ ವಿಕಾಸಕ್ಕೆ ಏನು ಬೇಕಾಗುವದೋ ಅದನ್ನು ಒದಗಿಸುವದು ಎಂದರ್ಥ. ಯಾರ ವಿಕಾಸಕ್ಕೂ ಅದು ಅಡ್ಡಿಯಾಗಬಾರದು. ನಮ್ಮ ಆಶ್ರಮದಲ್ಲಿ ಒಬ್ಬ ಅಶಕ್ತ ಹುಡುಗನಿದ್ದರೆ, ಅವನಿಗೆ ಸ್ವಲ್ಪ ಬೇರೆ ಆಹಾರವನ್ನು ಕೊಡಬೇಕು. ಅವನಿಗೆ ಸ್ವಲ್ಪ ಹೆಚ್ಚು ಹಾಲನ್ನು ಕೊಟ್ಟರೆ, ಸಮಾನತೆಯು ನಷ್ಟವಾಯಿತೆ? ನೀವು ಆ ಅಶಕ್ತ ಪದ್ಮನಾಭನಿಗೆ ಜಡವಾದ ಹೊರೆಯನ್ನು ಹೊರಲು ಹಚ್ಚಿದ್ದೇಕೆ? ಅದು ಅವನಿಗೆ ಹೊರಲು ಆಗಲೊಲ್ಲದು. ಅವನು ದಣಿದ. ಒಂದು ವೇಳೆ ನಾಗಾನಂದನು ನಿಂತು, ತನ್ನ ಮನಸ್ಸಿನ ದೊಡ್ಡಿಸ್ತನವನ್ನು ತೋರಿಸದೇ ಇದ್ದರೆ, ಆ ಪದ್ಮನಾಭನ ವಿಷಯದಲ್ಲಿ ಅಂತಃಕರಣವನ್ನು ತೋರಿಸದೆ ಇದ್ದರೆ, ಆ ಬಡಪಾಯಿಯು ಅಲ್ಲಿಯೇ ಬೀಳುತ್ತಿದ್ದ. ಸೂರ್ಯನ ಪ್ರಖರ ಬಿಸಿಲಿಗೆ ಸತ್ತು ಹೋಗುತ್ತಿದ್ದ. ಇನ್ನೊಮ್ಮೆ ಹೀಗೆ ಮಾಡಬೇಡಿರಿ. ಯಾರಿಗೆ ಎಷ್ಟು ಶಕ್ತಿಯಿದೆಯೋ ಅಷ್ಟೆ ಅವರಿಗೆ ಕೊಡಬೇಕು. ನಾಗಾನಂದನು ತುಂಬಿದ ನದಿಯಲ್ಲಿ ಧುಮುಕುತ್ತಾನೆಂದು ಸರ್ವರಿಗೂ ಸಾಯಲು ಹೇಳಲೋ? ಆದರೆ ನಿಶ್ಚಯವಾಗಿಯೂ ಆ ಶಕ್ತಿಯು ಎಲ್ಲರಲ್ಲಿಯೂ ಬರಬೇಕೆಂದು, ನಾವು ಪ್ರಯತ್ನಿಸಲೇ ಬೇಕು. ನಾವು ದುರ್ಬಲತೆಯ ಉಪಾಸಕರೆಂದೂ ಆಗ ಕೂಡದು. ತಮಗೆ ಬಹಳ ಕೆಲಸಬೀಳಬಾರದು, ಎಲ್ಲರೂ ತನ್ನವಿಷಯಕ್ಕೆ ದಯವುಳ್ಳವರಾಗಬೇಕು. ತನಗೆ ಸುಕುಮಾರ ನೆನ್ನಬೇಕು, ಎಂಬ ಭಾವನೆಗಳನ್ನು ನಾವು ತ್ಯಜಿಸ

ಬೇಕು. ತಾರತಮ್ಯವನ್ನು ನಾವು ಅರಿಯಬೇಕು. ನಮ್ಮ ಕೈಬೆರಳುಗಳು ಐದೂ ಸರಿಯಾಗಿಲ್ಲ. ಅವೆಲ್ಲವುಗಳನ್ನು ಕಡಿದು ಸಮಮಾಡುವದು ಸಮಾನತೆಯೇ ? ಅದು ಮೂರ್ಖತನವು. ಆದರೆ ಯಾವ ಬೆರಳಿಗೆ ಅದರ ಬೆಳವಣಿಗೆಗೆ ಹೃದಯದಲ್ಲಿಯ ಎಷ್ಟು ರಕ್ತವು ಅವಶ್ಯವೋ ಅಷ್ಟನ್ನು ಹೃದಯವು ಪೂರೈಸುವದು. ಸಮಾನತೆಯ ತತ್ವವನ್ನು ಚೇಷ್ಟೆ ಮಾಡಬಾರದು. ಅದರಂತೆಯೇ ಸ್ವಾತಂತ್ರ್ಯದ ತತ್ವ. ಇವುಗಳ ನಿಜವಾದ ಅರ್ಥವನ್ನು ಎಷ್ಟು ಜನರು ತಿಳಿದಿರುವರೋ ದೇವರೇ ಬಲ್ಲ ಸ್ವಾತಂತ್ರ್ಯವೆಂದರೆ ಸಂಯಮ. ಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ. ಅಸಂಯಮಿ ಸ್ವಾತಂತ್ರ್ಯವು, ಮಾರಕವಿರುತ್ತದೆ. ಸಂಯಮವು ತಾರಕವಿದೆ. ನಿಮಗೆ ವಾಸನೆಗಳನ್ನು ನಿಮ್ಮ ವಶದಲ್ಲಿಟ್ಟುಕೊಳ್ಳಬೇಕಾಗಿದ್ದರೆ ವಾಸನೆಗಳನ್ನು ಸಂಯಮ ಮಾಡುವ ಸ್ವಾತಂತ್ರ್ಯವು ನಿಮಗೆ ಬೇಕು. ಮನುಷ್ಯನ ಯೋಗ್ಯತೆಯು ಅವನು ತನ್ನ ಭೋಗಗಳಿಗೂ, ಇಂದ್ರಿಯ ಸುಖಗಳಿಗೂ ತನ್ನ ಸ್ವಾರ್ಥಕ್ಕೂ ಎಷ್ಟು ಬೆಲೆ ಕೊಡುವನೋ ಅದನ್ನೇ ಅದು ಅವಲಂಬಿಸಿದೆ. ಅವನು ಸ್ವಾತಂತ್ರ್ಯದ ದಾಸನಿರುವನೋ ಅಥವಾ ಸ್ವಾಮಿಯಿರುವನೋ. ಎಂಬುದರ ಮೇಲೆಯೇ ಅವನ ಸ್ವಾತಂತ್ರ್ಯದ ಬೆಲೆಯಿದೆ' ಹೀಗೆ ಅಂದು, ಅವರು ತಮ್ಮ ಪ್ರವಚನದಲ್ಲಿ ಎಷ್ಟೋ ಮಾತುಗಳನ್ನು ಹೇಳಿದರು. ಅವೆಲ್ಲವೂ ನನ್ನ ಕಿವಿಯಲ್ಲಿ ಇನ್ನೂ ಧ್ವನಿಗೊಡುತ್ತಲಿವೆ. ನಾನು ಬಹಳ ದಣಿದದ್ದರಿಂದ ನನ್ನ ಕಾಲಿಗೆ ಎಣ್ಣೆಯನ್ನು ಹಚ್ಚಿ ತಿಕ್ಕ ಹತ್ತಿವರು. ಆ ದೊಡ್ಡ ವಿಭೂತಿಯು ನನಗೆ ತಾಯಿ. ಅವರು ಎಲ್ಲಿರಬಹುದು ? ಅವರು ನನಗೆ ಯಾವಾಗ ಭೆಟ್ಟಿಯಾಗುವರು ? ವತ್ಸಲೇ, ಈ ನಾಗನಂದನನ್ನು ಅವರೇ ಮೂರ್ತಿಗೊಳಿಸಿದರು. ಚಿಕ್ಕಂದಿನಲ್ಲಿ ನನ್ನ ತಾಯಿಯು ಈ ಇಬ್ಬರೂ ತಾಯಂದಿರು ನನಗೆ ಮೂರ್ತ ಸ್ವರೂಪವನ್ನು ಕೊಟ್ಟಿದ್ದಾರೆ. ನನ್ನ ಜೀವನದಲ್ಲಿ ರಸವನ್ನು ತುಂಬಿದ್ದಾರೆ" ಎಂದು ಮಾತನಾಡುತ್ತಾಡುತ್ತ ಅವನ ಕಂಠವು ಬಿಗಿದು ಬಂದಿತು.

"ಇಂತಹ ಈ ಪವಿತ್ರವಾದ ಕೊಡವನ್ನು ತಲೆಯ ಮೇಲಿಟ್ಟುಕೊಂಡು ನನಗೆ ಕುಣಿಯಗೊಡು. ನಿನ್ನ ಜೀವನವನ್ನು ನಾನು ಪೂಜಿಸುವೆ.

ಅದನ್ನು ನನ್ನದನ್ನಾಗಿ ಮಾಡಿಕೊಳ್ಳುವೆ. ನಿನ್ನ ತುಂಬಿದ ಕೊಡದಲ್ಲಿಯ ರಸವನ್ನೆಲ್ಲ ನನ್ನ ಜೀವನದಲ್ಲಿ ಸುರುವು. ನಿನ್ನದಂತೂ ಬರಿದಾಗುವದಿಲ್ಲ. ಆದರೆ ನನ್ನ ಜೀವನವು ಮಾತ್ರ ಅರಳುವದು" ಎಂದಳು ವತ್ಸಲೆ.

"ಈಗ ಊಟಮಾಡಿರಿ. ಬಿಸಿ ಬಿಸಿ ರೊಟ್ಟಿ ಹಾಗೂ ಹಾಲನ್ನು ಊಟ ಮಾಡಿರಿ. ಏಳಿರಿ, ಏಳಿರಿ. ವತ್ಸಲೆ! ಎಬ್ಬಿಸು ಅವರನ್ನು" ಎಂದು ಪ್ರೇಮ ದಿಂದ ಅಜ್ಜಿಯು ಮಾತನಾಡಿದಳು.

"ಒಳ್ಳೇದು ಏಳುವೆ. ಈಗ ಹತ್ತು ಹರದಾರಿಯನ್ನು ಓಡಬಲ್ಲೆ" ಎಂದಳು ವತ್ಸಲೆ.

ವತ್ಸಲೆ ಹಾಗು ನಾಗಾನಂದರಿಬ್ಬರೂ ಊಟಕ್ಕೆ ಕುಳಿತರು. ಅವರಿಬ್ಬರ ಆನಂದಕ್ಕೆ ಮಿತಿಯಿರಲಿಲ್ಲ. ಅವರ ಮುಖಗಳು ಅರಳಿದ್ದವು. ಅವರ ನಗೆಯು ಕೋಣೆಯನ್ನೆಲ್ಲ ತುಂಬಿತ್ತು. ಸುಶ್ಶೃತೆಯ ಮೋರೆಯ ಮೇಲೂ ಪ್ರಸನ್ನತೆಯು ತೋರುತ್ತಿತ್ತು. ಯಾರೂ ಮಾತನಾಡುತ್ತಿರಲಿಲ್ಲ.. ಮೆಲ್ಲಗೆ ನಾಗಾನಂದನು ವತ್ಸಲೆಯ ಕಡೆಗೆ ನೋಡುವನು. ಅವನ ತುತ್ತು ಕೆಳಗೆ ಬೀಳು ತ್ತಿತ್ತು. ಅದರಂತೆಯೇ ಅವನನ್ನು ತಪ್ಪಿಸಿ ಅವಳು ನೋಡುವಳು. ಸುಶ್ಶೃತೆಗೆ ಇದನ್ನು ನೋಡಿ. ನಗೆ ಬರುತ್ತಿತ್ತು.

"ಅಜ್ಜೀ, ಯಾಕೆ ನಗುತ್ತಿ? ನಿನ್ನ ಊಟಗೀಟ ನನಗೇನೂ ಬೇಡ. ನೀನು ನಗುವಿ, ನನ್ನನ್ನು ನಗೆಸುವಿ ನಾನು ಏಳಲಾ" ಎಂದು ಸಿಟ್ಟಿಗೆದ್ದಂತೆ ನಟಿಸಿದಳು ವತ್ಸಲೆ.

"ಹೊಟ್ಟೆ ತುಂಬಿದಂತೆ ಕಾಣುತ್ತದೆ. ಆದ್ದರಿಂದಲೇ ಊಟ ಬೇಡ ವಾಗಿದೆ" ಎಂದಳು ಅಜ್ಜಿ

"ಅವರದೂ ಕೂಡ ತುಂಬಿರುವದೇ? ಅವರಂತೂ ಬಹಳ ದಣಿದು ಬಂದಿದ್ದಾರೆ. ಅವರ ರೊಟ್ಟಿ ಏಕೆ ಸವಿಯಲೊಲ್ಲದು?" ಎಂದಳು ವತ್ಸಲೆ.

"ಅತಿ ಶ್ರಮದಿಂದ ಹಸಿವೆಯು ಸಾಯುತ್ತದೆ" ಎಂದನು ನಾಗಾ ನಂದನು.

" ಅತಿ ಹಸಿವೆಯಿಂದಲೂ ಸಾಯುತ್ತದೆ " ಎಂದು ನಗುತ್ತ ಸುಶ್ರುತೆ ನುಡಿದಳು.

" ನೀವು ಹೊಟ್ಟೆತುಂಬ ಊಟಮಾಡಿರಿ " ವತ್ಸಲೆಯು ಎಂದಳು.

" ಅವರಿಗೆ ಇನ್ನೂ ಸಂಕೋಚವೆನಿಸುತ್ತಿರಬಹುದು " ಎಂದಳು ಸುಶ್ರುತೆ.

' ಸಂಕೋಚವೇತರದು ? ಸಂಕೋಚವೆನಿಸುತ್ತಿದ್ದರೆ ಇಲ್ಲಿ ಬರುತ್ತಿದ್ದರೆ ! ಏನು ತಾವು ಬರುತ್ತಿದ್ದರಾ ! ನಗಬೇಡಿರಿ, ನಿಜಹೇಳಿರಿ ' ಎಂದಳು ವತ್ಸಲೆ.

' ನನಗೆ ನಗಬೇಡಿರಿ ಎನ್ನುವಿ. ಆದರೆ ನೀನೇಕೆ ನಗುವಿ. ನಿನ್ನನ್ನು ನೋಡಿದೊಡನೆಯೇ ನಗೆ ಬರುತ್ತದೆ ' ಎಂದನು.

' ನಾನೇನು ವಿದೂಷಕಳೇ ! ಸೋಗು ಹಾಕಿರುವೆನೇ ' ಎಂದು ರೇಗಿ ಗೆದ್ದಳು ವತ್ಸಲೆ.

' ಸೋಗು ಅಲ್ಲದಿದ್ದರೆ ಮತ್ತೇನು ? ನಿನನ್ನು ನೋಡಿ ಊರಿಗೆ ಊರೇ ನಗುತ್ತದೆ ' ಎಂದಳು ಅಜ್ಜಿ.

' ನೀವಿಬ್ಬರೂ ಇಂದು ನನ್ನನ್ನು ಅಳಿಸುವ ಯೋಜನೆ ಮಾಡಿದಂತೆ ಕಾಣುತ್ತದೆ ' ಎಂದಳು.

' ಇರಲಿ ಬಿಡು. ಆ ಹಾಲನ್ನು ಕುಡಿದು ಬಿಡು, ಚೆಲ್ಲ ಬೇಡ ! ಎಂದಳು ಅಜ್ಜಿ.

ಇಬ್ಬರ ಊಟವೂ ಮುಗಿಯಿತು. ಅಜ್ಜಿಯು ಹಾಲು ತೆಗೆದು ಕೊಂಡಳು.

' ನಿಮ್ಮ ಕಾಲುಗಳು ಹರಿಯುತ್ತಿರ ಬಹುದು ' ಎಂದು ವತ್ಸಲೆಯು ವಿಚಾರಿಸಿದಳು.

' ಇಲ್ಲ. ಹರಿಯುವದಿಲ್ಲ ' ಎಂದನು ನಾಗಾನಂದ.

' ಹಾಗಾದರೆ ಕಾಲುಗಳ ಮೇರೆ ಏಕೆ ಕೈಯಾಡಿಸಿ ಕೊಳ್ಳುತ್ತಿದ್ದೀರಿ ? ಎಂದಳು.

'ಕಾಲಲ್ಲಿ ಮುಳ್ಳು ನಟ್ಟಿತ್ತು'

'ಇನ್ನೂ ಕಾಲಲ್ಲಿ ಇರುವುದೇ'

'ಆಹುದು. ಬಹಳ ಒಳಗೆ ಸೇರಿದೆ, ಹಾಗೆಯೇ ನಡೆಯುತ್ತ ಬಂದೆ'

'ನಾನು ತೆಗೆಯುತ್ತೇನೆ. ಇಲ್ಲದಿದ್ದರೆ ನಿಮಗೆ ನಿದ್ರೆ ಬರಲಾರದು'

'ಬೇಡ, ನಾನು ಬೆಳಿಗ್ಗೆ ತೆಗೆದು ಕೊಳ್ಳುತ್ತೇನೆ'

'ನನಗೆ ಮುಳ್ಳು, ತೆಗೆಯಲು ಚನ್ನಾಗಿ ಬರುತ್ತದೆ'

'ನಿಜವಾಗಿಯೂ ಮುಳ್ಳನ್ನು ವತ್ಸಲೆಯು ಚನ್ನಾಗಿ ತೆಗೆಯುತ್ತಾಳೆ. ಹಿಂದಕ್ಕೆ ನನಗೆ ಅನೇಕ ಮುಳ್ಳುಗಳು ನಟ್ಟಿದ್ದವು. ನನಗೆ ತಿಳಿಯ ದಂತೆಯೇ ಅವುಗಳನೆಲ್ಲ ಆಕೆಯು ತೆಗೆದಳು. ನಿಮ್ಮದೂ ತೆಗೆಯಲಿ. ನಿದ್ರೆ ಬರುವದು. ಮುಳ್ಳು ಇರುವ ವರೆಗೆ ಎಲ್ಲಿಯ ನಿದ್ರೆ?' ಎಂದು ಶುಶ್ರುತೆಯು ಮಮತೆಯಿಂದ ಮಾತನಾಡಿದಳು.

ವತ್ಸಲೆಯು ಒಳಗೆ ಹೋಗಿ, ಸೂಜಿಯನ್ನು ತೆಗೆದುಕೊಂಡು ಬಂದಳು.

'ತಾವು ಮಲಗಿಕೊಳ್ಳಿರಿ. ನಾನು ಮೆಲ್ಲಗೆ ಮುಳ್ಳನ್ನು ತೆಗೆಯುವೆ. ನಗುತ್ತೀರೇನು?' ಎಂದು ವತ್ಸಲೆಯು ಸ್ವಲ್ಪ ವಿನೋದದಿಂದ ಅಂದಳು.

'ವತ್ಸಲೆ, ಮುಳ್ಳು ಎಷ್ಟು! ಅದರ ಸ್ತೋಮವನ್ನು ಎಷ್ಟು ಬೆಳೆಸುವಿ! ಎಂದನು ನಾಗಾನಂದ.

'ಚಿಕ್ಕವೇ ದೊಡ್ಡದಾಗುತ್ತದೆ. ತಕ್ಕ ವೇಳೆಯಲ್ಲಿಯೇ ಉಪಾಯ ವನ್ನು ಯೋಚಿಸಬೇಕು. ನಾವು ಎಲ್ಲವೂ ಮೊದಲು ಚೇಷ್ಟೆಯೆಂದು ತಿಳಿಯುತ್ತೇವೆ. ಮುಂದೆ ಪರಿಸ್ಥಿತಿಯು ಗಂಭೀರವಾಗುತ್ತದೆ. ಆದರಿಂದ ಒಮ್ಮೊಮ್ಮೆ ಪ್ರಾಣಕ್ಕೆ ಎರವಾಗ ಬೇಕಾಗುತ್ತದೆ. ತಾವು ಮಲಗಿಕೊಳ್ಳಿರಿ. ಕೊಡಿರಿ, ಇತ್ತ ಕಾಲನ್ನು' ಎಂದಳು.

ಸುಶ್ರುತೆಯು ದೀಪವನ್ನು ದೊಡ್ಡದು ಮಾಡಿದಳು. ವತ್ಸಲೆಯು ಕಣ್ಣನ್ನು ಅರಳಿಸಿ ಮುಳ್ಳನ್ನು ನೋಡ ಹತ್ತಿದಳು. ಕಾಲನ್ನು ಸ್ವಚ್ಛವಾಗಿ ತೊಳೆದಳು. ಸೆರಗಿನಿಂದ ಒರಿಸಿದಳು. ತೊಡೆಯ ಮೇಲೆ ಕಾಲನ್ನಿಟ್ಟು ಕೊಂಡು ಮೆಲ್ಲನೆ ಮುಳ್ಳನ್ನು ತೆಗೆಯ ಹತ್ತಿದಳು. ನಡುನಡುವೆ ಸೂಜಿಯು

ಮುಳ್ಳಿಗೆ ತಾಗಿದೊಡನೆ ಅದು ಅಳುಕಿ, ನಾಗಾನಂದನು ಹಾಯ! ಅನ್ನುವನು.

‘ ಸೂಜಿಯು ಹತ್ತಿತೇನು ? ಇನ್ನು ಮೇಲೆ ಎಚ್ಚರದಿಂದ ತೆಗೆಯುವೆ. ಇನ್ನು ಹತ್ತಗೊಡುವದಿಲ್ಲ ’ ಎಂದಳು. ಮುಳ್ಳು ಹೊರಬಂದಿತು. ಆ ಪಾದ ವನ್ನು ಹೃದಯಕ್ಕೆ ಅವಚಿಕೊಂಡಳು, ತಲೆಯ ಮೇಲಿಟ್ಟಿಕೊಂಡಳು. ಕಣ್ಣು ಮುಚ್ಚಿ ವಂದನೆಯನ್ನು ಮಾಡಿದಳು. ಮೆಲ್ಲಗೆ ಕೆಳಗಿಟ್ಟಳು. ಆಕೆಗೆ ನಾಚಿಗೆ ಬಂದಿತು. ಮುಗುಳುನಗೆ ನಗುತ್ತಿದ್ದಳು.

‘ ಇದು ನೋಡಿರಿ, ಮುಳ್ಳು ಎಷ್ಟು ದೊಡ್ಡದಿದೆ ? ’ ಎಂದಳು.

‘ ಈಗ ಎಲ್ಲವೂ ನಿಷ್ಕಂಟಕವಾಯಿತಷ್ಟೇ ? ’ ಎಂದು ವಿಚಾರಿಸಿದನು.

‘ ದೇವರಿಗೇ ಗೊತ್ತು ’ ಅಂದಳು.

‘ ನಾನು ಈಗ ಮಲಗುವೆ. ಹೊರಗೆ ಮಲಗುವೆ. ನನಗೆ ಮನೆಯೊಳಗೆ ನಿದ್ರೆ ಬರುವದಿಲ್ಲ. ಅಡವಿಯಲ್ಲಿ ಬಯಲಲ್ಲಿ ಮಲಗುವ ನಾಗಾನಂದನಿಗೆ ಈ ಕೊಂಡವಾಡೆಯಲ್ಲಿ ಹೇಗೆ ನಿದ್ರೆ ಬರಬೇಕು ? ನಾನು ಹೊರಗೆ ಪಡಸಾಲೆಯಲ್ಲಿ ಮಲಗುವೆ. ’

ವತ್ಸಲೆಯು ಹಾಸಿಗೆಯನ್ನು ಹಾಸಿದಳು. ‘ ತಲೆದಿಂಬು ಬೇಕೋ ’ ಎಂದು ವಿಚಾರಿಸಿದಳು.

‘ ಅದು ಏನು ? ’ ಎಂದು ವಿಚಾರಿಸಿದ. ಆಕೆ ನಗಹತ್ತಿದಳು.

ಒಮ್ಮೆ ಥಂಡಿಯ ದಿವಸದಲ್ಲಿ ಹಾವನ್ನೇ ತಲೆದಿಂಬನ್ನಾಗಿ ಮಾಡಿ ಕೊಂಡಿದ್ದೆ. ಅದು ಬಹಳ ಮೆತ್ತಗೆ ಹಾಗು ತಂಪಾಗಿತ್ತು ’ ಎಂದನು.

“ ಅಡವಿಯಲ್ಲಿ ಹಾವಿನ ತಲೆದಿಂಬು, ಮನೆಯಲ್ಲಿ ಅರಳಿಯದಿಂಬು ’ ಎಂದು, ಅಂದಳು.

ಆಕೆಯು ಒಂದು ಸ್ವಚ್ಛವಾದ ತಲೆದಿಂಬನ್ನು ತಂದು ಕೊಟ್ಟಳು. ಅವನು ಮಲಗಿದನು. ಅವನ ಮೈಮೇಲೆ ಒಂದು ಕಂಬಳಿಯನ್ನು ಹೊಚ್ಚಿ ದಳು.

‘ ಕಂಬಳಿಯೇತಕ್ಕೆ ? ’ ಎಂದನು.

' ಅಂದರೆ ನಾಗವು ಓಡಿ ಹೋಗುವದಿಲ್ಲ. ಅದು ನಡುಗುವದಿಲ್ಲ. ಆದಕ್ಕೆ ಬೆಚ್ಚಗೆ ಎನಿಸೀತು. ? ' ಎಂದಳು.

ವತ್ಸಲೆಯು ಮಲಗಿದಳು. ಆಕೆಯ ಮುಂಗುರುಳುಗಳಮೇಲೆ ಕೈಯಾಡಿಸುತ್ತ, ಆವಳ ಅಜ್ಜಿಯು ಅಲ್ಲಿಯೇ ಮಲಗಿದಳು. ದೂರದಲ್ಲಿ ನಾಯಿಗಳು ಒದರುತ್ತಿದ್ದವು. ನಡುವೆ, ಹುಲಿಯ ಹುಂಕಾರವು ಕೇಳಿಸಿತು. ವತ್ಸಲೆಯು ಗಾಬರಿಯಾದಳು. ತಲೆಬಾಗಿಲು ಮುಚ್ಚಿರಲಿಲ್ಲ. ಹುಲಿಯು ಒಳಗೆ ಬಂದಿಲ್ಲವಷ್ಟೆ ? ಎಂದು ಅವಳ ಮನಸ್ಸಿನಲ್ಲಿ ಬಂದಿತು. ಆಕೆಯು ಎದ್ದು ಹೊರ ಬಂದಳು. ಬೆಳದಿಂಗಳು ನಾಗಾನಂದನ ಮುಖದ ಮೇಲೆ ಬಿದ್ದಿತ್ತು. ಅವನ ಮುಖವು ಬಹಳ ಮಧುರವಾಗಿ ಕಾಣುತ್ತಿತ್ತು. ಚಂದ್ರನು ತನ್ನ ಸಹಸ್ರಾರು ಕಿರಣಗಳಿಂದ ಆವನ ಮುಂಗುರುಳುಗಳನ್ನು ತೀಡುತ್ತಿದ್ದನು. ವತ್ಸಲೆಯು ಎವೆಯಿಕ್ಕದೆ ನೋಡುತ್ತ ನಿಂತಳು. ಆಕೆಯ ಮನದಲ್ಲಿ ಆನೇಕ ವಿಚಾರಗಳು ಬಂದವು. ನಾಗಾನಂದನ ಕಾಲುಗಳ ಕಡೆಗೆ ಹೋದಳು. ಕಾಲುಗಳನ್ನು ತೊಡೆಯಮೇಲೆ ಇಟ್ಟು ಕೊಂಡಳು. ಕಾಲು ಒತ್ತ ಹತ್ತಿದಳು. ನಾಗಾನಂದನು ಸ್ವಸ್ಥ ನಿದ್ರಿಸುತ್ತಿದ್ದನು. ಸ್ವಲ್ಪ ಸಮಯದ ನಂತರ ಅಂಗಳದಲ್ಲಿ ಎದ್ದು ನಿಂತಳು. ಆ ತನ್ನ ಕರಗಳ ಚುಂಬನವನ್ನು ತೆಗೆದುಕೊಂಡಳು. ನಾಗಾನಂದನ ಕಾಲುಗಳನ್ನೊತ್ತಿ ಆಕೆಯ ಕರಗಳು ಕೃತಾರ್ಥವಾಗಿದ್ದವು. ಆ ಕೈಗಳನ್ನು ತನ್ನ ತಲೆಯ ಮೇಲೆ ಇಟ್ಟುಕೊಂಡಳು. ನಾಗಾನಂದನ ಪಾದ ಧೂಳಿಯನ್ನು ಮಸ್ತಕದಲ್ಲಿ ಧರಿಸಿದಳು. ಆ ಧೂಳು ಆಕೆಗೆ ಕೇಶರ, ಕಸ್ತೂರಿ. ಆ ಧೂಳು ಸಕಲ ಸುಗಂಧ ದ್ರವ್ಯವಾಕೆಗೆ. ಆ ಧೂಳಿಂದರೆ ಆಕೆಗೆ ಮೋಕ್ಷ. ಅದೇ ಆಕೆಯ ಸರ್ವಸ್ವ. ಇಂದು ಆಕೆಗೆ ದೇವ ದರ್ಶವಾಗಿತ್ತು.

' ವತ್ಸಲೆ, ಹೀಗೇಕೆ ಹುಚ್ಚಿಯಂತೆ ಗಾಳಿಯಲ್ಲಿ ನಿಂತಿರುವಿ ? ನಿನಗೆ ಹುಚ್ಚು ಹಿಡಿದಿಲ್ಲವಷ್ಟೇ ? ಬೆಳದಿಂಗಳಲ್ಲಿ ಹುಚ್ಚು ಹಿಡಿಯುತ್ತದೆ. ನಡೆ ಒಳಗೆ ' ಎಂದು ಶುಶ್ರೂಷೆಯು ಹೊರ ಬಂದು ಗದ್ದರಿಸಿದಳು.

‘ ಅಜ್ಜೀ ಹುಲಿಯ ಧ್ವನಿಯನ್ನು ಕೇಳಿ ನಾನು ಹೊರಬಂದೆ. ಇವರು ಹೊರಗೆ ಮಲಗಿರುವರು. ಹೊರಗೆ ಬರಬಾರದೆಂದೆನಿಸಿದರೂ ಬಂದೆ ’ ಎಂದಳು.

‘ ಇದೆಲ್ಲವೂ ಸೋಗು. ಹುಲಿಯನ್ನು ನೋಡಲು ಬಂದೆಯೋ ಇವರನ್ನು ನೋಡಲು ಬಂದೆಯೋ ? ಒಳ್ಳೇ ಹೆದರು ಬಡಿಕಿ ನೀನು ’

‘ ನಾನು ಹೆದರುಬಡಿಕಿಯೇ ? ಮಹಾಪೂರ ಬಂದ ಸಮಯದಲ್ಲಿ ನೀರಿನಲ್ಲಿ ಕುಣಿಯುತ್ತ ನಿಂತ ನಾನು ಅಂಜುಬರುಕಿಯೇ ? ಗಿಡದ ತುಟ್ಟ ತುದಿಯನ್ನೇರಿ ಅಲ್ಲಿಂದ ಕೆಳಗೆ ಜಿಗಿಯಲು ಬಯಸಿದ ನಾನು ಬೆದರಬಡಿಕಿಯೆ ? ಅಜ್ಜೀ, ನೀನು ನನಗೆ ಬೇಕಾದದ್ದನ್ನು ಅನ್ನು. ಅಂಜುಬುರುಕಳೆಂದೆನ್ನ ಬೇಡ. ಅದು ಅವರಿಗೆ ಸೇರುವದಿಲ್ಲ. ಅಂಜುಬುರುಕಿ ವತ್ಸಲೆಯ ಕಡೆಗೆ ಅವರು ಕಣ್ಣೆತ್ತಿ ಕೂಡ ನೋಡಲಿಕ್ಕಿಲ್ಲ. ನಾನು ಬೆದರುಬಡಿಕೆಯಲ್ಲ ? ’ ಎಂದಳು.

‘ ಅವರು ಹೊರ ಪಡಸಾಲೆಯಲ್ಲಿ ಮಲಗಿದ್ದಾರೆ. ಹುಲಿಯು ಬಂದರೆ ಅವರ ಗತಿಯೇನು ’ ಎಂದು ನಿನಗೆ ‘ ಅಂಜಿಕೆ ಬರಲಿಲ್ಲವೇ ? ’ ಎಂದು ನಕ್ಕಳು ಅಜ್ಜಿ.

‘ ಎರಡನೆಯವರ ರಕ್ಷಣೆಗಾಗಿ ಚಿಂತೆಯೆನಿಸುವದು ಅಂಜುಬುರುಕತನವಲ್ಲ. ಹುಲಿಬಂದಿದ್ದರೆ ನಾನು ಹೊಡೆಯುತ್ತಿದ್ದೆ. ’ ಎಂದಳು.

‘ ಮೆಲ್ಲಗೆ ಮಾತನಾಡು ಅವರಿಗೆ ಎಚ್ಚರವಾದೀತು ? ನಡೆ ಒಳಗೆ ’ ಎಂದಳು ಅಜ್ಜಿ

ವತ್ಸಲೆಯು ಒಳಗೆ ಹೋಗಿ ಮಲಗಿಕೊಂಡಳು.



# ೭

ಆಸ್ತಿಕನ ಆಶ್ರಮದಲ್ಲಿ ಇಂದು ಬಹಳ ಗದ್ದಲ. ಆಶ್ರಮವನ್ನೆಲ್ಲ ಶೃಂಗರಿಸಿದ್ದರು. ತಳಿರು ತೋರಣಗಳನ್ನು ಕಟ್ಟಿದ್ದರು. ಅಲ್ಲಲ್ಲಿ ಹೂವಿನ ಹಾರಗಳನ್ನು ತೂಗಬಿಟ್ಟಿದ್ದರು. ಸುಂದರವಾದ ಧ್ವಜವು ಹಾರಾಡುತ್ತಿತ್ತು. ಎಲ್ಲ ಕಡೆಗೆ ಥಳಿ ಹಾಕಿದ್ದರು. ಅಲ್ಲಿ ಪ್ರಸನ್ನವಾದ ಹಾಗೂ ಸುಂದರವಾದ ವಾತಾವರಣವು ಹಬ್ಬಿತ್ತು.

ಇಂದು ರಾಜಾ ಪರೀಕ್ಷಿತನು, ಆಶ್ರಮಕ್ಕೆ ಬರುವವನಿದ್ದನು. ಅವನ ಸಂಗಡ ಇನ್ನೂ ಬೇರೆ ಋಷಿಗಳೂ ಬರುವವರಿದ್ದರು. ಅವರ ಸ್ವಾಗತದ ಸಿದ್ಧತೆಯು ನಡೆದಿತ್ತು. ಇಂದು ಆಶ್ರಮಕ್ಕೆ ಬಿಡುವಿತ್ತು. ಶಿಷ್ಯರೆಲ್ಲ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿದ್ದಾರೆ. ಕೆಲವು ಶಿಷ್ಯರು ರಾಜನ ಮಾರ್ಗ ನಿರೀಕ್ಷಣೆಗಾಗಿ ಮುಂದೆ ಹೋಗಿದ್ದರು. ರಾಜನು ಬರುವ ಸುಳಿವು ಹತ್ತಿದೊಡನೆಯೆ ಕೊಂಬನ್ನೂದುವವರಿದ್ದರು. ಅತಿಥಿ ಶಾಲೆಯಲ್ಲಿ ಎಲ್ಲ ವ್ಯವಸ್ಥೆ ಮಾಡಲ್ಪಟ್ಟಿತ್ತು.

ಕೊಂಬಿನ ಧ್ವನಿಯಾಯಿತು. ಭಗವಾನ್ ಆಸ್ತಿಕರು ಸ್ವಾಗತಕ್ಕಾಗಿ ಪುಷ್ಪಹಾರವನ್ನು ಹಿಡಿದುಕೊಂಡು, ಶಿಷ್ಯರೊಡನೆ ಎದುರು ನಡೆದರು. ರಾಜಾ ಪರೀಕ್ಷಿತನ ರಥವು ದೂರದಿಂದಲೇ ಕಾಣಿಸುತ್ತಿತ್ತು. ಸಂಗಡ ಕೆಲವು ರಾಹುತರಿದ್ದರು. ಇನ್ನೂ ಬೇರೆ ರಥಗಳಲ್ಲಿ ಋಷಿವರ್ಯರು ಇದ್ದರು. ಭಗವಾನ್ ಆಸ್ತಿಕರನ್ನು ಕಂಡಕೂಡಲೇ ರಾಜಾ ಪರೀಕ್ಷಿತನು ರಥದಿಂದ ಇಳಿದನು. ಅವನು ಮುಂದೆ ಬಂದು ಆಸ್ತಿಕರಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು. ಉಳಿದ ಋಷಿಗಳೂ ಆಸ್ತಿಕರಿಗೆ ಅಭಿವಂದನೆ

ಗಳನ್ನು ಅರ್ಪಿಸಿದರು. ಆಸ್ತಿಕರುಪರೀಕ್ಷಿತನಿಗೆ ಪೂಮಾಲೆಯನ್ನು ಹಾಕಿದರು. ಋಷಿಗಳಿಗೂ ಮಾಲೆಯನ್ನು ಹಾಕಿದರು. ಶಿಷ್ಯರೆಲ್ಲ ಪುಷ್ಪವೃಷ್ಟಿಯನ್ನು ಮಾಡಿದರು.

ಎಲ್ಲರೂ ಆಶ್ರಮಕ್ಕೆ ಬಂದರು. ರಥವು ಒಂದು ಬದಿಗೆ ಬಿಡಲ್ಪಟ್ಟಿತು. ಅತಿಥಿಗಳ ಪಾದಪ್ರಕ್ಷಾಲನೆ ಮಾಡಲ್ಪಟ್ಟಿತು. ಕುಶಲ ಪ್ರಶ್ನೆಗಳಾದವು. ಆಸ್ತಿಕರು ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿದರು. ಸವಿಯಾದ ಹಣ್ಣುಗಳ ಉಪಹಾರವಾಯಿತು.

"ಆಸ್ತಿಕರೇ, ಈ ಹಣ್ಣುಗಳು ಎಷ್ಟು ರುಚಿಯಾಗಿವೆ! ಇಂಥ ಹಣ್ಣುಗಳನ್ನು ನಾನು ಎಂದೂ ತಿಂದಿದ್ದಿಲ್ಲ. ರಾಜನ ಉಪವನದಲ್ಲಿಯೂ ಕೂಡ, ಇಂಥ ಹಣ್ಣುಗಳು ದೊರೆಯುವದಿಲ್ಲ. ನೀವೇನು ಮಾಂತ್ರಿಕರೇ?" ಎಂದು ಪರೀಕ್ಷಿತನು ವಿಚಾರಿಸಿದನು.

"ರಾಜಾ, ಮಂತ್ರಗಾರಿಕೆ ಈ ಆಶ್ರಮದಲ್ಲಿಲ್ಲ. ಈ ಆಶ್ರಮದಲ್ಲಿ ವಿಶೇಷವೇನೂ ಇಲ್ಲ. ಪ್ರೇಮ ಒಂದು ಮಾತ್ರ ಇದೆ. ಜೀವನ ವೃಕ್ಷಕ್ಕೆ ಮಧುರವಾದ ಫಲಗಳು ಹೇಗೆ ಬಿಡಬೇಕೆಂಬುದನ್ನು ಇಲ್ಲಿ ಕಲಿಸಲಾಗುತ್ತದೆ." ಎಂದು ಆಸ್ತಿಕರು ಅಂದರು.

"ಯಾವನಿಗೆ ಜೀವವನ್ನು ರಸಮಯವಾಗಿ ಮಾಡಲು ಬರುವದೋ ಅವನಿಗೆ, ವೃಕ್ಷಕ್ಕೆ ಒಳ್ಳೇ ಫಲಗಳು ಬರುವಂತೆ ಮಾಡಲು ಬರುವದಿಲ್ಲವೇ? ಜೀವನ ಕೃಷಿಯೇ ಬಹು ಕಷ್ಟ." ಎಂದು ಒಬ್ಬ ಋಷಿ ಅಂದನು.

"ನೂರುಗಾವುದ ವಿಸ್ತಾರವಾದ ಭೂಮಿಯನ್ನು ಸಾಗಮಾಡುವದು ಸುಲಭ. ಆದರೆ ಈ ಮೂರೂವರೆ ಮೊಳದ ಭೂಮಿಯನ್ನು ಸಾಗುಮಾಡುವದು ಕಠಿಣ. ಆದರೆ ಒಮ್ಮೆ ಇದು ಸಾಗಾಯಿತೆಂದರೆ, ಅಮೂಲ್ಯವಾದ ಸಂಪತ್ತನ್ನು ಕೊಡುವದು. ಆ ಸಂಪತ್ತು ಎಂದೂ ಸವೆಯುವದಿಲ್ಲ. ಕಳೆಯುವದಿಲ್ಲ." ಎಂದು ಬೇರೊಬ್ಬ ಋಷಿಯು ನುಡಿದನು.

"ಜೀವನದ ಬೆಳೆಯನ್ನು ನಾಶ ಮಾಡಲು ಇಲಿ, ಹೆಗ್ಗಣಗಳು ಕಾದುಕೊಂಡು ಕೂತಿರುತ್ತವೆ. ನಾವು ಮೇಲಿಂದ ಮೇಲೆ ಜಪ್ಪಿಸ

ಬೇಕಾಗುತ್ತದೆ. ಈ ಬೆಳೆಯನ್ನು ಉಧ್ವಸ್ಥಗೊಳಿಸಲು ವಿಕಾರರೂಪ ವಾದ ವಾಸನಾಮಯ ಪಶುಗಳು ಹಪಾಪಿಸಿರುತ್ತವೆ. ಈ ಬೆಳೆಯನ್ನು ಬೆಳೆಸುವದು ಬಹಳ ಕಷ್ಟವಿದೆ. ಆದರೆ ಈ ಬೆಳೆಯನ್ನು ಬೆಳೆಸದಿದ್ದರೆ, ಎಲ್ಲವೂ ವ್ಯರ್ಥ. ಹೃದಯದ ಕ್ಷೇತ್ರವು ಶುದ್ಧವಾಗಿ ಬೆಳೆಯದಿದ್ದರೆ, ಹೊರಗಿನ ಕ್ಷೇತ್ರದಲ್ಲಿ ನಾವು ಎಷ್ಟು ಬೆಳೆದರೂ ಉಪವಾಸ ವನವಾಸ ಗಳು ತಪ್ಪಲು ಶಕ್ಯವಿಲ್ಲ. ಜಗಳಗಳು ದೂರವಾಗಲಾರವು. ಆದುದರಿಂದ ರಾಜಾ, ಈ ಹೃದಯದ ಬೆಳೆಯನ್ನು ಇಲ್ಲಿ ಬೆಳೆಸಲಾಗುತ್ತದೆ. ಹೊರ ಗಿನ ಬೆಳೆಯೊಡನೆಯೇ, ಅಂತರಂಗದ ಕಡೆಗೂ ಲಕ್ಷವು ಪೂರೈಸಲ್ಪಡು ತ್ತಿದೆ. ನಾವು ಹೊಲಗಳಿಗೆ ಹೋಗುತ್ತೇವೆ. 'ಮಕ್ಕಳೇ ಹೊಲದಲ್ಲಿಯ ಧಾನ್ಯವು ಬೆಳೆಯಬೇಕಾದರೆ, ಅಲ್ಲಿರುವ ಕಳೆಯನ್ನು ತೆಗೆಯಬೇಕಾಗುತ್ತದೆ. ಆದರಂತೆಯೇ ನಮ್ಮ ಜೀವನವು ಸಮೃದ್ಧವಾಗಬೇಕಾದರೆ, ಅಂತರಂಗದ ಜೀವನದಲ್ಲಿಯ ದ್ವೇಷ, ದ್ರೋಹ ರೂಪವಾದ ಕೊಳೆಯನ್ನು ನಾವು ತೆಗೆದೊಗೆಯಲೇಬೇಕು' ರಾಜಾ! ಪ್ರತಿಯೊಂದು ಬಾಹ್ಯಕರ್ಮದೊಡ ನೆಯೇ ಮಾನಸಿಕ ಕರ್ಮವೂ ಆಗುವಂತೆ, ನಾವು ಇಲ್ಲಿ ಎಚ್ಚರ ತೆಗೆದು. ಕೊಳ್ಳುತ್ತೇವೆ. ಬೆಳಿಗ್ಗೆ ವಿದ್ಯಾರ್ಥಿಗಳು ಆಶ್ರಮವನ್ನು ಜಳಜಳ ಮಾಡು ತ್ತಾರೆ. ನೀರಿನಿಂದ ಥಳಿ ಹಾಕುತ್ತಾರೆ. ಆಗ 'ಪ್ರಿಯ ವಿದ್ಯಾರ್ಥಿಗಳೇ, ಇದರಂತೆಯೇ ಹೃದಯದಲ್ಲಿಯ ಹೊಲಸನ್ನು ತೆಗೆದೊಗೆಯಿರಿ. ಧೂಳು ಏಳಬಾರದೆಂದು ಥಳಿ ಹಾಕುವದಿಲ್ಲವೇ? ಆದರಂತೆಯೆ ಜೀವನದಲ್ಲಿಯು ದುಷ್ಟ ಸ್ಪರ್ಧೆಯ, ಕಾಮ, ಕ್ರೋಧಗಳ, ದ್ವೇಷ ಹಾಗೂ ಸ್ವಾರ್ಥದ ಧೂಳು ಎದ್ದು, ಮಾರ್ಗವು ಕಾಣದಂತಾದಾಗ ನಾವು ಅಲ್ಲಿಯೂ ಥಳಿ ಯನ್ನು ಹಾಕಬೇಡವೇ? ಅಲ್ಲಿ ಪವಿತ್ರ ಪ್ರೇಮರೂಪವಾದ, ಸ್ನೇಹದ, ಹಾಗೂ ಸಹಾನುಭೂತಿಯ ಸುಗಂಧವುಳ್ಳ ನೀರಿನ ಥಳಿಯನ್ನು ಹಾಕಿರಿ. ಪವಿತ್ರ ಪ್ರಾತಃಕಾಲದಲ್ಲಿಯಾದರೂ ಒಮ್ಮೆ ಹಾಕಿರಿ' ಪ್ರಾತಃ ಕಾಲದಲ್ಲಿ ಭಗವಾನ್ ಸೂರ್ಯನಾರಾಯಣನು ಜಗತ್ತಿಗೆಲ್ಲ ಬಂಗಾರ ವನ್ನು ಹಂಚಲು ಬರುತ್ತಾನೆ. ಅಂತಹ ಮಂಗಲಸಮಯದಲ್ಲಿ, ನಮ್ಮ ಜೀವನವೂ ಬಂಗಾರವಾಗುವಂತೆ ನಾವು ಪ್ರಯತ್ನಿಸಬೇಕು. ಪ್ರಭಾತ

ದಲ್ಲಿಯ ಸಂಸ್ಕಾರಗಳು ಇಡೀ ದಿವಸ ಉಪಯೋಗಬೀಳುತ್ತವೆ. ಪ್ರಭಾತ ದಲ್ಲಿ ನಾವು ಏನು ಬಿತ್ತುವೆವೋ ಅದನ್ನು ಸಾಯಂಕಾಲ ಕೊಯ್ಯುವೆವು. ಹೀಗಿದೆ ನಮ್ಮ ಆಶ್ರಮದ ರೀತಿ. ರಾಜಾ, ಇಲ್ಲಿ ಯಾವ ಮಂತ್ರತಂತ್ರ ಇಲ್ಲ, ಮೋಸವೂ ಇಲ್ಲ. ನಮಗೆ ಏನು ಮಾಡುವದಿದೆಯೋ ಅದನ್ನು ಮನಃಪೂರ್ವಕವಾಗಿ ಮಾಡಬೇಕು. ನಾವು ಯಾವುದನ್ನು ಮಾಡು ತ್ತೇವೆಯೋ ಅದನ್ನು ಅಂತಃಕರಣಪೂರ್ವಕವಾಗಿ ಮಾಡಬೇಕು. ನಾವು ಯಾವ ಗಿಡಕ್ಕೆ ಅಂತಃಕರಣಪೂರ್ವಕವಾಗಿ ನೀರು ಎರೆಯುವೆವೋ ಅದು ಸವಿಯಾದ ಫಲಗಳನ್ನು ಕೊಡಲಾರದೇ ? ಮಕ್ಕಳು ಗಿಡಗಳಿಗೆ ಸುಮ್ಮನೆ ಗೊಬ್ಬರವನ್ನೂ ನೀರನ್ನೂ ಹಾಕುವದಿಲ್ಲ. ಅದರೊಡನೆ ಅವರು ತಮ್ಮ ಹೃದಯವನ್ನೂ ಸುರುವಿರುತ್ತಾರೆ. ವೃಕ್ಷಗಳೂ ಈ ಮಾತನ್ನು ಅರಿತು, ಸವಿಯಾದ ಫಲಗಳನ್ನೀಯುತ್ತವೆ. ಒಮ್ಮೊಮ್ಮೆ ಮನುಷ್ಯನಿಗಿಂತಲೂ ಮನುಷ್ಯೇತರ ಈ ಸೃಷ್ಟಿಯು ಹೆಚ್ಚಾಗಿ ಕೃತಜ್ಞತೆಯನ್ನು ತೋರುತ್ತದೆ. ಭೂಮಿಯನ್ನು ನಾವು ಒಳ್ಳೇ ರೀತಿಯಿಂದ ಜೋಪಾನಮಾಡಿದರೆ ಅದು ನಮಗೆ ಕಾಳಿನಿಂದ ತುಂಬಿದ ಫಲಭರಿತವಾದ ತೆನೆಯನ್ನು ಕೊಡುತ್ತದೆ. ನಾನು ಯಾವಾಗಲೂ ಇದನ್ನೆಲ್ಲ ವಿಚಾರ ಮಾಡುತ್ತಿರುತ್ತೇನೆ" ಆಸ್ತಿಕನ ವಾಣಿಯು ಗಂಗಾ ಪ್ರವಾಹದಂತೆ ಹರಿಯಹತ್ತಿತು.

"ಸ್ನಾನವನ್ನು ಇಲ್ಲಿ ಮಾಡುವಿರಾ ಅಥವಾ ನದಿಗೆ ಹೋಗುವಿರಾ ?" ಎಂದು ಒಬ್ಬ ಶಿಷ್ಯನು ವಿನಯಪೂರ್ವಕವಾಗಿ ವಿಚಾರಿಸಿದನು.

"ನದಿಗೇ ಹೋಗೋಣ. ಈಸದೆ ಬಹಳ ದಿನಗಳಾದವು, ಇಂದು ಈಸೋಣ !" ಎಂದನು ಪರೀಕ್ಷಿತ.

"ಹಾಗಾದರೆ ನಾವು ಈಗ ಹೊರಡಬೇಕು." ಎಂದನು ಒಬ್ಬ ಋಷಿ.

ಎಲ್ಲರೂ ಸ್ನಾನಕ್ಕಾಗಿ ನದಿಗೆ ಹೋದರು. ಸಾರಥಿಯು ಕುದುರೆಗಳಿಗೆ ನೀರು ಕುಡಿಸಿ ತರುತ್ತಿದ್ದನು. ಪರೀಕ್ಷಿತನು ಕುದುರೆಗಳ ಬೆನ್ನು ಚಪ್ಪರಿಸಿ ದನು

"ನೀವು ಕುದುರೆಗಳನ್ನು ಪ್ರೀತಿಸುವಿರಾ?" ಎಂದನು ಆಸ್ತಿಕ.

"ಭಗವಾನ್ ಶ್ರೀಕೃಷ್ಣನಿಗೆ ಕುದುರೆಗಳ ಮೇಲೆ ಎಷ್ಟು ಪ್ರೀತಿ. ಅವನು ಕುದುರೆಗಳಿಗೆ ತನ್ನ ಪೀತಾಂಬರದಲ್ಲಿಯೇ ತಿನಿಸು ಕೊಡುತ್ತಿದ್ದನು. ಕುದುರೆಗಳ ಮೈಯನ್ನು ಸ್ವತಃ ತಿಕ್ಕುತ್ತಿದ್ದನು. ಅವುಗಳ ಮೈಮೇಲಿನ ಹೊಲಸನ್ನು ತೆಗೆಯುತ್ತಿದ್ದನು! ಈ ಮಾತುಗಳನ್ನು ಕೇಳಿ ದೊಡನೆಯೇ ನನ್ನ ಮನಸ್ಸಿಗೆ ಆನಂದ ವೆನಿಸುತ್ತದೆ" ಎಂದನು ಪರೀಕ್ಷಿತ.

"ಶ್ರೀಕೃಷ್ಣನ ಜೀವನವೆಂದರೆ ಅಗಾಧವಾದ ಸಮುದ್ರ! ಅದನ್ನು ಎಷ್ಟುತಿಳಿದರೂ ಕಡಿಮೆಯೇ" ಎಂದನು ಆಸ್ತಿಕ.

"ನಿಮ್ಮ ಆಶ್ರಮದಲ್ಲಿಯ ವಿದ್ಯಾರ್ಥಿಗಳು ಬರುವದಿಲ್ಲವೇ? ನಮ್ಮ ಸಂಗಡ ಈಸಾಡಲು ಅವರೂ ಬರಲಿ. ಈಗ ನಾನು ರಾಜನಲ್ಲ. ಸಾಮಾನ್ಯ ಮನುಷ್ಯ. ಹುಡುಗರೊಡನೆ ಇಂದು ಆಡುವಾ, ಕುಣಿಯುವಾ, ನಗುವಾ, ನರ್ತಿಸುವಾ; ನಾವೂ ಹುಡುಗರಾಗುವಾ" ಎಂದ ಪರೀಕ್ಷಿತನು.

"ಎಲ್ಲರನ್ನು ಕರೆಯಲೇನು?" ಎಂದೊಬ್ಬ ಹುಡುಗನು ವಿಚಾರಿಸಿದನು.

"ಊಟದ ವ್ಯವಸ್ಥೆ ಮಾಡುವವರನ್ನು ಬಿಟ್ಟು ಉಳಿದವರನ್ನೆಲ್ಲ ಕರೆ" ಎಂದು ಆಸ್ತಿಕರು ಹೇಳಿದರು.

ಹುಡುಗರೆಲ್ಲ ಕುಣಿಯುತ್ತ ಬಂದರು. ಲಂಗೋಟಿಯನ್ನು ಹಾಕಿ ಕೊಂಡು ಸಿದ್ಧರಾದರು. ಅವರಲ್ಲಿ ಕೆಲವರು ಕೇಕೆ ಹಾಕಿದರು. ಒಬ್ಬನು ಕೊಂಬನ್ನೂದಿದನು. ಮೋಜು ನಡೆಯಿತು. ನದಿಯಲ್ಲಿ ನೀರು ಸಾಕಷ್ಟಿತ್ತು. ನದಿಯಲ್ಲಿ ಈಸಾಡುತ್ತಿದ್ದ ಆರ್ಯ ಹಾಗೂ ನಾಗರ ಮಕ್ಕಳ ಮುಖಗಳು, ನದಿಯಲ್ಲಿ ಅರಳಿದ ನೀಲ ಹಾಗೂ ಬಿಳಿಯ ಕಮಲಗಳಂತೆ ಶೋಭಿಸುತ್ತಿದ್ದವು.

"ನನ್ನನ್ನು ಯಾರಾದರು ಹಿಡಿಯುವಿರಾ" ರಾಜನೆಂದ.

"ನಾನು ಹಿಡಿಯುತ್ತೇನೆ" ಎಂದನೊಬ್ಬ ಹುಡುಗ.

ರಾಜನು ಮುಳುಗಿದನು. ಆ ಹುಡುಗನೂ ಮುಳುಗಿದನು. ನಡು ವೆಯೇ ಮೇಲೆ ಬರುವರು. ಮತ್ತೆ ಮುಳುಗವರು. ರಾಜನು ಸಿಗಲಿಲ್ಲ.

"ಸೋತೆಯಲ್ಲವೇ!" ಎಂದು ರಾಜನು ನಗುತ್ತ ಕೇಳಿದ.

"ನಾನು ಚಿಕ್ಕವ" ಎಂದನು ಹುಡುಗ.

" ಹುಡುಗರೇ ಮುದುಕರಿಗಿಂತ ಮುಂದೆ ಹೋಗಬೇಕು. " ಎಂದು ಪರೀಕ್ಷಿತನೆಂದನು.

" ಇನ್ನು ಸಾಕು. ಅತಿಯಾದರೆ ಹಿತವಾಗದು! " ಎಂದನು ಪರೀಕ್ಷಿತ.

" ರಾಜನು ಬೇನೆ ಬಿದ್ದರೆ, ಪ್ರಜೆಗಳ ಗತಿಯೇನು ? ರಾಜನು ಬಹಳ ದಕ್ಷತೆಯಿಂದ ನಡೆಯಬೇಕು. " ಎಂದನೊಬ್ಬ ಹುಡುಗ.

" ರಾಜನನ್ನು ಯಾರು ಕೇಳುತ್ತಾರೆ? ರಾಜನು ಪ್ರಜೆಗಳ ಅಧೀನನು." ಎಂದನು ಪರೀಕ್ಷಿತ.

" ಹಾಗೇನೂ ಇಲ್ಲ. ಯುವರಾಜನಾದ ಜನಮೇಜಯನು, ನಾಗರಿಗೆ ಆಶ್ರಮದಲ್ಲಿ ಆಶ್ರಯವನ್ನೀಯಕೂಡದು ಎಂದು ಆಜ್ಞೆಯನ್ನು ವಿಧಿಸಿದೊಡನೆಯೇ, ಅನೇಕ ಆಶ್ರಮಗಳಲ್ಲಿ ಅವರಿಗೆ ಆಶ್ರಯವಿಲ್ಲದಾಯಿತು. ಅನೇಕ ಜನ ಆಚಾರ್ಯರು ಇಂತಹ ಪಾಪಕೃತ್ಯವನ್ನೆಸಗಲು ಮನಸ್ಸಿಲ್ಲದೆ, ಆಶ್ರಮಗಳನ್ನೇ ನಿಲ್ಲಿಸಿಬಿಟ್ಟರು. ಇಂತಹ ಎಷ್ಟೋ ಆಚಾರ್ಯರು ಇಲ್ಲಿಗೆ ಬಂದಿದ್ದಾರೆ. ಅವರಿಗೆ ಬಹಳ ಕೆಡುಕೆನಿಸಿದೆ. " ಎಂದು ಒಬ್ಬ ನಾಗಕುಮಾರನು ಉತ್ತರಿಸಿದನು.

" ಆದರೆ ಈ ಆಶ್ರಮದಲ್ಲಿ ಉಭಯ ಜಾತಿಯ ಶಿಷ್ಯರೂ ಇದ್ದಾರೆ. ಈ ಆಶ್ರಮದಲ್ಲಿ ಬಂದರೆ, ರಾಜನೂ ಕೂಡಾ ಧನ್ಯನಾಗುತ್ತಾನೆ. " ಎಂದು ವಸ್ತ್ರಗಳನ್ನು ಧರಿಸುತ್ತಲೇ ಪರೀಕ್ಷಿತನು ಉತ್ತರವಿತ್ತನು.

ಎಲ್ಲರ ಸ್ನಾನವೂ ಮುಗಿಯಿತು. ಊಟವೂ ಆಯಿತು. ಊಟವಾದ ನಂತರ ಎಲ್ಲರೂ ವಿಶ್ರಾಂತಿಯನ್ನು ಹೊಂದಿದರು. ಶಿಷ್ಯರು ಮಾತ್ರ ಕೆಲಸವನ್ನು ಮಾಡುತ್ತಲಿದ್ದರು. ಆಶ್ರಮದ ಪಟಾಂಗಣದಲ್ಲಿಯೇ ಅವರು ಆಸನಗಳನ್ನು ಮಂಡಿಸಿದ್ದರು. ಮಧ್ಯಾನ್ಹ ಮೂರು ಗಂಟೆಯ ನಂತರ ವಿಚಾರ ವಿನಿಮಯ ನಡೆಯುವದಿತ್ತು. ಆ ಸ್ಥಳದಲ್ಲೆಲ್ಲ ನೆರಳು ಇತ್ತು. ನಡನಡುವೆ ಹೂಗಳಿಂದ ಆ ಪಟಾಂಗಣವನ್ನು ಶೃಂಗರಿಸಿದ್ದರು.

ಪರೀಕ್ಷಿತ ರಾಜನೂ ಋಷಿವರ್ಯರೂ ಎದ್ದು ಮುಖವನ್ನು ತೊಳೆದುಕೊಂಡು, ಆಸ್ತಿಕನೊಡನೆ ಹಾಸ್ಯಮಾಡುತ್ತ ಸಭಾಮಂಟಪಕ್ಕೆ ಬಂದರು. ಅಲ್ಲಿ ಶಿಷ್ಯರೆಲ್ಲರೂ ನಿಂತಿದ್ದರು. ಆಸ್ತಿಕರು ರಾಜಾ ಪರೀಕ್ಷಿತನನ್ನು ಒಂದು

ಉಚ್ಚಾಸನದಲ್ಲಿ ಕೂಡ್ರಿಸಿದರು. ಪರೀಕ್ಷಿತನು ಆಸ್ತಿಕರನ್ನು ತನ್ನ ಹತ್ತಿರದ ಆಸನದಲ್ಲಿ ಕೂಡಿಸಿಕೊಂಡನು. ಉಳಿದೆಲ್ಲ ಋಷಿಗಳು ಆಸನಗಳಲ್ಲಿ ಕುಳಿತರು. ಆಸ್ತಿಕರ ಆಶ್ರಮದಲ್ಲಿ, ಬಂದು ವಾಸಮಾಡಿದ ಅನೇಕ ಋಷಿಗಳೂ ಅಲ್ಲಿಗೆ ಬಂದರು. ಸಭೆಯಲ್ಲಿ ಪ್ರಸನ್ನತೆಯು ವ್ಯಾಪಿಸಿತ್ತು.

ಭಗವಾನ್ ಆಸ್ತಿಕರು ಮಾತನಾಡಲು ಪ್ರಾರಂಭಿಸಿದರು.

"ಇಂದು ನಮಗೆ ಭಾಗ್ಯದ ದಿವಸ. ಅನೇಕ ಜನ ಮಹನೀಯರು ಆಶ್ರಮಕ್ಕೆ ದರ್ಶನವನ್ನಿತ್ತಿದ್ದಾರೆ. ಆಶ್ರಮವನ್ನು ಪುನೀತಗೊಳಿಸಲು ಅವರು ಬಂದಿದ್ದಾರೆ. ಜ್ಞಾನಧನರಾದ ಹಾಗು ತಪೋಧನರಾದ ಅನೇಕ ಮಹ ಋಷಿಗಳೊಡನೆ ರಾಜಾ ಪರೀಕ್ಷಿತನು ಆಗಮಿಸಿದ್ದಾನೆ. ಇಂಥ ಮಹನೀಯ ರಿಗೆ ಪ್ರೇಮದ ಹೊರತು, ನಮ್ಮಲ್ಲಿ ಅರ್ಪಿಸಲು ಏನು ಇದೆ? ಆಶ್ರಮಕ್ಕೆ ರಾಜರು ಬರುವದೆಂದರೆ ಸರ್ವ ಪ್ರಜಗಳು ಬಂದಂತೆ. ರಾಜನೆಂದರೆ ಪ್ರಜೆ ಗಳ ಪ್ರತಿನಿಧಿ. ರಾಜನೆಂದರೆ ಸರ್ವ ಪ್ರಜೆಗಳ ಕಲ್ಯಾಣ. ಸರ್ವ ಪ್ರಜೆಗಳ ಸಂರಕ್ಷಣೆ. ಭೇದಾತೀತ ನ್ಯಾಯ. ರಾಜನೆಂದರೆ ಒಂದು ಬಗೆಯ ಮಹಾನ್ ಸನ್ಯಾಸಿ. ಅವನು ವೈಭವ ಸಂಪನ್ನನಿದ್ದರೂ ಅವನು ಅಕಾಂಚನನು. ಅವ ನಿಗೆ ತನ್ನದೆನ್ನುವದೇನೂಯಿಲ್ಲ. ವೃಕ್ಷದ ಫಲಪುಷ್ಪಗಳು ಎರಡನೆಯವರಿ ಗಾಗಿ, ವೃಕ್ಷದ ವಿಸ್ತಾರವು ಎರಡನೆಯವರಿಗಾಗಿ, ಹಾಗೆಯೇ ರಾಜ. ಆದುದ ರಿಂದಲೇ ರಾಜನು ವಿಷ್ಣುವಿನ ಅಂಶವೆಂದು ನಾವು ಬಗೆಯುತ್ತೇವೆ. ವಿಷ್ಣು ವೆಂದರೆ ಎಲ್ಲ ಕಡೆಗೆ ಪ್ರವೇಶಿಸುವವ. ವಿಷ್ಣುವೆಂದರೆ ತೇಜಸ್ವಿಯಾದ ಸೂರ್ಯ. ಸೂರ್ಯನ ಕಿರಣಗಳು ಎಲ್ಲ ಕಡೆಗೂ ಪ್ರವೇಶಿಸುತ್ತವೆ. ಕತ್ತಲೆಯನ್ನು ಕಳೆಯುತ್ತವೆ. ಉಷ್ಣತೆಯನ್ನು ಕೊಡುತ್ತವೆ. ಜೀವನವನ್ನು ಬೆಳೆಸುತ್ತವೆ. ಹಾಗೆಯೇ ರಾಜನು, ಸರ್ವರ ಜೀವನದಲ್ಲಿ ಹೊಕ್ಕು, ಸರ್ವರ ಸುಖದುಃಖ ಗಳನ್ನು ವಿಚಾರಿಸಿ, ಸರ್ವರಿಗೂ ಆಧಾರನಾಗಬೇಕು. ದ್ವೇಷ, ಸ್ಪರ್ಧೆ, ಮತ್ಸರ, ಮೊದಲಾದ ಸಂಕುಚಿತ ವೃತ್ತಿಗಳನ್ನು ಹತ್ತಿಕ್ಕುತ್ತ ಸರ್ವರ ಬೆಳ ವಣಿಗೆಯೂ ಚನ್ನಾಗಿ ಆಗುವಂತೆ ಎಚ್ಚರ ತೆಗೆದುಕೊಳ್ಳಬೇಕು. ಮೇಲಿನ ವರ್ಣನೆಯು ಪರಿಕ್ಷಿತ ಮಹಾರಾಜನಿಗೆ ಪೂರ್ಣವಾಗಿ ಅನ್ವಯಿಸುವದು. ಅವನ ಬರುವಿಕೆಯೇ ಇದಕ್ಕೆ ಸಾಕ್ಷಿ. ರಾಜನು ನ್ಯಾಯ, ಸಹಾನುಭೂತಿ,

ಸಮತೆಯ ದೀವಟಿಗೆಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಎಲ್ಲ ಕಡೆಗೂ ಸಂಚರಿಸಬೇಕು. ಅಂದರೆ ಅನ್ಯಾಯ ಹಾಗು ಅಸತ್ಯಗಳು ಬೆಳೆಯುವದಿಲ್ಲ. ಇರಲಿ. ನಿಮ್ಮೆಲ್ಲರ ಪರಿಯಿಂದ ರಾಜನನ್ನು ನಾನು ಸ್ವಾಗತಿಸುವೆ. ಪ್ರಜೆಗಳ ಕಲ್ಯಾಣವು ಈ ರಾಜನಿಂದ ಆಗಲೆಂದೂ ದೇವರು ಇವರಿಗೆ ಆಯುರಾರೋಗ್ಯಗಳನ್ನು ಕೊಡಲೆಂದೂ ಹಾರೈಸುವೆ" ಎಂದು ಆಸ್ತಿಕರು ರಾಜನಿಗೆ ಪೂಮಾಲೆಯನ್ನು ಹಾಕಿದರು. ಅದರಂತೆಯೇ ಸರ್ವ ಮಹರ್ಷಿಗಳನ್ನು ಪೂಮಾಲೆಗಳಿಂದ ಪೂಜಿಸಿದರು. ಆಸ್ತಿಕನು ಆಸನದ ಮೇಲೆ ಕುಳಿತನು.

ನಂತರ ರಾಜಾ ಪರೀಕ್ಷಿತನು ಎದ್ದು 'ಭಗವಾನ್ ಆಸ್ತಿಕರು ನಮಗಿತ್ತ ಗೌರವಕ್ಕಾಗಿ ನಾವು ಕೃತಾರ್ಥರಾಗಿದ್ದೇವೆ. ಅನೇಕ ದಿನಗಳಿಂದ ಈ ಆಶ್ರಮಕ್ಕೆ ಬರಬೇಕೆಂದು ನಾನು ಹೇಳುತ್ತಿದ್ದೆ. ನಾನು ಅನೇಕ ಆಶ್ರಮಗಳನ್ನು ನೋಡಿರುವೆ. ಆದರೆ ಈ ಆಶ್ರಮದ ರೀತಿಯೇ ಬೇರೆಯಾಗಿದೆ. ನಾವಿಲ್ಲಿ ಕಾಲಿಟ್ಟೊಡನೆ ಶ್ರಮವೆಲ್ಲ ಪರಿಹಾರ ವಾದಂತಾಗುವದು. ಯಾವ ಆಶ್ರಮದಲ್ಲಿ ಕ್ಷಣಹೊತ್ತು ಸಂಚರಿಸಿದೊಡನೆ ಸಂಸಾರಿಗಳಿಗೆಲ್ಲ ಸ್ಫೂರ್ತಿದೊರೆಯುವದೋ, ಉದಾತ್ತಧ್ಯೇಯದ ಕಲ್ಪನೆಬರುವದೋ, ಜೀವನಕ್ಕೆ ಹೊಸ ಬೆಳಕು ಕಂಡು, ದೃಷ್ಟಿಯು ವಿಶಾಲವಾಗುವದೋ, ತಾವು ಸ್ವಲ್ಪ ಮೇಲಕ್ಕೇರಿದಂತೆ ಎನಿಸುವದೋ ಅದೇ ನಿಜವಾದ ಆಶ್ರಮವು. ಇಂತಹ ಆಶ್ರಮಗಳಲ್ಲಿ ಜೀವನದ ಸರ್ವಾಂಗೀಣಉನ್ನತಿಯ ವಿಚಾರ ವಿಮರ್ಶೆಗಳು ಅತ್ಯಂತ ಆಸ್ಥಾ ಪೂರ್ವಕವಾಗಿ ಚರ್ಚಿಸಲ್ಪಡುತ್ತವೆ. ಆಶ್ರಮವೆಂದರೆ, ವಿಚಾರ ಮಂಥನದ ಯಜ್ಞಶಾಲೆ. ಜೀವನದ ಸರ್ವ ವಿಷಯಗಳ ಕೂಲಂಕುಷ ವಿಚಾರವಾಗಿ ಇಲ್ಲಿ ಮಾರ್ಗದರ್ಶನ ಮಾಡಲ್ಪಡಬೇಕು. ಶಿಕ್ಷಣವು ಹೇಗೆ ಇರಬೇಕು ? ಆಶ್ರಮಧರ್ಮಗಳೇನು, ರಾಜನೀತಿಯು ಹೇಗೆ ಇರಬೇಕು, ಕಲೆಯ ಧ್ಯೇಯವೇನು ? ವಿವಾಹ ಸಂಬಂಧದ ನಿಯಮಗಳಾವು ? ಭಿನ್ನ ಭಿನ್ನ ಮಾನವ ವಂಶಗಳ ಪರಸ್ಪರರ ಸಂಬಧವು ಹೇಗೆ ಇರಬೇಕು? ಧರ್ಮದ ಸ್ವರೂಪವೇನು ? ಸಂಸ್ಕೃತಿಯ ಸಂವರ್ಧನ ಹೇಗೆ ಆಗಬೇಕು ? ಇಂತಹ ನೂರಾರು ಪ್ರಶ್ನೆಗಳ ಚರ್ಚೆಯು ಆಶ್ರಮದಲ್ಲಿ ನಡೆಯಬೇಕು. ಈ ವಿಚಾರ ಮಂಥನದ ಬೆಳಕು ಹೊರ ಜಗತ್ತಿಗೆ ಹರಡಬೇಕು. ಜೀವನಕ್ಕೆ ಸ್ಫೂರ್ತಿ

ಬೆಳಕು, ಹೊಸ ದೃಷ್ಟಿಗಳನ್ನೀಯುವ ಆಶ್ರಮಗಳು ಎಲ್ಲ ಕಡೆಗೂ ದೊರೆಯು ವದು ಶಕ್ಯವಿಲ್ಲ. ಎಲ್ಲಿ ಮಹಾನ್ ವಿಭೂತಿಗಳು ವಾಸಿಸುವಿರೋ ಅಂಥಲ್ಲಿಯೇ ಇಂಥ ಆಶ್ರಮಗಳು ಶಕ್ಯ. ನಾನು ಹಿಂದೊಮ್ಮೆ ಇಲ್ಲಿಗೆ ಬಂದಿದ್ದೆ. ಆಗ ನನಗೆ ದೊರೆತ ಸ್ಫೂರ್ತಿಯು ನನ್ನ ಜೀವನದಲ್ಲಿ ಇನ್ನೂ ಕಾರ್ಯ ಮಾಡುತ್ತಲಿದೆ. ಭಗವಾನ್ ಆಸ್ತಿಕರ ಸ್ಮರಣದಿಂದ ನನಗೆ ಪಾವನನಾದಂತೆ ಎನಿಸುತ್ತದೆ. ಹೀಗೇಕೆ ಅನಿಸಬೇಕು? ಅವರ ಬಗೆಗೆ ನನ್ನಲ್ಲಿ ಪೂಜ್ಯ ಭಾವವು ಏಕೆ ಹುಟ್ಟ ಬೇಕು? ನೀವೆಲ್ಲ ಈ ದೃಷ್ಟಿಯಿಂದ ಏಕೆ ನೋಡುವಿರಿ? ಇಂಥವರ ಚರಣ ಗಳಲ್ಲಿ ಭಕ್ತಿಭಾವವು ಹುಟ್ಟುವದೇಕೆ? ಇದರ ಕಾರಣವೇನು? ಬಲ್ಲಿರಾ! ನಮ್ಮ ಜೀವನದಲ್ಲಿ ನಮಗೆ ಪೂರ್ಣತೆಎನುವದಿಲ್ಲ ನಮ್ಮ ಕೃತಿಗಳಲ್ಲಿ ಜೀವನದ ಪೂರ್ಣತೆಯು ಪ್ರಕಟವಾಗುವದಿಲ್ಲ. ಇದರಿಂದ ನಮಗೆ ಅಸಮಾಧಾನ ವೆನಿಸುತ್ತದೆ. ನಮ್ಮ ಸುಂದರ ಸ್ವರೂಪವನ್ನು ಕಾಣುವ ಇಚ್ಛೆಯು ನಮಗೆ ಇರುವದು ಸ್ವಾಭಾವಿಕ. ದೊಡ್ಡ ವಿಭೂತಿಗಳಲ್ಲಿ ನಾವು ಈ ವಿಕಾಸವನ್ನು ನೋಡುತ್ತೇವೆ. ಅವರ ಉದಾತ್ತ ದೈವೀಸ್ವರೂಪವನ್ನು ಕಂಡು, ನಮಗೂ ಹೀಗಾಗ ಬೇಕೆನಿಸುತ್ತದೆ. ಪರಿಪೂರ್ಣತೆಯೇ ನಮ್ಮ ನಿಜವಾದ ಸ್ವರೂಪ ಎಂದು ನಮಗೆ ಎನಿಸುತ್ತದೆ. ನಾವು ದೇವರನ್ನು ಮನ್ನಿಸುತ್ತೇವೆ. ನನ್ನ ದೇವರ ಕಲ್ಪನೆಯೆಂದರೆ, ನನ್ನ ಪರಿಪೂರ್ಣತೆಯು. ನನ್ನ ದೇವರ ಚಿಂತನೆ ಯೆಂದರೆ, ನನ್ನ ಪರಿಪೂರ್ಣತೆಯ ಚಿಂತನೆ. ಈ ಪರಿಪೂರ್ಣತೆಯು ಎಲ್ಲೆಲ್ಲಿ ಕಾಣುವದೋ ಅಲ್ಲಲ್ಲಿ ನಾನು ತಲೆಬಾಗುವೆ. ಆಸ್ತಿಕರಲ್ಲಿ ಮಾನವ ಪರಿ ಪೂರ್ಣತೆಯು ಪ್ರಕಟವಾದದ್ದು ಕಾಣುತ್ತದೆ. ಆದುದರಿಂದಲೇ ನಾವೆಲ್ಲ ತಲೆಬಾಗುವೆವು. ಪರಿಪೂರ್ಣತೆಯು ಅನೇಕ ಬಗೆಯಾಗಿದೆ. ಪರಿ ಪೂರ್ಣತೆಯೆಂದರೆ, ಸರ್ವಾಂಗೀಣ ಸೌಂದರ್ಯ. ಶರೀರವು ಸಪ್ರಮಾಣ ವಾಗಿ ಬೆಳೆದರೆ, ಶಾರೀರಕ ಸೌಂದರ್ಯವು ಉತ್ಪನ್ನವಾಗುವದು. ಮನ ಹಾಗು ಬುದ್ಧಿಗಳು ಪರಿಪೂರ್ಣ ವಿಕಾಸವಾದರೆ, ಜ್ಞಾನವು ಉದಯವಾಗು ವದು. ಮಾನವ್ಯದ ಪರಿಪೂರ್ಣತೆಯಾದರೆ, ದೇವತ್ವವು ಅವತರಿಸುವದು. ಇವು ಒಂದಕ್ಕಿಂತ ಒಂದು ಮಿಗಿಲು. ಅಥವಾ ಶರೀರದ ಸೌಂದರ್ಯ ವೆಂದರೆ, ಮನೆಯ ಹೊರಗಿನ ಶೋಭೆ. ಮನಸ್ಸಿನ ಸೌಂದರ್ಯವೆಂದರೆ

ಮನೆಯೊಳಗಿನ ಚಂದ, ಮಾನವ್ಯದ ಸೌಂದರ್ಯವೆಂದರೆ, ಅಂತರಂಗದ ದೇವರ ಮನೆಯ ಶೋಭೆ. ಅಂತರಂಗದ ದಿವ್ಯ ಜ್ಯೋತಿಯು ಬೆಳಗದಿದ್ದರೆ, ಹೊರಗಿನ ಬೆಳಕೇನು ಪ್ರಯೋಜನ ? ಆದುದರಿಂದ ಯಾವನ ಅಂತಃಕರಣ ದಲ್ಲಿ ಅಂತರಾತ್ಮನ ಜ್ಯೋತಿಯು ಬೆಳಗುವದೋ, ಅವನೇ ನಿಜವಾದ ಆನಂದಿ.

ಭಗವಾನ್ ಆಸ್ತಿಕರಲ್ಲಿ ಮಾನವ್ಯತೆಯ ಪರಿಪೂರ್ಣತೆಯು ಕಾಣು ವದರಿಂದಲೇ ಅವರ ಜೀವನವು ಪ್ರಕಾಶಮಾನವಾಗಿದೆ. ಅವರ ಜೀವನ ವೆಂದರೆ ಮಂಗಲಜ್ಯೋತಿಯು. ಆದುದರಿಂದಲೇ ನಾನು ಅವರ ಕಡೆಗೆ ಬರುವೆ. ನನ್ನ ಜೀವನದಲ್ಲಿ ಕತ್ತಲೆ ಕವಿದಾಗೆಲ್ಲ ಇಲ್ಲಿ ಬರಬೇಕೆನಿಸುತ್ತದೆ. ಇಂದು ಕೂಡ ನನಗೆ ಕತ್ತಲೆ ಕವಿದಿದೆ. ಕಾರ್ಯಾಕಾರ್ಯವು ತಿಳಿಯ ದಂತಾಗಿದೆ. ನಾನು ಕರ್ತವ್ಯಮೂಢನಾಗಿದ್ದೇನೆ. ಭಗವಾನ್ ಆಸ್ತಿಕರು ಮಾರ್ಗದರ್ಶನ ಮಾಡಬೇಕೆಂದು ಪ್ರಾರ್ಥಿಸುವೆ.

"ರಾಜನೇ, ನಿನಗೆ ಬಂದ ಸಂಶಯಗಳನ್ನೆಲ್ಲ ವಿವರಿಸು. ನನಗೆ ತೋಚಿದ್ದನ್ನೆಲ್ಲ ಸೂಚಿಸುವೆ. ನಾವು ಒಬ್ಬರಿಗೊಬ್ಬರು ನೆರವನ್ನಿತ್ತು, ಮುಂದೆ ಸಾಗೋಣ" ಎಂದು ಆಸ್ತಿಕರು ನುಡಿದರು.

"ಭಗವಾನ್, ಇಂದು ಎರಡು ಸಂಸ್ಕೃತಿಗಳ ತಿಕ್ಕಾಟವು ಪ್ರಾರಂಭ ವಾಗಿದೆ. ಆರ್ಯರಾದ ನಾವು ಈ ಪ್ರದೇಶಕ್ಕೆ ಬಂದು, ಇದಕ್ಕೆ ಆರ್ಯಾ ವರ್ತವೆಂದು ಕರೆಯಹತ್ತಿದೆವು. ಆದರೆ ಇಲ್ಲಿ ನಾನಾಬಗೆಯ ಮೂಲ ನಿವಾಸಿಗಳು ಇದ್ದೇ ಇದ್ದರು. ಅವರೊಡನೆ ಯುದ್ಧವಾಯಿತು. ಅವರು ಸೋತರು. ಆದರೆ ನಾವು ನಮ್ಮ ವಸಾಹತುಗಳನ್ನು ಬೆಳೆಸುತ್ತ ನಡೆದವು. ಅವರ ನಮ್ಮ ಸಂಪರ್ಕವು ಬೆಳೆಯಹತ್ತಿತು. ಇತ್ತ ಅವರೊಡನೆ ಯುದ್ಧ ನಡೆದಿದ್ದರೂ ಜನಸಾಮಾನ್ಯರು ಪ್ರೇಮ ಸಂಬಂಧವನ್ನು ಬೆಳೆಯಿಸಹತ್ತಿ ದರು. ಅನೇಕ ನಾಗಕನ್ಯೆಯರೊಡನೆ ನಾವು ಲಗ್ನವಾದೆವು. ಆ ನಾಗ ಕನ್ಯೆಯರು ತಮ್ಮ ತವರು ಮನೆಯ ದೇವತೆಗಳನ್ನೂ ಸಾಂಪ್ರದಾಯ ಗಳನ್ನೂ ತಮ್ಮೊಡನೆ ತಂದರು. ಇತರ ಆರ್ಯೇತರ ಸ್ತ್ರೀಯರೂ ತಮ್ಮ ತಮ್ಮ ದೇವತೆಗಳನ್ನು ತಂದರು. ಎಲ್ಲವೂ ಬೆರೆತು ಕಿಚಡಿಯಾಗ ಹತ್ತಿದೆ. ಬೇರೆ ಬೇರೆ ರೀತಿ, ನಡಾವಳಿಗಳು ಬಂದು ಸೇರಹತ್ತಿವೆ. ಹೊಸ

ಸಾಂಪ್ರದಾಯಗಳು ರೂಢವಾಗಹತ್ತಿವೆ. ಇಂತಹ ಸಮಯದಲ್ಲಿ ಏನು ಮಾಡಬೇಕು? ಈ ಸಮಯದಲ್ಲಿ ನಾವು ಜಪ್ಪಿಸಬೇಡವೇ? ಸಂಸ್ಕೃತಿಯ ಸಂರಕ್ಷಣೆಯು ಸ್ತ್ರೀಯರ ಕೈಯಲ್ಲಿದೆ. ಆರ್ಯ ಸಂಸ್ಕೃತಿಯು ಪರಿಶುದ್ಧ ವಾಗಿ ಉಳಿಯಬೇಕಾದರೆ, ನಾಗರಿಂದ ನಾವು ದೂರಿರಬೇಡವೇ! ಈ ವಿವಾಹಗಳು ನಿಷಿದ್ಧವೆಂದು ನಾವು ತಿಳಿಯಬೇಡವೇ? ಆರ್ಯ ಹಾಗೂ ಆರ್ಯೇತರ ಲಗ್ನಗಳು ಆಗದಂತೆ, ನಿರ್ಬಂಧಿಸುವದು ಆಗತ್ಯವಿಲ್ಲವೇ? ನಾಗಕನ್ಯೆಯರೂ ಸುಂದರರಿರುತ್ತಾರೆ. ಆರ್ಯತರುಣರು ಅವರಿಗೆ ಮರು ಳಾಗುತ್ತಾರೆ. ಅಂದರೆ ನಾಗರಿಗೆ ಇಲ್ಲಿಂದ ದೂರ ಹೋಗಿರಿ ಎಂದು ಹೇಳು ವದು ಯೋಗ್ಯವಲ್ಲವೇ! ಈಗಂತೂ ಆರ್ಯಕನ್ಯೆಯರೂ ನಾಗರನ್ನು ಮದುವೆಯಾಗತೊಡಗಿದ್ದಾರೆ. ಆರ್ಯರು ನೀಚ ನಾಗರೊಡನೆ ಲಗ್ನವಾಗ ಬೇಕೆ? ಇದು ಅಧಃಪತನವಲ್ಲವೇ? ನಮ್ಮ ಮಕ್ಕಳು ಮರಿಗಳ ಅಧಃಪತನ ವನ್ನು ಕಣ್ಣಿನಿಂದ ನೋಡಬೇಕೇ? ಹೀಗೆ ಅನೇಕ ಪ್ರಶ್ನೆಗಳು ತಲೆತಿನ್ನಹತ್ತಿವೆ. ಪ್ರಜೆಗಳಲ್ಲಿಯೂ ಕೂಡ ಇದೇ ಚರ್ಚೆ. ಈ ಸಮಯದಲ್ಲಿ ರಾಜನ ಕರ್ತವ್ಯ ವೇನು? ನನ್ನ ಕರ್ತವ್ಯವೇನು? ಎಂಬುದನ್ನು ನನಗೆ ತಿಳಿಸಿ, ಮಾರ್ಗ ದರ್ಶನ ಮಾಡಿರಿ.

ಸಭೆಯೆಲ್ಲ ತಟಸ್ಥವಾಗಿತ್ತು. ರಾಜನು ಮಹತ್ವದ ಪ್ರಶ್ನೆಗೆ ಕೈ ಹಾಕಿದ್ದನು. ಉತ್ತರವನ್ನು ಕೇಳಲು ಎಲ್ಲರೂ ಆತುರರಾಗಿದ್ದರು. ಗಿಡದ ಮೇಲಿನ ಪಕ್ಷಿಗಳು ಕೂಡ ಶಾಂತವಿದ್ದವು. ಆಶ್ರಮದಲ್ಲಿಯ ಚಿಗರೆಯು ಸಹ ಉಪದೇಶವನ್ನು ಕೇಳಲು ಕಿವಿಗಳನ್ನು ಆರಳಿಸಿ ನಿಂತಿತ್ತು. ಕುದು ರೆಯು ಹೂಂಕರಿಸಿ, ತಾನೂ ಉತ್ಸುಕವಾಗಿದ್ದೇನೆ ಎಂಬುದನ್ನು ತೋರಿಸಿತು.

ಆಸ್ತಿಕರ ತಲೆಯಮೇಲೆ ಗಿಡಗಳಿಂದ ಹೂಗಳು ಉದುರಿದವು. ವೃಕ್ಷ ಗಳು ಗುರುದೇವನ ಪೂಜೆಗೈದವು. ಆಸ್ತಿಕರು ಕ್ಷಣಹೊತ್ತು ಗಂಭೀರರಾಗಿ ' ರಾಜಾ! ಶ್ರೇಷ್ಠರಾರು? ಕನಿಷ್ಠರಾರು? ನಾವು ಈಗ ನಾಗರ ಪ್ರದೇಶಕ್ಕೆ ಬಂದಿದ್ದೇವೆ. ಅವರಿಗಿಂತಲೂ ನಮ್ಮ ಸಂಸ್ಕೃತಿಯು ಉಚ್ಚವೆಂದು ನಾವು ಅನ್ನಹತ್ತಿದೆವು. ಯಾರ ಸಂಸ್ಕೃತಿಯು ಶ್ರೇಷ್ಠವಿದೆಯೋ ಅವರೇ ಬದುಕಲು

ಯೋಗ್ಯರೆಂದು ಹೇಳಲು ಹತ್ತಿದೆವು. ಆದರೆ ಯಾವ ಸಂಸ್ಕೃತಿಯು ಶ್ರೇಷ್ಠ ವಿದೆಯೋ ಅದು ಎರಡನೆಯ ಸಂಸ್ಕೃತಿಗೆ ಬೆದರುವದಿಲ್ಲ. ಎರಡನೆಯ ಸಂಸ್ಕೃತಿ ಯನ್ನು ಹತ್ತರ ಕರೆದು, ಅದನ್ನು ಪವಿತ್ರಗೊಳಿಸುತ್ತದೆ. ಗಂಗೆಯು ಶ್ರೇಷ್ಠ ವೇಕೆ? ಅದು ಅನೇಕ ಪ್ರವಾಹಗಳನ್ನು ತನ್ನಲ್ಲಿ ಅರಗಿಸಿಕೊಂಡರೂ ತಾನು ಪವಿತ್ರವಾಗಿಯೇ ಉಳಿಯುತ್ತದೆಂದಲ್ಲವೇ? ಇತರ ಪ್ರವಾಹಗಳನ್ನು ಅದು ತುಚ್ಛವೆಂದು ಭಾವಿಸುದಿಲ್ಲ. ಸರ್ವನದಿಗಳಲ್ಲಿಯೂ ಹೊಲಸು ಇದ್ದೇ ಇರು ತ್ತದೆ. ಕೊನೆಗೆ ಅದೆಲ್ಲವೂ ಕೆಳಗೆ ಕೂಡ್ರುತ್ತದೆ. ಮತ್ತು ಒಂದು ದೊಡ್ಡ ಗಂಭೀರ ಪ್ರವಾಹವಾಗಿ ಅದು ಮುಂದೆ ಸಾಗುತ್ತದೆ. ಆರ್ಯರಾದ ನಾವು ಶ್ರೇಷ್ಠರಲ್ಲವೇ? ಶ್ರೇಷ್ಠರು ಸರ್ವರನ್ನು ಹತ್ತರ ತೆಗೆದುಕೊಳ್ಳಬೇಕು. ಮಾನವ ಪ್ರಾಣಿಯು ಇತರ ಪ್ರಾಣಿಗಳಿಗಿಂತ ಶ್ರೇಷ್ಠವೇಕೆ? ಏಕೆಂದರೆ ಅವನು ಕೇವಲ ತನ್ನ ವಿಚಾರವನ್ನಷ್ಟೇ ಮಾಡದೆ, ಸಕಲ ವಿಶ್ವದ ವಿಚಾರವನ್ನು ಮಾಡು ತ್ತಾನೆಂದಲ್ಲವೇ? ನರನು ಕೊನೆಗೆ ವಿಶ್ವಾನರ, ವೈಶ್ವಾನರನು ಇದ್ದಾನೆ. ಮನುಷ್ಯನು ವಿಶ್ವದ ಕೂಸು. ಅವನು ನಕ್ಷತ್ರಗಳ ಬಗೆಗೆ ವಿಚಾರಿಸುವನು. ವಾಯುವಿನ ಬಗ್ಗೆ ವಿಚಾರಿಸುವನು. ಪಶುಪಕ್ಷಿಗಳಿಗೆ ಎಂದೂ ದುಃಖ ಕೊಡುವದಿಲ್ಲ. ಗಿಡಗಳನ್ನು ಸುಮ್ಮನೆ ಮುರಿಯುವದಿಲ್ಲ. ಅವನು ಸರ್ವ ವನ್ನು ಮರ್ಯಾದಿತವಾಗಿ ಸಂರಕ್ಷಿಸುವನು. ರಾಜಾ, ಒಂದು ವೇಳೆ ಮಾನವನು ವಿಶ್ವಾಮಿತ್ರನಾಗಬೇಕಿದ್ದರೆ, ವೈಶ್ವಾನರನಾಗ ಬೇಕಿದ್ದರೆ, ನಾಗ ರನ್ನು ಹತ್ತರ ಬರಮಾಡಿಕೊಳ್ಳುವದಿಲ್ಲವೇಕೆ? ಅವರ ವಿಷಯವಾಗಿ ನಾವು ಸಹಾನುಭೂತಿಯನ್ನು ತೋರುವದಿಲ್ಲವೇಕೆ? ನಾವು ಅಗ್ನಿಗೆ ವೈಶ್ವಾನರ ನೆನ್ನುತ್ತೇವೆ. ಅವನು ದೊಡ್ಡ ದೇವರೆಂದು ತಿಳಿಯುತ್ತೇವೆ. ಯಾರು ಅಗ್ನಿ ಉಪಾಸಕರಿರುವರೋ ವೈಶ್ವಾನರನ ಪೂಜಕರಿರುವರೋ ಅವರು ಹೇಗೆ ನಡೆಯಬೇಕು.? ಅಗ್ನಿಯು ಪ್ರತಿಯೊಂದು ಮನೆಯಲ್ಲಿಯೂ ಹೊತ್ತುತ್ತದೆ. ಪ್ರಕಾಶವನ್ನು ಕೊಡುತ್ತದೆ. ಉಷ್ಣತೆಯನ್ನು ನಿರ್ಮಿಸುತ್ತದೆ. ಅನ್ನವನ್ನು ಸಿದ್ಧಪಡಿಸುತ್ತದೆ. ಉಪಕಾರಕವಾದ ಈ ಅಗ್ನಿಯ ಶೋಧವನ್ನು ಯಾವನು ಮಾಡಿದನೋ ಅವನು ಮಾನವ ಜಾತಿಯ ದೊಡ್ಡ ಸೇವಕನೆಂದೇ ಹೇಳ ಬೇಕು. ಈ ಅಗ್ನಿಯ ಉಪಾಸನೆಯನ್ನು ಮಾಡಿ ನಾವು ಸರ್ವತ್ರ ಜ್ಞಾನವನ್ನು ಹಬ್ಬಿಸೋಣ, ಉಷ್ಣತೆಯನ್ನು ನಿರ್ಮಿಸೋಣ, ಪ್ರಕಾಶವನ್ನು

ಕೊಡೋಣ ನಡೆ. ಭಿನ್ನ ಭಿನ್ನ ಪ್ರದೇಶಗಳಲ್ಲಿ ಭಿನ್ನ ಭಿನ್ನ ವಿಚಾರಗಳು ಬೆಳೆಯುತ್ತವೆ. ಅವೆಲ್ಲವುಗಳನ್ನು ಚನ್ನಾಗಿ ಹೊಂದಿಸಿಗೂಡಿಸೋಣ.

ನಾಗರನ್ನು ದೂರವಿಟ್ಟರೆ ಅವರು ಸುಧಾರಿಸುವ ಬಗೆ ಹೇಗೆ? ಉಳಿದೆಲ್ಲ ಜಾತಿಗಳನ್ನು ಕೀಳೆಂದು ಬಗೆದರೆ ಅವರ ಉನ್ನತಿಯೆಂತು? ಅದರಂತೆಯೇ ಅವರ ದೇವತೆ ಹಾಗೂ ಅವರ ರೀತಿ, ನೀತಿಗಳನ್ನು ಶಸ್ತ್ರದಿಂದ ನಷ್ಟ ಪಡಿಸಿದರೂ ಉಪಯೋಗವಿಲ್ಲ. ನಾಗರು ಹಾವಿನ ಉಪಾಸನೆಯನ್ನು ಮಾಡುವರೆಂದು ನಾವು ನಗುತ್ತೇವೆ. ಆದರೆ ಅದರಲ್ಲಿ ನಗುವಂತಹದೇನಿದೆ? ಮನುಷ್ಯನಿಗೆ ಯಾವದು ಭವ್ಯ, ದಿವ್ಯ, ಭೀತಿದಾಯಕ, ಹಾಗೂ ಆಶ್ಚರ್ಯವೆನಿಸುವದೋ ಅವನು ಅದನ್ನು ಪೂಜಿಸಹತ್ತುವನು. ನಮ್ಮದಂತ ಕತೆಗಳಾದರೂ ಆಕಾಶದಲ್ಲಿಯ ನಕ್ಷತ್ರಗಳನ್ನು ನೋಡಿ ನಿರ್ಮಿಸಿಲ್ಲವೇ? ನಮ್ಮ ಪೂರ್ವಜರು ಆಕಾಶವನ್ನು ನಿರೀಕ್ಷಿಸುತ್ತಿದ್ದರು. ಅವುಗಳನ್ನು ಕುರಿತು ಕಾವ್ಯಗಳನ್ನು ರಚಿಸಿದರು. ಈ ಧ್ರುವ ನಕ್ಷತ್ರವು ಒಂದು ಸ್ಥಳದಲ್ಲಿ ಸ್ಥಿರವೇಕೆ? ಆದಕ್ಕೆ ತಂದೆ ಇರಬೇಕು. ಅವನು ತನ್ನ ಉದ್ದವಾದ ಕಾಲುಗಳಿಂದ ಒದೆದಿರಬೇಕು. ' ಆದುದರಿಂದ ಆ ರಾಜನಿಗೆ ಉತ್ತಾನಪಾದನೆಂದು ಹೆಸರು ಬಂದಿರಬೇಕು. ಆದ್ದರಿಂದ ಧ್ರುವನು ವನಕ್ಕೆಹೋದ. ತಪಸ್ಸು ಮಾಡಿದ, ಸ್ಥಿರವಾದ ಪದವನ್ನು ಹೊಂದಿದ. ಹೀಗೆ ಧ್ರುವ ನಕ್ಷತ್ರವನ್ನೇ ಕೇಂದ್ರವಾಗಿಟ್ಟುಕೊಂಡು ಅದ್ಭುತ ರಮ್ಯ, ಸುಂದರವಾದ ಕಥೆಯನ್ನು ರಚಿಸಿದರು. ಒಂದೆಡೆಯಲ್ಲಿ ಏಳು ನಕ್ಷತ್ರಗಳನ್ನು ನೋಡಿದರು. ಅವುಗಳಿಗೆ ಸಪ್ತಋಷಿಗಳೆಂದು ಹೆಸರಿಟ್ಟರು. ಮೃಗದ ಹಾಗೆ ಇನ್ನೂ ಕೆಲವು ನಕ್ಷತ್ರಗಳು ಕಾಣುತ್ತವೆ. ನಡುವೆ ಬಾಣದಂತೆ ತೋರುತ್ತದೆ. ಅದರಾಚೆಗೆ ಒಂದು ತೇಜಸ್ವಿಯಾದ ನಕ್ಷತ್ರವು ಹೊಳೆಯುತ್ತದೆ. ಆ ನಕ್ಷತ್ರಕ್ಕೆ ವ್ಯಾಧನೆಂದು ಹೆಸರಿಟ್ಟರು. ಈ ವ್ಯಾಧ ಹಾಗೂ ಚಿಗರೆ ಆಕಾಶದಲ್ಲಿ ಎಲ್ಲಿಂದ ಬಂದವು? ರಚಿಸಿರುವರು ದಂತ ಕತೆಯನ್ನು. ಹೀಗೆ ಆಕಾಶವನ್ನು ನೋಡಿ, ನಮ್ಮ ಪುರಾಣಗಳಲ್ಲಿ ಅನೇಕ ಕತೆಗಳು, ಆಖ್ಯಾಯಿಕೆಗಳು ರೂಪುಗೊಂಡಿವೆ. ಆ ಕಥೆಗಳಲ್ಲಿ ನಾವು ನಮ್ಮ ಅನಭವವನ್ನು ' ನಮ್ಮ ಧ್ಯೇಯವನ್ನು ಅದರಲ್ಲಿ ತುಂಬುತ್ತೇವೆ. ಆದುದರಿಂದ ಆ ಕತೆಗಳು ಅತಿ ರಮ್ಯವಾಗಿ

ಕಾಣುತ್ತವೆ. ಕವಿಗಳು ನಮ್ಮ ಜೀವನದ ಆಶೆ ಆಕಾಂಕ್ಷೆಗಳನ್ನು ಕಾವ್ಯದಲ್ಲಿ ತುಂಬಿರುವ ಮೂಲಕವೇ, ಆ ಕಾವ್ಯವು ನಮ್ಮ ಹೃದಯವನ್ನು ಅರಳಿಸುತ್ತದೆ.

ಅನೇಕ ಕಡೆಗೆ ಸುಂದರವಾದ ಅನೇಕ ಉಷಾ ಸ್ತೋತ್ರಗಳು ದೊರೆಯುತ್ತವೆ. ರಮ್ಯಳಾದ ಉಷೆಯು ಎಲ್ಲೆಲ್ಲಿ ಹೇಗೆ ಕಂಡಳೋ ಅಲ್ಲಲ್ಲಿ ಋಷಿಗಳು ಹಾಗೇ ವರ್ಣಿಸಿದ್ದಾರೆ. ನಾವು ಸೂರ್ಯ,ಅಗ್ನಿ, ವರುಣ,ಇಂದ್ರ,ಉಷಾ, ಮೊದಲಾದವುಗಳನ್ನು ದೇವತೆಗಳೆಂದು ಭಾವಿಸುತ್ತೇವೆ. ನೀರಿನ ಉಪಾಸನೆಯನ್ನು ಮಾಡುತ್ತೇವೆ ಅಂದಮೇಲೆ, ಯಾರಾದರೂ ವಿಶಾಲ ವೃಕ್ಷದ ಉಪಾಸನೆಗೈದರೆ ನಗುವದೇಕೆ? ನಾಗರ ಉಪಾಸನೆಯನ್ನು ಮಾಡಿದರೆ, ಚೇಷ್ಟೆಯೇಕೆ ? ರಾಜಾ, ನಿನಗೆ ಗುಟ್ಟಿನ ಮಾತೊಂದನ್ನು ಹೇಳುವೆ. ಕೇಳು. ಈ ಎಲ್ಲ ಕಲ್ಪನೆಗಳಿಗೆ ನಾವು ಶ್ರೇಷ್ಠ ಕಲ್ಪನೆಯ ಮುದ್ರೆಯನ್ನೊತ್ತಬೇಕು. ಅಂದರೆ ಎಲ್ಲವೂ ಸರಿಹೋಗುವದು. ಎಷ್ಟೋ ಕಡೆಗೆ ಶಿಶ್ನ ದೇವರನ್ನು ಪೂಜಿಸುವ ಜನಾಂಗವೂ ಇದೆ. ಅವರು ಜನನೇಂದ್ರಿಯದ ಪ್ರತಿಮೆಯನ್ನು ರಚಿಸಿ, ಪೂಜಿಸುವರು. ಅದನ್ನು ನೋಡಿ ನಾವು, ನಗಬಾರದು. ಆ ಲಿಂಗ ಪೂಜೆಗೆ ಉದಾತ್ತತೆಯ ಸ್ವರೂಪವನ್ನು ನಾವು ಕೊಡಬೇಕು. ಲಿಂಗಪೂಜೆಯಂದರೆ ಶಕ್ತಿಯ ಪೂಜೆ. ಯಾವ ಶಕ್ತಿಯಿಂದ ಈ ವಿಶ್ವದ ನಿರ್ಮಾಣವಾಗುತ್ತದೆಯೋ ಅದೇ ಶಕ್ತಿಯ ಪೂಜೆ! ಎಂಬ ಶ್ರೇಷ್ಠ ಕಲ್ಪನೆಯನ್ನು ನಾವು ಅದಕ್ಕೆ ಕೊಡಬೇಕು. ಈ ಶಕ್ತಿಯು ಕ್ಷೋಭಿಸಿದರೆ ಪ್ರಳಯವಾದೀತು. ಆ ಶಕ್ತಿಯು ಶಮನವಾದರೆ ಕಲ್ಯಾಣವಾದೀತು. ಆದುದರಿಂದಲೇ ನಾವು ಶಕ್ತಿ ಹಾಗು ಶಿವ ಎಂಬೆರಡು ದೇವತೆಗಳನ್ನು ನಿರ್ಮಿಸಿದೆವು. ಈ ಶಿವನು ತನ್ನ ಜ್ಞಾನ ಚಕ್ಷುವಿನಿಂದ ಕಾಮನನ್ನು ಭಸ್ಮ ಮಾಡಿದನೆಂದು ಕತೆಯನ್ನು ನಿರ್ಮಿಸಿದೆವು. ಕೆಲವರು ಶಿಶ್ನದೇವನ ಪೂಜಕರಿರಬಹುದು. ಆದರೆ ನಮ್ಮ ಪ್ರತಿಭಾವಂತರಾದ ಪೂರ್ವಜರು, ಅವರ ದೇವತೆ, ಹಾಗೂ ಅವರ ಕಲ್ಪನೆಗಳನ್ನೇ ತೆಗೆದುಕೊಂಡು, ಅವುಗಳಿಗೆ ಉದಾತ್ತ ಹಾಗೂ ಪವಿತ್ರವಾದ ಅರ್ಥವನ್ನು ಕಲ್ಪಿಸಿದರು. ಈ ಕಲ್ಪನೆಯೇ ಮುಂದೆ ರೂಢವಾಯಿತು. ಮುಂದೆ ಜನನೇಂದ್ರಿಯಗಳ ಈ ಮಂದಿರಗಳು ಗಂಭೀರವೆನಿಸಿದವು.

ವೈರಾಗ್ಯದ ಮಂದಿರಗಳಾದವು. ಅಲ್ಲಿ ಕಾಮನನ್ನು ದಹಿಸಿದ ಶಂಕರನ ನೆನಪು ಆಗಹತ್ತಿತು. ಸಂಸಾರವು ಸುಖಮಯವಾಗಬೇಕಿದ್ದರೆ, ನಾವು ಸಂಯಮಿಗಳಾಗಬೇಕು. ಈ ಶರೀರವೆಂದರೆ ಈಶ್ವರನ ಮಂದಿರ. ಅದು ಪವಿತ್ರವಾಗಿರಬೇಕಲ್ಲವೇ? ಅದರಲ್ಲಿಯ ಇಂದ್ರಿಯಗಳು ಶುದ್ಧವಾಗ ಬೇಕಲ್ಲವೇ? ಈ ಬಗೆಯ ಭಾವನೆಗಳು ಆ ಮಂದಿರಗಳಲ್ಲಿ ಉತ್ಪನ್ನವಾದಾವು. ಈ ದೃಷ್ಟಿಯಿಂದ ಎಲ್ಲ ಜಾತಿ, ಮತಗಳೊಡನೆ ಬೆರೆಯುವಾ. ಮೇಲೆ ಮೇಲೆ ನೋಡಿ ಯಾವುದನ್ನು ಕೀಳವೆಂದು ಭಾವಿಸೋಣ ಬೇಡ.

ರಾಜಾ! ಪ್ರತಿಯೊಬ್ಬ ಮನುಷ್ಯನು ಕೆಲವು ವಿಷಯಗಳಲ್ಲಿ ಹೆಚ್ಚು ವಿಕಸಿತನಾಗಿದ್ದರೆ, ಕೆಲವು ವಿಷಯಗಳಲ್ಲಿ ಕಡಿಮೆ ವಿಕಸಿತನಾಗಿರುತ್ತಾನೆ. ಆದುದರಿಂದ ಎರಡನೆಯವರಿಗಿಂತ ನಾನು ಶ್ರೇಷ್ಠನೆಂದು ಹೇಳುವದು ಹೇಗೆ? ಆರ್ಯರಲ್ಲಿ ಕೆಲವು ಗುಣಗಳು ಶ್ರೇಷ್ಠವಿದ್ದರೆ, ಆರ್ಯೇತರರಲ್ಲಿ ಕೆಲವು ಗುಣಗಳು ಶ್ರೇಷ್ಠವಿರಬಹುದು. ಪರಸ್ಪರರು ಒಳ್ಳೇ ಗುಣಗಳನ್ನು ಕಲಿತರೆ, ಪೂರ್ಣತೆಗೆ ನೆರವಾಗುವದಿಲ್ಲವೇ? ಆರ್ಯ ಹಾಗೂ ನಾಗರಲ್ಲಿ ವಿವಾಹವಾದರೆ ಏನು ಕೆಟ್ಟಿತು? ನಾವು ಎಲ್ಲರೂ ಒಂದೇ ದೇಶದಲ್ಲಿರುವೆವು. ಒಂದೇ ಬಗೆಯ ಆಹಾರವನ್ನು ತೆಗೆದುಕೊಳ್ಳುವೆವು. ಅದೇ ನೀರನ್ನು ಕುಡಿಯುವೆವು. ಅದೇ ಹವೆಯನ್ನು ಉಸುರಾಡಿಸುವೆವು ನಾವೆಲ್ಲರೂ ಇಲ್ಲಿಯವರೇ. ಅಂದ ಮೇಲೆ ವಿವಾಹಕ್ಕೆ ಅಡ್ಡಿ ಏಕೆ? ನಾಗಕನ್ಯೆಯಾದ ಚಿತ್ರಾಂಗದೆಯೊಡನೆ ಅರ್ಜುನನು ಮದುವೆಯಾದ. ಅವಳ ಹೊಟ್ಟೆಯಿಂದ ಹುಟ್ಟಿದ ಬಬ್ರುವಾಹನನೇನು ಕಡಿಮೆ ಪರಾಕ್ರಮಿಯೇ? ಅವನಕಿಂತಲೂ ಒಂದು ಕೈ ಮೇಲೆಯೇ. ಅನೇಕ ಮಹರ್ಷಿಗಳು ಕೂಡ ಈ ಬಗೆಯ ಸಂಬಂಧಗಳಿಂದಲೇ ಹುಟ್ಟಿರುವದಿಲ್ಲವೇ? ಯಾವ ವಿವಾಹದಿಂದ ಸುಖವಾಗುವದು? ಇದಕ್ಕೆ ಎರಡು ಸಂಗತಿಗಳ ಅವಶ್ಯಕತೆ ಇರುತ್ತದೆ. ಸಮಾನ ಧರ್ಮವು ಅವಶ್ಯ. ಧರ್ಮವೆಂದರೆ ಗುಣಧರ್ಮ. ಸಮಾನಧ್ಯೇಯ, ಸಮಾನ ಅಭಿರುಚಿಗಳಿದ್ದರೆ ಒಳ್ಳೇದು. ಕೇವಲ ಸಾಧರ್ಮ್ಯವು ಪೂರ್ಣವಾಗಿ ಉಪಯೋಗ ಬೀಳುವದಿಲ್ಲ. ನಾವು ಯಾವುದರಿಂದ ಆಕರ್ಷಿಸಲ್ಪಡುವೆವೋ ಅಲ್ಲಿ ಎರಡು ಶಕ್ತಿಗಳ ಕ್ರಿಯೆಯು ನಡೆದಿರುತ್ತದೆ. ಕೆಲವು ಸಮಾನ ಗುಣಧರ್ಮಗಳು

ನಮ್ಮನ್ನು ಆಕರ್ಷಿಸುತ್ತವೆ. ಕೆಲವು ವಿಶಿಷ್ಠ ಸಂಗತಿಗಳಿಂದ ಆಕರ್ಷಿಸಲ್ಪಡುತ್ತವೆ. ನಮ್ಮಲ್ಲಿ ಏನಿವೆಯೋ ಅದು ಎರಡನೆಯುವರಲ್ಲಿಯೂ ಇದೆ. ಅಲ್ಲದೆ ಯಾವುದು ನನ್ನಲ್ಲಿ ಇಲ್ಲವೋ, ಯಾವುದರ ಅವಶ್ಯಕತೆ ನನಗೆ ಇರುವದೋ, ಅಂತಹ ಕೆಲವು ಸಂಗತಿಗಳು, ಎರಡನೆಯ ವ್ಯಕ್ತಿಗಳಲ್ಲಿರುತ್ತವೆ. ನೀರಡಿಕೆಯಾದೊಡನೆಯೆ ನಾವು ನೀರಿನ ಕಡೆಗೆ ಎಳೆಯಲ್ಪಡುತ್ತೇವೆ. ಚಳಿಯೆನಿಸಿದೊಡನೆಯೇ ಅಗ್ನಿಯ ಹತ್ತರ ಕೂಡುತ್ತೇವೆ. ಅಂದರೆ ಯಾವ ಯಾವ ವಸ್ತುಗಳ ಅವಶ್ಯಕತೆ ನಮಗೆ ಎನಿಸುವದೋ ಮತ್ತು ಅವು ನಮ್ಮಲ್ಲಿ ಇಲ್ಲವೋ ಆ ವಸ್ತುಗಳ ಕಡೆಗೆ ನಾವು ಓಡುತ್ತೇವೆ. ಆ ವಸ್ತುವು ಸಿಕ್ಕರೆ ಬದುಕುವೆವು. ಇಲ್ಲವೆ ಸಾಯುವೆವು. ಲಗ್ನವೆಂದರೆ ಒಂದು ಬಗೆಯ ಪೂರ್ಣತೆಯು. ಪರಸ್ಪರರಲ್ಲಿ ಯಾವ ಕೊರತೆಯಿರುವದೋ ಅದನ್ನು ಪರಸ್ಪರರು ಪೂರ್ಣ ಮಾಡಿ, ಇಬ್ಬರೂ ಕೂಡಿಯೇ ಬೆಳೆಯುವದು. ಒಂದೇ ಧ್ಯೇಯದ ಸ್ತ್ರೀಪುರುಷರಿದ್ದರೂ ಪ್ರಖರ ವೃತ್ತಿಯ ಸ್ತ್ರೀಗೆ ಅದೇ ಧ್ಯೇಯದ ಆದರೆ ಸೌಮ್ಯವೃತ್ತಿಯ ಪತಿಯು ರುಚಿಸಬಹುದು. ಆದರಿಂದಲೇ ಅವರ ಪರಿಪೂರ್ಣತೆಯಾಗುತ್ತದೆ. ಆದುದರಿಂದ ಯಾವುದರಿಂದ ನಿಜವಾಗಿ ಒಬ್ಬರನ್ನೊಬ್ಬರು ಆಕರ್ಷಿಸಲ್ಪಡುತ್ತಾರೋ ಅವರು ಬೆರೆಯುವದರಿಂದಲೇ ಅವರ ಪರಿಪೂರ್ಣತೆಯಾಗುತ್ತದೆ. ಅವರಲ್ಲಿಯೇ ಅವರ ವಿಕಾಸವಿರುತ್ತದೆ. ಸೌಮ್ಯ ಮನುಷ್ಯರಿಗೆ ಪ್ರಖರತೆಯ ಜೋಡು ಸಿಗುತ್ತದೆ. ಪ್ರಖರತೆಗೆ ಸೌಮ್ಯವೃತ್ತಿಯ ಜೋಡು ಸಿಕ್ಕು ಮರ್ಯಾದೆ ಹಾಗೂ ಸಂಯಮಗಳು ಬರುತ್ತವೆ. ನಾಗರಾದರೇನು ಯಾವ ಜಾತಿಯವರಾದರೇನು ? ಬರಲಿ ಒಬ್ಬರೊಬ್ಬರು ಸಮೀಪಕ್ಕೆ. ಯಾರಿಗೆ ಯಾವುದು ಯೋಗ್ಯವೆನಿಸುವದೋ ಅವರು ಅದನ್ನೇ ಆರಿಸುವರು. ಇಷ್ಟೆಲ್ಲ ವಿಚಾರ ಮಾಡಿದರೂ ಮಾನವೀ ಜೀವನವು ಅಪೂರ್ಣವೇ ಇರುತ್ತದೆ. ಆದುದರಿಂದ ನಮ್ಮ ದೃಷ್ಟಿಯು ಹೆಚ್ಚು ಉದಾರವಾಗಿರಬೇಕು. ಸ್ವತಃಹದ ವಿಕಾಸಕ್ಕೆ ಏನು ಬೇಕೆಂಬುದನ್ನು ಸ್ತ್ರೀಪುರುಷರು ತಮ್ಮಿಬ್ಬರಲ್ಲಿ ನೋಡಿಕೊಳ್ಳುವರು. ಒಂದೇ ದೃಷ್ಟಿ ಕ್ಷೇಪದಿಂದ ನೋಡುವರು. ಒಂದೇ ಕಟಾಕ್ಷದಲ್ಲಿ ಅವರ ಇಡೀ ಜೀವನವೇ ಬೈಲಿಗೆ ಬರುವದು. ಅವರಲ್ಲಿಯ ಸಾಧರ್ಮ್ಯ-ವೈಧರ್ಮ್ಯಗಳು ಅಲ್ಲಿಯೇ ನಿಶ್ಚಯವಾಗುವವು. ನಾವಿಬ್ಬರು ಸಮೀಪ ಬಂದರೆ, ನಮ್ಮ ಜೀವನವು ಸಫಲವಾಗುವದು. ಎಂದು ಆ ಎರಡೂ ಜೀವನಗಳು ಮೌನ

ದಿಂದಲೇ ಮಾತನಾಡುವವು. ಪರಸ್ಪರರ ಹಸ್ತ ಸ್ಪರ್ಶದಿಂದಲೇ ಹೇಳುವವು. ನಿಮ್ಮ ಸಕಲ ಶಾಸ್ತ್ರಗಳು ಈ ಜೀವನ ಶಾಸ್ತ್ರದ ಮುಂದೆ ಕೈಯೂರುವವು. ಈ ಮಹಾನ್ ಜೀವನ ಶಾಸ್ತ್ರವು ಧರ್ಮವಾಗಿ ಪರಿಣಮಿಸಿದಾಗ ಸಂಸ್ಕೃತಿಯು ಬೆಳೆಯುವದು. ಸಜೀವತೆಯು ಕಂಡು ಬರುವದು. ಚೈತನ್ಯ ಹಾಗೂ ಸ್ಫೂರ್ತಿಗಳು ಕಾರ್ಯ ಪ್ರವೃತ್ತವಾಗುವವು. ಸಮಾಜದ ಸಂಕುಚಿತ ವೃತ್ತಿಯು ನಾಶವಾಗುವದು. ವ್ಯವಹಾರವು ಸ್ವೇಚ್ಛೆಯಾಗಿ ನಡೆಯುವದು. ಎಲ್ಲ ಕಡೆಗೆ ಪ್ರಕಾಶವು ಹಬ್ಬುವದು. ಸಮುದ್ರವು ಎಂದೂ ಬತ್ತುವದಿಲ್ಲ. ಅದು ಎಲ್ಲರನ್ನು ಹತ್ತರ ಕರೆಯುವದು. ಅದು ಯಾವಾಗಲೂ ಉಕ್ಕೇರುವದು. ಆರ್ಯರು ಸಾಗರದಂತಾಗಬೇಕು. ಸಾವಿರಾರು ಜಾತಿಗಳ ತೆರೆಗಳು ಮಾನವ ಸಾಗರದಲ್ಲಿ ಉಕ್ಕೇರಲಿ. ಹೆಚ್ಚಾಗಲಿ. ಸಾಗರದಲ್ಲಿ ಅನಂತತೆರೆಗಳು ಒಂದನ್ನೊಂದಪ್ಪಿಕೊಳ್ಳಲಿ. ಹಿಮಾಲಯದಲ್ಲಿ ಸಹಸ್ರಾರು ಶಿಖರಗಳಿವೆ. ಇಡೀ ಹಿಮಾಲಯವು ಶುಭ್ರ ಹಾಗೂ ಸ್ವಚ್ಛವಿದೆ. ನೂರಾರು ಜೀವನದಾಯಿಯಾದ ನದಿಗಳಿಗೆ ಜನ್ಮವನ್ನೀಯುತ್ತದೆ. - ಸರ್ವ ಪ್ರಕಾರದ ವೃಕ್ಷ, ವನಸ್ಪತಿಗಳಿಗೆ ಆಶ್ರಯವಿತ್ತು ಅರಳಿಸುತ್ತದೆ. ಭಾರತೀಯ ಸಮಾಜವೂ ಹೀಗೆಯೇ ಆಗಲಿ. ಬಗೆಬಗೆಯ ವಿಚಾರಗಳನ್ನು ಪ್ರಸರಿಸುವ, ನೂರಾರು ಕಲ್ಪನೆಗಳನ್ನು ಕೊಡುವ, ಸಾವಿರಾರು ರೀತಿ ನಡಾವಳಿಗಳ, ಮನೋಹರವಾದ ಪುಷ್ಪಗಳನ್ನೀಯುವ, ನೂರಾರು ಪ್ರಯೋಗಗಳನ್ನು ಮಾಡುವ, ಪರಸ್ಪರ ಸಹಕಾರ ಹಾಗೂ ಸಹಾನುಭೂತಿಗಳಿಂದ ಮುಂದೆ ಸಾಗುವಂತೆಯೂ ಮೇಲಕ್ಕೆ ಏರುವಂತೆಯೂ, ಭಾರತೀಯ ಸಮಾಜವು ಭವ್ಯವಾಗಿ ಬೆಳೆಯಲಿ.

ರಾಜಾ, ನನಗೆ ಎಲ್ಲೆಡೆಗೆ ಮಾಂಗಲ್ಯವೇ ಕಾಣುತ್ತಿದೆ. ಒಂದು ದಿನ ನಾನು ಗಿಡವನ್ನು ರಾತ್ರಿಯ ಸಮಯದಲ್ಲಿ ಕಡಿಯುತ್ತಿದ್ದೆ. ಆಗ ಒಬ್ಬ ವೃದ್ಧ ನಾಗಮಾತೆಯು ಬಂದು ಬೇಡಪ್ಪಾ ಬೇಡ. ರಾತ್ರಿ ಎಲೆಗಳು ಮಲಗುತ್ತವೆ. ಗಿಡಗಳು ನಿದ್ದೆ ಮಾಡುತ್ತವೆ. ಕಡಿಯಬೇಡ ಎಂದಳು. ನಾನು ಆಕೆಯನ್ನು ನೋಡಿ ನಗಲಿಲ್ಲ. ಆಕೆಗೆ ನಮಸ್ಕರಿಸಿದೆ. ಆಕೆಯ ಕಲ್ಪನೆಯು ತಪ್ಪಿರಬಹುದು. ಆದರೆ ಆಕೆಯು ಸರ್ವತ್ರದಲ್ಲಿ ಚೈತನ್ಯವನ್ನು ನೋಡುತ್ತಿದ್ದಾಳೆ. ವೃಕ್ಷಕ್ಕೂ ಕೂಡ ಸುಖದುಃಖಗಳಾಗುವವೆಂದು

ವಿಚಾರ ಮಾಡುತ್ತಿದ್ದಾಳೆ. ನಾನು ನನನ್ನೇ ಕ್ಷುದ್ರನೆಂದು ಬಗೆದೆ. ಆ ಮಾತೆಯು ದೊಡ್ಡವಳೆಂದು ತಿಳಿದೆ. ರಾಜಾ, ಸರ್ವರಿಗೂ ವಿಕಾಸದ ವೇಳೆ ಬರುತ್ತದೆ ಯಾವ ಯಾವ ಗಿಡಗಳಿಗೆ ಯಾವಾಗ ಸಮಯ ಬರುವದೋ ಆಗ ಅವು ಚಿಗುರೊಡೆದು ನಲಿಯುತ್ತವೆ. ಹೊಸ ಹಣ್ಣು ಹಂಪಲಗಳಿಂದ ತುಂಬಿ ತುಳುಕುತ್ತವೆ. ಇಂದು ಒಂದಕ್ಕಾದರೆ ಇನ್ನೊಂದು ದಿನ ಮತ್ತೊಂದಕ್ಕೆ. ಅಂತೂ ಎಲ್ಲರ ವಿಕಾಸವು ಆಗಿಯೇ ಆಗುತ್ತದೆ. ಯಾರೂ ಬಂಜೆಯಲ್ಲ. ಈ ದೃಷ್ಟಿಯಿಂದ ನಾವು ಮುಂದೆ ಸಾಗೋಣ. ಅವರವರ ವಿಕಾಸಕ್ಕೆ ಸಹಾಯಕರಾಗೋಣ. ನಮ್ಮ ವಿಕಾಸವನ್ನು ನಾವು ಮಾಡಿಕೊಳ್ಳಬೇಕಾಗಿದ್ದರೆ, ಎರಡನೆಯವರ ಬಗೆಗೆ ಆದರವನ್ನು ತಾಳದೆ ಎಂದೂ ಶಕ್ಯವಿಲ್ಲ. ನಾನೇನು ಹೇಳಲಿ. ಈ ತರುಣರಿಗೆ ನಾನು ಇದನ್ನೇ ಕಲಿಸುತ್ತಿದ್ದೇನೆ. ನನ್ನ ಎದುರಿಗೆ ಈ ಕಪ್ಪು, ಕೆಂಪು ಮೂರ್ತಿಗಳು ಕೂತಿವೆ. ಅವುಗಳಲ್ಲಿ ನನಗೆ ದಿವ್ಯತ್ವವು ಕಾಣುತ್ತಿದೆ. ಅವೆಲ್ಲವೂ ಸುಗಂಧವುಳ್ಳ ಪುಷ್ಪಗಳು. ಅವರ ಜೀವನದಲ್ಲಿ ಅಪ್ರಕಟವಾಗಿದ್ದ ಸುಗಂಧವನ್ನು ಪ್ರಕಟಮಾಡುವದೇ ನನ್ನ ಕೆಲಸ. ಗುರುವು ಹೊಸದನ್ನೇನೂ ಕಲಿಸುವದಿಲ್ಲ. ಏನು ಇದೆಯೋ ಅದು ಪ್ರಕಟವಾಗಲಿಕ್ಕೆ ಸಹಾಯವನ್ನು ಮಾತ್ರ ಮಾಡುತ್ತಾನೆ. ಹತ್ತಿಕ್ಕಲ್ಪಟ್ಟ ಸುಗಂಧವನ್ನು ಹೊರಗೆ ತರುತ್ತಾನೆ. ಯಾವದು ಬದ್ಧವಾಗಿದೆಯೋ ಅದನ್ನು ಮುಕ್ತ ಮಾಡುವದೇ ಗುರುವಿನ ಕೆಲಸ. ಘರ್ಷಣದಿಂದ ಕಟ್ಟಿಗೆಯಲ್ಲಿರುವ ಅಗ್ನಿಯು ಪ್ರಕಟವಾಗುವಂತೆ, ಸಂಸ್ಕಾರಗಳ ಘರ್ಷಣದಿಂದ ಮಾನವೀಯ ಅಂತಃಕರಣದಲ್ಲಿನ್ನ ದಿವ್ಯತೆಯು ಪ್ರಕಟವಾಗುವದು. ಸುಗಂಧವು ಅನೇಕ ಪ್ರಕಾರದ್ದಿದೆ. ಸವಿಯೂ ಅನೇಕ ಬಗೆಯಾಗಿದೆ. ಈ ಛಾತ್ರರಲ್ಲಿಯ ದಿವ್ಯತೆಯು ಅನೇಕ ಬಗೆಯಾಗಿದೆ. ಇವನ ದಿವ್ಯತೆಯನ್ನು ಅವನಿಗೆ ತೋರಿಸುವೆ. ಅವನ ದಿವ್ಯತೆಯನ್ನು ಇವನಿಗೆ ತೋರಿಸುವೆ. ಈ ಆಶ್ರಮದಲ್ಲಿ ಏನು ನಡೆದಿದೆಯೋ ಅದೇ ಸಮಾಜದಲ್ಲಿ ನಡೆಯಬೇಕು. ಮತ್ತು ಅದು ಬೆಳೆಯುತ್ತ ಹೋಗಬೇಕು ಎಂಬುದೇ ನನ್ನ ಇಚ್ಛೆ. ಆದರೆ ವಿಚಾರಗಳು ಅನಂತ. ಕೊನೆಗೆ ನಮ್ರಪೂರ್ವಕವಾಗಿ ನಿಶ್ಚಯ ವೃತ್ತಿಯಿಂದ ತನ್ನ ಹೃದಯದಲ್ಲಿಯ ಸತ್ಯಕ್ಕೆ ಅಂಟಿಕೊಂಡು ಉಳಿಯಬೇಕು. ಕೊನೆಗೆ

ತನ್ನ ಹೃದಯದಲ್ಲಿಯ ಸತ್ಯದ ಮೇಲೆಯೇ ಶ್ರದ್ಧೆಯನ್ನಿಡಬೇಕು. ಸ್ವತಃದ ಪ್ರಯೋಗಗಳ ಮೇಲೆಯೆ ವಿಶ್ವಾಸವನ್ನಿಡಬೇಕು. ಎಲ್ಲಿ ಶ್ರದ್ಧೆಯಿಲ್ಲವೋ ಅಲ್ಲಿ ವಿಕಾಸವಿಲ್ಲ. ಶ್ರದ್ಧೆಯು ಸ್ವಯಂ ಪ್ರಕಾಶವಾದ ತತ್ವವು. ಶ್ರದ್ಧೆಗೆ ಶ್ರದ್ಧೆಯೇ ಉದಾಹರಣೆ. ಅದು ಸ್ವತಃ ಪ್ರಮಾಣ. ಶ್ರದ್ಧೆಯನ್ನು ತುಚ್ಛ ವೆಂದೆಣಿಸಬೇಡ. ಅದು ಒಂದು ಸ್ವತಂತ್ರವಾದ ಶಕ್ತಿ. ಶ್ರದ್ಧೆಯ ನಾಶ ವೆಂದರೆ ಸ್ಫೂರ್ತಿಯ ನಾಶ. ಆದುದರಿಂದ ನಾನು ನನ್ನ ಶ್ರದ್ಧೆಯನ್ನು ತೆಗೆದುಕೊಂಡು ಮುಂದೆ ಸಾಗುತ್ತೇನೆ. ನನ್ನ ದೀಪವು ನನ್ನ ಕೈಯಲ್ಲಿ. ಅದು ಎರಡನೆಯವರಿಗೆ ಕಾಣುತ್ತಿದೆಯೋ ಇಲ್ಲವೊ ನನಗೆ ಗೊತ್ತಿಲ್ಲ. ಆದರೆ ನನಗೆ ಮಾತ್ರ ಕಾಣಿಸುತ್ತದೆ ಈ ಸಂಗತಿಯು ಮಾತ್ರ ಸತ್ಯವಿದೆ."

ಆಸ್ತಿಕನು ಶಾಂತನಾದನು. ಒಂದು ಚಿಗರಿಯು ಬಂದು ಅವನನ್ನು ನೆಕ್ಕ ತೊಡಗಿತು. ತನ್ನ ಕೋಡುಗಳಿಂದ ಅವನನ್ನು ತುರಿಸಹತ್ತಿತು. ಪ್ರಾಣಿ ಮಾತ್ರಗಳ ಮೇಲೆ ಪ್ರೇಮವನ್ನು ಮಾಡುವ ಆ ಮಹರ್ಷಿಗೆ ತನ್ನ ಕೃತಜ್ಞತೆಯನ್ನು ಆ ಹರಿಣವು ಪ್ರಕಟಗೊಳಿಸುತ್ತಿತ್ತೋ ?

ಹೊತ್ತು ಮುಳುಗಿತು. ಸಾಯಂಪ್ರಾರ್ಥನೆ ಹಾಗೂ ಸಂಧ್ಯಾ ಸಮಯವು ಸಮೀಪಿಸಿತು. ಸಭೆ ಮುಗಿಯಿತು. ಎಲ್ಲರೂ ಗಂಭೀರರಾಗಿದ್ದರು. ಮೌನರಾಗಿದ್ದರು. ರಾತ್ರಿ ಫಲಹಾರವಾದ ನಂತರ ಎಲ್ಲರೂ ವಿಶ್ರಾಂತಿಯನ್ನು ಪಡೆದರು. ಬೆಳಿಗ್ಗೆ ರಾಜನು ಸರ್ವ ಋಷಿಗಳೊಡನೆ ಹೊರಟನು.

"ರಾಜನೆ, ಪರಿಸ್ಥಿತಿಯು ಕಠಿಣವಿದೆ. ನೀನು ದಕ್ಷನಾಗಿರು. ವಿಶಾಲ ದೃಷ್ಟಿಯುಳ್ಳವನಾಗು. ನಾನು ನಿನಗೆ ಏನು ಹೇಳಲಿ! ನೀನು ಸಮಯಜ್ಞನೆ ಇರುತ್ತಿ" ಎಂದು ಆಸ್ತಿಕನು ರಾಜನನ್ನು ಬೀಳ್ಕೊಟ್ಟನು.

"ಭಗವಾನ್ ನಿಮ್ಮ ಆಶೀರ್ವಾದವೇ ನನ್ನ ಶಕ್ತಿ, ಇತ್ತೀಚೆಗೆ ನನ್ನ ಸಂಕಲ್ಪ ಶಕ್ತಿಯೆಲ್ಲವೂ ನಾಶವಾಗುತ್ತ ನಡೆದಿದೆ. ಏನಾಗುವದೋ ಏನೋ ನನ್ನ ಕೈಯಿಂದ ತಪ್ಪಾಗುವ ಮೊದಲೇ, ನನ್ನ ಕಣ್ಣುಗಳು ಮುಚ್ಚಲಿ. ನನ್ನ ರಾಜ್ಯದಲ್ಲಿ ಪ್ರಕ್ಷೋಭವು ಉತ್ಪನ್ನವಾಗುವ ಮೊದಲೇ, ನನ್ನ ಪ್ರಾಣವು ಹೋಗಲಿ" ಎಂದು ಪರೀಕ್ಷಿತನು ನುಡಿದನು.

“ ನೀನು ಚಿರಂಜೀವಿಯಾಗು. ನೀನು ಹೋದನಂತರ ಬಹಳ ಕಠಿಣ ಕಾಲವು ಪ್ರಾಪ್ತವಾಗುವದೆಂದು ನನಗೆ ಅನಿಸುತ್ತದೆ. ನೀನಿರುವಾಗಲೇ ಈ ಪ್ರಶ್ನೆಯು ಬಿಟ್ಟರೆ ಬಿಡಬಹುದು.” ಎಂದು ಆಸ್ತಿಕನು ಚಿಂತೆಯಿಂದ ಮಾತ ನಾಡಿದನು.”

“ ಸತ್ಯವು ಸ್ವತಃಹದ ಎಚ್ಚರಿಕೆಯನ್ನು ತೆಗೆದುಕೊಳ್ಳುವದು ” ಎಂದನು ಪರೀಕ್ಷಿತ.

ಇಷ್ಟರಲ್ಲಿ ನಾಗೇಶನು ರಸಭರಿತವಾದ ಫಲಗಳ ಒಂದು ಬುಟ್ಟಿಯನ್ನು ತಕ್ಕೊಂಡು ಬಂದನು. ಅದನ್ನು ಆಸ್ತಿಕನ ಕಡೆಗೆ ಕೊಟ್ಟನು. ‘ ರಾಜನೆ ! ಈ ರಸಭರಿತವಾದ ಹಣ್ಣುಗಳನ್ನು ತೆಗೆದುಕೊ. ಆಶ್ರಮದ ಗುರುತಿದು. ನಾವು ನಮ್ಮ ಧ್ಯೇಯವನ್ನು ಈ ಬುಟ್ಟಿಯಲ್ಲಿ ನಿನ್ನ ಸಂಗಡ ಕಳಿಸುತ್ತಿದ್ದೇವೆ. ಈ ನಾಗೇಶನು ನಾಗಜಾತಿಯ ತರುಣನು. ನಾಗೇಶನಿಗೆ ಈ ಕಲ್ಪನೆಯು ಹೊಳೆಯಿತು. ನೀನು ಹಣ್ಣುಗಳ ವಿಷಯವಾಗಿ ನಿನ್ನೆ ಮಾತಾಡಿದ ಸಂಗತಿಯು ಅವನ ಲಕ್ಷ್ಯದಲ್ಲಿತ್ತು. ಅವನು ಒಳ್ಳೇ ಹುಡುಗ. ಅವನ ಶರೀರವು ದೊಡ್ಡದಿದ್ದಂತೆ ಅವನ ಮನಸ್ಸು ದೊಡ್ಡದಿದೆ. ಅವನು ದೊಡ್ಡ ಕಲಾವಂತನು. ಸುಂದರ ಹೂಗಳ ಮಾಲೆಗಳನ್ನು ಹೆಣೆಯುವನು. ಚಿಗುರೆಲೆಗಳ ತೋರಣವನ್ನು ಕಟ್ಟುವನು. ಬಿದುರುಗಳಿಂದ ಕೊಳಲುಗಳನ್ನು ಮಾಡುವನು ” ಎಂದು ಆಸ್ತಿಕನು ಹೇಳಿದನು.

“ ಅವನನ್ನು ನೋಡಿ ನನಗೂ ಬಹಳ ಆನಂದವಾಗಿದೆ. ಎಲ್ಲರ ಲಕ್ಷ್ಯವೂ ಅವನ ಕಡೆಗೆ ಎಳೆಯಲ್ಪಡುತ್ತದೆ. ಹಾಗೇ ಇರುವನು ಅವನು ” ಎಂದನು ಪರೀಕ್ಷಿತ.

“ ಆದರೆ ಅವನಿಗೆ ನಿದ್ದೆಯು ಬಹಳ ಬರುವದು ” ಎಂದು ನಗುತ್ತ ಆಸ್ತಿಕನು ನುಡಿದನು.

“ ನಿರ್ಮಲ ಮನಸ್ಸಿದೆ ” ಎಂದು ಪರೀಕ್ಷಿತನು ನುಡಿದನು.

ಅತಿಥಿಗಳೆಲ್ಲ ಹೋದರು. ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಭಗವಾನ್ ಆಸ್ತಿಕನು ವಿಚಾರಮಗ್ನನಾಗಿದ್ದನು. ಆಹಾ ಅವನ ಮನಸ್ಸಿನಲ್ಲಿ ಏನು ನಡೆದಿತ್ತು ?

# ೮

ನಾಗಾನಂದನು ವತ್ಸಲೆಯ ಹೊಲದಲ್ಲಿ ವಾಸಿಸುತ್ತಿದ್ದನು. ಅದನ್ನು ಅವನು ಒಂದು ಸುಂದರವಾದ ಉಪವನವನ್ನಾಗಿ ನಿರ್ಮಿಸಿದ್ದನು. ಒಂದು ವಿಶಾಲವಾದ ಭಾವಿಯನ್ನು ತೋಡಿದ್ದನು. ಅದಕ್ಕೆ ದೊಡ್ಡ ಸವಿನೀರಿನ ಸೆಲೆಯು ಬಿದ್ದಿತ್ತು. ನೀರು ವಿಪುಲವಾಗಿತ್ತು. ಅದಕ್ಕೆ ಒಂದು ಕೈರಾಟೆಯನ್ನು ಕೂಡಿಸಿದ್ದನು. ಆ ಹೊಲದಲ್ಲಿ ತೀರ ಸಾದಾ, ಆದರೆ ಸುಂದರವಾದ ಒಂದು ಗುಡಿಸಲವನ್ನು ಹಾಕಿದ್ದನು. ದಿನವೆಲ್ಲ ಹೊಲದಲ್ಲಿ ದುಡಿಯುತ್ತಿದ್ದನು. ಭೂಮಿಯು ಬಹಳ ಬೆಳೆಯುಳ್ಳದ್ದಿತ್ತು. ಅದರಲ್ಲಿ ಬಂಗಾರವನ್ನು ಬೆಳೆಯ ಬಹುದಾಗಿತ್ತು. ನಾಗಾನಂದನು ಕಾವಲಿಗುಂಟ ಅನೇಕ ಹೂವಿನಗಿಡಗಳನ್ನು ಹಚ್ಚಿದ್ದನು. ಪಲ್ಲೆಕಾಯಿಗಳನ್ನು ನೆಟ್ಟಿದ್ದನು. ಹತ್ತರವೇ ಒಂದೆಡೆಯಲ್ಲಿ ಆಕಳ ಕೊಟ್ಟಿಗೆಯಿತ್ತು. ಆಕಳುಗಳ ಯೋಗಕ್ಷೇಮವನ್ನು ಸ್ವತಃ ನೋಡುತ್ತಿದ್ದನು. ಗೋಗಳಿಗೆ ಹುಲ್ಲು ತಿನಿಸುತ್ತಿದ್ದನು. ಹೂವಿನ ಮಾಲೆಮಾಡಿ ಅವುಗಳ ಕೊರಳಿಗೆ ಹಾಕುತ್ತಿದ್ದನು. ಗೋಪಾಲ ಕೃಷ್ಣನ ಅನೇಕ ಹೃದಯಂಗಮ ಕಥೆಗಳನ್ನು ಅವನು ಕೇಳಿದ್ದನು. ಅದರಂತೆಯೇ ಅವನು ಆಕಳಗಳೊಡನೆ ಆಡುತ್ತಿದ್ದನು. ಆಕಳುಗಳನ್ನೆಲ್ಲ ಒಂದೆಡೆ ಸೇರಿಸುವನು. ಕೊಳಲನ್ನು ಊದುವನು. ಅವುಗಳನ್ನು ಕಾಯ್ದು ಕೊಂಡು ಮನೆಗೆ ಬರುವನು. ಒಂದು ವೇಳೆ ಅವೆಲ್ಲವೂ ಒಂದೆಡೆಯಲ್ಲಿ ಸೇರದಿದ್ದರೆ ಕೊಳಲನ್ನೂದುತ್ತ ಸಂಚರಿಸುವನು. ಒಮ್ಮೊಮ್ಮೆ ಒಂದು ಗಿಡದ ಬುಡದಲ್ಲಿ ಕುಳಿತು, ಕೊಳಲನ್ನೂದಿದನೆಂದರೆ ಸೃಷ್ಟಿಯೆಲ್ಲವೂ ಮೈಮರಿಯುತ್ತಿತ್ತು.

ಹೊಲವು ವತ್ಸಲೆಯ ಮನೆಯಿಂದ ಸ್ವಲ್ಪ ದೂರದಲ್ಲಿತ್ತು. ನಾಗಾನಂದನು ದಿನಾಲು ಬೆಳಿಗ್ಗೆ ಹೂಗಳನ್ನೂ ಕಾಯಿ ಪಲ್ಲೆಗಳನ್ನೂ ವತ್ಸಲೆಯ ಮನೆಗೆ ಒಯ್ದು ಕೊಡುತ್ತಿದ್ದನು. ಹಾಲನ್ನೊಯ್ಯುತ್ತಿದ್ದನು. ಆದರೆ ಒಂದು ದಿವಸ ಇನ್ನೂ ಬೆಳಗಾಗಿದ್ದಿಲ್ಲ. ವತ್ಸಲೆಯು ಹೊಲಕ್ಕೆ ಬಂದಳು. ಆದು ಆಶ್ವೀನ ಮಾಸ. ಹುಲ್ಲು ಎತ್ತರವಾಗಿ ಬೆಳೆದಿತ್ತು. ಇಬ್ಬನ್ನಿಯಿಂದ ಆದೆಲ್ಲವೂ ತೊಯ್ದಿತ್ತು. ಆ ತೊಯ್ದ ಹುಲ್ಲಿನಲ್ಲಿಯೇ ಆಕೆ ಬಂದಳು. ನಾಗಾನಂದನು ಆಕಳ ಹಿಂಡುತ್ತಿದ್ದನು. ವತ್ಸಲೆಯು ಎದುರಿಗೆ ಬಂದು ನಿಂತಳು. ಆಕಳವು ಕರವನ್ನು ನೆಕ್ಕುತ್ತಿತ್ತು.

“ ಎಲ್ಲ ಹಾಲನ್ನು ಹಿಂಡಬೇಡಿರಿ. ಕರಕ್ಕಷ್ಟು ಉಳಿಯಲಿ. ” ಎಂದಳು.

“ ವತ್ಸಲೆಗೇ ಕರದ ಬಗೆಗೆ ಚಿಂತೆ ” ಎಂದನು.

“ ನಿಮಗೆ ಆನಿಸುವದಿಲ್ಲವೆಂದು ನಾನು ಅನ್ನಲಿಲ್ಲ ! ” ಎಂದಳು.

“ ವತ್ಸಲೇ ನಾನು ಎರಡು ಮೊಲೆಗಳನ್ನು ಕರಕ್ಕಾಗಿ ಬಿಡುವೆ. ಎರಡನ್ನೇ ಹಿಂಡುವೆ ” ಎಂದನು.

ವತ್ಸಲೆಯು ಕಾಲುವೆಯ ದಂಡೆಯ ಮೇಲಿರುವ ಹಸಿರು ಹುಲ್ಲನ್ನು ಕಿತ್ತು ತಂದು ಆಕಳಿಗೆ ಹಾಕಿದಳು. ಆಕಳು ಆನಂದದಿಂದ ಅದನ್ನು ತಿನ್ನ ಹತ್ತಿತು. ಆಕೆಯು ಆಕಳದ ಕುತ್ತಿಗೆಗೆ ಕೈ ಚಾಚಿದಳು. ಅದು ಮೋರೆಯನ್ನು ಮೇಲಕ್ಕೆತ್ತಿತು.

“ ಪಶುಗಳಿಗೂ ಕೂಡಾ, ಪ್ರೇಮವುಳ್ಳ ಮನುಷ್ಯರು ಬೇಕಾಗುತ್ತಾರೆ ” ಎಂದನು ನಾಗಾನಂದ.

“ ಆದರೆ ಮನುಷ್ಯರಿಗೆ ಬೇಡ ” ಎಂದಳು ವತ್ಸಲೆ.

“ ನೀನು ಇಂದು ಇಷ್ಟು ಬೆಳಿಗ್ಗೆ ಏಕೆ ಬಂದೆ ? ನಿನ್ನ ಸೀರೆಯೆಲ್ಲ ತೊಯ್ದು ಹೋಗಿದೆ. ಹುಲ್ಲಿನ ಊಬು ನಟ್ಟಿರಬಹುದು. ನಾನು ಬೆಳಿಗ್ಗೆ ದಿನಾಲು ನಿಮ್ಮ ಕಡೆಗೆ ಬರುವೆ. ದಿನಾಲು ನನ್ನ ಕಾಲುಗಳು ತೊಯ್ದು ಹೋಗುತ್ತವೆ. ಏನು, ಆ ಹುಲ್ಲು ಅಳುತ್ತಿದೆಯೇ ? ನನ್ನನ್ನು ಇನ್ನು ಮೇಲೆ ಬೇಗನೆ ಕೊಯ್ಯುವರೆಂದು ಅದಕ್ಕೆ ಚಿಂತೆಯೇ ? ಅಂತೆಯೇ ಅದಕ್ಕಷ್ಟು ಕಣ್ಣೀರೇನು ? ಆ ಎಲ್ಲ ಹುಲ್ಲು ಪ್ರತಿಯೊಬ್ಬರ ಪಾದದ ಮೇಲೆ

ಬಿದ್ದು ಅಳುತ್ತಿರುತ್ತದೆ. ದಿನಾಲು ನಾನು ಬರುವಮುಂದೆ ಅಳುತ್ತ, ನನ್ನ ಪಾದಕ್ಕೆ ಎರಗುವದು. ಆದರೆ ಅವುಗಳನ್ನು ತುಳಿದು ನಾನು ಬರಬೇಕಾಗುವದು." ಎಂದನು ನಾಗಾನಂದ.

"ನಿಮ್ಮ ಕಾಲು ಬೀಳುವವರನ್ನು ನೀನು ತುಳಿಯುವಿಯಾ? ಅವರನ್ನು ಅಳಿಸುವಿಯಾ? ನಾಗರು ಇಷ್ಟು ನಿಷ್ಠುರರಿರುವರೋ?" ಎಂದು ಅವನ ಕಡೆಗೆ ನೋಡುತ್ತ ವತ್ಸಲೆ ನುಡಿದಳು.

"ಆದರೆ ನೀನು ಇಂದು ಬೆಳಗಾಗುವದರೊಳಗಾಗಿಯೇ ಏಕೆ ಬಂದೆ?" ಎಂದು ನಾಗಾನಂದನು ವಿಚಾರಿಸಿದನು.

"ಹೊಲದ ಸೌಂದರ್ಯವನ್ನು ನೋಡಲು ಬಂದೆ. ಸೂರ್ಯೋದಯದ ಶೋಭೆಯನ್ನು ಕಾಣಲು ಬಂದೆ. ಆಶ್ರಮದಲ್ಲಿದ್ದಾಗ ನಾನು ಬೆಳಿಗ್ಗೆ ಏಳುತ್ತಿದ್ದೆ. ಇಬ್ಬನ್ನಿಯ ಹಾರವನ್ನು ಹಾಕಿಕೊಂಡು ನಗುತ್ತ ಬರಲಿರುವ, ಉಷಾದೇವಿಯನ್ನು ನೋಡುತ್ತಲಿದ್ದೆ. ಆದರೆ ಮನೆಯನ್ನು ಸೇರಿದ ನಂತರ ಹಾಸಿಗೆಯಲ್ಲಿಯೇ ಹೊರಳಾಡುತ್ತೇನೆ. ಇಂದು ಆಲಸ್ಯವನ್ನು ಕಿತ್ತೊಗೆದೆ. ಪ್ರಭಾತದ ಮಂದಮಾರುತವು ನವಜೀವನವನ್ನು ನನಗೆ ಕೊಡುತ್ತಲಿತ್ತು. ನನಗೆ ಉತ್ಸಾಹವೆನಿಸಿತು. ದಿನಾಲು ಬೆಳಿಗ್ಗೆ ಏಳಬೇಕು. ಇಲ್ಲಿಗೆ ಬರಬೇಕು ಎನಿಸಿತು. ದಿನಾಲು ನೀವು ಹಾಲು, ಹೂವು, ಹಣ್ಣುಹಂಪಲಗಳನ್ನು ತೆಗೆದುಕೊಂಡು ಬರುವದಕ್ಕಿಂತ ನಾನೇ ಇಲ್ಲಿಗೆ ಬಂದು ಒಯ್ಯುವೆನು. ನನಗೂ ಸ್ವಲ್ಪ ಕೆಲಸವನ್ನು ಮಾಡಗೊಡಿರಿ. ನೀವು ಹೂಗಳನ್ನು ಬುಟ್ಟಿಯಲ್ಲಿ ತುಂಬಿಡಿರಿ. ಹಾಲನ್ನು ಪಾತ್ರೆಯಲ್ಲಿ ಹಿಂಡಿ ಇಡಿರಿ. ನಾನು ಬಂದು ಒಯ್ಯುವೆ. ನಿಮ್ಮ ಕೈಯಲ್ಲಿಯ ಹೂಗಳನ್ನು ನಾನು ಒಯ್ಯುವೆ. ತಲೆಯಲ್ಲಿ ಮುಡಿಯುವೆ. ನೀವು ಆಕಳುಗಳ ಕೊರಳಲ್ಲಿ ಮಾಲೆಯನ್ನು ಹಾಕುತ್ತೀರಿ. ಆಗ ವತ್ಸಲೆಯ ಕೊರಳು ನಿಮಗೇಕೆ ನೆನಪಾಗುವದಿಲ್ಲ? ನನ್ನ ಕೊರಳು ಏಕೆ ಕೀಳು? ಇಗೋ ನೋಡಿರಿ, ಶಂಖದ ಹಾಗೆ ಹೇಗೆ ಶುಭ್ರವಾಗಿ ಇದೆ, ನನ್ನ ಕೊರಳು. ಹಾಕಿರಿ, ಮಾಲೆಯನ್ನು ನನ್ನ ಕೊರಳಲ್ಲಿ. ನನ್ನ ಕೊರಳಿಗೆ ಮಾಲೆಯನ್ನು ಯಾರು ಹಾಕುವರು? ನಿಮ್ಮ ಕೊರಳಿಗೆ ಹಾಕಬೇಕೆಂದು ಅಂದು ನಾನು ಮಾಲೆಯನ್ನು ಹೆಣೆದಿದ್ದೆ. ಆದರೆ ನೀವು

ಹೇಳದೆ ಕೇಳದೆ ಹೋಗಿಬಿಟ್ಟಿರಿ. ಆ ಹಾರವನ್ನು ಗೂಟಕ್ಕೆ ಹಾಕಿದ್ದೆ. ನಿಮ್ಮ ಸಲುವಾಗಿ ನಾನು ಹೆಣೆದ ಮೊದಲನೇ ಹಾರವದು. ನನ್ನ ಹೃದಯದ ಕೋಮಲತೆಯನ್ನೂ ಮಾಧುರ್ಯವನ್ನೂ ಅದರಲ್ಲಿ ಸುರುವಿದ್ದೆ. ಆದರೆ ಅದು ಒಣಗಿಹೋಯಿತು. ನಂತರ ನಾನು ಪ್ರತಿದಿನ ಹಾರವನ್ನು ಕಟ್ಟುವೆ. ಹಾಗು ಕಪೋತಾಕ್ಷಿಗೆ ಒಪ್ಪಿಸುವೆ. ಈ ನದಿ ಕಪೋತಾಕ್ಷಿಯು ಹೇಗಾದರೂ ಮಾಡಿ ನಿಮಗೆ, ಈ ಹಾರಗಳನ್ನು ಒಪ್ಪಿಸುವಳು ಎಂದು ಅನಿಸಿತು ” ಎಂದು ವತ್ಸಲೆಯು ಸುಮ್ಮನಾದಳು. ಮುಂದೆ ಆಕೆಗೆ ಮಾತನಾಡುವದು ಆಗಲಿಲ್ಲ.

‘ ನಾನು ಒಂದು ದಿನ ಕಪೋತಾಕ್ಷಿಯ ಪ್ರವಾಹದಲ್ಲಿ ಮುಳುಗಿದ್ದೆ. ನಿಜವಾದ ಹಾರವು ಬಂದಿತು. ತಾಯಿ, ಕಪೋತಾಕ್ಷಿಯ ಪ್ರೇಮ ಪ್ರವಾಹದಲ್ಲಿ ನಾನು ಮುಳುಗಿದ್ದೆ. ನಾನು ಅಂಗಾತ ಈಸುತ್ತಿದ್ದೆ. ಸೂರ್ಯಕಿರಣಗಳು ಮುಖದ ಮೇಲೆ, ಕುಣಿಯುತ್ತಿದ್ದವು. ಕೆಳಗೆ ತೆರೆಗಳು ನನ್ನನ್ನು ಕುಣಿಸುತ್ತಿದ್ದವು. ಒಮ್ಮೆಲೆ ತಲೆಯ ಕೂದಲಲ್ಲಿ ಏನೋ ಸಿಕ್ಕಂತಾಯಿತು. ಹಾವು ಇರಬಹುದೇ ? ಎಂದು ಗಾಬರಿಯಾದೆ. ನಾನು ನಾಗಪೂಜಕನಿದ್ದರೂ ಅಂಜಿಕೆಬಂದಿತು. ನಮಗೆ ಶ್ರದ್ಧೆಯೆಲ್ಲಿ ? ಒಮ್ಮೆಲೆ ನಾನು ಡಬ್ಬಬಿದ್ದೆ. ತಲೆಯಮೇಲೆ ಕೈಯಾಡಿಸಿದೆ. ಅದು ಹಾವು ಇರದೆ ಹೂಗಳ ಸುಂದರವಾದ ಹಾರವಿದ್ದಿತು. ನಾನು ಅದನ್ನು ತೆಗೆದುಕೊಂಡು ಮೇಲೆ ಬಂದೆ. ಅದನ್ನು ಮೂಸಿದೆ, ಎದೆಗೆ ಒತ್ತಿಕೊಂಡೆ, ಹೃದಯಕ್ಕೆ ಅವಚಿಕೊಂಡು ನಾನು ಎಷ್ಟು ಹೊತ್ತು ನಿಂತಿದ್ದೆನೋ ದೇವರಿಗೇ ಗೊತ್ತು ” ಎಂದು ನಾಗಾನಂದನು ತನ್ನ ನೆನಪನ್ನು ಹೇಳಿದನು.

ಇಬ್ಬರೂ ಮಾತನಾಡಲಿಲ್ಲ. ಮೌನರಾಗಿದ್ದರು. ಇಬ್ಬರ ಮನಸ್ಸೂ ತುಂಬಿತ್ತು.

‘ ವತ್ಸಲೇ ಇದೇ ಹಿಂಡಿದ ಹಾಲನ್ನು ತೆಗೆದು ಕೊಳ್ಳುವಿಯಾ ? ಧಾರೋಷ್ಣ ಹಾಲು, ಎರಿದು ಅವನು ವಿಚಾರಿಸಿದನು.

‘ ಹಿಂದಕ್ಕೆ ಕಾರ್ತೀಕನು ಮಧುವಿನಕೊಡ ತಂದಿದ್ದ. ಇಂದು ನೀವು ಹಾಲಿನ ಪಾತ್ರೆಯನ್ನು ಮುಂದೆ ಮಾಡಿದ್ದೀರಿ. ವತ್ಸಲೆಗೆ ಈ ರಸವು ಬೇಡ

ಇದರ ಹಸಿವೆ ನನಗಿಲ್ಲ. ನನಗೆ ಬೇಕಾಗಿದೆ ಇನ್ನೊಂದು ರಸ. ಅದಕ್ಕಾಗಿ ನಾನು ಆತುರಳಾಗಿರುವೆ." ಎಂದಳು.

"ನೋಡು! ಬಾಳೆಯ ದೊನ್ನೆಯನ್ನು ಹಚ್ಚಿ ಹಾಲು ತಂದಿರುವೆ. ಹಾಲು ತೆಗೆದುಕೋ. ಒಲ್ಲೆವೆನಬೇಡ, ಗೋಮಾತೆ ಸಿಟ್ಟಾದಾಳು. ಹಾಲು ಒಲ್ಲೆವೆನಬಾರದು" ಎಂದನು.

'ನೀವೂ ನನ್ನೊಡನೆ ತೆಗೆದುಕೊಳ್ಳುವಿರಾ?" ಎಂದಳು.

'ಒಳ್ಳೇದು, ತೆಗೆದುಕೊಳ್ಳುವೆ. ನಾಗರಿಗೆ ಹಾಲಿಗಿಂತ ಪ್ರಿಯವಾದ ಪೇಯ ಮತ್ತೊಂದಿಲ್ಲ. ಆಕಳಕರವಿನಂತೆ ಆಗಿ, ಹಾಲು ಕುಡಿಯಬೇಕೆಂದು ಒಮ್ಮೊಮ್ಮೆ ಅನಿಸುವದು. ಹಾಲು ಕುಡಿಯಬೇಕು, ಮತ್ತನಾಗಬೇಕು. ಎಂದೆನಿಸುತ್ತದೆ. ಅಂದು ಸುಶ್ರುತೆಯು, 'ಹಾಲನ್ನು ನಿನಗೆ ಸಾಕಾಗು ವಷ್ಟು ಕುಡಿ, ಉಳಿದುದನ್ನು ತೆಗೆದುಕೊಂಡು ಬಾ, ಎಂದು ಹೇಳಿದ್ದಳು. ಚಿಕ್ಕಂದಿನಲ್ಲಿ ತಾಯಿಯ ಹಾಲು, ಬೆಳೆದ ಮೇಲೆ, ಗೋಮಾತೆಯ ಹಾಲು! ನಾಗದೇವನಿಗೆ ನಾವು ಹಾಲಿನ ನೈವೇದ್ಯವನ್ನೇ ಇಡುತ್ತೇವೆ" ಎಂದನು.

"ಹಾಲು ಕುಡಿದು ವಿಷವನ್ನು ಸಿದ್ಧಪಡಿಸುವದಿಲ್ಲವೇ" ಎಂದಳು ವತ್ಸಲೆಯು.

"ಆದರೆ ಜಾತಿವಂತ ನಾಗವು, ಆ ವಿಷವನ್ನು ಕ್ವಚಿತ್ತಾಗಿ ಉಪಯೋಗಿ ತ್ತದೆ. ನಿಜವಾದ ನಾಗವು ನಿಜವಾದ ಸನ್ಯಾಸಿ. ಅದು ತಪಸ್ವಿ. ಅದು ಎಷ್ಟು ಸ್ವಚ್ಛ ಹಾಗು ಉಜ್ವಲ! ಎಷ್ಟು ನಿರ್ಮಲ! ಅದಕ್ಕೆ ಎಳ್ಳು ಕಾಳಿ ನಷ್ಟು ಕೂಡ ಹೊಲಸು ಸಹನವಾಗುವದಿಲ್ಲ. ತನ್ನ ಶರೀರವು ಸ್ವಲ್ಪ ಹೊಲಸು ಕಾಣಹತ್ತಿದರೆ, ಅದನ್ನು ಅದು ತೆಗೆದೊಗೆಯುತ್ತದೆ. ಆ ಸಮಯದಲ್ಲಿ ಅದಕ್ಕೆ ಎಷ್ಟೋ ವೇದನೆಯಾಗುತ್ತದೆ. ಆದರೆ ಹೊಸ, ಸುಂದರ ತೇಜಸ್ವೀ ಶರೀರವು ಬರಬೇಕೆಂದು ಅವೆಲ್ಲವನ್ನೂ ಅದು ಸಹನ ಮಾಡುತ್ತದೆ ವೇದನೆಯಿಲ್ಲದೆ ಯಾವ ಸುಂದರ ವಸ್ತುವೂ ದೊರೆಯುವ ದಿಲ್ಲ. ವೇದನೆಯಿಂದಲೇ ಸೌಂದರ್ಯ, ವೇದನೆಯಿಂದಲೇ ವೇದ! ಎಲ್ಲ ವೇದನೆಯಿಂದಲೇ ಹೊರಬರುವದು. ಒಬ್ಬ ರಮಣಿಗೆ ದುಃಖವಾಗುತ್ತದೆ. ಆದರೆ ಆಕೆಯ ಕಣ್ಣುಗಳಿಂದ ಸುಂದರವಾದ ಮುತ್ತುಗಳು ಉದುರುತ್ತವೆ.

ಯಾವುದರಿಂದ ಸೃಷ್ಟಿಯೇ ಕರುಣಾಮಯವಾಗುವದೋ ಆ ಅಶ್ರುಗಳಿಂದಲೇ ಪ್ರೇಮವು ಅಂಕುರಿಸುವದು. ರೈತನಿಗೆ ಕಷ್ಟವಾಗುವದು. ಆವನು ಬೆವರಿನಿಂದ ಸ್ನಾನ ಮಾಡುವನು. ಆದರಿಂದ ಪೃಥ್ವಿಯು ಸಸ್ಯಶ್ಯಾಮಲೆಯಾಗಿ–ಸುಂದರಳಾಗಿ ಕಾಣುತ್ತಾಳೆ! ವೇದನೆಯೇ ನವನಿರ್ಮಿತಿಯ ಜನನಿ" ಎಂದನು.

"ನಡೆಯಲಿ ನಿಮ್ಮ ನಾಗಪುರಾಣ, ವೇದನಾ ಪುರಾಣ!" ಎಂದಳು.

"ವತ್ಸಲೇ, ನಾಗರ ಹಾಡನ್ನು ಹಾಡುತ್ತಲೇ ಇರಬೇಕೆಂದು ನನಗೆನಿಸುತ್ತದೆ. ನೋಡು! ಆ ಹಾವು ಕೇವಲ ವಾಯು ಸೇವನೆಯಿಂದ ಜೀವಿಸುತ್ತದೆ. ಎಲ್ಲರಿಂದ ದೂರವಿರುತ್ತದೆ. ಚಂದನದಸುಗಂಧ, ಹೂಗಳಪರಿಮಳ, ಮಧುರವಾದ ಸಂಗೀತ, ಅದಕ್ಕೆ ಬಹುಪ್ರಿಯ. ಸುಂದರ ಹಾಗು ಮಂಗಲ, ಸುಗಂಧ ಹಾಗು ನಿರ್ಮಲ ವಸ್ತುಗಳಿದ್ದಲ್ಲಿ ಅದು ಹೋಗುವದು. ಅಲ್ಲಿ ತನ್ನ ಹೆಡೆಯನ್ನು ಅರಳಿಸಿ ಆಡುವದು. ಅಂಥ, ಇಂಥ ತೊಂದರೆಗಳಿಗೆ ಅದು ಸಂತಾಪಗೊಳ್ಳುವದಿಲ್ಲ. ಆದರೆ ಒಮ್ಮೆ ಸಿಟ್ಟಿಗೆದ್ದರೆ ತೀರಿತು. ಒಂದೇ ಕಡಿತದಿಂದ ಮುಗಿಸಿಯೇ ಬಿಡುವದು. ಆದರ ವಿಷವೆಂದರೆ ಅದರ ಸಾಮರ್ಥ್ಯ! ಅದನ್ನು ಅದು ಎಂದೂ ವ್ಯರ್ಥವಾಗಿ ಹಾಳು ಮಾಡುವದಿಲ್ಲ. ಮರಣಾಂತಿಕ ಪ್ರಸಂಗದ ಹೊರ್ತು ಆದು ಕಚ್ಚುವದಿಲ್ಲ. ಅದು ಸಂಯಮಿ ಇದೆ. ಅದುದರಿಂದಲೇ ನಿಶ್ಚಿತವಾದ ಅಮೋಘವಾದ ಸಾಮರ್ಥ್ಯವು ಆದರಲ್ಲಿದೆ." ನಾಗಾನಂದನು ನಾಗಸ್ತುತಿಯನ್ನು ಮಾಡುತ್ತಲೇ ಇದ್ದನು.

'ಹಾಲು ಕೊಡುವದಿಲ್ಲವೇ, ಎಂದಳು.

'ತೆಗೆದುಕೋ ಈ ದೊನ್ನೆಯನ್ನು. ಈ ನೊರೆ ಹಾಲು ಹೇಗಿದೆ?, ಎಂದನು.

ಇಬ್ಬರೂ ಹಾಲು ಕುಡಿದರು. ವತ್ಸಲೆಯು ಗುಡಿಸಲೊಳಗೆ ನೋಡಹತ್ತಿದಳು. ಅಲ್ಲಿ ಬಹಳ ಸಾಮಾನಗಳಿರಲಿಲ್ಲ. ಎರಡು ಕಂಬಳಿ, ಹುಲ್ಲಿನ ಬುಟ್ಟಿ, ಸುಂದರವಾದ ಕೊಳಲು ಮಾತ್ರ ಕಂಡವು.

'ನಿಮಗೆ ಕೊಳಲು ಊದಲು ಬರುವದೇ?'

'ಬರುತ್ತದೆ.'

'ನಿಮಗೆ ಯಾರು ಕಲಿಸಿದರು ?'

'ನದಿಗಳಿಂದಲೂ, ಎಲೆಗಳ ಸಪ್ಪಳದಿಂದಲೂ, ಪಕ್ಷಿಗಳ ಕಲಕಲ ಧ್ವನಿಗಳಿಂದಲೂ ಕಲಿತೆ. ಸೃಷ್ಟಿಯೇ ನನ್ನ ಗುರುವು'

'ನಾನು ಕೊಳಲು ಕೇಳುವೆ, ಸ್ವಲ್ಪ ಊದುವಿರಾ.' ಎಂದು ಲಜ್ಜಿತಳಾಗಿ ನುಡಿದಳು.'

'ನಿನ್ನ ಧ್ವನಿಯೇ ಕೊಳಲಧ್ವನಿ, ನಿನ್ನ ಮಾತುಗಳೆಷ್ಟು ಮಧುರವಾಗಿವೆ ! ತುಟಿಗಳ ಕೊಳಲಿನಿಂದ, ಹೃದಯದ ಸಂಗೀತವು ಹೊರಬರುತ್ತಲಿದೆ. ಇದೇ ನಿಜವಾದ ವೇಣುನಾದ' ಎಂದನು.

'ಕೊಂಕು ಮಾತು ನನಗೆ ಬೇಡ. ಕೊಳಲು ಊದಿರಿ.' ಎಂದು ನಾಚುತ್ತ ರೇಗುತ್ತ ನುಡಿದಳು.

'ಆದರೆ ಮೊದಲು ಇನ್ನಷ್ಟು ಹಾಲು ಕುಡಿ', ಎಂದನು.

'ನನಗೆ ಅಜೀರ್ಣವಾದೀತು. ಬೇಡ' ಎಂದಳು.

"ಕೊಳಲು ಕೇಳಿ ಎಲ್ಲವೂ ಜೀರ್ಣವಾಗುವದು. ಅದನ್ನು ಕೇಳುವಾಗ ಹೊರಜಗತ್ತಿನ ಸ್ಮೃತಿಯೇ ನಿನಗುಳಿಯುವದಿಲ್ಲ. ತಿನ್ನುಣ್ಣುವ ಮಾತಂತೂ ದೂರೇ ಉಳಿಯಿತು. ಭಾವನೆಗಳ ಭಾರ ಸಹನೆಯಾಗಲಿಕ್ಕಿಲ್ಲ. ಆದುದರಿಂದ ಮೊದಲೇ ಸ್ವಲ್ಪ ಹಾಲು ತೆಗೆದುಕೊಂಡು ಕೂಡು. ಅಂದರೆ ತಾಳಲು ಶಕ್ತಿ ಬರುವದು. ನನ್ನ ಮಾತು ಕೇಳು" ಎಂದನು.

'ನಾನು ಅಂತಹ ದುರ್ಬಲಳಲ್ಲ. ಇಷ್ಟು ದಿನಗಳ ವರೆಗೆ ನಾನು ಸಹಿಸಿದ ಭಾರಕ್ಕಿಂತ ಹೆಚ್ಚಿನ ಭಾರವು, ಈ ಜಗತ್ತಿನಲ್ಲಿ ಮತ್ತಾವುದಿದೆ. ? ಊದಿರಿ ಕೊಳಲನ್ನು ಬೇಗನೆ. ನಾನು ಅಧೀರಳಾಗಿದ್ದೇನೆ. ಗಂಡಸರು ಯಾವಾಗಲೂ ಕೊನೆಯ ಪರೀಕ್ಷೆಯನ್ನೇ ನೋಡುತ್ತಾರೆ, ಎಂದಳು.

'ಅವನು ಕೊಳಲನ್ನು ಕೈಯಲ್ಲಿ ತೆಗೆದುಕೊಂಡನು. ಒಂದೆರಡು ಸ್ವರ ನುಡಿಸಿ, ಅದನ್ನು ಒರಿಸಿದನು. ಏನು ಹೇಳಲಿ! ಸರ್ವಸೃಷ್ಟಿಗೆ ಅವನು ಆಮಂತ್ರಣವನ್ನಿತ್ತ. ಪಕ್ಷಿಗಳು ಹಾರುತ್ತ ಹಾರುತ್ತ ಕೇಳಲು ಹತ್ತರವೇ ಬಂದು ಕುಳಿತವು. ನಾನಾ ವರ್ಣದ ಪಕ್ಷಿಗಳು. ಅದೆಷ್ಟು ಚಂದ! ಗೋಗಳು ನಿಂತಲ್ಲಿಯೇ ಕಿವಿಗೊಟ್ಟವು ವೇಣು ನಾದಕ್ಕೆ. ಧ್ವನಿ ಬರುವತ್ತ

ಕರಗಳು ಮುಖ ತಿರುವಿ, ಗೋಣು ಮೇಲಕ್ಕೆತ್ತಿ ಆಲಿಸಹತ್ತಿದವು ವತ್ಸ ಲೆಯು ಶೀರೆಯನ್ನು ಸರಿಪಡಿಸಿಕೊಂಡು ಕುಳಿತಳು. ನಾಗಾನಂದನು ನುಡಿಸ ಹತ್ತಿದನು. ದಿವ್ಯವಾದ ಆಲಾಪವನ್ನು ಪ್ರಾರಂಭಿಸಿದ. ಅದು ಒಂದು ಪ್ರಸಿದ್ಧ ಪ್ರೇಮಗೀತವಾಗಿತ್ತು. ಕಪೋತಾಕ್ಷಿಯ ತೀರದಲ್ಲಿಯ ಸ್ತ್ರೀಯರ ನಾಲಗೆಯ ಮೇಲೆಲ್ಲ ಆ ಹಾಡು ಕುಣಿಯುತ್ತಿತ್ತು. ಆ ಹಾಡಿನಲ್ಲೇನಿತ್ತು ? ಆದರ ಭಾವಾರ್ಥವನ್ನು ಸ್ವಲ್ಪ ಹೇಳಲಾ ! ಆದರ ಪೂರ್ಣ ಅರ್ಥವನ್ನು ವಿವರಿಸುವದು ಶಕ್ತಿಯ ಹೊರಗಿನದು. ಅದು ಸ್ವಯಂ ವೇದ್ಯ. ಪುಷ್ಪಗಳ ಪರಿಮಳವನ್ನು ತಿಳಿಸಿ ಹೇಳಲು ಶಕ್ಯವೇ ? ಸಕ್ಕರಿಯ ಸವಿಯು ವ್ಯಾಖ್ಯಾನ ದಿಂದ ತಿಳಿಯುವದೇ? ಹಾಗೆಯೇ ಕಾವ್ಯದ್ದು! ಅದನ್ನು ಸವಿದೇ ತಿಳಿಯ ಬೇಕು. ಆದರೂ ಸ್ವಲ್ಪ ಹೇಳುವೆ.

'ಭೋಳೆ ಕಣ್ಣುಗಳೇ ! ನೀವು ಅವರ ಕಡೆಗೆ ಏಕೆ ನೋಡಿದಿರಿ ? ನೋಡಬೇಡಿರಿ! ನೋಡಬೇಡಿರಿ! ಎಂದು ಮೊದಲೇ ಹೇಳಲಿಲ್ಲವೇ! ಆದರೆ ನೀವು ಕೇಳಲಿಲ್ಲ. ಅವರ ಮೇಲೆ ವಿಶ್ವಾಸವಿಟ್ಟಿರಿ. ಮೋಸ ಹೋದಿರಿ. ಅಳಿರಿ, ಈಗ ಜನ್ಮವಿರುವತನಕ. ಅಳಿರಿ, ಈಗ ಹಗಲರಾತ್ರಿ.

ಅಧೀರ ಹುಚ್ಚು ಹೃದಯವೇ ! ಅವರಿಗೆ ಸ್ಥಳವನ್ನು ಕೊಡಬೇಡ ವೆಂದು ಪದೇ ಪದೇ ಹೇಳಲಿಲ್ಲವೆ ನಿನಗೆ ! ಆದರೆ ಕೇಳಲಿಲ್ಲ. ಆದರೆ ಈಗ ಮುಳ್ಳು ಒಂದೇಸವನೆ ಚುಚ್ಚುತ್ತಿದೆ. ಎಂದು ಅಳುತ್ತ ಕೂತಿರುವೆ. ಅಳಿರಿ. ಈಗ ಜನ್ಮವಿರುವತನಕ. ಅಳಿರಿ, ಈಗ ಹಗಲುರಾತ್ರಿ.

ಎಲೆ ಕೈಗಳೇ! ಸೊರಗಿರುವೆವೆಂದು ಈಗ ಶೋಕಿಸುತ್ತಿರುವಿರಿ! ಆದರೆ ಘಟ್ಟಿಯಾಗಿ ಹಿಡಿದುಕೊಂಡು ಕೂಡುವದರಲ್ಲಿ ಶಕ್ತಿಯನ್ನೆಲ್ಲ ಕಳೆಯಬೇಡಿ ರೆಂದು ಮೊದಲೇ ಹೇಳಲಿಲ್ಲವೇ? ಆಗ ಕೇಳಲಿಲ್ಲ. ಬಿಗಿಯಾಗಿ ಅಪ್ಪಿ ಕೊಂಡಿರಿ. ಆದರೆ ಈಗ ಒಣಗಿಹೋದವು.

ಎದೆಯು ಹಾರುತ್ತವೆ. ಕಣ್ಣುಗಳು ನೀರು ಸುರಿಸುತ್ತಿವೆ. ಕೈಯಲ್ಲಿಯ ಕಂಕಣಗಳು ಕಳಚುತ್ತಿವೆ. ಆದರೆ ಜೀವನವೇ ಏಕೆ ಒಮ್ಮೆಲೆ ಹಾರಿ ಹೋಗ ಲೊಲ್ಲದು?

ಆದರೆ ಅವರು ಸ್ವಪ್ನದಲ್ಲಿ ಬರುವರು. ಕಣ್ಣೆದುರು ನಿಲ್ಲುವರು. ಮನ ಮೋಹಕ ಮಾತುಗಳನ್ನಾಡುವರು. ಆಲಿಂಗಿಸುವರು. ಇಂತಹ ಸ್ವಪ್ನವು ಚಿರಂಜೀವಿ ಏಕೆ ಆಗಬಾರದು? ಮಂಜು, ಸೂರ್ಯನನ್ನು ಹೊಟ್ಟೆಯಲ್ಲಿಟ್ಟು ಕೊಳ್ಳುವಂತೆ, ಸ್ವಪ್ನವೂ ಆ ಮೂರ್ತಿಯನ್ನು ಅಡಗಿಸಿಡುವದು. ಇಬ್ಬನ್ನಿಯು ಕರಗುವಂತೆ, ಈ ಸ್ವಪ್ನವೂ ಮಾಯವಾಗುತ್ತದೆ. ನಿದ್ರೆಯಲ್ಲಿ ಆನಂದವೀಯುವ ಸುಖಸ್ವಪ್ನವು, ಜಾಗೃತೆಯ ಹಿಮವೃಷ್ಟಿಯಿಂದ ನಷ್ಟವಾಗುವದು. ಈ ಸ್ವಪ್ನವು ಅಮರವಾಗುವಂತಹ ಮಂತ್ರವನ್ನು ಯಾರಾದರೂ ಹಾಕುವರೇ ? ಮರಣದ ಹತ್ತರವಿರುವದೇ ಈ ಮಂತ್ರ ? ಜೀವನದಲ್ಲಿ ಯಂತೂ ಇಲ್ಲ. ಎಂದಿದ್ದಿತು ಆ ಹಾಡು.

ಕೊಳಲು ನುಡಿಯುತ್ತಿದ್ದಿತು. ಧ್ವನಿಯು ಗಾಳಿಗುಂಟ ಪಸರಿಸುತ್ತಿತ್ತು. ಆ ಕೊಳಲಿನಿಂದ ಸಜೀವ-ನಿರ್ಜೀವ ಸೃಷ್ಟಿಗೆ ಸಮಾಧಿ ಹತ್ತಿತು. ಸಮಾಧಿಯಲ್ಲಿ ಪ್ರೇಮಜ್ಯೋತಿಯ ದರ್ಶನವಾಗುತ್ತಲಿತ್ತು. ಪಕ್ಷಿಗಳು ತಟಸ್ಥವಾಗಿದ್ದವು. ಗೋಗಳು ನಿಂತಲ್ಲಿಯೇ ನಿಂತಿದ್ದವು. ನಾಗಾನಂದ ಹಾಗು ವತ್ಸಲೆಯರಿಬ್ಬರೂ ಕಣ್ಣುಮುಚ್ಚಿದ್ದರು. ಒಂದು ನಾಗವು ಬಂದು ತಲೆಹಾಕುತ್ತ ಕುಳಿತಿತ್ತು. ಕೊಳಲನ್ನು ಕೇಳುತ್ತಿತ್ತು. ಅದನ್ನು ನೋಡಿ ಪಕ್ಷಿಗಳು ಗಾಬರಿಯಾಗಲಿಲ್ಲ. ಆಕಳಗಳೂ ಕರಗಳೂ ಗಾಬರಿಯಿಂದ ಧ್ವನಿಗೈಯ್ಯಲಿಲ್ಲ. ಆ ಸಮಯದಲ್ಲಿ ನಾಗವು, ನಾಗವಿರಲಿಲ್ಲ. ಆಕಳು, ಆಕಳವಿದ್ದಿಲ್ಲ. ಪಕ್ಷಿಗಳು ಪಕ್ಷಿಗಳಾಗಿರಲಿಲ್ಲ. ಎಲ್ಲವೂ ಚೈತನ್ಯ ಮಹಾಸಿಂಧುವಿನಲ್ಲಿ ತಲ್ಲೀನವಾಗಿದ್ದವು. ಮುಳುಗಿದ್ದವು.

ವತ್ಸಲೆಗೆ ಸ್ಮೃತಿ ಇರಲಿಲ್ಲ. ಮಾಂತ್ರಿಕನು ಆಕೆಯನ್ನೇ ನೋಡುತ್ತಿದ್ದನು. ಮುಚ್ಚಿದ ನೇತ್ರಕಮಲದಲ್ಲಿಯೇ ಅವನ ದೃಷ್ಟಿ. ಆಕೆಯು ಕಣ್ದೆರೆದಳು. ಭಾವಪೂರ್ಣವಾದ ಕಣ್ಣುಗಳು. ಆಕೆಯು ಹುಲ್ಲಿನಮೇಲೆ ಬಿದ್ದಳು.

' ನನಗೆ ಸ್ವಲ್ಪ ಅಡ್ಡಾಗಗೊಡಿರಿ! ಆಕಾಶದ ಕಡೆಗೆ ನೋಡಗೊಡಿರಿ. ನಾನೀಗ ನನ್ನವಳಲ್ಲ. ಆಕಾಶದವಳು. ವಿಶ್ವದವಳು. ಸೃಷ್ಟಿಯಲ್ಲಿ ತುಂಬಿರುವ ಸಂಗೀತದವಳು. ಪ್ರೇಮದವಳು, ಎಂದಳು.

' ವತ್ಸಲಾ ! ಅಲ್ಲಿ ನೋಡು ಹಾವು ! ಹಾವು ! ' ಎಂದು ಒಮ್ಮೆಲೇ ಕೂಗಿದನು ನಾಗಾನಂದ.

' ಎಲ್ಲಿ' ಎಂದು ಒಮ್ಮೆಲೆ ಎದ್ದಳು.

' ಅಗೋ ನೋಡು. ಹೋಗುತ್ತದೆ. ಕೊಳಲು ಕೇಳಿ ಹೋಗುತ್ತಲಿದೆ ' ಎಂದು ತೋರಿಸಿದನು.

' ಇಂತಹ ಭಯಂಕರ ಹಾವುಗಳು ಇಲ್ಲಿ ಬರುತ್ತವೆ. ನಿಮಗೆ ಅಂಜಿಕೆ ಬರುವದಿಲ್ಲವೇ ?' ಎಂದಳು.

' ಅಂಜಿಕೆ ಬರುವದಿಲ್ಲ, ಹೀಗೇನು ಇಲ್ಲ.' ಎಂದನು.

' ಹಾಗಾದರೆ ವಾಸಿಸಲು ಮನೆಗೆ ನಡೆಯಿರಲ್ಲ !' ಎಂದಳು.

' ಇಲ್ಲಿಯೇ ನೆಟ್ಟಗೆ. ಇಲ್ಲಿ ಹಾವು, ಹುಲಿಗಳ ಅಂಜಿಕೆಯಿದ್ದರೂ, ನನಗಿಲ್ಲಿ ಆನಂದವೆನಿಸುತ್ತಿದೆ.' ಎಂದನು.

' ಮನುಷ್ಯರಿಗಿಂತಲೂ ಅವು ಹೆಚ್ಚಿನವೇ ?, ಎಂದು ವತ್ಸಲೆಯು ವಿಚಾರಿಸಿದಳು.

' ಮಾನವರದೇ ಅಂಜಿಕೆ ನನಗಿನ್ನೂ. ಮನುಷ್ಯರ ವಿಶ್ವಾಸವೆನಿಸುವದಿಲ್ಲ ನನಗೆ.' ಎಂದನು ನಾಗಾನಂದ.



# ೯

ವತ್ಸಲೆಯ ಊರಿಗೆ ಹುಲಿಯ ಉಪದ್ರವವಾಗಹತ್ತಿತು. ಗಂಡು ಹಾಗೂ ಹೆಣ್ಣು ಹುಲಿಗಳಿವೆ. ಅವು ಆಕಳುಗಳನ್ನು ಕೊಲ್ಲಹತ್ತಿವೆ ' ಎಂದು ಜನ ಮಾತನಾಡುತ್ತಿತ್ತು. ಹುಲಿಯನ್ನು ಕೊಲ್ಲುವವರಾರು ?

" ನಾಗಾನಂದನು ಈ ಊರಿಗೆ ಬಂದದ್ದರಿಂದ ಈ ಸಂಕಟವು ನಮಗೆ ಬಂದಿದೆ " ಎಂದನೊಬ್ಬ.

" ಅವನು ವತ್ಸಲೆಯನ್ನು ಪ್ರೀತಿಸುವ. ಅದರಂತೆ ಅವಳೂ ಅವನನ್ನು ಪ್ರೀತಿಸುವಳು. ಈ ಪಾಪವನ್ನು ನೋಡಲಾರದೆ, ದೇವರು ಈ ರೀತಿಯ ಶಿಕ್ಷೆಯನ್ನು ಕೊಡುತ್ತಿದ್ದಾನೆ " ಎಂದನು ಇನ್ನೊಬ್ಬ.

" ಅವರಿಬ್ಬರನ್ನೂ ಊರು ಬಿಟ್ಟು ಹೊರಗೆ ಹಾಕಿರಿ. " ಎಂದು ಮಗದೊಬ್ಬ

" ಆದರೆ ಅವರನ್ನು ಓಡಿಸಿಬಿಟ್ಟರೆ, ನಮ್ಮ ಹೆಣ್ಣುಮಕ್ಕಳು ಬಂಡು ಹೂಡುವರು, ಕಾಲವು ಕಠಿಣವಿದೆ " ಎಂದ ಮತ್ತೊಬ್ಬ.

" ಅವರನ್ನೇಕೆ ಹೊರದೂಡುವಿರಿ ? ಆ ಗಂಡು ಹೆಣ್ಣು ಹುಲಿಗಳನ್ನು ಹೊಡೆಯಬಾರದೇ ? ದೇವರಿಗೇಕೆ ಹೆಸರಿಡುವಿರಿ, ಇನ್ನೊಬ್ಬರಿಗೇಕೆ ಮಾತನಾಡುವಿರಿ ? ನಿಮ್ಮ ದುರ್ಬಲತೆಯನ್ನು ನೀವೇ ಹಳಿಯಿರಿ. " ಎಂದು ಒಬ್ಬ ಆರ್ಯಕನ್ಯೆಯು ನುಡಿದಳು.

" ಇವಳು ವತ್ಸಲೆಯ ಗೆಳತಿಯು. ಹುಡುಗಿ ಬಹಳೇ ದುಷ್ಟಳಿದ್ದಾಳೆ " ಎಂದೊಬ್ಬನೆಂದ.

“ ವತ್ಸಲೆಯ ಗೆಳತಿಯಾಗುವದೇನು ಪಾಪವಲ್ಲ. ಆಕೆಯು ಏನು ಕೆಡುಕು ಮಾಡಿದ್ದಾಳೆ ? ಅವಳ ಪ್ರಾಣವನ್ನುಳಿಸಲು ಯಾರಾದರೂ ಮುಂದೆ ಬಂದಿರಾ ? ಯಾರು ಅವಳ ಪ್ರಾಣವನ್ನುಳಿಸಿದರೊ, ಅವರ ಚರಣಗಳಲ್ಲಿ ಆಕೆಯು ತನ್ನ ಪ್ರೇಮದ ಹಾರವನ್ನೇಕೆ ಅರ್ಪಿಸಬಾರದು ? ” ಎಂದಳು.

“ ಆ ತರುಣನು ಅಷ್ಟೊಂದು ಧೈರ್ಯಶಾಲಿಯಾಗಿದ್ದರೆ, ಹುಲಿಯ ಉಪದ್ರವವನ್ನೇಕೆ ನಿಲ್ಲಿಸಬಾರದು ? ನಿಜವಾದ ಶೂರರು ಸುಮ್ಮನೆಂದೂ ಕೂಡುವದಿಲ್ಲ. ” ಎಂದು ಮತ್ತೊಬ್ಬನು ನುಡಿದನು.

“ ಅವರು ಆ ಹುಲಿಯನ್ನು ಇಂದು ರಾತ್ರಿ ಹೊಡೆಯುವ ನಿಶ್ಚಯ ಮಾಡಿದ್ದಾರೆ ” ಎಂದು ಹೇಳಿ ಅವಳು ಹೊರಟು ಹೋದಳು.

“ ಸತ್ತರೆ ಪರಸ್ಪರ ಪೀಡೆ ಹೋಯಿತು ” ಎಂದು ಕಾರ್ತಿಕನ ತಂದೆಯು ಅಂದನು.

“ ಯಾರು ಸತ್ತರೆ ? ಹುಲಿಯೋ, ನಾಗನೋ ? ” ಎಂದನೊಬ್ಬ.

“ ಇಬ್ಬರೂ ಸಾಯಲಿ ” ಎಂದು ಯಾರೋ ಒಬ್ಬರೆಂದರು.

ಹುಲಿಯು ಒಂದು ಆಕಳನ್ನು ಕೊಂದು, ಅಡವಿಯಲ್ಲಿ ಒಗೆದಿತ್ತು. ಅಲ್ಲಿಗೆ ಬಹುಶಃ ಅದು ರಾತ್ರಿಯಲ್ಲಿ ಬರಬಹುದೆಂದು ನಾಗಾನಂದನು ತರ್ಕಿಸಿದ. ಅವನು ಹುಲಿಯನ್ನು ಕೊಲ್ಲುವ ನಿಶ್ಚಯವನ್ನು ಮಾಡಿದನು. ಮಧ್ಯಾಹ್ನ ಮೂರು ಗಂಟೆಗೆ ವತ್ಸಲೆಯು ಹೊಲಕ್ಕೆ ಬಂದಳು. ನಾಗಾನಂದನು ಭಾಲೆಯನ್ನು ಮಸೆಯುತ್ತಿದ್ದನು. ಅದನ್ನು ಹರಿತಗೊಳಿಸುತ್ತಿದ್ದನು.

“ ಹುಲಿಯ ಬೇಟೆಗೆ ನೀವು ಒಬ್ಬರೇ ಹೋಗುವಿರಾ ? ಎಂದಳು ವತ್ಸಲೆ.

“ ಹೌದು ” ಎಂದನು.

“ ನಾನೂ ಸಂಗಡ ಬರಲ್ಯಾ ? ” ಎಂದಳವಳು.

“ ಬೇಡ ” ಎಂದನವನು.

“ ಏಕೆ ? ” ಎಂದು ಅವಳು ವಿಚಾರಿಸಿದಳು.

"ಎರಡನೆಯವರ ಸಹಾಯದಿಂದ, ಅದರಲ್ಲಿಯೂ ಒಬ್ಬ ಹೆಂಗಸಿನ ಸಹಾಯದಿಂದ, ಆವನು ಹುಲಿಯನ್ನು ಹೊಡೆದನೆಂದು; ನನ್ನನ್ನು ಜನರು ನಿಂದಿಸುವರು. ನನ್ನ ಜಯಕ್ಕೆ ಕಲಂಕವು ಬೇಡ. ನಾಗಾನಂದನ ಹೆಸರಿಗೆ ಕಪ್ಪು ಹತ್ತಬೇಕೆಂದು ನಿನಗೆ ಅನಿಸುವದೇ ?" ಎಂದು ಪ್ರಶ್ನಿಸಿದನು.

"ನಾನೇನು ಎರಡನೆಯವಳೆ, ನಾನೇನು ಪರಕೀಯಳೇ ?" ಎಂದು ಆವಳು ಕಣ್ಣೀರು ಸುರಿಸುತ್ತ ಕೇಳಿದಳು.

"ಆದರೆ ನೀನು ನನ್ನ ಹೃದಯದಲ್ಲಿರುವೆ. ನನ್ನ ಜೀವನದಲ್ಲಿರುವೆ, ಆದ್ದರಿಂದಲೇ ಬರಬೇಡ. ನಿನ್ನ ಶಕ್ತಿಯು ನನ್ನ ಕೈಯಲ್ಲಿ ಬರಲಿ. ನಾವಿಬ್ಬರೂ ಪರಕೀಯರಲ್ಲ, ಆದ್ದರಿಂದ ಬರುವ ಅವಶ್ಯಕತೆಯಿಲ್ಲ." ಎಂದು ಎಂದನವ.

"ಏನಾದರೂ ಅಪಾಯವಾದರೆ ?" ಎಂದಳಾಕೆ.

"ನೀನು ನನ್ನನ್ನು ನೆನಸುವದಿಲ್ಲವೇ?" ಎಂದನಾತ. ಅವಳು ಹೆಚ್ಚಿಗೆ ಮಾತಾಡಲಿಲ್ಲ, ಸುಮ್ಮನಾದಳು. ಹೊರಟಳು. ಅವಳನ್ನು ಕಳಿಸುವದಕ್ಕಾಗಿ ಆವನು ಸ್ವಲ್ಪ ಮುಂದೆ ಬಂದನು.

"ನೀವು ಹೋಗಿರಿ, ತಿರುಗಿ ಹೋಗಲು ನಿಮಗೆ ಕತ್ತಲೆಯಾದೀತು." ಎಂದಳು.

"ಇಂದು ಕತ್ತಲೆಯಿಲ್ಲ. ಇಂದು ಹುಣ್ಣಿವೆ" ಎಂದನು.

"ನನಗೆ ಯಾವಾಗಲೂ ಅಮಾವಾಸ್ಯೆಯೇ ಯಿದೆ." ಎಂದು ಅಂದಳು.

"ವತ್ಸಲೆಯೇ ಈ ಮೊಗ್ಗೆಗಳನ್ನು ತಗೊ. ಇವು ಸಂಜೆಗೆ ಅರಳುವವು. ಕೋಮಲ ಹಾಗೂ ಸುಂಗಧವುಳ್ಳ ಹೂಗಳಿವು. ಈ ಹೂಗಳು ಬೇಗನೆ ಬಾಡುವದಿಲ್ಲ. ಒಂದೆ ವೇಳೆ ಬಾಡಿದರೂ ಅವುಗಳ ವಾಸನೆ ಕಡಿಮೆ ಯಾಗುವ ದಿಲ್ಲ. ಒಣಗಿದ ಪಕಳಿಗಳಿಂದಲೇ ಹೆಚ್ಚು ವಾಸನೆಯು ಬರುತ್ತದೆ. ಅವು ಗಳ ಮೇಲೆ ನೀರನ್ನು ಸಿಂಪಡಿಸಿದರೆ ಕೂಡಲೆ ಎಲ್ಲ ಕಡೆಗೆ ವಾಸನೆ ಹಬ್ಬು ತ್ತದೆ. ತೆಗೆದುಕೊ ತಕ್ಕೊಳಬಾರದೇ ?" ಎಂದನು.

ಅವಳು ತಕ್ಕೊಳ್ಳಲಿಲ್ಲ. ತನ್ನ ಕೈಯ್ಯನ್ನು ಮುಂದೆ ಚಾಚಲಿಲ್ಲ.

„ ನಿನ್ನ ಚರಣ ಕಮಲಗಳಲ್ಲಿ ಅರ್ಪಿಸುವೆ. ನಿನ್ನ ಮೇಲೆ ಏರಿಸುವೆ” ಎಂದು ಸದ್ಗದಿತನಾಗಿ ಮಾತನಾಡಿದನು. ಅವಳು ಕೈಯ್ಯನ್ನು ಮುಂದೆ ಚಾಚಿದಳು. ಅವನು ಅವಳ ಕೈಯ್ಯಲ್ಲಿ ಆ ಹೂಗಳನ್ನು ಕೊಟ್ಟನು. ಅವಳು ಅವುಗಳನ್ನು ಎದೆಗೆ ಒತ್ತಿಕೊಂಡಳು.

“ ಮೂಸಿ ನೋಡು ” ಎಂದನವನು.

“ ಈ ಹೂಗಳ ಪರಿಮಳವನ್ನು ಕೇವಲ ಮೂಗಿನಿಂದಷ್ಟೇ ತೆಗೆದು ಕೊಳ್ಳುವದಿಲ್ಲ. ಈ ಹೂಗಳ ವಾಸನೆಯನ್ನು ರೋಮ ರೋಮಗಳಿಂದ ತೆಗೆದುಕೊಳ್ಳಬೇಕು. ” ಎಂದಳು.

“ ಈಗ ಹೋಗು ” ಎಂದನು.

“ ನೀವೂ ಹೋಗಿರಿ ” ಎಂದಳು.

“ ವತ್ಸಲೇ, ಸಂಗಡ ಏನನ್ನು ಒಯ್ಯುತ್ತೀ ? ” ಎಂದು ಅವನು ಕೇಳಿದನು.

“ ನಿಮ್ಮ ಅಮರ ಹಾಗು ನಿರ್ಮಲವಾದ ಪ್ರೇಮವನ್ನು, ನಿಮ್ಮ ಸುಗಂಧಯುಕ್ತ ಮೂರ್ತಿಯನ್ನು ” ಎಂದು ಅವಳು ಹೊರಳಿ ಅಂದಳು.

“ ನೀವೇನನ್ನು ಸಂಗಡ ಒಯ್ಯುತ್ತಿರುವಿರಿ?” ಅವರ ಕಡೆಗೆ ನೋಡುತ್ತ ವಿಚಾರಿಸಿದಳು.

“ ಅದು ಗಟ್ಟಿಯಾಗಿ ಹೇಳುವದಲ್ಲ ” ಎಂದು ಅವನು ನಗುತ್ತ ಹೇಳಿದ.

ರಾತ್ರಿಯಾಯಿತು. ನಾಲ್ಕು ತಾಸು ರಾತ್ರಿಯಾಗಿತ್ತು. ಆಕಾಶದಲ್ಲಿ ಚಂದ್ರಮನು ಸಾಕಷ್ಟು ಮೇಲೆ ಬಂದಿದ್ದನು. ಹುಣ್ಣಿಮೆಯ ಚಂದ್ರ. ಪೃಥ್ವಿಯ ತುಂಬೆಲ್ಲ ಹಿಟ್ಟು ಚಲ್ಲಿದ ಹಾಗೆ ಬೆಳದಿಂಗಳು ಬಿದ್ದಿತ್ತು. ನಾಗಾನಂದನು ಕೈಯಲ್ಲಿ ಭಾಲೆಯನ್ನು ಖಡ್ಗವನ್ನು ಹಿಡಿದುಕೊಂಡು ಅಡಗಿ ಕುಳಿತಿದ್ದನು. ಹುಲಿಯ ಭಯಂಕರವಾದ ಗರ್ಜನೆಯು ಕೇಳಿಸಿತು. ಊರಲ್ಲಿಯ ಆಕಳುಗಳು ಗಾಬರಿಯಾದವು, ನಡುಗಹತ್ತಿದವು, ನಾಗಾನಂದನು ಸಿದ್ಧನಾಗಿ ಕುಳಿತನು.

ಬಾಲವನ್ನು ಅಪ್ಪಳಿಸುತ್ತ ಅಪ್ಪಳಿಸುತ್ತ ಹುಲಿಯು ಬರುತ್ತಿತ್ತು. ತುಂಬಿದ ಮೈಮೇಲೆ ಬಂಗಾರದಂತೆ ಹೊಳೆಯುವ ಹಳದೀ ಪಟ್ಟೆಗಳು ಎದ್ದು

ಕಾಣುತ್ತಿದ್ದವು. ವೃತ್ಯುವಿನಂತಿರುವ ಕೋರೆಯ ಹಲ್ಲುಗಳು, ಕಿಡಿಹಾರುವ ಕೆಂಗಣ್ಣುಗಳು, ಭೀಕರವಾದ ಸೌಂದರ್ಯ. ಅದರ ಉಗುರುಗಳು ಬಹು ತೀಕ್ಷ್ಣ, ಗುಡುಗು ಹಾಕುತ್ತ ಬರುತ್ತಲಿದೆ. ಏನನ್ನು ಮೂಸಿ ನೋಡುತ್ತಿದೆ? ತನ್ನ ಮರಣದ ಕಲ್ಪನೆಯು ಅದಕ್ಕೆ ಬರುತ್ತಲಿದೆಯೋ? ಛೀ ಅದಕ್ಕೆ ಬಹುಶಃ ಭ್ರಮೆಯಾಗಿರಬಹುದು. ಅದು ಎದುರಿಗೆ ಕಾಣುವ ಬೇಟೆಯ ಮೇಲೆ ಒಮ್ಮೆಲೆ ಜಿಗಿಯಿತು. ಮೋಹಜಾಲದಲ್ಲಿ ಬಿದ್ದಿತು. ಎದುರಿಗಿನ ಬೇಟೆಗೆ ಮರುಳಾಗಿದ್ದರಿಂದ ಹತ್ತಿರದಲ್ಲಿಯೇ ಅಡಗಿದ ಮೃತ್ಯುವು ಅದಕ್ಕೆ ಕಾಣಲಿಲ್ಲ.

ಪಂಜರಗಳಿಂದ ಆಕಳನ್ನು ಸೀಳಿ ಸೀಳಿ ಅದು ತಿನ್ನುತ್ತಿತ್ತು. ನಡುವೆ ಆನಂದದಿಂದ ಗುಡುಗು ಹಾಕುತ್ತಿತ್ತು. ಅದು ತನ್ನ ಹೆಂಡತಿಯನ್ನು ಕರೆಯುತ್ತಿತ್ತೋ? ತಿನ್ನು ಹೊಟ್ಟೆತುಂಬ ತಿನ್ನು. ಹುಲಿಯು ಸ್ವಸ್ಥವಾಗಿಲ್ಲವೇಕೆ? ಏನನ್ನು ನೋಡುತ್ತಲಿದೆ? ಏನನ್ನು ಮೂಸಿ ನೋಡುತ್ತಿದೆ? ಸುತ್ತುಮುತ್ತು ತಿರುಗುತ್ತಲಿದೆ. ಮತ್ತೆ ತಿನ್ನಲು ಹತ್ತಿತು. ತಿನ್ನು ಹೊಟ್ಟೆತುಂಬ ಮಾಂಸವನ್ನು ತಿನ್ನು, ಭವಿಷ್ಯದ ಚಿಂತೆಯನ್ನು ಪಶುಗಳು ಮಾಡಬಾರದು.

ನೋಡಿರಿ, ಉದ್ದವಾದ ಭಾಲೆಯೊಂದು ಅದರ ಮೈಯಲ್ಲಿ ಬಂದು ನಟ್ಟಿತು.

ಹುಲಿಯು ಜಿಗಿಯಿತು. ಅದು ಬಹಳ ಸಿಟ್ಟಿಗೆದ್ದಿತು. ಉದ್ರೇಕಗೊಂಡಿತು. ಪ್ರಚಂಡವಾಗಿ ಗರ್ಜಿಸಿತು. ಅಲ್ಲಿ ಸತ್ತುಬಿದ್ದ ಆಕಳಿನ ರೋಮ ರೋಮಗಳೂ ಈ ಗರ್ಜನೆಯಿಂದ ಜೀವಂತವಾಗಬೇಕು. ಅದರ ಗರ್ಜನೆಗೆ ಹೆಣಗಳು ಕೂಡ ಏಳಬಹುದಾಗಿತ್ತು. ಹುಲಿಯ ಹೊಟ್ಟೆಯಲ್ಲಿ ಭಾಲೆಯು ನಟ್ಟಿದ್ದರೂ ಕೂಡ, ಆ ಹುಲಿಯು ಅದರೊಡನೆಯೇ ಜಿಗಿಯಿತು. ನಾಗಾನಂದನ ಕೀರ್ತಿ ಹಾಗೂ ಪರಾಕ್ರಮದ ಧ್ವಜವೇ ಹಾರುತ್ತಿದ್ದಂತೆ ಆ ಹುಲಿಯು ಕುಣಿಯುತ್ತಿತ್ತು. ಹುಲಿಯು ನಾಗಾನಂದನ ಮೇಲೆ ಹಾರಿತು. ಆದರೆ ಅವನು ಅದನ್ನು ತಪ್ಪಿಸಿಕೊಂಡನು. ಅವನು ಕತ್ತಿಯಿಂದ ಅದರ ಮೇಲೆ ಏಟು ಹಾಕಿದನು. ಆದರೆ ಆ ಏಟು ಭಾಲೆಗೆ ಬಿತ್ತು. ಭಾಲೆಯು ತುಂಡು ತುಂಡಾಯಿತು. ಮತ್ತೆ ಹುಲಿಯು ಎರಗಿತು. ನಾಗಾನಂದನು ತನ್ನ ಕತ್ತಿಯಿಂದ ಅದರ ರುಂಡವು ಬೇರೆಯಾಗುವಂತೆ ಹೊಡೆದನು.

ಹುಲಿಯು ಸತ್ತು ಬಿದ್ದಿತು. ‘ ಹೆಣ್ಣು ಹುಲಿಯು ಬಂದಿತು, ಬಂದಿತು ’ ಎಂಬ ಧ್ವನಿಯು ಕೇಳಿಸಿತು. ಆದರೆ ಈ ಧ್ವನಿಯು ಯಾರದು ? ಅದು ಮತ್ತಿಷ್ಟು ಸಿಟ್ಟಗೆದ್ದಿತು. ನಾಗಾನಂದನು ಅದರೊಡನೆ ಹೋರಾಡಲು ಸಜ್ಜಾಗಿ ನಿಂತನು. ಅವನ ಕೈಯಲ್ಲಿ ರಕ್ತರಂಜಿತವಾದ ಕತ್ತಿ ಇದ್ದಿತು. ಹೆಣ್ಣು ಹುಲಿಯು ಬಹಳ ಕ್ರೂರವಾಗಿ ಕಾಣುತ್ತಿತ್ತು. ಆದರೆ ಅದಕ್ಕೆ ಹಿಂದಿನಿಂದ ಯಾರು ಕತ್ತಿಯಿಂದ ಹೊಡೆದರು ? ಹುಲಿಯು ಸಿಟ್ಟಿನಿಂದ ಹಿಂಬದಿಗೆ ತಿರುಗಿತು. ಅಲ್ಲಿ ಯಾರಿದ್ದರು ? ನಾಗಾನಂದನು ಒಮ್ಮೆಲೇ ಅವರ ಸಹಾಯಕ್ಕೆ ಧುಮುಕಿದನು. ಹುಲಿಗೆ ಕತ್ತಿಯಿಂದ ಹೊಡೆದನು. ಹುಲಿಯು ಯಾರನ್ನು ಹಿಡಿದಿತ್ತು? ಮತ್ತೆ ಹುಲಿಯು ಹಿಂದಿರುಗಿತು. ಆದರೆ ನಾಗಾನಂದನು ಮತ್ತೆ ಏಟು ಕೊಟ್ಟನು. ಹುಲಿಯು ಬಿದ್ದಿತು. ಗಂಡು ಹೆಣ್ಣು ಹುಲಿಗಳೆರಡೂ ಅಲ್ಲಿ ಸತ್ತು ಬಿದ್ದವು. ಆದರೆ ನಾಗಾನಂದನ ಸಹಾಯಕ್ಕೆ ಬಂದವರಾರು ?

ನಾಗಾನಂದ ಮತ್ತು ವತ್ಸಲೆಯರು ಒಬ್ಬರಿಗೊಬ್ಬರು ಹೊಂದಿಕೊಂಡು ಕುಳಿತಿದ್ದರು. ಅವರ ಎದುರಿಗೆ ಅಡವಿಯ ರಾಜಾ ರಾಣಿಗಳಾದ ಆ ಎರಡು ಜೀವಿಗಳು ಸತ್ತು ಬಿದ್ದಿದ್ದವು.

“ ನಿನಗೆ ಪೆಟ್ಟು ತಾಕಿತೇ ” ಎಂದು ನಾಗಾನಂದನು ಮೆಲ್ಲಗೆ ಕೇಳಿದನು.

“ ಆಹುದು ” ಎಂದಳು.

“ ಎಲ್ಲಿ ? ” ಎಂದು ಭಯದಿಂದಲೂ ಪ್ರೇಮದಿಂದಲೂ ಅವನು ವಿಚಾರಿಸಿದನು.

“ ಇಲ್ಲಿ ” ಎಂದು ನಾಗಾನಂದನ ಎದೆಯ ಮೇಲೆ ಕೈಯಿಟ್ಟಳು. ನಾಗಾನಂದನ ಎದೆಯಿಂದ ರಕ್ತವು ಸೋರುತ್ತಿತ್ತು. ಪಂಜರದ ಏಟು ಬಿದ್ದಿತ್ತು. ಅವನ ಮೊಣಕಾಲುಗಳಿಂದಲೂ ರಕ್ತವು ಸೋರುತ್ತಿತ್ತು. ವತ್ಸಲೆಯು ಶೆರಗನ್ನು ಹರಿದಳು. ನಾಗಾನಂದನ ಕಾಲುಗಳಿಗೆ ಕಟ್ಟಿದಳು. ಅವನ ಎದೆಯ ಮೇಲೆ ರಕ್ತವು ಹೊರಬರದಂತೆ ಒತ್ತಿಹಿಡಿದಳು.

"ಹೀಗೆಯೇ ಎಷ್ಟು ಹೊತ್ತಿನವರೆಗೆ ನೀನು ಹಿಡಿಯುವಿ? ನಿಲ್ಲು ಇಲ್ಲಿ ಎಲ್ಲಿಯಾದರೂ ರಕ್ತಸ್ರಾವವನ್ನು ನಿಲ್ಲಿಸುವ ತೊಪ್ಪಲವು ಇರುವ ದೇನೋ ನೋಡುವೆ, ಅದನ್ನು ಕಟ್ಟುವಿಯಂತೆ" ಎಂದನು.

ಅವನು ಆ ವನಸ್ಪತಿಯನ್ನು ಆ ಬೆಳದಿಂಗಳಲ್ಲಿಯೇ ಹುಡುಕಿದನು. ಅದನ್ನು ಅರೆದು ಎದೆಗೆ ಹಾಕಿದಳು. ರಕ್ತವು ನಿಂತಿತು.

"ವತ್ಸಲೇ ನಿನಗೇನೂ ತಾಕಿಲ್ಲವಷ್ಟೆ?" ಎಂದು ಮತ್ತೆ ವಿಚಾರಿಸಿದನು.

"ಇಲ್ಲ, ಆ ಭಾಗ್ಯವು ನನಗಿಲ್ಲ. ನಿನಗೆ ಸಹಾಯ ಮಾಡುವ ವೇಳೆಯಲ್ಲಿ ಆ ಹುಲಿಯು ನನ್ನನ್ನು ಕೊಲ್ಲಬೇಕೆಂದು ನನ್ನ ಮನಸ್ಸಿನಲ್ಲಿ ಬರುತ್ತಿತ್ತು. ನಿಮ್ಮ ಪ್ರಾಣವನ್ನುಳಿಸುವಾಗ ನಾನು ಸತ್ತಿದ್ದರೆ ಕೃತಾರ್ಥ ಳಾಗುತ್ತಿದ್ದೆ." ಎಂದಳು.

"ಹಾಗಿದ್ದರೆ, ಹುಲಿಯ ಮುಂದೇಕೆ ನೀನು ನಿಲ್ಲಲಿಲ್ಲ. ಅದಕ್ಕೆ ಕತ್ತಿಯಿಂದೇಕೆ ಹೊಡೆದೆ? ನಿನಗೂ ಬದುಕಬೇಕೆಂಬ ಇಚ್ಛೆಯಿದೆ. ಇಲ್ಲ ವೆನ್ನಬೇಡ. ಹೇಳು ನಿನಗೆ ಆ ಇಚ್ಛೆಯು ಇದೆಯೋ ಇಲ್ಲವೊ?" ಎಂದನು.

"ನೀವು ಹತ್ತರವಿದ್ದರೆ ಮಾತ್ರ" ಎಂದಳು.

"ವತ್ಸಲೆ, ನೀನೇಕೆ ನಿನ್ನ ಪ್ರಾಣವನ್ನು ಸಂಕಟದಲ್ಲಿ ಹಾಕಿದಿ?"

"ನೀವು ಹಿಂದಕ್ಕೆ ನನ್ನ ಸಲುವಾಗಿ ನಿಮ್ಮ ಪ್ರಾಣವನ್ನು ಸಂಕಟದಲ್ಲಿ ನೂಕಿದ್ದಿರಿ."

"ನೀನು ಉಪಕಾರವನ್ನು ತೀರಿಸಲು ಬಂದೆಯಾ? ಅಹುದೋ! ಅಲ್ಲವೊ? ಕೊನೆಗೂ ನಾನು ನಿನಗೆ ಪರಕೀಯನೇ ಆದೆ. ನನ್ನ ಸಾಲ ವನ್ನು ಕೊಡಲು ಬಂದೆಯಾ? ನಾನು ನನ್ನ ಪ್ರಾಣವನ್ನು ನಿನ್ನ ಸಲುವಾಗಿ ನೀರಲ್ಲಿ ಎಸೆದೆ. ಆ ಋಣವನ್ನು ತೀರಿಸಲು ನೀನು ಬಂದಿರುವೆ. ಕೊಡ ಕೊಳ್ಳುವದೇ ನನ್ನ ನಿನ್ನ ಸಂಬಂಧವಷ್ಟೇ?" ಎಂದು ಖಿನ್ನವದನನಾದನು.

"ನಾಗಾನಂದಾ! ಖಿನ್ನನಾಗಬೇಡ. ನಾನು ಉಪಕಾರವನ್ನು ತೀರಿಸಲು ಬಂದವಳಲ್ಲ. ನನ್ನ ಮೇಲೆ ವಿಶ್ವಾಸವನ್ನಿಡು. ನಾನು ಪ್ರೇಮದ

ಮೂಲಕವಾಗಿ ಬಂದಿರುವೆ. ನಿನ್ನ ಶರೀರವು ಈಗ ನಿನ್ನದಲ್ಲ. ಆದು ನನ್ನದು. ಆದು ನನ್ನದಾಗದಿದ್ದರೆ ಅದು ಆಂದೇ ಉಳಿಯುತ್ತಿದ್ದಿಲ್ಲ. ಈ ನನ್ನ ಶರೀರವನ್ನು ರಕ್ಷಿಸುವದಕ್ಕಾಗಿ ನಾನು ಬಂದಿದ್ದೇನೆ ನಾಗಾನಂದಾ! ನಾವಿಬ್ಬರೂ ಏಕೆ ಬದುಕಿದೆವು? ನಿಜವಾಗಿಯೂ ಯಾಕೆ ಬದುಕಿದೆವು? ಅಂತಹ ಪ್ರಕ್ಷುಬ್ಧ ಪ್ರವಾಹದಲ್ಲಿ ನಮ್ಮೆರಡು ಜೀವಗಳು ಒಂದೆಡೆಯಲ್ಲಿ ಏಕೆ ಕೂಡಿದವು? ನೀರಿನಲ್ಲಿ ಎರಡು ಕಟ್ಟಿಗೆಗಳು ಒಂದೆಡೆ ಕೂಡುತ್ತವೆ. ಮತ್ತೆ ತೆರೆ ಬಡಿದೊಡನೆಯೇ ಅವು ಬೇರೆಯಾಗುತ್ತವೆ. ಆದರೆ ನಾವು ಇಬ್ಬರೂ ಏಕತ್ರವಾದುದು ಹೇಗೆ? ಬೇರೆಯಾಗಲು ನಾವು ಒಂದಾಗಿದ್ದೇವೆಯೇ? ಇಲ್ಲ! ಇಲ್ಲ! ನಾವೀರ್ವರೂ ಒಬ್ಬರಿಗೊಬ್ಬರು ಬೇಕಾದವರು. ನೀನು ನನ್ನವ, ನಾನು ನಿನ್ನವಳು ನಮ್ಮಿಬ್ಬರನ್ನು ಯಾರೂ ಅಗಲಿಸಲಾರರು. ಹುಲಿಯೇ ಬರಲಿ, ಮೃತ್ಯುವೇ ಬರಲಿ" ಎಂದು ವತ್ಸಲೆಯು ನಾಗಾನಂದನನ್ನು ಬಿಗಿಯಾಗಿ ಅಪ್ಪಿಕೊಂಡಳು. ಅವನೂ ಆಕೆಯನ್ನು ಗಟ್ಟಿಯಾಗಿ ಅಪ್ಪಿಕೊಂಡನು.

---

## ೧೦

ಅಂದು ವತ್ಸಲೆಯು ಗೆಳತಿಯರೊಡನೆ ವನವಿಹಾರಕ್ಕಾಗಿ ಹೋಗಿದ್ದಳು. ಮನೆಯಲ್ಲಿ ಸುಶ್ರುತೆಯೊಬ್ಬಳೇ ಇದ್ದಳು. ಸ್ವಲ್ಪ ಸಮಯದ ನಂತರ ನಾಗಾನಂದನು ಬಂದನು. ಇಬ್ಬರೂ ಮಾತನಾಡುತ್ತ ಕುಳಿತರು.

"ನಾಗಾನಂದಾ! ನೀನು ಅಡವಿಯಲ್ಲಿರುವಿ. ಕೈಯಿಂದ ಅಡಿಗೆ ಮಾಡಿಕೊಳ್ಳುವಿ. ನೀನು ಇಲ್ಲಿಗೆ ಊಟಕ್ಕೆ ಏಕೆ ಬರುವದಿಲ್ಲ? ನೀನು ಊಟಕ್ಕೆ ಬರುವಿಯಾದರೆ ಆಕೆಯೂ ಹೊಟ್ಟೆ ತುಂಬ ಉಣ್ಣುವಳು. ಆಕೆಯು ನಗುವಳು. ಆನಂದದಿಂದ ನಲಿಯುವಳು. ಆದರೆ ಆಕೆಯ ಹೊಟ್ಟೆಯಲ್ಲಿ ಯಾವುದೋ ಒಂದು ಮಾತು ಕೊರೆಯುತ್ತಲಿರುವದು. ನೀನೇಕೆ ದಯ ದೋರುವದಿಲ್ಲ?" ಎಂದಳು ಅಜ್ಜಿ.

"ನಾನು ಇಲ್ಲಿಯೇ ಬಂದಿರಬೇಕೇ? ನಾನು ಇಲ್ಲಿಯೇ ಉಣ್ಣಲು ಬರಬೇಕೇ? ಬೇಡ, ಅಜ್ಜೀ ಬೇಡ. ನನಗೆ ಹೇಡಿತನವು ಬೇಡ. ಸ್ವಾವಲಂಬನವೇ ಒಳ್ಳೇದು. ನಿಮ್ಮ ಸಹಾನುಭೂತಿಯಿದೆ ಇಷ್ಟೇ ಸಾಕು. ನನಗೆ ತಂದೆಯಿಲ್ಲ. ತಾಯಿಯಿಲ್ಲ. ನಾನು ನಿಮ್ಮ ಕಡೆಗೆ ಯಾಕೆ ಬರುವನೆಂಬದು ನಿಮಗೆ ಗೊತ್ತಿದೆಯೇ? ತಾಯಿಯ ನೆನಪನ್ನು ಮರೆಯುವದಕ್ಕಾಗಿ, ನನ್ನ ಮನಸ್ಸಿನಲ್ಲಿರುವದನ್ನು ಯಾರ ಮುಂದೆ ಹೇಳಲಿ?" ಎಂದನು.

"ನಾಗಾನಂದಾ, ನಿಮ್ಮ ತಂದೆಯು ಏನು ಮಾಡುತ್ತಿದ್ದನು? ಎಲ್ಲಿ ಇರುತ್ತಿದ್ದನು?" ಎಂದು ಪ್ರಶ್ನಿಸಿದಳು.

"ನನಗೆ ಗೊತ್ತಿಲ್ಲ. ನಾನು ನನ್ನ ತಂದೆಯನ್ನು ನೋಡಿಲ್ಲ. ನೋಡಿದ್ದರೂ ನನಗೆ ನೆನಪಿಲ್ಲ. ಯಾರೋ ಆರ್ಯರು ನಮ್ಮ ತಾಯಿಯನ್ನು

ಮೋಸ ಗೊಳಿಸಿರಬೇಕು. ನಮ್ಮ ತಂದೆಯ ಹೆಸರನ್ನು ಆಕೆಯು ಹೇಳಲಿಲ್ಲ. 'ನಿಮ್ಮ ತಂದೆಯ ಹೆಸರನ್ನು ಹೇಳಿದರೆ ಜಗತ್ತೆಲ್ಲವೂ ಅನಾದರ ಮಾಡು ವದು. ಅದು ನನ್ನ ಮನಸ್ಸಿನಲ್ಲಿಯೇ ಇರಲಿ' ಎಂದು ಆಕೆಯು ಹೇಳು ತ್ತಿದ್ದಳು. ಅವರನ್ನು ಆಕೆಯು ಮನಃ ಪೂರ್ವಕವಾಗಿ ಪೂಜಿಸುತ್ತಿದ್ದಳು. ತಾನು ಊಟಕ್ಕೆ ಕೂಡುವ ಮುಂದೆ, ತನ್ನ ಹತ್ತಿರವೇ ಇನ್ನೊಂದು ಎಲೆ ಯನ್ನು ಬಡಿಸಿ, ಅದನ್ನು ನೈವೇದ್ಯ ತೋರಿಸುತ್ತಿದ್ದಳು. 'ಈ ಎಲೆಯು ಯಾರದು?' ಎಂದು ನಾನು ಕೇಳುತ್ತಿದ್ದೆ. 'ನಿನ್ನ ತಂದೆಯದು. ನಿನ್ನ ಜನ್ಮದಾತೃವಿನದು' ಎಂದು ಅವಳು ಹೇಳುತ್ತಿದ್ದಳು. ಕೊನೆಗೆ ಆ ಎಲೆಯ ಲ್ಲಿಯ ಒಂದು ತುತ್ತನ್ನು ಉಂಡು ಏಳುತ್ತಿದ್ದಳು ಒಮ್ಮೊಮ್ಮೆ ಆಕೆಯು ಕಣ್ಣು ಮುಚ್ಚಿಕೊಂಡು ಕೂಡುತ್ತಿದ್ದಳು. 'ಅವ್ವಾ ನೀನು ಕಣ್ಣು ಮುಚ್ಚಿಕೊಂಡು ಯಾರನ್ನು ನೋಡುತ್ತಿರುವೆ?' ಎಂದು ಕೇಳಿದರೆ 'ನನ್ನ ಹೃದಯದಲ್ಲಿರುವ ದೇವವನ್ನು, ನಿನ್ನ ಜನ್ಮದಾತೃವನ್ನು' ಎಂದು ಕಣ್ಣೀರಿಡುವಳು. ಅಂತಹ ಪತಿವ್ರತೆಯು ಆಕೆ. ತುಚ್ಛರೆಂದು ತಿಳಿಯುವ ನಾಗ ಜಾತಿಯಲ್ಲಿ ಇಂತಹ ದೇವತೆಯರು ಅವತರಿಸುತ್ತಾರೆ. ಅಹಂಕಾರಿಗಳಾದ ಆರ್ಯರಿಗೆ ಮಾತ್ರ ಅವರು ಕಾಣುವದಿಲ್ಲ. ಪವಿತ್ರ ಮೂರ್ತಿಯವಳು. ಪ್ರೇಮದ ಕಣಿ ಅವಳು." ಎಂದನು ನಾಗಾನಂದ.

"ನಿನಗೆ ಅಣ್ಣ ತಮ್ಮಂದಿರಿಲ್ಲವೇ?" ಎಂದಳು ಸುಶ್ರುತೆ.

"ನಾವು ಅವಳಿ ಜವಳಿ ಇದ್ದೆವು. ಅಕ್ಕ ಹಾಗು ನಾನು. ನನ್ನ ಅಕ್ಕ ಕೆಂಪು ಕೆಂಪಾಗಿದ್ದಳು. ನಾನು ಸಾದಗಪ್ಪು. ಆದರೆ ಅವಳ ನೆನಪು ನನ ಗಿಲ್ಲ. ಚಿಕ್ಕವಳಿರುವಾಗಲೇ ದೇವರ ಕಡೆಗೆ ಹೋದಳು. ಇದೆಲ್ಲವನ್ನು ನಮ್ಮ ಅವ್ವನು ನನಗೆ ಹೇಳುತ್ತಿದ್ದಳು. 'ನಿನ್ನ ಬಣ್ಣವು ನನ್ನ ಹಾಗೆ ಆಕೆಯ ಬಣ್ಣವು ಅವರ ಹಾಗೆ ಇದ್ದಿತು' ಎಂದು ಹೇಳುತ್ತಿದ್ದಳು. ನಾವು ಎರಡು ಮೂರು ವರ್ಷದವರಾಗಿರ ಬಹುದು. ಒಂದು ದಿನ ನನ್ನ ತಾಯಿಯು ನಮ್ಮಿಬ್ಬರನ್ನು ಮಲಗಿಸಿ ಕೆಲಸಕ್ಕೆ ಹೋಗಿದ್ದಳು. ಇತ್ತ ಮನೆಗೆ ಬೆಂಕಿ ಹತ್ತಿತು. ನಮ್ಮ ವಸತಿಯೆಲ್ಲ ಭಸ್ಮವಾಯಿತು. ಆರ್ಯರೇ ಬೆಂಕಿಯನ್ನು ಹಚ್ಚಿದ್ದರು. ಊರ ಜನರೆಲ್ಲ ಹೊಲದಲ್ಲಿದ್ದರು. ಅವರೆಲ್ಲರೂ ಓಡಿಬಂದರು.

ನನ್ನ ತಾಯಿ ಬಂದು ಬಿಕ್ಕಿ ಬಿಕ್ಕಿ ಅಳಹತ್ತಿದಳು. ನಮ್ಮ ಮನೆಗೆ ಬೆಂಕಿ ಹತ್ತಿತ್ತು. ನಾವಿಬ್ಬರೂ ಒಳಗೆ ಸುಟ್ಟುಕೊಂಡು ಸಾಯುವೆವೆಂಬ ಭಾವನೆ ಯಿಂದ ಆಕೆಯು ಮೂರ್ಛಿತಳಾದಳು. ಆದರೆ ಕರುಣಾಳುವಾದ ಒಬ್ಬ ಆರ್ಯನು ಬೆಂಕಿಯಲ್ಲಿ ಹೊಕ್ಕು ನಮ್ಮನ್ನು ಉಳಿಸಿದನು. ಆದರೆ ಆವನೂ ಬೆಂದನು. ಅವನು ತನ್ನ ಮನೆಗೆ ಹೋದನು. ಅವನದು ಮುಂದೆ ಏನಾಯಿ ತೆಂಬದು ನಮಗೆ ಗೊತ್ತಾಗಲಿಲ್ಲ. ನನ್ನ ತಾಯಿಯು ನಮ್ಮಿಬ್ಬರನ್ನು ಕರೆದು ಕೊಂಡು ಬೇರೆ ಕಡೆಗೆ ಬಂದಳು. ಮುಂದೆ ಕೆಲದಿನಗಳ ನಂತರ ನಮ್ಮ ಅಕ್ಕನು ಹೋದಳು. ಆಗ ನನ್ನ ತಾಯಿಗೆ ನಾನೇ ಆಧಾರ. ಆದರೆ ಒಬ್ಬ ತಾಯಿಯ ಸಂದೇಶವನ್ನು ತೆಗೆದುಕೊಂಡು ಹೋಗುತ್ತಿರುವಾಗ ಆಕೆಗೆ ಸಿಡಿಲು ಬಡಿದು ಸತ್ತಳು. ನನ್ನನ್ನು ಬಿಟ್ಟು ಹೋದಳು. ಈ ಕಥೆಯನ್ನು ಹಿಂದೆಯೇ ಹೇಳಿದ್ದೇನೆ." ಎಂದನು ನಾಗಾನಂದ.

"ನಾಗಾನಂದಾ!" ಎಂದು ಸುಸ್ಮೃತೆಯು ಭಾವಪೂರ್ಣ ಶಬ್ದಗಳಿಂದ ಉಸರುಗರೆದಳು.

"ಏನು ಅಜ್ಜೀ?" ಎಂದು ವಿಚಾರಿಸಿದನು.

"ಓಹೋ ಅವನೇ ನನ್ನ ಮಗ. ವತ್ಸಲೆಯ ತಂದೆ. ಅವನು ನಿಮ್ಮನ್ನು ಉಳಿಸುವ ಕಾರ್ಯದಲ್ಲಿ ತಾನು ಅಳಿದ. ತಾನು ಬೆಂಕಿಯಲ್ಲಿ ಬೆಂದು, ಮನೆಗೆ ಬಂದ. ಅವನಿಗೆ ಗುಣವಾಗಲಿಲ್ಲ. ಅವನು ಸತ್ತನು. ಅವನೊಡನೆಯೇ ವತ್ಸಲೆಯ ತಾಯಿಯು ಸತಿಹೋದಳು. ಆಗ ವತ್ಸಲೆಯು ವರುಷದವಳುಕೂಡ ಇರಲಿಲ್ಲ. ಅವಳ ಪರದೇಶಿಯಾದಳು. 'ಆ ಅವಳಿ ಜವಳಿ ಮಕ್ಕಳು ಎಂಥವರಿದ್ದರು ಒಂದು ಅತ್ಯಂತ ಕೆಂಪು' ಇನ್ನೊಂದು ಸಾದುಗಪ್ಪು ರಾತ್ರಿಹಗಲು ಹುಟ್ಟಿದಂತೆ ಇದ್ದವು.? ಎಂದು ಜ್ವರದಲ್ಲಿಯೇ ಅವನು ಬಡಬಡಿಸುತ್ತಿದ್ದನು. ನಾಗಾನಂದಾ! ಅಂದು ನೀವು ಆವನಿಂದ ರಕ್ಷಿಸಲ್ಪಟ್ಟಿರಿ. ಇಂದು ವತ್ಸಲೆಯು ನಿಮ್ಮಿಂದ ಬದುಕಿಸಲ್ಪಟ್ಟಳು. ಎಂಥಹ ಯೋಗಾಯೋಗವಿದು! ರತ್ನಾಕರನು ನಿನ್ನನ್ನು ಬೆಂಕಿಯಿಂದ ಉಳಿಸಿದ, ನೀನು ವತ್ಸಲೆಯನ್ನು ನೀರಿನಿಂದ ಉಳಿಸಿದೆ. ನಾಗಾನಂದಾ! ಅಳಬೇಡ. ಆದದ್ದು ಆಗಿ ಹೋಯಿತು. ಮಗು ಅಳಬೇಡ." ಎಂದು ಆವನನ್ನು

ಹತ್ತಿರ ಕರೆದು ಕೂಡಿಸಿಕೊಂಡಳು. "ಅಜ್ಜೀ, ನಾವು ಅಭಾಗಿಗಳು. ನಾನು ನಾನು ಅಭಾಗಿ. ವತ್ಸಲೆಯನ್ನು ಪರದೇಶಿಯನ್ನಾಗಿ ಮಾಡಿದೆ. ನನ್ನನ್ನು ಉಳಿಸುವದಕ್ಕಾಗಿ ಆಕೆಯ ತಂದೆಯು ಬರದಿದ್ದರೆ, ಅವನು ಬದುಕುತ್ತಿದ್ದ. ವತ್ಸಲೆಯ ತಾಯಿಯು ಬದುಕುತ್ತಿದ್ದಳು. ಎಲಾ, ಏಸಿದು, ನನ್ನ ಸಲುವಾಗಿ ಇಷ್ಟೆಲ್ಲ ಅನರ್ಥ. ನಾನು ದುರ್ದೈವಿ, ಕರಿಗಾಲ." ಎಂದು ನಾಗಾನಂದನು ಹಣೆ ಹಣೆ ಬಡೆದುಕೊಳ್ಳಹತ್ತಿದನು. ಸುಶ್ರುತೆಯು ಅವನನ್ನು ಶಾಂತ ಗೊಳಿಸಿದಳು. ಚಿಕ್ಕ ಮಗುವಿನಂತೆ ಅವನು ಸುಮ್ಮನೆ ಕುಳಿತನು. ಸುಶ್ರುತೆಯ ತೊಡೆಯ ಮೇಲೆ ಮಲಗಿಕೊಂಡನು.

ವತ್ಸಲೆಯು ಹಾಡುತ್ತ ಹಾಡುತ್ತ ಹೊರಗಿನಿಂದ ಬಂದಳು. ವನ ದೇವತೆಯಂತೆ ಶೃಂಗಾರವಾಗಿದ್ದಳು. ತಲೆಯಲ್ಲಿ ಹೂವನ್ನು ಮುಡಿದಿದ್ದಳು. ಕಿವಿಯಲ್ಲಿ ಹೂಗಳನ್ನು ಸಿಗಿಸಿಕೊಂಡಿದ್ದಳು. ಕೊರಳಲ್ಲಿ ಹೂಮಾಲೆಗಳನ್ನು ಧರಿಸಿದ್ದಳು. ಚಿತ್ರ ವಿಚಿತ್ರವಾದ ನಾನಾವರ್ಣದ ಸುಗಂಧವುಳ್ಳ ಹೂಮಾಲೆ ಗಳನ್ನು ಅವಳು ಧರಿಸಿದ್ದಳು. ವತ್ಸಲೆಯು ಬಂದೊಡನೆಯೆ ಮನೆಯಲ್ಲಿ ಆಕೆಗೆ ಶಾಂತ ಹಾಗೂ ಗಂಭೀರ ವಾತಾವರಣವು ಕಣ್ಣಿಗೆಬಿತ್ತು.

'ವತ್ಸಲೇ, ಗದ್ದಲಮಾಡಬೇಡ; ಎಂದಳು ಅಜ್ಜಿ.

'ಇವರನ್ನು ನೋಡಲು, ಗುಡಿಸಿಲಿಗೆ ಹೋಗಿದ್ದೆ. ಅಲ್ಲಿ ಯಾರೂ ಇರಲಿಲ್ಲ. ಅಲ್ಲಿ ಇವರ ಕೊಳಲು ಇದ್ದಿತು. ಅದನ್ನು ಊದಿದೆವು. ಆದರೆ ನನಗಾರಿಗೂ ಅದನ್ನು ಚನ್ನಾಗಿ ಊದಲು ಬರಲಿಲ್ಲ. ಇವರು ಯಾವಾಗ ಬಂದರು ? ಮಲಗಿರುವರೇಕೆ ? ಮೈಯ್ಯಲ್ಲಿ ನೆಟ್ಟಗಿಲ್ಲವೆ ? ಇಲ್ಲಿ ನೋಡು, ಕಾಲಿಗೆ ಆದ ಘಾಯದ ಗುರುತನ್ನು. ಅದಕ್ಕೆ ನನ್ನ ಶೆರಗನ್ನು ಹರಿದು ಕಟ್ಟಿದ್ದೆನು. ಅವರನ್ನು ಎಬ್ಬಿಸಲಾ ? 'ಕಟ್ಟ್ಯಾಡಿಸಲ್ಯಾ ? ಕಿವಿಯಲ್ಲಿ ಈ ಹೂವಿನ ದೇಟನ್ನು ಹಾಕಲ್ಯಾ ?" ಎಂದು ಮೆಲ್ಲಗೆ ಅಜ್ಜಿಯ ಕೈಗಳನ್ನು ಜಗ್ಗುತ್ತ ವತ್ಸಲೆಯು ಮಾತನಾಡಿದಳು.

"ವತ್ಸಲೇ, ನನಗೆ ಇಂದು ಒಂದು ಮಹತ್ವವಾದ ಮಾತು ತಿಳಿಯಿತು. ಸಹಜವಾಗಿ ಅವನ ಮಾತಿನಲ್ಲಿ ಅದು ಹೊರಬಿದ್ದಿತು. ಸುಡುವ ಮನೆಯಿಂದ

ನಿನ್ನ ತಂದೆಯು ಹೊರತೆಗೆದ ಇಬ್ಬರಲ್ಲಿ ಈ ನಾಗಾನಂದನೊಬ್ಬ. ನಿನ್ನ ತಂದೆಯು ತನ್ನನ್ನು ಬದುಕಿಸಿದವನೆಂದು, ಅವನಿಗೆ ತಿಳಿದೊಡನೆಯೇ ಅವನಿಗೆ ಬಹಳ ಬಹಳ ದುಃಖವಾಯಿತು. ತನ್ನಿಂದಲೇ ವತ್ಸಲೆಯ ತಂದೆ ತಾಯಿಗಳು ಸತ್ತರೆಂಬ ಸಂಗತಿಯನ್ನು ಅರಿತು, ಅವನು ಅಳಹತ್ತಿದನು. ಹಣೆ ಹಣೆ ಬಡೆದುಕೊಳ್ಳಹತ್ತಿದನು. ನಾನು ಅವನನ್ನು ಶಾಂತಗೊಳಿಸಿದೆ. ಈಗ ಆವನು ಹುಡುಗನಂತೆ ಮಲಗಿದ್ದಾನೆ. ” ಎಂದಳು ಅಜ್ಜಿ.

‘ ನನ್ನ ತಂದೆಯು ಇವನನ್ನು ಬದುಕಿಸಿದ, ಇವನು ನನ್ನನ್ನು ಬದುಕಿಸಿದ, ಹೇಗಿದೆ ನೋಡಿರಿ ಈ ಯೋಗಾಯೋಗ! ಅಜ್ಜೀ ಇದರಲ್ಲಿ ಏನು ಗೂಢವಿದೆ ? ಎಂದು ವಿಚಾರಿಸಿದಳು ವತ್ಸಲೆ.

ವತ್ಸಲೆಯು ಆನಂದದಿಂದ ಬಂದಿದ್ದಳು. ಆದರೆ ಗಂಭೀರಳಾದಳು. ಆಕೆಯು ಅವಳ ಹತ್ತಿರವೇ ಕುಳಿತಳು. ಆಕೆಯೂ ಮಲಗಿದಳು. ಇಬ್ಬರ ಕಡೆಗೂ ಅವಳು ನೋಡುತ್ತಿದ್ದಳು. ಇಬ್ಬರ ತಲೆಯ ಮೇಲೂ ಕೈಯಾಡಿಸುತ್ತಿದ್ದಳು. ನಿದ್ದೆಯಲ್ಲಿ ನಾಗಾನಂದನ ಕೈಯು ವತ್ಸಲೆಯ ಹತ್ತರ ಬಿದ್ದಿತು. ಇಬ್ಬರ ಕೈಗಳು ಒಂದೆಡೆ ಕೂಡಿದವು. ನಾಗಾನಂದನಿಗೆ ಎಚ್ಚರವಾಯಿತು. ಆವನ ಕೈಯಲ್ಲಿ ಯಾರ ಕೈಯಿತ್ತು? ಅವನು ನೋಡಿದನು. ಅದು ಕೆಂಪಾದ ಕೈಯು. ತನ್ನ ಕೈಯನ್ನು ದೂರ ಸರಿಸಿಕೊಂಡನು. ವತ್ಸಲೆಯು ಎಚ್ಚರಾದಳು. ಆಕೆಯೂ ಅವನ ಕಡೆಗೆ ನೋಡಿದಳು.

‘ ಇಬ್ಬರೂ ಕೈ ಕೈ ಹಿಡಿಯಿರಿ. ನಾನು ನಿಮ್ಮ ಕೈಗಳನ್ನು ಹಿಡಿಸುವೆನು. ಪಾಣಿಗ್ರಹಣವನ್ನು ಮಾಡಿರಿ. ಅಜ್ಜಿಯ ತೊಡೆಯ ಮೇಲೆಯೇ ಪಾಣಿಗ್ರಹಣವಾಗಲಿ. ನೀವು ಪರಸ್ಪರರ ಸಲುವಾಗಿಯೇ ಹುಟ್ಟಿರುವಿರಿ. ನೀವಿಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ದೂರ ಇರಲಾರಿರಿ. ಇಬ್ಬರೂ ಕೂಡಿಕೊಂಡರೇ ಸುಖವಾಗುವದು. ವತ್ಸಲೇ ಇಲ್ಲಿ ಬಾ. ನಿನ್ನ ಕೊರಳಲ್ಲಿಯ ಮಾಲೆಯೊಂದನ್ನು ತೆಗೆದು, ಈ ನಾಗಾನಂದನ ಕೈಯಲ್ಲಿ ಕೊಡು. ಹಾಗೂ ನೀನೊಂದನ್ನು ಕೈಯಲ್ಲಿ ತೆಗೆದುಕೊ. ಇಬ್ಬರೂ ಪರಸ್ಪರರಿಗೆ ಮಾಲೆಯನ್ನು ಹಾಕಿರಿ. ಏನು ವಿಚಾರ ಮಾಡುವಿರಿ ? ನಾನು ಹೇಳುತ್ತೇನೆ ಹಾಕಿರಿ. ” ಎಂದು ಪ್ರೇಮದಿಂದ ಅಜ್ಜಿಯು ನುಡಿದಳು.

ವತ್ಸಲೆಯು ತನ್ನ ಕೊರಳೊಳಗಿನ ಮಾಲೆಯೊಂದನ್ನು ತೆಗೆದು ನಾಗಾನಂದನ ಕೈಯಲ್ಲಿ ಕೊಟ್ಟಳು. ತಾನೊಂದನ್ನು ಹಿಡಿದುಕೊಂಡಳು. ಇಬ್ಬರೂ ಒಬ್ಬರಿಗೊಬ್ಬರು ಮಾಲೆಯನ್ನು ಹಾಕಿದರು. ಇಬ್ಬರೂ ಅಜ್ಜಿ ಸುಶ್ರುತೆಗೆ ನಮಸ್ಕರಿಸಿದರು. ಅಜ್ಜಿಯ ಕಣ್ಣು ಆನಂದದಿಂದ ತುಂಬಿ ಬಂದವು. ಆಕೆಗೆ ಹಿಂದಿನ ನೂರಾರು ಸ್ಮೃತಿಗಳು ನೆನಪಾದವು. ಆಕೆಯು ಇಬ್ಬರಿಗೂ ಶುಭಾಶೀರ್ವಾದಗಳನ್ನು ಮಾಡಿದಳು- ವತ್ಸಲಾ ಹಾಗೂ ನಾಗಾನಂದರ ವಿವಾಹವಾಯಿತು.

———



ರಾಜಾ ಪರೀಕ್ಷಿತನು ಒಮ್ಮೊಮ್ಮೆ ಉಚ್ಚ ವಿಚಾರಗಳನ್ನು ಮಾಡಿದರೆ, ಒಮ್ಮೊಮ್ಮೆ ತೀರ ಕೀಳು ವಿಚಾರಕ್ಕಿಳಿಯುತ್ತಿದ್ದನು. ಅವನು ಚಂಚಲನಾಗಿದ್ದನು. ಅವನು ಇಂದು ಏನು ಮಾಡ್ಯಾನು, ನಾಳಿಗೆ ಏನು ಮಾಡುವನು ಎಂಬುವ ನಿಯಮವಿದ್ದಿಲ್ಲ. ಎಷ್ಟೋಸಾರೆ ತನ್ನ ಸ್ವತಃದ ವಿಚಾರ ಮಾಡಲು ಅವನಿಗೆ ಆಗುತ್ತಿದ್ದಿಲ್ಲ. ಇಂಥ ಮನಸ್ಸಿನ ಜನರ ಸ್ಥಿತಿಯು ಬಹಳ ವಿಚಿತ್ರವಾಗಿರುತ್ತದೆ. ಹೋದಲ್ಲೆಲ್ಲ ಬುದ್ಧಿವಂತ ಜನರು ಹೇಳಿದಂತೆ ಹೂಗುಟ್ಟುತ್ತಿದ್ದ. ಹಿಂದುಗಡೆ ಪಶ್ಚಾತ್ತಾಪ ಬಡುತ್ತಿದ್ದನು. ನಾನು ಹೀಗೆಯೇಕೆ ಮಾಡಿದೆ? ಎಂದು ತನ್ನಷ್ಟಕ್ಕೆ ತಾನೆ ಆಶ್ಚರ್ಯಚಕಿತನಾಗುತ್ತಿದ್ದ.

ಒಂದು ದಿವಸ ಪರೀಕ್ಷಿತನು ಜಗತ್ತಿನಲ್ಲಿ ಏನೂ ಅರ್ಥವೇ ಇಲ್ಲ ಎಂಬ ಬಗ್ಗೆ ವಿಚಾರ ಮಾಡುತ್ತಲಿದ್ದನು. ಇಂಥ ಮನಸ್ಥಿತಿಯಲ್ಲಿಯೇ ಅವನು ಬೇಟೆಗೆ ಹೋದ. ಗಂಡು ಚಿಗರಿ ಇರಲಿ, ಹೆಣ್ಣು ಚಿಗರಿ ಇರಲಿ, ಅದನ್ನು ಗುರಿಯಿಟ್ಟು ಹೊಡೆದುಬಿಡುವನು. ಅವನು ಇಂದು ಎಲ್ಲವನ್ನು ಕೊಲ್ಲುತ್ತಿದ್ದ. ಪಶುಪಕ್ಷಿಗಳೆನ್ನದೆ ಎಲ್ಲವನ್ನೂ ಕೊಲ್ಲತೊಡಗಿದ. ಜೀವನವೆಂದರೆ ನಿಸ್ಸಾರವೆಂದು ಅವನು ತಿಳಿದಿದ್ದನು.

ಒಂದು ಗಿಡದ ಮೇಲೆ ಒಂದು ಸರ್ಪವು ಸುರುಳಿ ಸುತ್ತಿಕೊಂಡು ಕುಳಿತಿತ್ತು. ಪರೀಕ್ಷಿತನು ಅದನ್ನು ನೋಡಿದನು. ಅವನು ಬಾಣಬಿಟ್ಟನು. ಸರ್ಪವು ಗಿಡದ ಹೊದರಿನಲ್ಲಿ ಅಡಗಿ ಕುಳಿತಿತು. ಮತ್ತೆ ಬಾಣಬಿಟ್ಟನು. ಆ ಹಾವು ಸತ್ತಿತು. ಪ್ರಚಂಡವಾದ ಹಾವು ಇತ್ತು. ಆ ಸತ್ತ ಹಾವನ್ನು ತನ್ನ ಸಂಗಡ ತೆಗೆದುಕೊಂಡು ಹೊರಟನು.

" ಅಲ್ಲಿ, ಗಿಡದ ಬುಡದಲ್ಲಿ ಕೂತವರಾರು ? " ಎಂದು ಪರೀಕ್ಷಿತನು ವಿಚಾರಿಸಿದನು.

" ಅವನು ಒಬ್ಬ ನಾಗಜಾತಿಯ ಋಷಿಯು. ಅವನು ಈ ಗಿಡದ ಬುಡದಲ್ಲಿ ಕುಳಿತು ತಪಶ್ಚರ್ಯ ಮಾಡುತ್ತಿದ್ದಾನೆ. " ಎಂದನು ಸೇವಕ.

" ಅವನಿಗೆ ನಾಗಪೂಜೆಯು ಪ್ರೀಯುವಲ್ಲವೆ ! ಈ ಸತ್ತ ಹಾವನ್ನು ಅವನ ಕೊರಳಲ್ಲಿ ಹಾಕಿರಿ ! ಜೀವಂತ ಸರ್ಪವನ್ನು ಹತ್ತಿರವಿಟ್ಟುಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಸತ್ತದ್ದಾದರೂ ಹತ್ತಿರವಿರಲಿ. ಇವರ ದೇವರ ಮೈಮೇಲೆ ಹಾವುಗಳಿರುತ್ತವೆ. ಇವರ ಪಶುಪತಿಯ ಕಲ್ಲಿನ ಮೂರ್ತಿಯ ಕೊರಳಲ್ಲಿ ಹಾವುಗಳಿರುತ್ತವೆ. ಆದಕ್ಕೆ ಅವರು ಮಹಾದೇವನೆನ್ನುವರು. ಇವರಲ್ಲಿ ಬಹಳ ದೇವತೆಗಳಿವೆ. ಚಿತ್ರವಿಚಿತ್ರವಾದ ದೈವತಗಳಿವೆ. ನಾವು ಈ ಎಲ್ಲ ದೇವತೆಗಳನ್ನು ಒಂದೆಡೆಗೆ ತರುವ ಬಗೆ ಹೇಗೆ? ಇದನ್ನು ಆಸ್ತಿಕನು ಮಾಡಬಲ್ಲ. ನಾವು ಸ್ವಲ್ಪ ವಿನೋದ ಮಾಡುವಾ. ತನ್ನಿರಿ ಸಾಕಷ್ಟು ಉದ್ದವಾಗಿವೆ. ಆ ಸತ್ತ ಹಾವನ್ನು ಈ ಋಷಿಯನ್ನು ಮಹಾದೇವನನ್ನಾಗಿ ಮಾಡುವಾ. " ಎಂದು ಪರೀಕ್ಷಿತನು ಸೇವಕರಿಗೆ ಅಂದನು.

ಸತ್ತ ಹಾವನ್ನು ತೆಗೆದು ರಾಜನು ಋಷಿಗೆ ಅಲಂಕರಿಸುವನೇನೋ ಅಂಬುವಂತೆ ಅದನ್ನು ಅವನ ಕೊರಳಿಗೆ ಹಾಕಿದನು. ಸೇವಕರೆಲ್ಲ ನಕ್ಕರು. ಕೆಲವರು ಗಂಭೀರರಾದರು. ' ರಾಜನಿಗೆ ಇದು ಆಟವಾಗಬಹುದು, ಆದರೆ ಮುಂದೆ ಕಾಲವು ಕಠಿಣವಾದೀತು ' ಎಂದು ಕೆಲವರ ಮನಸ್ಸಿನಲ್ಲಿ ಬಂದಿತು. ಆದರೆ ಸ್ಪಷ್ಟವಾಗಿ ಯಾರೂ ಮಾತನಾಡಲಿಲ್ಲ.

ರಾಜನು ರಥವನ್ನೇರಿದನು. ರಾಹುತರು ಕುದುರೆಯನ್ನೇರಿದರು. ವಾಯು ವೇಗದಿಂದ ಹೊರಟುಹೋದರು. ನಾಗತರುಣರಿಗೆ ಆ ಋಷಿಯ ಬಗ್ಗೆ ಬಹಳ ಆದರವಿತ್ತು. ಆದರಲ್ಲಿಯೂ ತಕ್ಷಕಕುಲದ ನಾಗತರುಣರಿಗಂತೂ ಅಪೂರ್ವ ಭಕ್ತಿಯಿತ್ತು. ಒಬ್ಬ ನಾಗತರುಣನು ಪ್ರತಿದಿನ ಸಂಜೆಗೆ ಅಲ್ಲಿಗೆ ಬರುತ್ತಿದ್ದ. ಅವನು ಆ ಋಷಿಯ ಮುಖದಲ್ಲಿ ಹಾಲನ್ನು ಹಾಕುತ್ತಿದ್ದ. ಸ್ವಲ್ಪ ವೇಳೆ ಅಲ್ಲಿ ಕುಳಿತು, ನಮಸ್ಕಾರಮಾಡಿ ಹೋಗುತ್ತಿದ್ದ. ಅಂದು ಸಂಜೆಗೆ ಆ ತರುಣನು

ಅಲ್ಲಿಗೆ ಬಂದ. ಅಲ್ಲಿ ಅಸಂಬದ್ಧ ನೋಟವು ಅವನಕಣ್ಣಿಗೆ ಬಿತ್ತು. ಅದು ಅವನ ದೇವರ ವಿಡಂಬನೆಯಾಗಿತ್ತು. ನಾಗರು ಸರ್ಪವನ್ನು ಕೊಲ್ಲುವದಿಲ್ಲ. ಹೊಡೆದ ಮೇಲೆ ಅದರ ಚೇಷ್ಟೆಯನ್ನು ಮಾಡುವದಿಲ್ಲ. ಅದನ್ನು ಸುಡುತ್ತಿದ್ದರು. ಹಾವುಗಳೆಂದರೆ ದೇವರೆಂದು ತಿಳಿದು ಅವರು ಅವುಗಳನ್ನು ಪೂಜಿಸುತ್ತಿದ್ದರು. ' ಹೇ ನಾಗರೂಪಿ ಪರಮಾತ್ಮನೆ ! ಹೇ ಸರ್ಪಸ್ವರೂಪಿ ದೇವಾ, ನಮ್ಮನ್ನು ಹಾವುಗಳಿಂದ ರಕ್ಷಿಸು, ಎಂದು ಪ್ರಾರ್ಥಿಸುತ್ತಿದ್ದರು.

ಋಷಿಯ ಹಾಗೂ ಹಾವಿನ ವಿಡಂಬನೆಯು ಆ ತರುಣನಿಗೆ ಸಹನವಾಗಲಿಲ್ಲ. ಅವನು ಸತ್ತಹಾವನ್ನು ಮೆಲ್ಲನೆ ತೆಗೆದ. ಅವನು ಅದನ್ನು ಹುಗಿದನು. ಅದರ ಮೇಲೆ ಹೂಗಳನ್ನೇರಿಸಿದನು. ಋಷಿಯ ಮೈಮೇಲೆ ರಕ್ತವು ಬಿದ್ದಿತ್ತು. ಅವನು ಅದನ್ನು ಮೆಲ್ಲನೆ ಒರಿಸಿದನು. ಆಮೇಲೆ ಋಷಿಯ ಮುಖದಲ್ಲಿ ಹಾಲನ್ನು ಹಾಕಿದನು. ಅವನ ಬಳಿಯಲ್ಲಿ ಶಾಂತ ಮನಸ್ಸಿನಿಂದ ಕುಳಿತ. ನಂತರ ಎದ್ದು ಹೊರಟು ಹೋದನು.

ಆದರೆ ಅವನ ಮನಸ್ಸಿನಲ್ಲಿ ಆ ಅಪಮಾನವು ಸುಡುತ್ತಲಿತ್ತು. ಈ ಚೇಷ್ಟೆಯನ್ನು ಮಾಡಿದವರಾರು ? ಅವನು ಅವರನ್ನು ಹುಡುಕಹತ್ತಿದ. ಸ್ವತಃ ರಾಜಾ ಪರೀಕ್ಷಿತನೇ ಈ ಕಾರ್ಯವನ್ನೆಸಗಿದನೆಂದು ಅವನಿಗೆ ತಿಳಿದು ಬಂತು. ವಕ್ರತುಂಡನು ಇದರ ಲಾಭವನ್ನು ಮಾಡಿಕೊಂಡನು. ' ರಾಜನಿಗೆ ' ನಾಗಪೂಜೆಯು ಮಾನ್ಯವಿಲ್ಲ. ' ನಾಗಜಾತಿಯ ಸಂಸ್ಕೃತಿಯು ಮಾನ್ಯವಿಲ್ಲ ' ಎಂದು ಅವನೂ ಅವನ ಅನುಯಾಯಿಗಳೂ ಪ್ರಚಾರ ಮಾಡಹತ್ತಿದರು. ಹಾವುಗಳನ್ನು ಹೊಡೆಯುವದು ಅವುಗಳನ್ನು ಎತ್ತಿಕೊಂಡು ಹೋಗಿ, ನಾಗರ ಮೂರ್ತಿಮೇಲೆ ಒಗೆಯುವದು, ಎಲ್ಲೆಡೆಯಲ್ಲಿಯೂ ಆರಂಭವಾಯಿತು. ಹಾವುಗಳನ್ನು ಹೊಡೆದು ನಾಗರ ಮೈ ಮೇಲೆ ತೂರತೊಡಗಿದರು. ರಾಜನ ಬೆಂಬಲವು ತಮಗಿದೆಯೆಂದು ಅವರು ತಿಳಿದಿದ್ದರಿಂದ ಒಳಗೆ ಹುದುಗಿದ ಅವರ ದ್ವೇಷಾಗ್ನಿಯು ಹೊರಗೆಬೀಳಹತ್ತಿತ್ತು.

ನಾಗತರುಣರಲ್ಲಿಯೂ ಪ್ರಚಂಡವಾದ ಚಟುವಟಿಕೆಗಳಾಗಹತ್ತಿದವು. ಆರ್ಯರ ಆಕಳುಗಳನ್ನು ಕದಿಯುವದೂ ಆರ್ಯರ ಮೇಲೆ ದಾಳಿಮಾಡು

ವದೂ ಮೊದಲಾಯಿತು. ಜೀವನವು ಸುರಕ್ಷಿತವಾಗಿ ನಡೆಯ ದಾಯಿತು.

ಒಂದು ದಿವಸ ಕೆಲವು ತಕ್ಷಕ ಜಾತಿಯ ನಾಗ ತರುಣರ ಗುಪ್ತ ಸಭೆ ಯೊಂದು ಅರಣ್ಯದಲ್ಲಿ ಕೂಡಿತ್ತು. ಆರ್ಯರ ಮೇಲಿನ ಸೇಡನ್ನು ಹೇಗೆ ತಿರಿಸಬೇಕೆಂಬ ಬಗ್ಗೆ ಚರ್ಚೆಗಳಾಗಹತ್ತಿದವು. ' ರಾಜಾ ಪರೀಕ್ಷಿತನನ್ನು ಕೊಲ್ಲಬೇಕು. ' ಎಂದು ಕೆಲವರು ಅನ್ನಹತ್ತಿದರು, ಇದೆಲ್ಲವೂ ರಾಜನ ಕುತಂತ್ರವು. ಅವನಿಗೆ ನಮ್ಮ ಸಂಗಡ ಜಗಳಾಡ ಬೇಕಾಗಿದೆ ' ಎಂದು ಒಬ್ಬನು ಅಂದು ತೋರಿಸಿದನು. ಚರ್ಚೆಗಳು ಜೋರಿನಿಂದ ನಡೆದವು.

' ಆರ್ಯರ ವಿರದ್ಧವಾಗಿ ಎಲ್ಲ ನಾಗರೂ ಸಂಘಟಿತರಾಗಬೇಕು. ಮಣಿಪುರ ಮೊದಲಾದ ನಾಗರಾಜ್ಯಗಳಲ್ಲಿಯೇ ಹೆಚ್ಚಾಗಿ ಸಂಘಟನೆ ಮಾಡಬೇಕು ' ಎಂದು ಮಣಿನಾಗನೆಂದನು

' ಇಂದ್ರ ಮೊದಲಾದ ಆರ್ಯರಾಜರು ನಮಗೆ ಅನೂಕೂಲರಾಗಿ ದ್ದಾರೆ. ಅವರ ಸಂಗಡ ಹೆಚ್ಚು ಸ್ನೇಹ ಬೆಳೆಸಬೇಕು. ಇಂದ್ರನ ರಾಜ್ಯದಲ್ಲಿ ಆರ್ಯ, ನಾಗರೆಂಬ ಬೇಧವಿಲ್ಲ. ಅಲ್ಲಿ ನಾಗರು ದೊಡ್ಡ ದೊಡ್ಡ ಅಧಿ ಕಾರಿಗಳಾಗಿದ್ದಾರೆ ' ಎಂದು ತೇಜಸ್ವಿಯಾದ ವಾಸುಕಿಯೆಂದನು.

" ಇಂದ್ರನಲ್ಲಿ ನಾಗರಿಬ್ಬರು ಮಂತ್ರಿಗಳಾಗಿದ್ದಾರೆ, ಮತ್ತು ಇಂದ್ರನು ಅವರಿಗೆ ಅಲ್ಲಿ ಬಹಳ ಮರ್ಯಾದೆಯನ್ನು ಕೊಡುತ್ತಾನೆ ' ಎಂದು ಅನಂತ ನೆಂದನು,

' ನಮ್ಮ ಮಹೋತ್ಸವಗಳಲ್ಲಿಯೂ ನಮ್ಮ ಜಾತ್ರೆಗಳಲ್ಲಿಯೂ ನಾವು ಇದನ್ನು ಪ್ರಚಾರ ಮಾಡಬೇಕು ' ಎಂದು ತಕ್ಷಕನು ಆವೇಶದಿಂದ ನುಡಿದನು.

' ಆದರೆ ಏನೆಂದು ಪ್ರಚಾರ ಮಾಡಬೇಕು ? ಕಾರಣವೆಂದರೆ ನಾಗರ ಮಹೋತ್ಸವಗಳಿಗೆ ಆರ್ಯರೂ, ಆರ್ಯರ ಮಹೋತ್ಸವಗಳಿಗೆ ನಾಗರೂ ಹೋಗುತ್ತಾರೆ. ಬಹಳ ಜನರು ಒಬ್ಬರಿಗೊಬ್ಬರು ಒಳ್ಳೇ ರೀತಿಯಿಂದ ನಡೆದುಕೊಳ್ಳುತ್ತಾರೆ. ಸಂಬಂಧವು ಧೃಢವಾಗುತ್ತಲಿದೆ. ಆದ್ದರಿಂದ ನಾವು ಬಹಳ ಜಾಗರೂಕತೆಯಿಂದ ಪ್ರಚಾರ ಮಾಡಬೇಕು. ನಾಗರು ಸಂಘಟಿತ ರಾಗಬೇಕು. ಆದರೆ ಆರ್ಯರೊಡನೆ ದ್ವೇಷವನ್ನು ಮಾಡಕೂಡದು.

ಆರ್ಯರು ಹೊರಗಿನಿಂದ ಬಂದವರಾದ್ದರಿಂದ ಅವರನ್ನು ಹೊಡೆದೋಡಿಸ ಬೇಕೆಂದು ನಾವು ಅನ್ನಕೂಡದು. ಆರ್ಯರು ನಾಗರ ಮೇಲೆ ಒತ್ತಾಯ ವನ್ನು ಮಾಡಿದರೆ, ಹಾಗು ನಾಗರ ಧಾರ್ಮಿಕಭಾವನೆಗಳಿಗೆ ಆತಂಕವನ್ನುಂಟು ಮಾಡಿದರೆ ಮಾತ್ರ ಅವರ ಪ್ರತಿಕಾರ ಮಾಡಬೇಕು. ಎರಡೂ ಸಮಾಜ ದವರು ಶಾಂತಿಯಿಂದಿರಬೇಕೆಂದು ನನ್ನ ಇಚ್ಛೆಯಿದೆಯೆಂದು ಹೇಳಬೇಕು.

ದ್ವೇಷಕ್ಕಾಗಿ ದ್ವೇಷ ಮಾಡುವದು ಬೇಡ. ಒಳ್ಳೆಯ ಆರ್ಯರನ್ನು ನಾವು ಹೊಗಳಬೇಕು. ಎಲ್ಲ ಆರ್ಯರು ದುಷ್ಟರೇ ಎಂದು ಅನ್ನಲು ಬರುವ ದಿಲ್ಲ. ನಮ್ಮಲ್ಲಿ ಕೆಲವು ನಾಗರು ‘ ಈ ದೇಶವು ನಾಗರದೇ ’ ಎಂದು ಚಳ ವಳಿಯನ್ನು ಹೂಡಿದ್ದಾರೆ. ಅತ್ತಕಡೆಗೆ ವಕ್ರ ತುಂಡ ಮೊದಲಾದ ಕೆಲವು ಆರ್ಯರೂ ‘ ಇದು ಆರ್ಯಾವರ್ತವಿದೆ. ಇಲ್ಲಿ ವಾಸ ಮಾಡಿಕೊಂಡಿರುವ ನಾಗರನ್ನೂ ಹಾಗೂ ಇತರರನ್ನೂ ಸಮುದ್ರದ ಆಚೆಗೆ ಓಡಿಸಿಬಿಡೋಣ ’ ಎಂದು ಅನ್ನತೊಡಗಿದ್ದಾರೆ. ನಾವು ಈ ಎರಡೂ ತಳಬುಡವಿಲ್ಲದ ಪ್ರಚಾರ ವನ್ನು ನಿಲ್ಲಿಸಬೇಕು, ಎಂದು ನನಗೆ ಅನಿಸುತ್ತದೆ. ಒಂದೇ ನೀಲಾಕಾಶದ ಕೆಳಗೆ ನಮ್ಮೆಲ್ಲರಿಗೆ ಆನಂದದಿಂದಿರಲು ಏಕೆ ಬರುವದಿಲ್ಲ ? ” ಎಂದು ಗಂಭೀರ ನಾದ ನೀಲಾಂಗನು ನುಡಿದನು.

‘ ನಾನು ಪರೀಕ್ಷಿತನನ್ನು ಕೊಲ್ಲುವ ಪ್ರತಿಜ್ಞೆ ಮಾಡಿದ್ದೇನೆ ’ ಎಂದು ಒಬ್ಬ ಯುವಕನು ಅಂದನು.

‘ ಒಬ್ಬನನ್ನು ಕೊಂದರೇನಾಗುವದು ? ಒಮ್ಮೆ ಹೊಡೆದಾಟವು ಸುರು ವಾಯಿತೆಂದರೆ ಮುಂದೆ ಕಠಿಣವಾದೀತು. ಸಾಧ್ಯವಾದಷ್ಟು ಹೊಡೆದಾಟ ವನ್ನು ನಿಲ್ಲಿಸಲು ಯತ್ನಿಸಬೇಕು. ಮತ್ತು ಈ ವೈಯ್ಯಕ್ತಿಕ ಕೊಲೆಯನ್ನು ತಡೆಹಿಡಿಯಬೇಕು. ಪ್ರತ್ಯಕ್ಷವಾಗಿ ಯುದ್ಧವನ್ನು ಮಾಡಲೇಬೇಕಾದರೆ ಅದಕ್ಕೆ ಉಪಾಯವಿಲ್ಲ.’ ಎಂದು ಅನಂತನು ಸೂಚಿಸಿದನು.

‘ ಈ ದೇಶವನ್ನೆಲ್ಲ ಎತ್ತಿಹಾಕಬೇಕೆಂದು ಆರ್ಯರು ಮುಂಚಿನಿಂದಲೂ ಹೊಂಚು ಹಾಕಿದ್ದಾರೆ. ‘ ಕೃಣ್ವತೊ ವಿಶ್ವಮಾರ್ಯಂ ’ ಎಂಬುದೇ ಅವರ ಮಂತ್ರವು. ಆರ್ಯರು ಜಗತ್ತನ್ನೆಲ್ಲ ವ್ಯಾಪಿಸಬೇಕೆಂಬ ಮಹತ್ವಾ ಕಾಂಕ್ಷೆಯುಳ್ಳವರಾಗಿದ್ದಾರೆ. ಕೆಲವು ದಿನಗಳಲ್ಲಿ ಅವರು ನಮ್ಮನ್ನು

ಓಡಿಸುವರು. ಅಥವಾ ನಮ್ಮ ನಾಗರ ಶಿಷ್ಟಾಚಾರಗಳನ್ನಾದರೂ ನಾಶ ಮಾಡುವರು. ಅವರೆಲ್ಲರ ಅಭಿಪ್ರಾಯ ಹೀಗೇ ಇದೆಯೆಂದು ನಾನನ್ನುವದಿಲ್ಲ. ಅವರಲ್ಲಿಯೂ ಕೆಲವು ದೊಡ್ಡವರು "ನಾವೆಲ್ಲರೂ ಒಬ್ಬ ದೇವರ ಮಕ್ಕಳು. ಪರಸ್ಪರರು ಒಳ್ಳೆಯದನ್ನು ಸ್ವೀಕರಿಸಿ ಆನಂದದಿಂದ ಇರೋಣ," ಎನ್ನುವರು ಎಂದು ನಿಲಾಂಗನು ಹೇಳಿದನು.

'ನಾವು ಯಾವ ದೇವರನ್ನು ಪೂಜಿಸಬೇಕು? ಮಳೆತರುವ ವರುಣನನ್ನೋ? ಸುಡುವ ಅಗ್ನಿಯನ್ನೋ? ಹಾರಿಸುವ ವಾಯುವನ್ನೋ? ಉಕ್ಕೇರುವ ಈ ಸಮುದ್ರ ರಾಜನನ್ನೋ? ಎಂದು ಅನೇಕರು ಈ ಆರ್ಯಾವರ್ತದಲ್ಲಿ ಪ್ರಶ್ನೆಯನ್ನು ಕೇಳುತ್ತಾರೆ. 'ಒಬ್ಬನೇ ದೇವರಿಗೆ ಇವೆಲ್ಲ ಅನೇಕ ಹೆಸರುಗಳು. ಪ್ರತಿಯೊಂದು ಶಬ್ದವು ದೇವರನ್ನೇ ಸ್ತುತಿಸುತ್ತದೆ. ನಾಗನೆನ್ನಿರಿ, ಇಂದ್ರನೆನ್ನಿರಿ, ಇವೆಲ್ಲವೂ ಅನಂತ ಶಕ್ತಿಯನ್ನೇ ವರ್ಣಿಸುತ್ತವೆ.' ಎಂದು ಒಬ್ಬ ಮಹ ಋಷಿಯು ಹೇಳಿದನು. ಆರ್ಯರಲ್ಲಿ ಅನೇಕರು ಈ ಮತದವರಿರುತ್ತಾರೆ. ಆದರೆ ಸ್ವಾರ್ಥಿಗಳಾದ ಸಂಕುಚಿತ ವೃತ್ತಿಯ ಆರ್ಯರು, ಬೇರೆ ಧೋರಣವನ್ನು ಸ್ವೀಕಾರಮಾಡಿದ್ದಾರೆ. ಉದಾರ ಚರಿತರಾದ ಆರ್ಯರು ನಮ್ಮ ಪಕ್ಷವನ್ನು ವಹಿಸುವಂತೆ, ನಾವು ನಮ್ಮ ಚಳವಳಿಯ ಉದ್ದೇಶವನ್ನು ವಿಶಾಲಗೊಳಿಸಬೇಕು. ಅಂದರೆ ಅವರು ನಮ್ಮಂತೆಯೇ ಮಾತನಾಡುವರು. ಆರ್ಯ ಹಾಗು ನಾಗರ ಸಂಯುಕ್ತ ಪ್ರಚಾರದಿಂದ ವಕ್ರತುಂಡನ ಮೋರೆಯು ಸರಳವಾದೀತು?" ಎಂದನು ವಾಸುಕಿ.

ನಾಗರ ಸಂಘಟನೆಯನ್ನು ಮಾಡಬೇಕು. ಆರ್ಯರ ಸಹಕಾರವನ್ನು ಪಡೆಯಬೇಕು ಎಂದು ಪರಿಷತ್ತಿನಲ್ಲಿ ನಿರ್ಣಯವಾಯಿತು. ಎಲ್ಲರೂ ಹೊರಟರು. ಆದರೆ ಪರೀಕ್ಷಿತನನ್ನು ಕೊಲೆಮಾಡುವ ಪ್ರತಿಜ್ಞೆಗೈದ ಆ ನವ ಯುವಕನು ಅಲ್ಲಿಯೇ ಉಳಿದ. ಮನಸ್ಸಿನಲ್ಲಿ ಏನೇನೋ ಗುಣಿಸುತ್ತಿದ್ದ. ಏನೋ ಹೊಳೆಯಿತು. ಚಪ್ಪಾಳೆಯನ್ನು ಬಾರಿಸಿದ. ಅವನಿಗೆ ಬಹಳ ಆನಂದವಾಯಿತು. ಅವನು ಹಸ್ತಿನಾಪುರಕ್ಕೆ ಹೊರಟ. ಅವನು ಬಹಳ

ಸುಂದರ. ಸವಿಮಾತುಗಾರ, ಬಹಳ ಚುರುಕು. ಅವನು ಪರೀಕ್ಷಿತನ ಮನೆಯಲ್ಲಿ ಅಡಿಗೆಯವನಾದ, ' ಪಕ್ವಾನ್ನಗಳನ್ನು ಮಾಡುವದರಲ್ಲಿ ಅವನು ಒಳ್ಳೇ ಬಲ್ಲಿದ. ಅವನ ಕೈಯಿಂದ ಅಮೃತವೇ ರಸವಾಗುತ್ತಿತ್ತು. ಪರೀಕ್ಷಿತನು ಅವನಿಗೆ ಬಹಳ ಮೆಚ್ಚಿದನು. ಅವನ ರಾಣಿಯರಂತೂ ಅವನನ್ನು ಕಂಡರೆ ಬಲುಪ್ರೀತಿ.

ಕೆಲವು ದಿನಗಳು ಗತಿಸಿದವು. ಪರೀಕ್ಷಿತನು ಚಿತ್ರಶಾಲೆಯಲ್ಲಿ ಉತ್ತರೆಯ ಚಿತ್ರವನ್ನು ನೋಡುತ್ತ ನಿಂತಿದ್ದನು. ಅವನ ಮನಸ್ಸಿನಲ್ಲಿ ಏನೋ ವಿಚಾರಗಳು ಬರಹತ್ತಿದವು. ನನ್ನ ಆಯುಷ್ಯದಲ್ಲಿ ನಾನು ಏನು ಮಾಡಿದೆ ? ಎಂಬ ವಿಚಾರಗಳು ಬರಹತ್ತಿದವು. ಮನಸ್ಸು ಉದ್ವಿಗ್ನ ವಾಯಿತು. ಅವನ ಸೇವಕರು ಅವನನ್ನು ಉಪವನಕ್ಕೆ ಕರೆದೊಯ್ದರು. ಅಲ್ಲಿರುವ ಸುಂದರ ಹೂಗಳಿಂದ ಅವನಿಗೆ ಆನಂದವಾಗಲಿಲ್ಲ. ಒಬ್ಬ ಸೇವಕನು ಅತ್ಯಂತ ಸುಗಂಧಯುಕ್ತವಾದ ನಾಗಸಂಪಿಗೆಯನ್ನು ತಂದು ಕೊಟ್ಟನು.

" ಇದಕ್ಕೆ ನಾಗಸಂಪಿಗೆ ಎನ್ನುವರು. ನಾಗರು ಇದನ್ನು ತಮ್ಮ ದೇವರಿಗೆ ಏರಿಸುವರು. ಈ ಹೂವು ಹಾವಿನ ಹೆಡೆಯಂತಿಲ್ಲವೇ ? ಮಹಾ ರಾಜ ! ಇದನ್ನು ತಕ್ಕೊಳ್ಳಿರಿ. " ಎಂದನು ಒಬ್ಬ ಸೇವಕ.

' ಈ ಹೂವನ್ನು ನನಗೇಕೆ ಕೊಡುವಿ ? ಇದನ್ನು ಹರಿದೊಗೆದರೂ ಅದು ಸುಗಂಧವನ್ನು ಬೀರುವದು. ಹರಿಯುವವನನ್ನೂ ಪ್ರಸನ್ನಗೊಳಿಸು ವದು. ನೀನು ನನ್ನನ್ನು ಹೊಡೆಯಲು ಬಂದರೂ ನಾನು ನಿನ್ನ ಕಲ್ಯಾಣ ವನ್ನು ಚಿಂತಿಸುವೆನೆ ? ಈ ಚಿಕ್ಕ ಹೂವಿನಲ್ಲಿ ಇದ್ದ ದೊಡ್ಡಿಸ್ತನವು ಮಾನವ ರಾದ ನಮ್ಮಲ್ಲಿರುವದೇ ? ಈ ಚಿಕ್ಕ ಹೂವಿನಲ್ಲಿ ಪರಿಪೂರ್ಣ ಜೀವನವು ತುಂಬಿದೆ. ನಾವು ನಮ್ಮ ಜೀವನವನ್ನು ಪರಿಪೂರ್ಣಗೊಳಿಸಿರುವೆವೇ ? ವ್ಯರ್ಥ ನಮ್ಮ ಜೀವನ. " ಎಂದು ಪರೀಕ್ಷಿತನು ಕೆಳಗೆ ಕುಳಿತುಕೊಂಡನು.

ಒಂದು ದಿನ ತನ್ನ ಪ್ರಧಾನಿಗಳನ್ನೆಲ್ಲ ಕರೆದು, ' ನನ್ನ ದುಃಖಗಳನ್ನೆಲ್ಲ ಮರೆಸುವವರಾರು ? ನನ್ನ ಅಶಾಂತ ಜೀವನಕ್ಕೆ ಶಾಂತಿಯನ್ನೀಯುವವ ರಾರು ? ಒಳಗಿನ ನನ್ನ ಜೀವನಕ್ಕೆ ಚಿಗುರೊಡೆಸುವ ವಸಂತನು ಯಾರು ?

ಇಂಥ ಮಹಾತ್ಮನು ಯಾವನಾದರೂ ಇರುವನೇ? ಯಾವನು ಆ ಪುಣ್ಯಾತ್ಮಾ? ಜೀವನದಲ್ಲಿ ಅನುಪಮ ಶಾಂತಿಯು ತುಂಬಿದವರಾರಾದರೂ ಇರುವರೇ?' ಎಂದು ವಿಚಾರಿಸಿದನು.

'ಮಹಾರಾಜನೆ, ಶುಕ್ರಾಚಾರ್ಯರಲ್ಲಿ ಈ ಎಲ್ಲ ಗುಣಗಳಿವೆ. ಅವರು ಬಾಲಬ್ರಹ್ಮಚಾರಿಗಳು. ಅವರು ಎಂಥ ಸಂಯಮಿ; ಎಂಥ ವಿರಕ್ತರು! ಅವರನ್ನು ಕರೆಯಿಸಿರಿ. ಅವರ ಜೀವನವೇ ಪರೋಪಕಾರಕ್ಕಿದೆ. ಅವರು ಒಲ್ಲೆನೆನ್ನುವದಿಲ್ಲ.' ಎಂದು ಮುಖ್ಯ ಪ್ರಧಾನಿಯು ಹೇಳಿದನು.

'ಶುಕ್ರಾಚಾರ್ಯರನ್ನು ಕರೆಯಿಸಿರಿ. ಕರೆಯಲು ರಥವನ್ನು ಕಳುಹಿಸಿರಿ. ಸ್ವಾಗತದ ಸಿದ್ಧತೆಯನ್ನು ಮಾಡಿರಿ. ಅವರನ್ನು ಕರೆತರಲು ನಾವೆಲ್ಲ ಎದುರಿಗೆ ಹೋಗೋಣ. ನಗರವನ್ನು ಶೃಂಗರಿಸಿರಿ. ಕೇಶರ, ಕಸ್ತೂರಿಗಳ ಥಳಿಯನ್ನು ಹಾಕಿರಿ. ಗಗನಚುಂಬಿತವಾದ ಧ್ವಜವನ್ನು ನಿಲ್ಲಿಸಿರಿ. ದಾರಿಯಲ್ಲಿ ಅಲ್ಲಲ್ಲಿ ಕಮಾನುಗಳನ್ನು ಕಟ್ಟಿಸಿರಿ. ಎಲ್ಲ ಮಂಗಳ ವಾದ್ಯಗಳು ಬರಲಿ, ಆ ಕಾಲಕ್ಕೆ. ನಾಗರ ಮಂಜುಳವಾದ ವಾದ್ಯಗಳು ಹಾವನ್ನು ತಲೆದೂಗಿಸುವ ಆ ಪುಂಗಿಯೂ ಭಿಲ್ಲರ ವಾದ್ಯಗಳೂ ಬರಲಿ ಅಭೂತಪೂರ್ವವಾದ ಉತ್ಸವವನ್ನು ಮಾಡಿರಿ.' ಶುಕ್ರಾಚಾರ್ಯರು. ಜ್ಞಾನಸೂರ್ಯರು. ಅವರ ಪೂಜೆಯು ನಡೆಯಲಿ. ಅವರು ಬರಲಿ. ಅಂಧಃಕಾರವನ್ನು ಕಳೆಯಲಿ" ಎಂದನು ಪರೀಕ್ಷಿತ.

ಶುಕರನ್ನು ಕರೆಯಲು ರಥವು ಹೋಯಿತು. ಶುಕಾಚಾರ್ಯರು ಬರುವರೆಂಬ ವಾರ್ತೆಯು ಎಲ್ಲೆಡೆಯಲ್ಲಿಯೂ ಹಬ್ಬಿತು. ಎಲ್ಲರ ಬಾಯಿಯಲ್ಲಿಯೂ ಅದೇ ಮಾತು. ಶುಕಾಚಾರ್ಯರ ಜ್ಞಾನ ಹಾಗೂ ವೈರಾಗ್ಯದ ಮಾತುಗಳನ್ನು ಎಲ್ಲರೂ ಕೇಳಿದ್ದರು. ಆದರೆ ಪ್ರತ್ಯಕ್ಷವಾಗಿ ಅವರನ್ನು ಯಾರೂ ನೋಡಿದ್ದಿಲ್ಲ. ಕಥೆಯನ್ನು ಕೇಳಿ ಕಿವಿಗಳು ಪುನೀತವಾಗಿದ್ದವು. ಇಂದು ದರ್ಶನದಿಂದ ಪಾವನವಾಗುವವಿದ್ದವು. ಹಳ್ಳಿ ಹಳ್ಳಿಗಳಿಂದ ಜನರು ಗುಂಪು ಗುಂಪಾಗಿ ಹಸ್ತಿನಾವತಿಗೆ ಬರಹತ್ತಿದರು. ಇಡೀ ಪಟ್ಟಣವೆಲ್ಲ ಗದಗಮಿಸಿತು. ಮನೆ ಮನೆಗೆ ತೋರಣಗಳನ್ನು ಕಟ್ಟಿದ್ದರು. ಹೂಬಳ್ಳಿ

ಗಳ, ಚಿಗುರೆಲೆಗಳ, ಬಾಳೇಗಿಡಗಳ ಕಮಾನುಗಳು ಅಲ್ಲಲ್ಲಿ ಕಂಗೊಳಿಸುತ್ತಿದ್ದವು. ಮುತ್ತು ಮಾಣಿಕಗಳಿಂದ ವಜ್ರ, ವೈಡೂರ್ಯಗಳಿಂದ, ವಾಪಾರಸ್ಥರು ಕಮಾನುಗಳನ್ನು ರಚಿಸಿದ್ದರು. ಪಚ್ಚೆ, ಇಂದ್ರನೀಲ, ಗೋಮೇಧ, ರತ್ನ, ಪುಷ್ಯರಾಗ ಮೊದಲಾದ ಅನೇಕ ರತ್ನಗಳಿಂದ ಮಂಟಪಗಳು ರಚಿಸಲ್ಪಟ್ಟಿದ್ದವು. ನವಿಲು, ಗಿಳಿ. ಹಂಸ, ಮೊದಲಾದ ಪಕ್ಷಿಗಳ ಆಕೃತಿಗಳನ್ನು ರತ್ನಗಳಿಂದ ಸಿದ್ಧಪಡಿಸಿ, ಅವುಗಳಿಂದ ತೋರಣಗಳನ್ನು ಶೃಂಗರಿಸಿದ್ದರು. ಜವಳೀ ಪೇಟಿಯಲ್ಲಿ ವಿವಿಧ ಚಿತ್ರವಿಚಿತ್ರವಾದ ವಸ್ತ್ರಗಳಿಂದ ಕಮಾನುಗಳನ್ನು ರಚಿಸಿದ್ದರು. ಚಿನಿವಾಲರು ಬೆಳ್ಳಿ, ಬಂಗಾರದ ಸಾಮಾನುಗಳಿಂದ ಕಮಾನುಗಳನ್ನು ಸಿದ್ಧಪಡಿಸಿದ್ದರು. ಎಲ್ಲಿ ನೋಡಿದಲ್ಲಿ ಅಪಾರವಾದ ಉತ್ಸಾಹ. ಅಪೂರ್ವವಾದ ಶೋಭೆ.

ಇಂದು ಪ್ರಭಾತ ಸಮಯದಲ್ಲಿ ರಥವು ಬರುವದಿತ್ತು. ಇತ್ತ ಉದಯಾಚಲದಲ್ಲಿ ಸೂರ್ಯನು ಮೇಲೆ ಬರಹತ್ತಿದನು. ಅತ್ತ ಶುಕಾಚಾರ್ಯರು ರಥದಲ್ಲಿ ಬರಹತ್ತಿದರು. ರಥವು ದೂರದಲ್ಲಿ ಕಂಡೊಡನೆಯೇ ಪ್ರಚಂಡವಾದ ಜಯಘೋಷವಾಯಿತು. ಆಕಾಶವೇ ಕೆಳಗೆ ಬೀಳುವದೋ ಏನೋ ಎನಿಸಿತು. ನಗರದ ಮಹಾದ್ವಾರವು ಉತ್ಕೃಷ್ಟವಾಗಿ ಶೃಂಗರಿಸಲ್ಪಟ್ಟಿತ್ತು. ಸೇವಕರು ಕೈಯಲ್ಲಿ ಹೂಬುಟ್ಟಿಗಳನ್ನು ಹಿಡಿದುಕೊಂಡು., ಮಹಾದ್ವಾರದ ಉಪ್ಪರಿಗೆಯ ಮೇಲೆ ಹೂಮಳೆಗರೆಯಲ ಸಿದ್ಧರಾಗಿದ್ದರು. ವಾದ್ಯಗಳು ಮೊಳಗಹತ್ತಿದವು. ಅವುಗಳ ಸಮ್ಮಿಶ್ರ ಧ್ವನಿಯು ಆನಂದವನ್ನೀಯುತ್ತಿತ್ತು. ಪರೀಕ್ಷಿತನು ಎದುರಿಗೆ ಹೋದನು. ಶುಕಾಚಾರ್ಯರು ಹೊರಬಂದರು. ಪರೀಕ್ಷಿತನು ಸಾಷ್ಟಾಂಗ ಪ್ರಣಾಮ ಮಾಡಿದನು. ಆಚಾರ್ಯರು ಅವನನ್ನು ಅಪ್ಪಿಕೊಂಡರು.

ಶೃಂಗರಿಸಿದ ಒಂದು ಬೈಲು ರಥದಲ್ಲಿ ಶುಕಾಚಾರ್ಯರು ಕುಳಿತರು. ಮೇಲೆ ಬಂಗಾರದ ಛತ್ರಿಯು ಶೋಭಿಸುತ್ತಿತ್ತು. ರಥ ನಡೆಯಿತು. ವಾದ್ಯಗಳೂ ಧ್ವನಿಗೈದವು. ಪುಷ್ಪವೃಷ್ಟಿಯಾಗಹತ್ತಿತು. ಯಾರು ಬಂಗಾರದ ಹೂಗಳನ್ನು ತೂರುತ್ತಿದ್ದಾರೆ. ಯಾರು ಮುತ್ತು ಮಾಣಿಕಗಳನ್ನು ತೂರುತ್ತಿದ್ದಾರೆ. ಬಡವರಾದ ಪುರಜನರು ಅರಳುಗಳನ್ನು ತೂರಹತ್ತಿದರು. ಯಾರ ಹತ್ತರ ಏನು ಇತ್ತೋ, ಅವರು ಅದನ್ನೆಲ್ಲ

ತೂರಿದರು. ಲಕ್ಷಾವಧಿ ಕೈಗಳು ಕೈಜೋಡಿಸಲ್ಪಟ್ಟವು. ಲಕ್ಷಾವಧಿ ಜನರಿಂದ ಕಣ್ಣಲ್ಲಿ ಭಕ್ತಿ, ಪ್ರೇಮಗಳ ಆನಂದಾಶ್ರುಗಳು ಸುರಿಸಲ್ಪಟ್ಟವು. ಶುಕಾಚಾರ್ಯರು ಶಾಂತರಾಗಿದ್ದರು. ಸನ್ಮಾನದ ಮಂದಸ್ಮಿತೆಯು ಅವರ ಮುಖಮುದ್ರೆಯ ಮೇಲೆ ಹೊಳೆಯುತ್ತಿತ್ತು. ಅವರ ಕಣ್ಣುಗಳು ಎಷ್ಟು ಶಾಂತ ! ಎಷ್ಟು ಗಂಭೀರ ! ಎಷ್ಟು ಪವಿತ್ರ ! ಆಕಾಶದಲ್ಲಿ ಹೊಳೆಯುವ ನಕ್ಷತ್ರದಂತೆ ತೇಜಃಪುಂಜವಾಗಿದ್ದವು. ಅವರ ವಿಶಾಲವಾದ ಹಣೆಯು ಜ್ಞಾನಪ್ರಭೆಯನ್ನು ಹೊರಸೂಸುತ್ತಲಿತ್ತು. ಅವರ ಮುಖಮಂಡಲವು ಎಂತಹ ಕೋಮಲ ! ಎಂತಹ ಮೋಹಕ ! ಚಂದ್ರ ಸೂರ್ಯರ ಸಂಮಿಶ್ರ ಪ್ರಭೆಯೇ ಅವರ ಮೈಬಣ್ಣ. ಸೂರ್ಯನ ತೇಜ, ಚಂದ್ರನ ರಮಣೀಯತೆ ಇವೆರಡು ಸಂಮಿಶ್ರವಾಗಿದ್ದವು. ಎಷ್ಟು ನೋಡಿದರೂ ಕಣ್ಣಿಗೆ ತೃಪ್ತಿಯಿಲ್ಲ.

ಅರಮನೆಗೆ ಶುಕಾಚಾರ್ಯರು ಬಂದರು. ಜನಸಮ್ಮರ್ದವು ದೂರವಾಯಿತು.

ಮೂರನೇ ಪ್ರಹರದಲ್ಲಿ ಪರೀಕ್ಷಿತನು ಶುಕಾಚಾರ್ಯರ ಹತ್ತರ ಬಂದು ನಮಸ್ಕರಿಸಿ ಅವರ ಕಾಲ ಹತ್ತರ ಕುಳಿತುಕೊಂಡನು.

' ರಾಜಾ, ನನ್ನನ್ನು ಏಕೆ ಕರೆಸಿದೆ ? ಏನು ಕೆಲಸವಿದೆ ? ನಾನು ಎಲ್ಲಿದ್ದರೂ ಸಕಲ ಚರಾಚರಗಳ ಮಂಗಲವನ್ನು ಚಿಂತಿಸುತ್ತಿರುತ್ತೇನೆ. ಈ ದೃಷ್ಟಿಯಿಂದ ನಾನು ಎಲ್ಲರ ಸಮೀಪದಲ್ಲಿರುವೆ. ದೂರ ಹಾಗೂ ಸಮೀಪವೆಂಬ ಶಬ್ದಗಳೇ ನನ್ನ ಹತ್ತಿರವಿಲ್ಲ ' ಎಂದರು ಶುಕಾಚಾರ್ಯರು.

" ಭಗವಾನ್, ನನಗೆ ಅತ್ಯಂತ ಅಸಮಾಧಾನವಾಗಿದೆ. ಜೀವನದಲ್ಲಿ ಹುರುಳಿಲ್ಲವೆನಿಸುತ್ತದೆ. ನನಗೆ ಶಾಂತಿಯನ್ನು ಕೊಡಿರಿ. ನಿಮ್ಮ ಶಾಂತಿ ಸಾಗರದಲ್ಲಿಯ ಒಂದು ಬಿಂದು ದೊರೆತರೆ ಸಾಕು. ಅಮೃತಸಾಗರವೇ ನನ್ನ ಎದುರಿಗೆ ಬಂದಿದೆ. ಅದರಲ್ಲಿಯ ಒಂದು ಹನಿಯನ್ನು ನನಗೆ ಕೊಡಿರಿ." ಎಂದು ಪರೀಕ್ಷಿತನು ಅತ್ಯಂತ ನಮ್ರತೆಯಿಂದ ಬೇಡಿಕೊಂಡನು.

" ರಾಜಾ, ನಾನು ಸಹಸಾ ಬಹಳ ಮಾತುಗಳನ್ನಾಡುವದಿಲ್ಲ. ನಾನು ಯಾವುದೊಂದು ವಿಷಯದ ಮೇಲೆ ಗಂಭೀರ ಮಾತುಗಳನ್ನಾಡಹತ್ತಿದರೆ, ಅದು ನನ್ನ ಕೈಯಲ್ಲಿ ಉಳಿಯುವದಿಲ್ಲ, ಹಸಿವೆ ನೀರಡಿಕೆಗಳ ಅರಿವು ಕೂಡ

ಗುವದಿಲ್ಲ. ರಾಗವು ಪೂರ್ಣವಾಗದೆ ಗಾಯಕರು ಹೇಗೆ ನಿಲ್ಲುವದಿಲ್ಲವೋ ಹಾಗೆಯೇ ನನ್ನ ಬ್ರಹ್ಮಜ್ಞಾನ ಪ್ರಾರಂಭವಾದರೆ, ನನ್ನ ಬ್ರಹ್ಮವೀಣೆಯು ಶುರುವಾದರೆ, ಮನಸ್ಸಿನೊಳಗಿನ ಕಲ್ಪನೆಗಳೆಲ್ಲ ಹೊರಬೀಳುವವರೆಗೆ ಅದು ನಿಲ್ಲುವದಿಲ್ಲ. ಆದುದರಿಂದ ಅಷ್ಟು ಹೊತ್ತು ಕೇಳ ಕೂಡಲು, ನಿನ್ನ ಸಿದ್ಧತೆ ಇದೆಯೇ ?" ಎಂದರು ಶುಕಾಚಾರ್ಯರು.

'ಭಗವಾನ್ ತಾವು ಯಾವ ವಿಷಯದಲ್ಲಿ ಆನಂದಿತರಾಗುವಿರೋ ಆದರಲ್ಲಿಯೇ ನಾನೂ ಆನಂದಿತನಾಗುವೆನು. ತಮ್ಮ ಉಪದೇಶದಿಂದ ಎಂತಹ ಪಾಮರನೂ ಜಗತ್ತನ್ನು ಮರೆಯುವನು. ನಾವು ಎಂದಿನಿಂದ ಕೂಡಬೇಕು ? ನಾನೊಬ್ಬನೇ ಬರುವೆ. ಅಂದರೆ ಅಪಾರವಾದ ಶಾಂತಿಯು ದೊರೆಯುವದು. ವ್ಯತ್ಯಯಗಳು ಬರುವದಿಲ್ಲ. ಇಲ್ಲಿ ನೋಡಿರಿ. ಕಮಲ ಮಹಾಲು ಇದೆ. ಪುಷ್ಕರಣಿಯಲ್ಲಿಯ ಕಮಲಗಳ ಗಂಧ ಹಾಗೂ ಶೀತಲವಾದ ಮಂದಮಾರುತ ಬರುತ್ತಿದೆ. ಸುತ್ತು ಮುತ್ತು ಪ್ರಸನ್ನ ವಾತಾವರಣವಿದೆ.' ಎಂದನು ಪರೀಕ್ಷಿತ.

'ಒಳ್ಳೇದು ನಾಳೆ ಸೂರ್ಯೋದಯದಿಂದ ನಾವು ಕೂಡೋಣ' ಎಂದರು ಶುಕಾಚಾರ್ಯರು.

ಬಹಳ ದೂರದಿಂದ ಜನರು ದರ್ಶನವನ್ನು ತೆಗೆದುಕೊಳ್ಳುತ್ತಿದ್ದರು. ರಾಜದೂತರು ಅಲ್ಲಲ್ಲಿ ನಿಂತು 'ಗದ್ದಲವನ್ನು ಮಾಡಬೇಡಿರಿ' ಎಂದು ಹೇಳುತ್ತಿದ್ದರು. ಅಲ್ಲಿ ಒಂದು ದೊಡ್ಡ ಜಾತ್ರೆಯೇ ನೆರೆಯಿತು. ಸಾವಿರಾರು ನರನಾರಿಯರು ಬಂದು ಹೋಗುತ್ತಿದ್ದರು. ಆದರೆ ಶುಕಾಚಾರ್ಯರ ಲಕ್ಷ್ಯವು ಇದರ ಕಡೆಗಿರಲಿಲ್ಲ. ರಾಜನಿಗೆ ಉಪದೇಶಿಸುವದರಲ್ಲಿ ಮಗ್ನರಾಗಿದ್ದರು. ರಾಜನು ಸರ್ವೇಂದ್ರಿಯಗಳನ್ನು ಕಿವಿಗಳನ್ನಾಗಿಮಾಡಿ ಕೇಳುತ್ತಿದ್ದನು. ನೀರಡಿಸಿದವನು ನೀರಿಗೆ, ಹಸಿದವನು ಅನ್ನಕ್ಕೆ, ಉತ್ಸುಕರಾದಂತೆ ಪರೀಕ್ಷಿತನು ಶುಕಾಚಾರ್ಯರ ಶಬ್ದಗಳಿಗೆ ಉತ್ಸುಕನಾಗಿದ್ದನು. ಇಬ್ಬರ ಹಸಿವೆ, ನೀರಡಿಕೆಗಳು ಮಾಯವಾಗಿದ್ದವು. ಜ್ಞಾನಾಮೃತದ ಭೋಜನವು ನಡೆದಿತ್ತು. ವಿಶ್ರಾಂತಿಯಿಲ್ಲ, ನಿದ್ರೆಯಿಲ್ಲ. ಶುಕಾಚಾರ್ಯರ ಕಣ್ಣಿನಿಂದ ಆನಂದಾಶ್ರುಗಳು ನಡುನಡುವೆ ಉದುರುತ್ತಿದ್ದವು. ಯಾವ ದಿವ್ಯ ಕಥೆಯನ್ನು ಅವರು ಹೇಳು

ತ್ತಿದ್ದರು ? ನೋಡಿರಿ, ಎಂತಹ ಸುಂದರವಾದ ಪಕ್ಷಿಯು, ಶುಕಾಚಾರ್ಯರ ತೊಡೆಯ ಮೇಲೆ ಕುಳಿತು, ಆನಂದಾಶ್ರುಗಳನ್ನೆಲ್ಲ ಕುಡಿಯುತ್ತಿತ್ತು. ಮುತ್ತುಗಳು ಉದುರುತ್ತಿದ್ದವು, ಪಾರಿವಾಳವು ನುಂಗುತ್ತಿತ್ತು. ಆ ಪಕ್ಷಿಯೇ ಧನ್ಯ! ಹೀಗೆ ಏಳು ದಿವಸ ನಡೆಯಿತು, ಏಳನೆಯ ದಿವಸವು ಮುಗಿಯಲು ಬಂದಿತ್ತು. ಬೆಳಗಿನ ತಂಗಾಳಿಯು ಬೀಸುತ್ತಿತ್ತು. ಆಕಾಶವು ಹೆಚ್ಚು ಗಂಭೀರವಾಗಿತ್ತು. ಮುಖ್ಯ ಮುಖ್ಯ ನಕ್ಷತ್ರಗಳು ಕಾಣುತ್ತಿದ್ದವು. ಪಕ್ಷಿಗಳ ಕಿಲಕಿಲಾಟವು ಸ್ವಲ್ಪ ಕೇಳಿಸುತ್ತಿತ್ತು. ಶುಕಾಚಾರ್ಯರು ಸಮಾರೋಪವನ್ನು ಮಾಡುತ್ತಿದ್ದರು.

' ರಾಜಾ, ಹೇಳುವದನ್ನೆಲ್ಲ ಹೇಳಿಯಾಯಿತು. ನನ್ನ ಹೃದಯವನ್ನೇ ನಿನ್ನೆದುರಿಗಿಟ್ಟಿದ್ದೇನೆ. ನನ್ನ ಬುದ್ಧಿಯನ್ನೆಲ್ಲ ನಿನಗೆ ಕೊಟ್ಟಿದ್ದೇನೆ. ನನ್ನ ಅನುಭವವನ್ನೆಲ್ಲ ನಿನ್ನ ಎದುರಿಗಿಟ್ಟಿದ್ದೇನೆ. ಇನ್ನು ಕತ್ತಲೆಯನ್ನು ಓಡಿಸಿ ಉಷೆಯು ಬರುವಳು. ನಿನ್ನ ಜೀವನದಲ್ಲಿ ಜ್ಞಾನಪ್ರಭೆಯು ಬೆಳಗಲಿ. ಮಾಲಿನ್ಯವು ನಾಶವಾಗಲಿ. ನಿನ್ನ ಕಲ್ಯಾಣವಾಗಲಿ· ಇಂದಿಗೆ ಏಳು ದಿನಗಳಾದವು. ಸಂಗೀತದಲ್ಲಿ ಸಪ್ತ ಸ್ವರಗಳಿರುತ್ತವೆ. ಇಂದ್ರಧನುಷ್ಯದಲ್ಲಿ ಏಳು ಬಣ್ಣಗಳಿರುತ್ತವೆ. ನಿನಗೆ ಎಲ್ಲ ಸ್ವರಗಳನ್ನು ಹೇಳಿದ್ದೇನೆ. ಎಲ್ಲ ಬಣ್ಣಗಳನ್ನೂ ತೋರಿಸಿದ್ದೇನೆ. ಇನ್ನು ಜೀವನದಲ್ಲಿ ಸಂಗೀತವನ್ನು ನಿರ್ಮಾಣ ಮಾಡು. ಸೌಂದರ್ಯವನ್ನು ಹುಟ್ಟಿಸು. ಸಂಗೀತವನ್ನು ಹೇಗೆ ನಿರ್ಮಿಸಬೇಕು ? ಸ್ವರಗಳನ್ನು ಹೇಗೆ ಕೂಡಿಸಬೇಕು ? ವಿವಿಧ ಬಣ್ಣಗಳ ಪ್ರಮಾಣಬದ್ಧ ಬೆರಿಕೆಯನ್ನು ಹೇಗೆ ಮಾಡಬೇಕು ? ಇದೆಲ್ಲವನ್ನು ನಿನಗೆ ಹೇಳಿದೆನು. ಅನೇಕ ಉದಾಹರಣೆ ಹಾಗೂ ಕಥೆಗಳಿಂದ ನಿನಗೆ ತಿಳಿಯುವಂತೆ ಹೇಳಿದ್ದೇನೆ. ಅನನ ಭಕ್ತಿಯಿಂದ ನೀನು ಕೇಳಿರುವೆ. ನಿನ್ನಂತಹ ಶ್ರೋತೃವು ನನಗೆ ದೊರೆತಿದ್ದಿಲ್ಲ. ನನ್ನನ್ನು ನೀನು ಧನ್ಯಗೊಳಿಸಿದೆ. ಇನ್ನು ಪಾರಣೆಮಾಡು. ವಿಶ್ರಾಂತಿ ತೆಗೆದುಕೋ " ಎಂದರು ಶುಕಾಚಾರ್ಯರು.

' ಭಗವಾನ್, ನಾನು ಮಾತನಾಡಲು ಸಮರ್ಥನಿಲ್ಲ. ನನ್ನ ಅಂತಃಕರಣವು ಉಕ್ಕೇರಿ ಬಂದಿದೆ. ನಾನೇನು ಹೇಳಲಿ ' ಎಂದು ಅವರ ಚರಣಗಳ ಮೇಲೆ ಮಸ್ತಕವನ್ನಿಟ್ಟು, ಆನಂದಾಶ್ರುಗಳಿಂದ ಪಾದಗಳನ್ನು ತೊಳೆದನು.

ಇಬ್ಬರೂ ಶಾಂತಿ ಮಂದಿರದಿಂದ ಹೊರಬಂದರು. ಮಂಗಲವಾದ್ಯಗಳು ಬಾರಿಸಹತ್ತಿದವು. ಶುಕಾಚಾರ್ಯರಿಗೆ ನಮಿಸಲು, ಲಕ್ಷಾವಧಿ ಜನರು ಗದ್ದಲವನ್ನು ಮಾಡುತ್ತಿದ್ದರು. ರಾಜದೂತರು ವ್ಯವಸ್ಥೆಯನ್ನು ಮಾಡಿ ದಣಿದರು. ಇಬ್ಬರ ಸ್ನಾನವೂ ಆಯಿತು ಇಬ್ಬರೂ ಆಸನಗಳ ಮೇಲೆ ಕುಳಿತರು.

'ತಾವೂ ಪಾರಣೆಯನ್ನು ಮಾಡುವಿರಲ್ಲವೇ ?' ಎಂದನು ಪರೀಕ್ಷಿತ.

'ನನಗೆ ಸ್ವಲ್ಪ ನೀರು ಕೊಡಿರಿ' ಎಂದರು ಶುಕಾಚಾರ್ಯರು.

'ಒಂದು ಹಣ್ಣು ಬೇಡವೆ ?' ಎಂದು ಭಕ್ತಿಯಿಂದ ಪರೀಕ್ಷಿತನು ವಿಚಾರಿಸಿದನು.

'ರಾಜಾ, ನೀನು ತೆಗೆದುಕೊ ಹಣ್ಣನ್ನು. ಗಂಗಾಜಲ ಹಾಗೂ ಜಗತ್ತಿನ ಹಿತಚಿಂತನೆ ಇವೇ ನನ್ನ ಆಹಾರ. ಸ್ವಲ್ಪ ನೀರನ್ನು ನನಗೆ ಕೊಡು.' ಸಾಕು. ಎಂದರು ಶುಕಾಚಾರ್ಯರು.

ಸ್ವಚ್ಛವಾದ ಝರಿಯ ನೀರನ್ನು ಒಬ್ಬ ನಾಗಯುವಕನು ತಂದನು. ಪರೀಕ್ಷಿತನ ಸಲುವಾಗಿ ಬೆಳ್ಳಿಯ ತಾಟಿನಲ್ಲಿ ದ್ರಾಕ್ಷೆಯ ಹಣ್ಣುಗಳನ್ನು ತಂದಿದ್ದನು.

'ರಾಜಾ, ನಾನು ನೀರು ಕುಡಿಯುವೆನು. ನೀನು ದ್ರಾಕ್ಷೆಗಳನ್ನು ತೆಗೆದುಕೋ' ಎಂದರು ಶುಕಾಚಾರ್ಯರು.

ಅವರು ನೀರನ್ನು ಕುಡಿದರು. ರಾಜನು ದ್ರಾಕ್ಷಿಯೊಂದನ್ನು ಬಾಯಿಯಲ್ಲಿ ಹಾಕಿದನು. ಆದರೆ ಅವನಿಗೆ ಒಬ್ಬನೇ ಹಣ್ಣನ್ನು ತೆಗೆದುಕೊಳ್ಳಲು ಸಂಕೋಚವೆನಿಸಿತು.

'ರಾಜಾ, ಸಂಕೋಚಪಡಬೇಡ. ಅವುಗಳನ್ನು ತೆಗೆದುಕೋ. ಅಪಾಯವಿಲ್ಲ.' ಎಂದರು ಶುಕಾಚಾರ್ಯರು.

'ಮಹಾರಾಜರೇ, ನಾನು ಪ್ರಯತ್ನಪಟ್ಟು ನಿಮ್ಮ ಸಲುವಾಗಿಯೇ ಇವುಗಳನ್ನು ಆರಿಸಿ ತಂದಿದ್ದೇನೆ. ಈ ಏಳು ದಿವಸಗಳಲ್ಲಿ ತಾವು ಏನೂ ತಿಂದಿಲ್ಲ ನಾಲ್ಕು ದ್ರಾಕ್ಷಿಗಳೇನು ಹೆಚ್ಚಾಗುವದಿಲ್ಲ.' ಎಂದು ಆ ನಾಗ ತರುಣನು ಸವಿ ಮಾತುಗಳನ್ನಾಡಿದನು.

‘ ನೀನು ಎಷ್ಟು ಸವಿ ಮಾತನಾಡುವೆ ’ ಎಂದನು ಪರೀಕ್ಷಿತ.

ಶುಕಾಚಾರ್ಯರು ಇನ್ನು ತೆರಳುವವರಿದ್ದರು. ರಾಜಮನೆತನದವರೆಲ್ಲರೂ ಜನಮೇಜಯನು ಬಂದನು. ಎಲ್ಲರೂ ನಮಸ್ಕರಿಸಿ, ಆಶೀರ್ವಾದಗಳನ್ನು ಪಡೆದರು. ಆದರೆ ಪರೀಕ್ಷಿತನು ಹೀಗೇಕೆ ? ಅವನ ಮುಖಮುದ್ರೆಯು ಹೀಗೇಕಾಗಿದೆ ? ಅವನಿಗೆ ಏನು ಕೆಡುಕೆನಿಸಿದೆ ?

“ ರಾಜಾ ಖಿನ್ನನಾಗಬೇಡ ” ಎಂದರು ಶುಕಾಚಾರ್ಯರು. ರಾಜನು ಒಮ್ಮೆಲೆ ಕೆಳಕ್ಕೆ ಬಿದ್ದನು.

‘ ಏನಾಯಿತು ರಾಜಾ ? ’ ಎಂದರು ಶುಕಾಚಾರ್ಯರು.

‘ ಮೈಯೆಲ್ಲ ಬೆಂಕಿ ? ನನ್ನ ಹೃದಯದ ಬೆಂಕಿಯನ್ನೇನೋ ತಾವು ತಣಿಸಿದಿರಿ. ಆದರೆ ದೇಹದ ಉರಿಯನ್ನು ಆರಿಸುವವರಾರು ? ಏನಾಯಿತು ಒಮ್ಮೆಲೆ. ಛೀ ನಾನು ಸುಡುತ್ತಿದ್ದೇನೆ. ಬೇಯುತ್ತಿದ್ದೇನೆ. ಈ ವೇದನೆಯನ್ನು ನಾನು ತಾಳಲಾರೆ ಮುಂದೆ ಅವನಿಗೆ ಮಾತನಾಡುವದಾಗಲಿಲ್ಲ.’

ಓಡಾಟಕ್ಕೆ ಪ್ರಾರಂಭವಾಯಿತು. ರಾಜವೈದ್ಯನು ಬಂದನು. ದ್ರಾಕ್ಷಿಗಳನ್ನು ಪರೀಕ್ಷಿಸಿದನು. ಅವನು ಗಂಭಿರನಾದನು.

‘ ರಾಜಾ, ಇದು ವಿಷಪ್ರಯೋಗವು. ಈ ದ್ರಾಕ್ಷಿಗಳಲ್ಲಿ ವಿಷ ತುಂಬಿದೆ. ಪ್ರಖರವಾದ ವಿಷವಿದೆ. ಇದರಲ್ಲಿ ಏನೋ ಮೋಸವಿದೆ. ಈ ದ್ರಾಕ್ಷಿಗಳನ್ನು ತಂದವರಾರು ? ಅವನನ್ನು ತೆಗೆದುಕೊಂಡು ಬನ್ನಿರಿ ’ ಎಂದನು ರಾಜವೈದ್ಯ.

ರಾಜದೂತರು ಆ ಅಡಿಗೆಯವನನ್ನು ಹಿಡತಂದರು. ಅವನು ಅಲ್ಲಿಯೇ ನಿಂತಿದ್ದನು.

‘ ಈ ಹಣ್ಣುಗಳನ್ನು ಎಲ್ಲಿಂದ ತಂದಿರುವಿ? ’ ಎಂದು ಜನಮೇಜಯನು ವಿಚಾರಿಸಿದನು.

‘ ನಿಲ್ಲಿರಿ ಎಲ್ಲವನ್ನೂ ಹೇಳುವೆ. ನಾಗತರುಣರು ನಿರ್ಭಯರಿರುತ್ತಾರೆ ’ ಎಂದನು.

' ಏನು ನೀನು ನಾಗನೇ ? ನೋಡಲು ಕೆಂಪಿರುವಿಯಲ್ಲ? ' ಎಂದನು ವೈದ್ಯ.

' ಅನೇಕ ನಾಗರು ಗೌರವ ವರ್ಣದವರಿರುತ್ತಾರೆ. ಕೆಂಪು ನಾಗರನ್ನು ನೀವು ನಿಮ್ಮಲ್ಲಿ ತೆಗೆದುಕೊಂಡಿರುತ್ತೀರಿ. ಆದರೆ ನನ್ನಂತಹ ಎಷ್ಟೋ ಸ್ವಾಭಿಮಾನಿಗಳಾದ ಗೌರ ನಾಗರಿದ್ದಾರೆ. ಈ ನಿಮ್ಮ ರಾಜನು, ನಾಗರ ಅಪಮಾನ ಗೊಳಿಸಿದ್ದಾನೆ. ನಾಗರಿಗೆಲ್ಲ ಅತ್ಯಂತ ಪೂಜ್ಯರೂ ಆದರ್ಶಿಗಳೂ ಆದ ನಾಗಮಹರ್ಷಿಗಳನ್ನು ಈ ಪಾಪಿ ಮಹಾರಾಜನು ಅಪಮಾನಗೊಳಿಸಿದ್ದಾನೆ. ಅವರು ತಪಶ್ಚರ್ಯದಲ್ಲಿ ಮಗ್ನರಾದಾಗ ಈ ಪಾಪಿಯು ಒಂದು ಹಾವನ್ನು ಕೊಂದು ಅದನ್ನು ಅವರ ಕೊರಳಿಗೆ ಹಾಕಿ ಚೇಷ್ಟೆಮಾಡಿದ್ದಾನೆ. ಎಂದು ಹಿಂದಿನ ಕಥೆಯನ್ನೆಲ್ಲ ಹೇಳುತ್ತ ಜಾತಿವಂತನಾಗನು ಈ ಅಪ ಮಾನವನ್ನು ಸಹಿಸುವದೆಂತು ? ನನಗಂತು ಇದು ಸಹನವಾಗಲಿಲ್ಲ ಈ ರಾಜನ ಕೊಲೆ ಗೈಯ್ಯುವ ಪ್ರತಿಜ್ಞೆಯನ್ನು ಮಾಡಿದೆ. ಅದು ಈಗ ಪೂರ್ಣವಾಗುತ್ತಲಿದೆ. ನೋಡಿರಿ, ಆ ಪಾಪಾತ್ಮನು ಬೀಳಹತ್ತಿದ್ದಾನೆ. ಸಾಯಹತ್ತಿದ್ದಾನೆ. ನನಗೆ ಬೇಕಾದ ಶಿಕ್ಷೆಯನ್ನು ಕೊಡಿರಿ. ನನ್ನ ಶರೀರವನ್ನು ಕಡಿದು ತುಂಡು ತುಂಡುಮಾಡಿರಿ. ಬೇಕಾದರೆ ಬೆಂಕಿಯಲ್ಲಿ ಹಾಕಿ ಸುಡಿರಿ. ನನ್ನ ಧ್ಯೇಯವು ಪೂರ್ಣವಾಗಿ ಸಾಧಿಸಿತು. ನಾನು ಕೃತಕೃತ್ಯನಾಗಿರುವೆ. ನಾನು ನಿರ್ಭಯನಿರುವೆ. ನಾಗರು ಓಡಿಹೋಗುವ ಹೇಡಿಗಳಲ್ಲ ' ಎಂದನು ಆ ತರುಣ.

ರಾಜದೂತರು ಅವನನ್ನು ಮುತ್ತಿದರು. ಅವನ ಕೈಕಾಲುಗಳನ್ನು ಬಿಗಿದರು. ಕತ್ತಿಗಳನ್ನು ಹಿರಿಯ ಹೋದರು. ಜನಮೇಜಯನು ಸಿಟ್ಟಿನಿಂದ ಬೆಂಕಿಯಾಗಿದ್ದನು. ರಾಜಪತ್ನಿಯರು ಗೋಳಿಡಹತ್ತಿದರು. ಪರೀಕ್ಷಿತನು ಕೊನೆಯ ಕಾಲದ ವೇದನೆಯನ್ನು ಅನುಭವಿಸುತ್ತಿದ್ದನು. ಶುಕಾಚಾರ್ಯರು ಶಾಂತವಾಗಿದ್ದರು.

' ರಾಜಾ, ನಿನ್ನ ಆಯುಷ್ಯವು ಇನ್ನೊಂದು ಕ್ಷಣವುಳಿದಿದೆ. ಮರಣವು ಎದುರಿಗೆ ನಿಂತಿದೆ. ಮರಣಕಾಲದಲ್ಲಿ ಶತ್ರುಮಿತ್ರರನ್ನು ಸಮಾನದೃಷ್ಟಿಯಿಂದ ನೋಡುವ ಸುವರ್ಣಸಂಧಿಯನ್ನು ದೇವರು ನಿನಗೆ ಒದಗಿಸಿಕೊಟ್ಟಿ

ದ್ದಾನೆ. ಮನಸ್ಸಿನಲ್ಲಿಯ ದ್ವೇಷಾಸೂಯಗಳನ್ನೆಲ್ಲ ಕಿತ್ತೊಗೆ. ಈ ಏಳು ದಿವಸ ನಿನಗೆ ಭಗವಂತನ ಮಹಿಮೆಯನ್ನು ಹೇಳಿದ್ದೇನೆ. ಜ್ಞಾನ ಹಾಗೂ ಪ್ರೇಮದ ಮುರಲಿಯನ್ನು ನೀನು ಕೇಳಿರುವಿ. ನೀನು ಕೇಳಿದ್ದರ ಪರೀಕ್ಷೆ ಈಗ ಬಂದಿದೆ. ಅದರಲ್ಲಿ ನೀನು ಉತ್ತೀರ್ಣನಾಗು. ಶತ್ರುಗಳಿಗೂ ಕೂಡ ಪ್ರೇಮವನ್ನು ತೋರಿಸುತ್ತ, ತೋರಿಸುತ್ತ ಈ ದೇಹವನ್ನು ಬಿಟ್ಟು ಬಿಡು. ಚೈತನ್ಯಮಯನಾದ ಶ್ರೀ ಹರಿಯ ಚರಣಗಳನ್ನು ಸೇರು. ನಿರ್ಮಲ ನಾಗು. ನಿರ್ಮತ್ಸರನಾಗು. ಇವನನ್ನು ಕ್ಷಮಿಸು. 'ಎಲೋ ತರುಣನೇ ನೀನು ನನಗೆ ವಿಷವನ್ನು ಕೊಟ್ಟರೆ, ನಾನು ನಿನಗೆ ಪ್ರೇಮದ ಅಮೃತವನ್ನು ಕೊಡುವೆ' ಹೋಗು, ಎಂದು ಹೇಳು. ಕ್ಷಮಿಸು ಅವನನ್ನು' ಎಂದರು ಶುಕಾಚಾರ್ಯರು.

ಪರೀಕ್ಷಿತನು ಪ್ರೇಮಪೂರ್ಣದೃಷ್ಟಿಯಿಂದ ಆ ತರುಣನ ಕಡೆಗೆ ನೋಡ ಹತ್ತಿದನು. ತನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಮಾತನಾಡಹತ್ತಿದನು. "ಎಲೈ ತರುಣನೇ ಹೋಗು. ನಿನಗೆ ನಾನು ದಯತೋರಿಸಿದ್ದೇನೆ. ಸಾಯುವ ಪರೀಕ್ಷಿತನು ಕೊಲ್ಲುವವರಿಗೆ ಪ್ರೇಮವನ್ನು ಕೊಟ್ಟು ಹೋಗುತ್ತಿದ್ದಾನೆ. ಎಲ್ಲರಿಗೂ ಪ್ರೇಮದ ಸಂದೇಶವನ್ನು ಕೊಟ್ಟು ಹೋಗುತ್ತಿದ್ದಾನೆ. ನಾನು ಇನ್ನೂ ರಾಜನಿರುವೆ. ಈಗ್ಯೂ ನನ್ನ ಶಾಸನವಿದೆ. ನಾನು ನಿನ್ನ ಅಪರಾಧ ವನ್ನು ಕ್ಷಮಿಸುತ್ತೇನೆ. ಜನಮೇಜಯಾ, ಇವನನ್ನು ಬಿಟ್ಟುಬಿಡು. ಅವನನ್ನು ಬಿಟ್ಟುಬಿಡಿರಿ. ಮರಣೋನ್ಮುಖನಾದ ರಾಜನ ಆಜ್ಞೆಯನ್ನು ಪಾಲಿಸಿರಿ. ಸರ್ವ ಜೀವನವು ನನಗೆ ನಿಸ್ಸಾರವಾಗಿ ಕಾಣುತ್ತದೆ. ಆದರೆ ನನ್ನ ಜೀವನವು ಇಂದು ಕೃತಾರ್ಥವಾಗಿದೆ. ಇಡೀ ಜೀವಮಾನದಲ್ಲೆಲ್ಲ ನನಗೆ ಜೀವವು ಬರಿಬರಿದಾಗೆನಿಸುತ್ತಿತ್ತು. ಆದರೆ ಈ ಮರಣ ಸಮಯದಲ್ಲಿ ಅದು ಪ್ರೇಮ ದಿಂದ ತುಂಬಿ ತುಳುಕುತ್ತಿದೆ. ಕೊನೆಯಕ್ಷಣವು ಬಹಳ ಸವಿಯಾಗಿದೆ. ನನ್ನ ಜೀವಿತದ ಕಾರ್ಯವೇನು? ಎಂದು ನನಗೆ ಮೇಲಿಂದ ಮೇಲೆ ಅನಿಸು ತ್ತಿತ್ತು. ಆದರೆ ಸಾಯುವಾಗ ಅದು ನನಗೆ ತಿಳಿದಿದೆ. 'ವಿಷಕೊಡುವವರಿಗೆ ಪ್ರೇಮವನ್ನು ಕೊಡು' ಎಂಬುದನ್ನು ಜಗತ್ತಿಗೆ ಸಾರುವದಕ್ಕಾಗಿಯೇ ನನ್ನ ಜನ್ಮವಿದ್ದಿತು. ನಾನು ಕೃತಾರ್ಥನಾದೆ. ನನ್ನ ಜೀವಿತಕಾರ್ಯವು ಇಂದು

ಸಿದ್ಧಿಯಾಯಿತು. ನಾನು ಸುಖದಿಂದ ಪ್ರಾಣಬಿಡುವೆ. ಏಕೆಂದರೆ ಜೀವಿತ ಕಾರ್ಯವು ಪೂರ್ಣವಾದೊಡನೆಯೇ ಅವನ ಜೀವನವೂ ಪೂರ್ಣವಾಗುವದು. ಭಗವಾನ್ ಶುಕಾಚಾರ್ಯರೇ! ನಿಮಗೆ ನಮಸ್ಕರಿಸುವೆ. ನಿಮ್ಮ ಪಾದಕಮಲ ಗಳಿಂದಲೇ ಈ ಪ್ರಾಣಹಂಸವು ಹಾರಿಹೋಗಲಿ' ಎಂದನು ಪರೀಕ್ಷಿತ.

ಆ ತರುಣನನ್ನು ಬಿಟ್ಟು ಬಿಟ್ಟರು. ಆ ತರುಣನು ಶುಕಾಚಾರ್ಯರಿಗೂ ರಾಜನಿಗೂ ನಮಸ್ಕರಿಸಿದನು. 'ರಾಜಾ ನಾನು ಹೋಗಿಬರುವೆ. ಆರ್ಯರ ಬಗ್ಗೆ ದ್ವೇಷವು ನಾಗರಲ್ಲಿ ಹಬ್ಬುತ್ತ ನಡೆದಿದೆ. ನಿನ್ನ ಮರಣದ ಈ ದಿವ್ಯ ಸಂದೇಶವನ್ನು ಅವರಿಗೆ ಹೇಳಿ, ದ್ವೇಷಾಗ್ನಿಯಿಂದ ಅವರನ್ನು ಪರಾಂಙ್ಮುಖ ರನ್ನಾಗಿ ಮಾಡುವೆ. ನೀನು ಇತ್ತ ಈ ಸಂದೇಶವು ವ್ಯರ್ಥವಾಗಲಾರದು. ನನ್ನನ್ನು ಕ್ಷಮಿಸು ಎಂದನು.

'ಕ್ಷಮಾ' ಎಂದನು ಪರೀಕ್ಷಿತ.

ಆ ತರುಣನು ಹೊರಟುಹೋದನು. ಪರೀಕ್ಷಿತನು ಶುಕಾಚಾರ್ಯರ ಚರಣದ ಮೇಲೆ ಪ್ರಾಣವನ್ನು ಬಿಟ್ಟನು. ಗಂಭೀರವಾದ ಪ್ರಸಂಗ. ಅದೇನು ಮರಣವಿದ್ದಿತೋ ? ನವಜೀವನವಿದ್ದಿತೋ ?

' ಜನಮೇಜಯಾ, ನಾನು ಹೋಗಿ ಬರುತ್ತೇನೆ. ಶೋಕಮಾಡಬೇಡ. ಯಾವಮರಣವು ಪ್ರೇಮದ ಮಳೆಗರಿಯಿತೋ ಆ ಮರಣವು ಅಪೂರ್ವವಿದೆ. ಅಮರ ವಿದೆ ಎಂದು ಹೇಳಿ ಶುಕಾಚಾರ್ಯರು ಹೊರಟುಹೋದರು.

—:XXX ● XXX:—

# ೧೨

" ವತ್ಸಲೇ ನೀನು ನಾಗನನ್ನೆ ಮದುವೆಯಾಗುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದೆ, ಆದರೆ ಕಡೆಗೆ ನಾಗನನ್ನು ಬಿಟ್ಟು ಆರ್ಯನನ್ನೇ ಮದುವೆಯಾದೆ " ಎಂದನು ಕಾರ್ತೀಕ.

' ನಾಗಾನಂದನು ನಾಗಜಾತಿಯವನೇ ಇದ್ದಾನೆ. ಅವನು ಸ್ವತಃ ನಾಗನೆಂದೇ ಹೇಳಿಕೊಳ್ಳುತ್ತಾನೆ. ಅವನು ಆರ್ಯನೆಂದು ನಿನಗೆ ಹೇಳಿದವರಾರು ? ' ಎಂದು ವತ್ಸಲೆಯು ಕೇಳಿದಳು.

' ಅಜ್ಜಿ ಸುಶ್ರುತೆಯೇ ಅನ್ನುತ್ತಿದ್ದಳು. ಅವನ ತಂದೆಯು ಆರ್ಯನು. ಅವನ ತಾಯಿಯು ನಾಗಕನ್ಯೆ. ' ತಂದೆಯ ಜಾತಿಯು ಯಾವುದೋ ಅದೇ ಮಗನದು. ' ಎಂದು ಆರ್ಯರು ತಿಳಿಯುತ್ತಾರೆ. ತಾಯಿ ಯಾವ ಜಾತಿಯವಳಿದ್ದರೇನು ? ಆದ್ದರಿಂದ ನಾಗಾನಂದನು ಆರ್ಯನಿದ್ದಾನೆ. ' ಎಂದು ಅವನು ಹೇಳಿದನು.

' ಕಾರ್ತೀಕಾ, ನಾನು ನಾಗಾನಂದನನ್ನು ಪ್ರೀತಿಸುತ್ತೇನೆ. ಅವನು ನಾಗನೇ ಇರಲಿ ಆರ್ಯನೇ ಇರಲಿ, ಅದನ್ನು ತಕ್ಕೊಂಡು ನನಗೇನು ಮಾಡುವದಿದೆ. ಅವನು ನನ್ನವನಿದ್ದಾನೆ, ನನಗಾಗಿಯೇ ಹುಟ್ಟಿದ್ದಾನೆ, ಹೀಗೆ ನನಗೆ ಅನಿಸಿದ್ದರಿಂದ ನಾನು ಅವರನ್ನು ಮದುವೆಯಾದೆ. ಪ್ರೀತಿಗೆ ಜಾತಿಯಿಲ್ಲ. ಗೋತ್ರವಿಲ್ಲ. ಪ್ರೇಮವು ಪೂರ್ಣತೆಯನ್ನು ಕೊಡುತ್ತದೆ. ಅಪೂರ್ಣನಿದ್ದವನನ್ನು ಪೂರ್ಣನನ್ನಾಗಿ ಮಾಡುತ್ತದೆ. ನಾಗಾನಂದನು ತಾನು ನಾಗನೆಂದು ತಿಳಿಯುತ್ತಾನೆ. ನಾಗರ ಪಕ್ಷವನ್ನು ಕಟ್ಟುತ್ತಾನೆ. ಯಾವನಾದರೊಬ್ಬ ನಾಗನು ಸ್ವಾರ್ಥದ ಸಲುವಾಗಿ, ಕೆಲವು ದುಷ್ಟ ಆರ್ಯರ

ಸ್ನೇಹಕ್ಕೆ ಬಿದ್ದು, ನಾಗರನ್ನೇ ದ್ವೇಷಿಸ ಹತ್ತಿದರೆ, ಅವನು ನಾಗನೇ? ನಮ್ಮ ಜಾತಿಯಾವದು ? ಧರ್ಮವಾವುದು ? ನಮ್ಮವರು ಯಾರು ? ಯಾರ ಸಲುವಾಗಿ ನಾವು ಸಾಯುವೆವೊ ಅವರೇ ನಮ್ಮವರು. ನಾಗಾನಂದನು ನಾಗರ ಸಲುವಾಗಿ ಚಡಪಡಿಸುತ್ತಾನೆ. ಆದ ಕಾರಣ ಅವನು ನಾಗನು. ಪ್ರತಿಜ್ಞೆಯ ಅರ್ಥವನ್ನು ತಿಳಿಯಬೇಕು. ಬರೆ ಅಕ್ಷರಗಳನ್ನೋದಿದರಾಗದು" ಎಂದಳು ವತ್ಸಲೆ.

'ನಿನಗೆ ಸಿಟ್ಟುಬಂದಿತೆ ? ನೀನು ನನ್ನ ಮೇಲೆ ಸಿಟ್ಟಾಗುತ್ತಲೇ ನಡೆ. ನೀನು ನನಗೆ ಪ್ರೇಮವನ್ನು ತೋರಿಸದಿದ್ದರೂ ಸಿಟ್ಟಾದರೂ ಆಗು. ನಿನ್ನ ದೇನನ್ನಾದರೂ ಕೊಡು. ನೀನು ನನ್ನನ್ನು ತೀರ ಉಪೇಕ್ಷಿಸಬೇಡ." ಎಂದನು ಕಾರ್ತಿಕ.

'ಕಾರ್ತಿಕಾ, ಇತ್ತೀಚೆಗೆ ನೀನು ನೂಲುತ್ತಲೇ ಕೂಡುವಿಯೇಕೆ ? ಎಂದಳು.

'ನಿನಗೆ ಮದುವೆಯ ಕಾಣಿಕೆಯನ್ನು ಕೊಡಲಿಕ್ಕೆ, ನಿನಗೆ ಯಾವ ಬಣ್ಣವು ಸೇರುತ್ತದೆ? ನಿನಗೆ ಬಿಳೀ ವಸ್ತ್ರಗಳೇ ಒಪ್ಪುತ್ತವೆ.' ಎಂದನು ಕಾರ್ತಿಕ.

'ಆದರೆ ಅವರಿಗೆ ಹಸರು ಬಣ್ಣ ಸೇರುತ್ತದೆ' ಎಂದಳು.

'ಅವರಿಗೆ ಸೇರುವದನ್ನೇ ಉಡು. ಹಸರು ಬಣ್ಣದ ವಸ್ತ್ರವನ್ನೇ ನಿನಗೆ ನಾನು ಕೊಡುವೆನು. ಅದನ್ನು ನೀನು ಉಡುವಿಯಾ ? ನನಗೆ ಅಷ್ಟ ರಿಂದಲೇ ಸಮಾಧಾನ. ನಾನು ನಿನ್ನನ್ನು ಮುಟ್ಟಲು ಶಕ್ಯವಿಲ್ಲ. ನಿನ್ನನ್ನು ಪ್ರೀತಿಸಲು ಶಕ್ಯವಿಲ್ಲ. ಆದರೆ ನಾನು ನೂತ ವಸ್ತ್ರವನ್ನಾದರೂ ನೀನು ಉಡು. ಉಡುವಿಯಾ! ಇಷ್ಟಾದರೂ ದಯೆಯನ್ನು ತೋರಿಸುವಿಯಾ ನನ್ನ ಮೇಲೆ? ಎಂದು ಕಾರ್ತಿಕನು ಕೇಳಿದನು.

'ಉಡುವೆನು, ಆದರೆ ನೀನು ಬೊಬ್ಬಾಟ ಮಾಡಬೇಡ. ಇದನ್ನು ಗುಪ್ತವಾಗಿರಿಸು. ಯಾರಿಗೂ ಹೇಳಬೇಡ." ಎಂದಳು.

'ವತ್ಸಲೇ, ನಿನ್ನ ಹೊಲದಲ್ಲಿಯ ಗುಡಿಸಲದಲ್ಲಿ ನಾನು ಇರಲೇ ? ಈಗ ನಾಗಾನಂದನು ಅಲ್ಲಿರುವದಿಲ್ಲ. ನಾಗನಂದನಿದ್ದಲ್ಲಿ ನಾನಿದ್ದರೆ

ನನ್ನನ್ನು ಮುಂದಿನ ಜನ್ಮದಲ್ಲಿಯಾದರೂ ನೀನು ಪ್ರೀತಿಸುವೆ!' ಎಂದನು.

' ಎಲ್ಲಿಯ ಮುಂದಿನ ಜನ್ಮ ? ಮುಂದಿನ ಜನ್ಮದ ಕಲ್ಪನೆ ಮಾಡ್ರುವದು ಹೇಡಿತನವು. ' ನಾನು ಮಾಡುವದನ್ನೆಲ್ಲ ಇದೇ ಜನ್ಮದಲ್ಲಿ ಮಾಡುವೆನು ' ಎಂದು ಅನ್ನಬೇಕು· ಮುಂದಿನ ಜನ್ಮವನ್ನು ಮನ್ನಿಸದವನು ಹೆಚ್ಚು ನಿಶ್ಚಯವುಳ್ಳವನೂ, ಹೆಚ್ಚು ತೇಜಸ್ವಿಯೂ, ಹೆಚ್ಚು ಪ್ರಯತ್ನವಾದಿಯೂ ಇರುತ್ತಾನೆ. ಅವನ ಜೀವನದಲ್ಲಿ ಒಂದು ಪ್ರಕಾರದ ತೇಜವಿರುತ್ತದೆ. ಪುನರ್ಜನ್ಮದ ವಾದವು ನನಗೆ ಸೇರುವದಿಲ್ಲ. ನಾಗಾನಂದನ ಮತವೂ ಹೀಗೇ ಇವೆ. ಈ ಕಾರ್ಯದಲ್ಲಿಯೇ ಪುನರ್ಜನ್ಮವು ತೂಗಾಡುತ್ತಲಿದೆ. ಅವರಲ್ಲಿ ನಿನಗೆ ಸಮಾಧಾನವಾಗುತ್ತಿದ್ದರೆ ಅದನ್ನೇ ಜಪಿಸುತ್ತ ಕೂಡ್ರು. ನೀನು ಅದರಂತೆ ನಡೆ. ಅದು ಕಲ್ಪನೆಯ ಸಮಾಧಾನ ! ಅದು ಅಶಕ್ತ ಹಾಗೂ ಭ್ರಮಿಷ್ಟ ಸಮಾಧಾನ ! " ಎಂದಳು ಆಕೆ.

' ವತ್ಸಲೇ, ಹಾಗೆ ವಿಚಾರ ಮಾಡಿದರೆ ಎಲ್ಲವೂ ಕಲ್ಪನಾಮಯವೇ ಅದೆ. ನಾವು ನಮ್ಮ ಕಲ್ಪನೆಗಳಿಂದಲೇ ಎಲ್ಲವನ್ನು ನಿರ್ಮಿಸುತ್ತೇವೆ. ನೀನು ಆಳವಾಗಿ ವಿಚಾರ ಮಾಡಿದರೆ ಅದನ್ನು ನೀನು ಒಪ್ಪಲೇಬೇಕಾದೀತು. " ಎಂದನು ಕಾರ್ತಿಕ.

" ನೀರಿನ ಅಡಿಯಲ್ಲಿ ಕೆಸರುಯಿರುತ್ತದೆ. ಮೇಲೆಯೇ ಆಡುವಾ." ಎಂದಳು ಆಕೆ.

" ಆದರೆ ಮುತ್ತುಗಳು ಸಮುದ್ರದ ಅಡಿಯಲ್ಲಿಯೇ ಇರುತ್ತವೆ. " ಎಂದನು ಕಾರ್ತಿಕ.

' ಮುತ್ತೊಂದು ಇರಬಹುದು. ಆದರೆ ಕೆಸರೇ ಬಹಳ.' ಎಂದಳು ವತ್ಸಲೆ.

'' ಕೆಸರಲ್ಲಿ ಕ್ವಚಿತ್ತಾಗಿ ಸಿಗುವುದಾದ್ದರಿಂದಲೇ ಆ ಮುತ್ತಿಗೆ ಬೆಲೆ ಹೆಚ್ಚು. ಎಲ್ಲರೂ ನಾಗಾನಂದನಂತೆಯೇ ಇದ್ದರೆ, ನೀನು ಅವರನ್ನೆಲ್ಲ ಆದರಿಸುತ್ತಿದ್ದೆಯಾ ? ಪ್ರೀತಿಸುತ್ತಿದ್ದೆಯಾ ? ಅಂಥವರು ಸಾವಿರಕ್ಕೊಬ್ಬರು ಲಕ್ಷಕ್ಕೊಬ್ಬರು ಸಿಗುತ್ತಾರೆಂದು ನಿನಗೆ ಅನಿಸುವದೆಂದೇ ನೀನು ಅವರಿಗೆ ಇಷ್ಟು ಬೆಲೆ ಕೊಡುವಿ. ' ಎಂದನು ಕಾರ್ತಿಕ.

‘ ನಾನು ಅವರ-ಜಿಲೆಯನ್ನು ಎಂದೂ ಕಟ್ಟಿಲ್ಲ. ನನ್ನ ಹೃದಯವು ಅವರ ಕಡೆಗೆ ಹೋಯಿತು. ನಾನು ನನ್ನ ಜೀವನವನ್ನು ಅವರ ಚರಣಗಳ ಮೇಲೆ ಅರ್ಪಿಸಿದೆ. ನಾನು ಅವರನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡಲಿಲ್ಲ. ಅವರು ಗುಣಿಗಳೊ ದುರ್ಗುಣಿಗಳೊ ಪರಾಕ್ರಮಿಗಳೊ ಹೇಡಿಗಳೊ ಎಂಬುದನ್ನು ನಾನು ನೋಡಲಿಲ್ಲ. ಪ್ರೇಮವು ಅಳೆದು ನೋಡತಕ್ಕ ವಸ್ತುವಲ್ಲ. ಪ್ರೇಮವು ಮಾರುವ ವಸ್ತುವೇ ಅಲ್ಲ. ” ಎಂದು ವತ್ಸಲೆ ನುಡಿದಳು.

“ ನಿನ್ನ ಹೊಲದಲ್ಲಿರುವ ಗುಡಿಸಲಿನಲ್ಲಿ ನಾನು ಇರಲೇ ? ಕೆಲಸವನ್ನು ಮಾಡುವೆ. ನಿನಗೆ ಹೂಗಳನ್ನು ತಂದು ಕೊಡುವೆನು. ಉದ್ಯೋಗವಿಲ್ಲದೆ ಮನೆಯಲ್ಲಿ ಹೇಗೆ ಇರಲಿ ? ” ಎಂದು ವಿಚಾರಿಸಿದನು.

‘ ಆದರೆ ನೀನು ಅಂಜಬಹುದು. ಹುಲಿಗಳೂ ಹಾವುಗಳೂ ಬರಬಹುದು, ಹೇಗೆ ಮಾಡುವಿ ? ’ ಎಂದಳು.

‘ ಹುಲಿಯು ಬರಬೇಕು ಮತ್ತು ನನ್ನನ್ನು ತಿನ್ನಬೇಕು, ಹಾವು ಬರಬೇಕು ನನ್ನನ್ನು ಕಚ್ಚಬೇಕು ಎಂಬ ಉದ್ದೇಶದಿಂದಲೇ ನಾನು ಅಲ್ಲಿರಬೇಕೆನ್ನುವೆ. ನಿನ್ನ ತಲೆಯಲ್ಲಿ ಶೋಭಿಸುವ ಹೂಗಳು ಬೆಳೆಯುವ ತೋಟದಲ್ಲಿ ನನಗೆ ಮರಣ ಬಂದರೆ ಅದು ನನ್ನ ಭಾಗ್ಯ. ” ಎಂದನು ಕಾರ್ತೀಕ.

“ನಾನು ಅಜ್ಜಿಯನ್ನು ವಿಚಾರಿಸುವೆನು” ಎಂದಳು ವತ್ಸಲೆ.

ಕಾರ್ತೀಕನು ಹೊರಟುಹೋದನು. ಅವನು ಹೋಗಿ ನೂಲುತ್ತ ಕುಳಿತನು. ನನ್ನ ಕೈಗಳು ವತ್ಸಲೆಯ ಸಲುವಾಗಿ ಒಂದೇ ಸವನೇ ನೂಲುತ್ತಲಿವೆ. ಮನಸ್ಸು ಒಂದೇಸವನೆ ಅವಳ ಚಿಂತನೆಯನ್ನು ಮಾಡುತ್ತಲಿದೆ. ನೀವು ಕಣ್ಣೀರಿನ ಮಾಲೆಯನ್ನು ಹೆಣೆಯಿರಿ. ವಸ್ತ್ರಗಳನ್ನು ಒಯ್ದು ಕೊಡಲು ಬರುತ್ತದ. ಕಣ್ಣೀರಿನ ಮಾಲೆಯನ್ನು ಹೇಗೆ ಹೆಣೆಯಬೆಕು. ಹೇಗೆ ಒಯ್ದು ಕೊಡಬೇಕು?’ ಎಂದು ಅವನು ತನ್ನ ಕಣ್ಣುಗಳನ್ನುದ್ದೇಶಿಸಿ ಅಂದನು. ಕಡೆಗೆ ಒಂದು ಹಸರು ಸೀರೆಯನ್ನು ತಯಾರಿಸಿದನು. ಅಂದು ವತ್ಸಲೆಯು ಹೊಲಕ್ಕೆ ಹೋಗಿದ್ದಳು. ಆಗ ಕಾರ್ತೀಕನು ಆ ಸೀರೆಯನ್ನು ತಕ್ಕೊಂಡು ಅಲ್ಲಿಗೆ ಬಂದನು.

‘ ವತ್ಸಲೆಯೋ ತೆಗೆದುಕೋ ಈ ಹಸರು ಸೀರೆಯನ್ನು. ಆ ಹಚ್ಚನ್ನ ಗಿಡದ ಬುಡದಲ್ಲಿ ಹೋಗಿ ಇದನ್ನು ಉಟ್ಟುಕೊ. ಗರ್ಭಿಣಿಯರು ಹಸರು ಸೀರೆಯನ್ನುಡಬೇಕೆಂದು ಅನ್ನುವರಲ್ಲವೇ ? ಎಂದನು ಕಾರ್ತೀಕ.

‘ ಡಾಳಿಂಬರ ಬಣ್ಣದ ಸೀರೆ, ಅಂಜೂರಿ ಬಣ್ಣದ ಸೀರೆ ಉಡಬೇಕು. ಹಾಗು ಹಸರು ಕುಪ್ಪಸವನ್ನು ತೊಡಬೇಕು. ಕಾರ್ತೀಕಾ ನೀನು ಹೋಗು. ನೀನು ನನ್ನನ್ನು ಪ್ರೀತಿಸುವಿ. ನನಗೆ ನಿನ್ನನ್ನು ನೋಡಿ ಕನಿಕರವೆನಿಸುತ್ತದೆ. ಆದರೆ ಈಗ ನೀನು ಹೋಗು. ವಿಚಾರ ಮಾಡಿ ಮಾತಾಡು, ಎಚ್ಚರಿಕೆಯಿಂದ ನಡೆ, ಇಲ್ಲದಿದ್ದರೆ ನಾನು ನಿನ್ನನ್ನು ಹತ್ತರ ಬರಗೊಡಲಿಕ್ಕಿಲ್ಲ. ನಿನ್ನ ಕೂಡ ಮಾತನಾಡಲಿಕ್ಕಿಲ್ಲ. ’ ಎಂದು ಅವಳು ಸಿಟ್ಟಿನಿಂದ ಮಾತನಾಡಿದಳು.

‘ ಕ್ಷಮಿಸು, ನಾನು ಹೋಗುತ್ತೇನೆ ’ ಎಂದನು. ಅವನ ಕಣ್ಣಲ್ಲಿ ನೀರು ಬಂದವು. ಆವನು ಹೊರಟು ಹೋದ. ವತ್ಸಲೆಯ ಕಡೆಗೆ ತಿರುಗಿ ಸಹ ನೋಡಲಿಲ್ಲ.

ವತ್ಸಲೆಯು ಗಿಡದ ಹತ್ತರ ಹೋದಳು. ಆ ಹಸರು ಸೀರೆಯನ್ನುಟ್ಟಳು. ನಾಗಾನಂದನು ಬಂದನು. ನೋಡಿ ಚಕಿತನಾದ.

‘ ಕೆಂಪು ಬಣ್ಣದ ಸೀರೆಯನ್ನುಟ್ಟು ಬಂದ ನೀನು, ಹಸರು ಸೀರಯಲ್ಲಿ ಕಾಣುವಿಯಲ್ಲ? ಎಂದನು ನಾಗಾನಂದ.

‘ ನಿಮಗೆ ಹಸರು ಬಣ್ಣವು ಸೇರುವದರಿಂದ ಎಲ್ಲೆಡೆಗೂ ಹಸರೇ ಕಾಣುತ್ತದೆ. ಇದು ಹಸರು ಸೀರೆಯಲ್ಲ, ಕೆಂಪು ವರ್ಣದ್ದೇ ಅದೆ. ಚನ್ನಾಗಿ ನೋಡಿರಿ.’ ಎಂದು ನಗುತ್ತ ನುಡಿದಳು.

‘ ಇದನ್ನು ಯಾರು ಕೊಟ್ಟರು ? ’ ಎಂದನು ಆತ

‘ ತೌರೂರಿನ ಉಡಗೊರೆ.’ ಎಂದಳಾಕೆ

‘ ನಿನ್ನ ತೌರೂರೆಲ್ಲಿದೆ ? ’ ಎಂದು ಅವನು ಕೇಳಿದನು.

‘ ಎಲ್ಲೆಡೆಯಲ್ಲಿ ’ ಎಂದಳು ವತ್ಸಲೆ

‘ ವತ್ಸಲೇ, ನೀನು ಏನನ್ನು ಇಚ್ಛಿಸುವಿ ? ನಿನಗೆ ಏನು ಬೇಕು ? ಅದನ್ನೆಲ್ಲ ಹೇಳು. ನಿನ್ನ ಬಯಕೆಯನ್ನು ಪೂರೈಸಬೇಕು. ಹೇಳು ’ ಎಂದು ಪ್ರೇಮದಿಂದ ನಾಗಾನಂದನು ಕೇಳಿದನು.

' ಏನು ಹೇಳಲಿ ? ಆರ್ಯ ಹಾಗೂ ನಾಗರಲ್ಲಿ, ಪ್ರೇಮವನ್ನು ಹುಟ್ಟಿಸುವದಕ್ಕಾಗಿ ನಾನು ಸಾಯಬೇಕೆನಿಸುತ್ತದೆ. ನೀವು ಪ್ರಚಾರಕ್ಕಾಗಿ, ಯಾವಾಗ ಹೊರಡುವಿರಿ ? ಎಲ್ಲಡೆಯಲ್ಲಿಯೂ ಪ್ರೇಮಧ್ವಜವನ್ನು ಒಯ್ಯೋಣ " ಎಂದಳು.

' ಈಗ ಹೋಗುವದೆಲ್ಲಿ ? ಈಗ ನಿನಗೆ ಬೇಗನೆ ನಡೆಯಲೂ ಸಹ ಆಗುವದಿಲ್ಲ. ಇಷ್ಟು ದೂರವೇಕೆ ಬಂದೆ ? ಸೀರನ್ನು ಹಾಕಲಿಲ್ಲವಷ್ಟೆ ? ಹೆಚ್ಚು ದುಡಿಯುವದು ಒಳ್ಳೆದಲ್ಲ. ' ಎಂದನು.

' ಸ್ವಲ್ಪ ದುಡಿದರೇನೆ ಎಲ್ಲವೂ ಒಳಿತಾಗುವದು. ದುಡಿಯದಿದ್ದರೆ ಮೋಸವಾದೀತು. ಇಂದು ಗಾಳಿಯೇ ಇಲ್ಲ. ಬಹಳ ಸೆಕೆಯಾಗುತ್ತದೆ ' ಎಂದಳು.

' ಗಾಳಿಯನ್ನು ಹಾಕಲಾ ? ಎಂದನು

' ಎಲೆಯನ್ನು ಹರಿದು ತನ್ನಿರಿ, ಹಾಗೂ ಗಾಳಿಯನ್ನು ಹಾಕಿರಿ. ' ಎಂದು ನಗುತ್ತ ನುಡಿದಳು.

ಆವಳು ಕಾಲನ್ನು ಚಾಚಿ ಕುಳಿತಿದ್ದಳು. ಅವನು ಆವಳಿಗೆ ಗಾಳಿಯನ್ನು ಹಾಕುತ್ತಿದ್ದನು. ಸಂಜೆಯಾಗುತ್ತ ಬಂದಿತು. ಗಂಡನ ಕೈಹಿಡಕೊಂಡು ವತ್ಸಲೆಯು ಮನೆಗೆ ಬಂದಳು. ಆವಳು ದಣಿದುಹೋಗಿದ್ದಳು.

ಕೆಲವು ದಿನಗಳಾದ ಮೇಲೆ ವತ್ಸಲೆಯು ಗಂಡು ಮಗುವನ್ನು ಹೆತ್ತಳು. ಸುಶ್ರುತೆಗೆ ಆನಂದವಾಯಿತು. ಆವಳಿಗೆ ಮರಿಮಗನಾದನು. ಯಾವ ಹೆಸರನ್ನಿಡಬೇಕೆಂಬ ಚರ್ಚೆಯಾಯಿತು. ಶಶಾಂಕನೆಂದು ಹೆಸರಿಟ್ಟರು. ಹುಡುಗನು ಬಹಳ ಸುಂದರನಾಗಿದ್ದನು. ಅವನು ಕೆಂಪಗಿದ್ದನು. ತಾಯಿಯ ಬಣ್ಣದವನಿದ್ದ. ಕಣ್ಣು ಮೂಗುಗಳು ತಂದೆಯಂತಿದ್ದವು.

'ನನ್ನ ವರ್ಣದವನಿದ್ದಾನೆ, ಹುಡುಗ ನನ್ನವ' ಎಂದಳು ವತ್ಸಲೆ.

' ಆದರೆ ಕಣ್ಣುಗಳು ನನ್ನಂತಿವೆ. ಬಣ್ಣವು ಮುಖ್ಯವೋ ? ದೃಷ್ಟಿಗಳು ಮುಖ್ಯವೊ? ದೃಷ್ಟಿಯಂತೆ ಸೃಷ್ಟಿಯು. ದೃಷ್ಟಿಯಂತೆ ಬಣ್ಣ ಜಗತ್ತಿನಲ್ಲಿ ದೃಷ್ಟಿ ಮುಖ್ಯವಾದದ್ದು, ಬಣ್ಣವಲ್ಲ ' ಎಂದನು ನಾಗಾನಂದ.

' ಇರಲಿ. ಜಗಳಾಡಬೇಡಿರಿ' ಎಂದಳಾಕೆ.

ಶಶಾಂಕನು ನಗಹತ್ತಿದ. ಎಂಟನೆ ತಿಂಗಳಲ್ಲಿಯೇ ನಡೆಯಹತ್ತಿದ. ಮಾತನಾಡಹತ್ತಿದ. ಎರಡು ವರ್ಷಗಳು ಕಳೆದವು. ಶಶಾಂಕನು ಹೊರಗೆ ಆಡ್ಯಾಡಹತ್ತಿದನು.

ಅವನು ಹಾಲು ಚಲ್ಲುವನು. ಹೂಗಳನ್ನು ಕೊಸರುವನು. ಸುಶ್ರುತೆಯು ಸಿಟ್ಟುಮಾಡತೊಡಗಿದಳು. ಅವನ ಕಣ್ಣಲ್ಲಿ ನೀರ ಬರಹತ್ತಿದವು. ಅವನ ಮೋರೆಯು ಕೆಂಪಾಗುವದು. ಆಗ ಸುಶ್ರುತೆಯು ಅವನನ್ನು ಕೂಡಲೆ ಎದೆಗವಚಿಕೊಂಡು ಮುದ್ದಿಸುವಳು.

ತಂದೆ ತಾಯಿಗಳ ಹಾಗೂ ಅಜ್ಜಿಯ ಸಹವಾಸದಲ್ಲಿ ಅವನು ಬೆಳೆಯುತ್ತ ನಡೆದ. ಅವನನ್ನು ಒಮ್ಮೊಮ್ಮೆ ಹೊಲಕ್ಕೆ ಕರೆದೊಯ್ಯುವರು. ಅಲ್ಲಿ ಅವನು ಆಕಳ ಕರುವಿನೊಡನೆ ಆಟವಾಡುವನು. ಆಕಳ ಮೈಮೇಲೆ ಕೈಯಾಡಿಸುವನು. ಸಣ್ಣ ಪಾತ್ರೆಯಲ್ಲಿ ನೀರನ್ನು ತುಂಬಿಕೊಂಡು ಗಿಡಗಳಿಗೆ ಹಾಕುವನು· ಸುತ್ತಲಿನ ಸೃಷ್ಟಿಯ ಸೊಬಗನ್ನು ಆ ಹುಡುಗನು ಆಸ್ಥೆಯಿಂದ ನೋಡುವನು. ಎತ್ತರವಾದ ಗಿಡಗಳ ಕಡೆಗೆ ನೋಡಿ ತಾನೂ ಎತ್ತರವಾಗಬೇಕೆನ್ನುತ್ತಿದ್ದನು. ಚಪಲ ಚಿಗರಿಯೊಡನಾಡಿ ಚಪಲನಾಗುತ್ತಿದ್ದ. ನವಿಲುಗಳ ಸೌಂದರ್ಯವನ್ನು ನೋಡಿ ತಾನೂ ಸುಂದರನಾಗಬೇಕೆನ್ನುತ್ತಿದ್ದ.

ಅವನು ನೆರೆಮನೆಯ ಹುಡುಗರ ಸಂಗಡ ಆಡಲು ಹೋಗುವನು. ಅವರೂ ಅವನ ಸಂಗಡ ಆಡುತ್ತಿದ್ದರು. ಆದರೆ ಒಂದು ದಿವಸ ಒಂದು ಘಟನೆಯು ನಡೆಯಿತು.

‘ ಈ ಶಶಾಂಕನನ್ನು ಆಟಕ್ಕೆ ಕರೆದು ಕೊಳ್ಳಬಾರದು. ಅವನ ಸಂಗಡ ಮಾತನಾಡಬಾರದು. ಶಶಾಂಕನೇ ಹೋಗು! ಇಲ್ಲಿಗೆ ಬರಬೇಡ. ನೀನು ಆರ್ಯಜಾತಿಯವನಲ್ಲ. ನೀನು ಕೀಳು ಜಾತಿಯವನಿರುವೆ. ಹೋಗು ಇಲ್ಲಿಂದ ’ ಎಂದು ಒಬ್ಬ ಹುಡುಗನ ತಂದೆಯು ಅಂದನು.

ಹುಡುಗರೆಲ್ಲ ನೋಡುತ್ತ ನಿಂತರು. ಶಶಾಂಕನು ಅಳಹತ್ತಿದ. ಅವನಿಗೆ ಏನೂ ತಿಳಿಯಲಿಲ್ಲ. ನಿನ್ನೆಯತನಕ ಎಲ್ಲರೂ ಕೂಡಿ ಆಡಿದೆವು. ಇಂದು ಬೇಡವೇ ?

‘ ನಾವು ಅವನ ಸಂಗಡ ಆಡುವೆವು ! ಶಶಾಂಕಾ ಬಾ. ಶಶಾಂಕನು ನಮ್ಮ ಗೆಳೆಯನಿದ್ದಾನೆ. ’ ಎಂದು ಒಬ್ಬ ಸಣ್ಣ ಹುಡುಗನೆಂದನು.

‘ ತಂದೆಯು ಶಿಕ್ಷೆ ಮಾಡಿದಾಗ ತಿಳಿದೀತು ? ’ ಎಂದ ಆ ಮಹನೀಯ

‘ ನಾನು ಮನೆಗೆ ಹೋಗುವೆನು. ನನ್ನಸಲುವಾಗಿ ನೀವೆಲ್ಲ ಹೊಡಿಸಿಕೊಳ್ಳುವದು ಬೇಡ ’ ಎಂದು ಹೇಳಿ ಶಂಶಾಂಕನು ಮನೆಗೆ ಹೋದನು. ಅವನು ಅಳುತ್ತ ಅಳುತ್ತ ಹೋದನು. ಹೋದವನೇ ಅಜ್ಜಿಯ ಕೊರಳಿಗೆ ಬಿದ್ದನು. ಸುಶ್ರುತೆಯು ಅವನನ್ನು ಅಪ್ಪಿಕೊಂಡಳು,

‘ ಏನಾಯಿತು ಮಗನೆ ? ಬಿದ್ದಿಯಾ ? ಯಾರಾದರೂ ಹೊಡೆದರೇ ? ಯಾರಾದರೂ ಏನಾದರೂ ಅಂದರೇ ? ’ ಎಂದು ಸುಶ್ರುತೆಯು ವಿಚಾರಿಸಿದಳು

‘ ನೀನು ಕೀಳನಿರುವಿ, ನೀಚನಿರುವಿ ’ ಎಂದೇಕೆ ನನಗೆ ಅನ್ನುತ್ತಾರೆ? ನಮ್ಮ ಹುಡುಗರ ಸಂಗಡ ಆಡಲು ಬರಬೇಡ ? ಎಂದೇಕೆ ಅನ್ನುತ್ತಾರೆ ? ನಾನೇನು ಕೆಡುಕನಿರುವೆನೇ ? ಹೀಗೇಕೆ ನನಗೆನ್ನುವರು ? ಶಶಾಂಕ ಕೇಳಿದನು.

‘ ನೀನು ಮನೆಯಲ್ಲಿಯೇ ಆಡು. ಅವರು ದುಷ್ಟರಿದ್ದಾರೆ. ಅವರ ಸಂಗಡ ಹೋಗಬೇಡ. ನಿನ್ನನ್ನು ಹೊಡೆಯಬಹುದು. ಮನೆಯಲ್ಲಿಯೇ ಆಡಬೇಕು. ’ ಎಂದಳು ಅಜ್ಜಿ

‘ ಮನೆಯಲ್ಲಿ ಯಾರೊಡನೆ ಆಡಲಿ ? ’ ಎಂದು ಅವನು ಅಳುತ್ತ ಕೇಳಿದ

‘ ನನ್ನ ಸಂಗಡ ಆಡು. ನಾನು ನಿನ್ನ ಸಂಗಡ ಆಡುವೆನು. ನನಗೆ ಬೇಸರಿಕೆ ಬರುವದಿಲ್ಲ. ನಾನು ಅಡಗುವೆ. ನೀನು ನನ್ನನ್ನು ಹುಡುಕು. ನೀನು ಅಡಗು, ನಾನು ಹುಡುಕುವೆನು. ನಾನು ನಿನ್ನನ್ನು ಹಿಡಿಯುವೆನು. ನೀನೂ ನನ್ನನ್ನು ಹಿಡಿ. ಇಬ್ಬರೂ ಕೂಡಿ ಆಡೋಣ. ನೀನು ಅಳಬೇಡ.’ ಎಂದು ಸುಶ್ರುತೆಯು ರಮಿಸತೊಡಗಿದಳು.

‘ ದೊಡ್ಡವರ ಸಂಗಡ ಆಡುವದು ನನಗೆ ಸೇರುವದಿಲ್ಲ. ನಾನು ನಿನ್ನ ಹತ್ತರ ಮಲಗಬಲ್ಲೆ, ಆದರೆ ಆಟವಾಡಲಾರೆ. ಹುಡುಗರ ಸಂಗಡ

ಆಡುವದರಲ್ಲಿ ಮೋಜು ಇರುತ್ತದೆ. ನನಗೆ ಅಣ್ಣತಮ್ಮಂದಿರಿಲ್ಲವೇನು? ಸಣ್ಣವನೂ ಇಲ್ಲ, ದೊಡ್ಡವನೂ ಇಲ್ಲ ನಾನೊಬ್ಬನೆ. ಉಳಿದ ಹುಡುಗರಿಗೆಲ್ಲ ಅಣ್ಣತಮ್ಮಂದಿರಿದ್ದಾರೆ, ಅಕ್ಕತಂಗಿಯರಿದ್ದಾರೆ. ನೀನು ನಗುವಿಯಾದರೆ ನಾನು ಮಾತನ್ನೇ ಆಡುವದಿಲ್ಲ.' ಹೀಗೆ ಅಂದು ಶಶಾಂಕನು ಶಟಗೊಂಡನು.

'ನೀನು ನಮ್ಮ ಹೊಲಕ್ಕೆ ಹೋಗು. ಅಲ್ಲಿ ಆಕಳ ಕರುಗಳಿವೆ. ಹತ್ತಿರದ ಅಡವಿಯಲ್ಲಿ ನವಿಲುಗಳಿವೆ. ಮಂಗಗಳಿವೆ. ಚಿಗರಿಗಳೂ ಕೂಡಾ ಇವೆ. ಅಲ್ಲಿಗೆ ಹೋಗು. ಅವುಗಳ ಸಂಗಡ ಆಡು. ಆಕಳಕರುಗಳು ಸಣ್ಣವಿವೆಯಲ್ಲವೇ? ಅವು ನಿನಗೆ ಹೆಸರಿಡುವದಿಲ್ಲ.' ಎಂದು ಸುಶ್ರುತೆಯು ಹೇಳಿದಳು.

'ಅವು ನನ್ನನ್ನು ನೀಚನೆಂದು ಬಗೆಯಲಾರವಷ್ಟೇ? ಕೀಳನೆಂದು ಬಗೆಯಲಾರವೆ? ನವಿಲುಗಳು ಸುಂದರವಾಗಿದ್ದರೂ ಸಹ ನನ್ನನ್ನು ನೋಡಿ ನಗಲಿಕ್ಕಿಲ್ಲವಷ್ಟೇ? ಮನುಷ್ಯರಿಗಿಂತಲೂ ಆಕಳು, ನವಿಲು, ಹಾಗೂ ಚಿಗರೆಗಳು ಒಳ್ಳೆಯವಿರುತ್ತವಲ್ಲವೇ?' ಎಂದು ಶಶಾಂಕನು ಕೇಳಿದ.

'ನವಿಲು ನಗುವದಿಲ್ಲ. ಅವು ನಿನಗೆ ಗರಿಗಳನ್ನು ಕೊಡುವವು. ನನ್ನ ಬಳಿಯಲ್ಲಿ ಸಾಕಷ್ಟು ನವಿಲುಗರಿಗಳಿವೆ. ನಾನು ನಿನಗೆ ಅವುಗಳ ಟೊಪ್ಪಿಗೆಯೊಂದನ್ನು ಸಿದ್ಧಪಡಿಸುವೆ. ಅದು ನಿನಗೆ ಒಪ್ಪೀತು. ನಿನ್ನನ್ನು ನೋಡಿ ನವಿಲು ಹೆಚ್ಚಾಗಿ ಕುಣಿದೀತು, ಎಂದಳು ಸುಶ್ರುತೆ.

'ಆಕಾಶದಲ್ಲಿ ಮೋಡಗಳು ಕವಿದವೆಂದರೆ ನವಿಲುಗಳು ನರ್ತಿಸುತ್ತವೆ. ಅಂದು ನಾನು ಅವ್ವನ ಸಂಗಡ ಹೊಲಕ್ಕೆ ಹೋಗಿದ್ದೆ. ಆಕಾಶದಲ್ಲಿ ಗುಡುಗಿನ ಸಪ್ಪಳವಾಯಿತು. ನನಗೆ ಅಂಜಿಕೆಯಾಯಿತು. ನಾನು ಅವ್ವನನ್ನು ಅಪ್ಪಿಕೊಂಡೆ. ಆದರೆ ನವಿಲುಗಳು ಕುಣಿಯಹತ್ತಿದವು. ನವಿಲುಗಳಿಗೆ ಮೋಡಗಳು ಸೇರುವವೇನು?' ಗುಡುಗು ಸೇರುವದೇ? ಅವ್ವನೆಂದಳು 'ಆಕಾಶದಲ್ಲಿ ದೇವರ ತಾಯಿಯು ಬೀಸುತ್ತಿದ್ದಾಳೆ' ಅದು ನಿಜವೇ?' ಎಂದು ಶಶಾಂಕನು ವಿಚಾರಿಸಿದನು.

'ದೇವರಿಗೆ ಊಟ ಬೇಡವೇನು?' ಎಂದಳು ಸುಶ್ರುತೆ.

'ಆದರೆ ಗಡಗಡವೆಂದಕೂಡಲೆ ಮಳೆ ಬೀಳುತ್ತದೆ. ಹಿಟ್ಟು ಬೀಳುವದಿಲ್ಲ.' ಎಂದನು ಶಶಾಂಕ.

'ನವಿಲುಗಳಿಗೆ ಮಳೆಯು ಬಹಳ ಸೇರುತ್ತದೆ' ಎಂದಳು ಸುಶ್ರುತೆ.

'ನನಗೂ ಮಳೆ ಸೇರುತ್ತವೆ. ಆದರೆ ಹೋಗಗೊಡುವದಿಲ್ಲ. "ಅಂದು ಅಪ್ಪನು ನನ್ನನ್ನು ಎತ್ತಿಕೊಂಡು ನನ್ನ ಮೇಲೆ ಶೆರಗನ್ನು ಹೊಚ್ಚಿದಳು. ಹೀಗೆ ಮಾಡುವದು ನನಗೆ ಸೇರುವದಿಲ್ಲ. ತಲೆಯ ಮೇಲೆ ಮಳೆ ಬಿದ್ದರೆ ಏನಾಗುವದು ?" ಎಂದು ಅವನು ವಿಚಾರಿಸಿದನು.

'ಮಳೆಯಿಂದ ನಮಗೆ ಜೇನೆ ಬರುವದು. ನವಿಲುಗಳಿಗೆ ಜೇನೆ ಬರುವದಿಲ್ಲ. ಮೋಡವು ನವಿಲಿನ ಗೆಳೆಯನಿದ್ದಾನೆ.' ಎಂದಳು ಸುಶ್ರುತೆ.

'ಅದುಕೂಡ ನನ್ನ ಗೆಳೆಯ. ಅವನ ಕಡೆಗೆ ನಾನು ನೋಡುತ್ತಿರುತ್ತೇನೆ. ಅದು ಒಮ್ಮೆ ಕುದರಿಯಂತೆ ಕಂಡರೆ, ಮತ್ತೊಮ್ಮೆ ಆನೆಯಂತೆ ಕಾಣುವದು. ಅದರ ಬಣ್ಣವು ಕೂಡ ಬಹಳ ಸುಂದರವಾಗಿ ಕಾಣುವದು. ನಾವು ಗುಡ್ಡದ ಮೇಲೆ ಹತ್ತಿದರೆ ನಮ್ಮ ಕೈಗೆ ಅದು ಸಿಗುವದು. ಅದರ ಮೈಯು ಯಾವಾಗಲೂ ಹಸಿ ಇರಬಹುದಲ್ಲವೇ ?, ಎಂದು ಅಜ್ಜಿಯ ತಲೆಯನ್ನು ಅಲ್ಲಾಡಿಸುತ್ತ ನುಡಿದನು.

'ಎಲಾ ನನ್ನ ಗೋಣು ನೊಂದೀತು?' ಎಂದಳು ಸುಶ್ರುತೆ.

'ಅಜ್ಜೀ ನಾನು ಆಡಲಿಕ್ಕೆ ಹೋಗಲೋ ಹೊಲಕ್ಕೆ ಹೋಗಲೋ ? ಹೊಲಕ್ಕೇ ಹೋಗುತ್ತೇನೆ. ಗಿಡದ ಮರೆಗೆ ನಿಂತು, ನವಿಲಿನಂತೆಯೂ ಕೋಕಿಲೆಯಂತೆಯೂ ಕೂಗುವೆ' ಎಂದನು ಶಶಾಂಕ.

'ಹೋಗು ಹೊಲಕ್ಕೆ' ಎಂದಳು ಸುಶ್ರುತೆ.

'ಹೋಗುವೆ' ಎಂದು ಬಣ್ಣದ ಕೋಲು ಹಿಡಿದುಕೊಂಡು ಹೋಗುವನು.

ವತ್ಸಲೆ ಹಾಗೂ ನಾಗಾನಂದರು ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ಸೂರ್ಯಾಸ್ತದ ಸಮಯ. ಆಕಾಶದಲ್ಲಿ ಕಾಮನಬಿಲ್ಲು ಮೂಡಿತ್ತು. ಆಕಾಶವು ರಮಣೀಯವಾಗಿದ್ದಿತು. ಆದರೆ ಗಂಭೀರವಾಗಿತ್ತು.

' ಆ ಶೋಭೆಯನ್ನು ನೋಡಿರಿ. ಕಾಮನಬಿಲ್ಲು ಪೂರ್ಣವಾಗಿ ಕಾಣಿಸುತ್ತಿದೆ. ಇದು ದೇವರಾಜ್ಯದ ಕಮಾನು. ದೇವರು ಯಾರ ಸ್ವಾಗತಕ್ಕಾಗಿ ಇದನ್ನು ನಿರ್ಮಿಸಿರುವನು ? ಇತ್ತಕಡೆಗೆ ನೋಡಿರಿ, ಹಳದೀ ಹೂಬಿಸಿಲು ಎಷ್ಟು ಚಂದ ಕಾಣುತ್ತಿದೆ. ಜಗನ್ಮಾತೆಯು ಪೀತಾಂಬರವನ್ನುಟ್ಟಂತೆ ಶೋಭಿಸುತ್ತಿದೆಯಲ್ಲವೆ? ಆ ಸಿಂಹಾಸನದ ಮೇಲೆ ಯಾರು ಕೂಡುವರು ? ದೇವರ ರಾಜ್ಯದಲ್ಲಿ ಎಷ್ಟು ವೈಭವವಿದೆಯೋ? ಎಷ್ಟು ಸೌಂದರ್ಯವಿದೆಯೊ?' ಎಂದು ಸೃಷ್ಟಿಯ ಕಡೆಗೆ ನೋಡುತ್ತ ವತ್ಸಲೆ ಎಂದಳು.

' ಜಗತ್ತಿನಲ್ಲಿಯ ದುಃಖಿಗಳು ನಗುವದಕ್ಕಾಗಿ, ಆನಂದಿಸುವದಕ್ಕಾಗಿ ದೇವರು ಇಂತಹ ಸುಂದರ ಪ್ರದರ್ಶನಗಳನ್ನು ನಿರ್ಮಿಸುತ್ತಾನೆ. ಪ್ರಾತಃಕಾಲದ ಉಷೆಯನ್ನು ನೋಡಿ ಯಾರಿಗೆ ಪ್ರಸನ್ನತೆ ಎನಿಸಲಿಕ್ಕಿಲ್ಲ ? ಸಾಯಂಕಾಲದ ಈ ಬಣ್ಣವು ಯಾರನ್ನು ರಮಿಸಲಿಕ್ಕಿಲ್ಲ ? ರಾತ್ರಿಯಲ್ಲಿಯ ಈ ನಕ್ಷತ್ರಗಳನ್ನು ನೋಡಿ ಯಾರ ದುಃಖವು ದೂರವಾಗಲಿಕ್ಕಿಲ್ಲ ? ಹಸರು ಗಿಡಬಳ್ಳಿಗಳನ್ನು ನೋಡಿ ಯಾರ ಕಣ್ಣುಗಳು ನಲಿಯಲಿಕ್ಕಿಲ್ಲ ? ಪ್ರಸನ್ನವಾದ ನದಿಗಳನ್ನು ನೋಡಿ, ಯಾರ ಮನಸ್ಸು ನಿರ್ಮಲವಾಗಲಿಕ್ಕಿಲ್ಲ ? ಈ ಹೂಗಳನ್ನೂ ಈ ವಿಧದ ಬಣ್ಣಗಳನ್ನೂ ಈ ಸುಗಂಧದ್ರವ್ಯಗಳನ್ನೂ ನೋಡಿ ಎಲ್ಲರ ಚಿಂತೆಗಳು ದೂರಾಗುತ್ತವೆ. ದುಃಖವು ಓಡಿಹೋಗುತ್ತದೆ. ಅರಳಿದ ಹೂಗಳಲ್ಲಿ ಆನಂದವು ತುಂಬಿತುಳುಕುತ್ತದೆ. ಪಕಳಿ ಪಕಳಿಗಳಲ್ಲಿ ಅದು ವ್ಯಾಪಿಸಿರುತ್ತದೆ. ಅದು ನೋಡಿರಿ ಎಷ್ಟು ಚಂದಕಾಣುತ್ತದೆ. ಗಾಳಿಗೆ ತಲೆದೂಗುತ್ತಲಿವೆ. ದೇವರು ಈ ಆನಂದವನ್ನು ನಮ್ಮ ಸುತ್ತುಮುತ್ತಲೂ ನಿರ್ಮಿಸಿರುತ್ತಾನೆ. ಆದರೆ ಅದು ನಮಗೆ ಕಾಣುವದಿಲ್ಲ.' ಎಂದನು ನಾಗಾನಂದ.

' ನೀವು ಎಷ್ಟು ಸುಂದರವಾಗಿ ವರ್ಣಿಸುತ್ತೀರಿ ? ನೀವು ನಿಜವಾಗಿ ಆಶ್ರಮದಲ್ಲಿದ್ದಿರಾ ? ' ಎಂದಳು ವತ್ಸಲೆ.

' ನಾನು ನಿನಗೆ ಮೊದಲೇ ಇದ್ದೆನೆಂದು ಹೇಳಿಲ್ಲವೇ ? ಅವರು ಬಹಳ ದೊಡ್ಡ ಗುರುಗಳು, ಆಚಾರ್ಯರು. ' ನಾಗಾನಂದಾ ಸೃಷ್ಟಿಯೇ

ನಿಜವಾದ ಗುರುವು. ಅವರ ಹತ್ತರ ಕಲಿ. ಈ ಸೃಷ್ಟಿಯು ನಿನಗೆ ಎಲ್ಲವನ್ನೂ ಕಲಿಸುವದು' ಎಂದು ಅವರು ನನಗೆ ಹೇಳುತ್ತಿದ್ದರು. ಅವರ ಆ ಮಾತನ್ನು ನಾನು ಒಂದೂ ಮರೆಯುವದಿಲ್ಲ. ಈ ಹಚ್ಚಗಿನ ಹುಲ್ಲು! ಅದರ ಕಡೆಗೆ ನೋಡು: ಅದರ ಮೌನದಲ್ಲಿ ಅರ್ಥವಿದೆ! ಇದು ಭೂಮಾತೆಯ ಹೊಟ್ಟೆಯೊಳಗಿನ ಪ್ರೀತಿಯಂತೆ ಹೊರಬಿದ್ದಿದೆ. ಭೂಮಾತೆಯ ಸರಳತೆ, ಸೌಂದರ್ಯತೆಯೇ ಹೊರಗೆ ಬಿದ್ದಂತಿದೆ. ಮಳೆ ಬಿದ್ದೊಡನೆ ಭೂಮಾತೆಯು ಮೈಮೇಲೆ ರೋಮಾಂಚನಗಳೆದ್ದಿವೆಯೋ? ಎಂಬತೆ ಕಾಣುತ್ತದೆ, ಬಹಳ ವಿನೋದವಿದೆ." ಎಂದನು ನಾಗಾನಂದ.

"ನೀವು ಕವಿಗಳಂತೆ ಮಾತಾಡುವಿರಿ. ವಾಲ್ಮೀಕಿಯಂತೆ ನೀವೂ ರಾಮಾಯಣವನ್ನು ಬರೆಯಿರಿ" ಎಂದಳು ವತ್ಸಲೆ.

'ನನ್ನ ಜೀವನವೇ ನನ್ನ ರಾಮಾಯಣ, ಸರ್ವೋತ್ಕೃಷ್ಟ ಕಾವ್ಯ. ನಾನು ಈ ಹೊಲವನ್ನು ಸಾಗುಮಾಡುತ್ತೇನೆ. ನಾನು ಕೊಳಲೂದುತ್ತೇನೆ. ಇವೇ ನನ್ನ ಕವಿತೆ. ಹೂಗಳನ್ನು ಅರಳಿಸುವೆನು, ಆಕಳುಗಳನ್ನು ಕಾಯುವೆನು. ಇದೇ ನನ್ನ ಕಾವ್ಯ." ಎಂದನು ನಾಗಾನಂದ.

"ಎರಡನೆಯವರ ಸಲುವಾಗಿ ನದಿಯಲ್ಲಿ ಹಾರುವಿರಿ, ಹುಲಿಯೊಡನೆ ಕಾದುವಿರಿ, ಇದೂ ನಿಮ್ಮ ಕಾವ್ಯವಲ್ಲವೆ." ಎಂದಳು ವತ್ಸಲೆ.

"ನೀನು ಕೂಡಾ ಅಂದು ರಾತ್ರಿ ಎಂಥ ಕಾವ್ಯವನ್ನು ಮಾಡಿದೆ! ಪ್ರೇಮದ ಸುಂದರವಾದ ಹೂವನ್ನು ಅರಳಿಸಿದೆ. ಶೃಂಗಾರ-ವೀರ-ಕರುಣ ರಸಗಳಿಂದ ಕೂಡಿದ ಮಹಾ ಕಾವ್ಯವನ್ನು ರಚಿಸಿದೆ. ಅಲ್ಲವೇ? ಎಂದು ಅವನು ಪ್ರೀತಿಯಿಂದ ಅವಳ ಕೈಹಿಡಿಯುತ್ತ ಅಂದನು.

"ನಮ್ಮ ಶಶಾಂಕನನ್ನು ಆಶ್ರಮಕ್ಕೆ ಕಳಿಸಬೇಕು. ನಿಮಗೆ ಹೇಗೆ ಅನಿಸುತ್ತದೆ" ಎಂದಳು ವತ್ಸಲೆ.

"ಇಷ್ಟು ಬೇಗನೆ ಬೇಡ. ಇನ್ನೆರಡು ವರ್ಷಗಳಾಗಲಿ ಆ ಮೇಲೆ ಕಳಿಸೋಣ' ಎಂದನು ನಾಗಾನಂದ.

- 'ನಾವಿಬ್ಬರೂ ಸಂಚರಿಸಬೇಕೆಂದು ನನಗೆ ಅನಿಸುತ್ತದೆ. ಶಶಾಂಕನ ಆಶ್ರಮದಲ್ಲಿರಲಿ. ಹೊಲವನ್ನು ಕಾರ್ತೀಕನು ನೋಡಿಕೊಳ್ಳುವನು. ಅವನ

ಅಜ್ಜಿಗೆ ಆಧಾರವಾಗುವನು. ನಾವಿಬ್ಬರೂ ಹೋಗೋಣ. ಪ್ರೇಮಧರ್ಮದ ಪ್ರಚಾರವನ್ನು ಮಾಡೋಣ. ನಾಗ ಮತ್ತು ಆರ್ಯರಲ್ಲಿ ಮಿತ್ರತ್ವವನ್ನು ಬೆಳೆಸೋಣ. ಇದೇ ನಿಜವಾದ ಕಾವ್ಯ. ಈ ಕಾರ್ಯಮಾಡುವಾಗ ನಮಗೆ ತೊಂದರೆಗಳು ಬರಬಹುದು. ಮರಣವು ಬಂದರೂ ಬರಬಹುದು ! ಆದರೆ ಜೀವನ ಮಹಾಕಾವ್ಯದಲ್ಲಿ ಅದು ಕಟ್ಟಕಡೆಯ ಅಮರಗೀತೆಯಾದೀತು. ನಾನು ಚಿಕ್ಕವಳಿರುವಾಗ ಅಜ್ಜಿಗೆ ಅನ್ನುತ್ತಿದ್ದೆ. ' ಅಜ್ಜೀ, ಪರಬ್ರಹ್ಮವನ್ನು ನಾನು ಬೆಳೆಸುವೆ. ವತ್ಸಲೆಯು ಪರಬ್ರಹ್ಮನ ತಾಯಿಯಾಗುವಳು. ನನಗೆ ಪರಬ್ರಹ್ಮನ ಮಾತೆಯಾಗಲುಗೊಡು. ಪ್ರೇಮವೆಂದರೇನೆ ಪರಬ್ರಹ್ಮ. ಆರ್ಯ ಹಾಗು ನಾಗಜಾತಿಯ ಪ್ರೇಮ. ಎಲ್ಲದರಲ್ಲಿ ಸೌಂದರ್ಯ ಹಾಗು ಮಂಗಳವನ್ನು ನೋಡುವದೇ ಪ್ರೇಮ ' ಎಂದು ವತ್ಸಲೆಯ ಮನಸ್ಸಿನಲ್ಲಿಯ ಮಾತನ್ನು ಹೇಳಿದಳು. ಅಷ್ಟರಲ್ಲಿಯೇ ಕೂ ಎಂಬ ಸಪ್ಪಳವಾಗತೊಡಗಿತು.

' ಈಗ ಎಲ್ಲಿಯ ಕೋಕಿಲೆ ? ' . ಎಂದನು ನಾಗಾನಂದ

' ಒಂದೇಸವನೆ ಕೂಗುತ್ತಿದೆ. ಇದು ಕೋಕಿಲೆಯಲ್ಲ ' ಎಂದಳು ವತ್ಸಲೆ.

' ಈಗ ನವಿಲಿನ ಕೂಗು! ಶಶಾಂಕನು ಬಂದಿಲ್ಲವಷ್ಟೇ ? ನವಿಲಿನಂತೆ ಕೂಗಲು ಅವನಿಗೆ ಬರುತ್ತದೆ ' ಎಂದನು ನಾಗಾನಂದ

' ಗಿಡದ ಮರೆಯಲ್ಲಿ ಶಶಾಂಕನಿದ್ದನು. ವತ್ಸಲೆಯು ಓಡುತ್ತ ಹೋದಳು.

' ಎಲಾ. ಕಳ್ಳಾ ' ಎಂದಳು ವತ್ಸಲೆ

' ಅವ್ವಾ ನಿನ್ನನ್ನು ಹೇಗೆ ಎಳತಂದೆ ? ' ಎಂದನು ಶಶಾಂಕ

' ಇಷ್ಟು ತಡಮಾಡಿ ಏಕೆ ಬಂದೆ ? ' ಎಂದಳು.

' ಇಷ್ಟು ತಡವಾದರೂ ನೀವು ಏಕೆ ಇಲ್ಲಿ ? ನಿಮಗೆ ಹೊತ್ತಾಗುವದಿಲ್ಲವೇನು ? ಹಾಗಾದರೆ ನನಗೂ ಇಲ್ಲ. ಕತ್ತಲೆಯಾದರೂ ನಾನು ನಡೆಯುವೆ. ನಾನು ನಿನಗೆ ಎತ್ತಿಕೊಳ್ಳಲು ಹೇಳುವದಿಲ್ಲ ' ಎಂದನು ಶಶಾಂಕ

‘ ಅಪ್ಪಾ ಹಾಲು ಹಿಂಡಿಲ್ಲವೇ ? ’ ಎಂದನು ಶಶಾಂಕ

‘ ಈಗ ಹಿಂಡುವೆನು ’ ಎಂದನು

‘ ನಿನಗೆ ಇಲ್ಲಿಯೇ ದೊನ್ನೆಯಲ್ಲಿ ಹಾಲು ಕುಡಿಯಲು ಕೊಟ್ಟಿದ್ದಿಲ್ಲವೇ ? ’ ಎಂದು ನಾಗಾನಂದನು ವತ್ಸಲೆಯನ್ನು ವಿಚಾರಿಸಿದನು.

‘ ಹಾಗೂ ಕೊಳಲನ್ನೂದಿ ಹುಚ್ಚಿಯನ್ನು ಮಾಡಿದ್ದಿರಿ ’ ಎಂದಳು ವತ್ಸಲೆ.

‘ ಅಪ್ಪಾ, ನನಗೂ ಕೊಳಲೂದಲು ಕಲಿಸುವಿಯಾ ? ’ ಎಂದನು ಶಶಾಂಕ.

“ ನಾನು ಎರಡನೆಯವರ ಬಳಿಯಲ್ಲಿ ಕಲಿತಿಲ್ಲ. ನಾನೇ ಕಲಿತೆ ” ಎಂದನು ತಂದೆ

“ ನೀನು ದೊಡ್ಡವ, ನಾನು ಚಿಕ್ಕವ. ನನ್ನ ಕೈಯನ್ನು ಇನ್ನೂ ಅವ್ವನು ಹಿಡಿಯುತ್ತಿದ್ದಾಳೆ. ನಿನ್ನ ಕೈಯನ್ನೇನು ಹಿಡಿಯ ಬೇಕಾಗುವದಿಲ್ಲ. ದೊಡ್ಡವರಿಗೆ ಎಲ್ಲವೂ ಬರುತ್ತದೆ. ನನಗೆ ಕಲಿಸಬಾರದೇ ? ” ಎಂದನು ಶಶಾಂಕ.

‘ ಆಶ್ರಮದಲ್ಲಿ ನಿನಗೆ ಕಲಿಸುವರು. ನೀನು ಆಶ್ರಮಕ್ಕೆ ಹೋಗುವಿಯಲ್ಲವೇ ? ” ಎಂದು ವತ್ಸಲೆಯು ಕೇಳಿದಳು.

“ ಅಲ್ಲಿ ಕೊಳಲೂದಲು ಕಲಿಸುವರೇ ? ನನ್ನೊಡನೆ ಆಡಲು ಅನೇಕ ಹುಡುಗರು ಬರುವರೇ ? “ ನೀನು ನಾಗನಿರುವಿ. ನೀಚ ಜಾತಿಯವನು ” ಎಂದು ಯಾರೂ ಅನ್ನುವದಿಲ್ಲವಷ್ಟೇ ? ಇಂದು ನನ್ನೊಡನೆ ಹುಡುಗರು ಆಡುತ್ತಿದ್ದರು. ಒಬ್ಬ ಲತ್ತ ಹುಡುಗನು ಬಂದು “ ಅವನನ್ನು ಆಟಕ್ಕೆ ಕರೆದು ಕೊಳ್ಳಬೇಡಿರಿ. ಅವನು ನಾಗನಿದ್ದಾನೆ. ಕೀಳು ಜಾತಿಯವನು, ಕೀಳು ತರಗತಿಯವನು ಎಂದನು.” ಅಪ್ಪಾ, ಹೀಗೇಕೆ ಅನ್ನುತ್ತಾರೆ ? ಎಂದು ವಿಚಾರಿಸಿದನು.

“ ಆಶ್ರಮದಲ್ಲಿ ಹೀಗೆಲ್ಲ ನಡೆಯುವದಿಲ್ಲ. ಅಲ್ಲಿ ಆರ್ಯರೇ ಇರಲಿ, ನಾಗರೇ ಇರಲಿ ಎಲ್ಲರೂ ಕೂಡಿ ಕಲಿಯುತ್ತಾರೆ. ಆಡುತ್ತಾರೆ. ಅಲ್ಲಿಗೇ ನೀನು ಹೋಗು ” ಎಂದಳು ವತ್ಸಲೆ.

"ನೀನು ಬರುವಿಯಲ್ಲವೇ ? ಅಜ್ಜಿ, ಅಪ್ಪನು ಬರುವರಲ್ಲವೇ ? ನನಗೆ ಅಜ್ಜಿಯ ಹತ್ತರ ಮಲಗಬೇಕೆನಿಸುತ್ತದೆ. ಒಬ್ಬನೇ ಮಲಗಲು ಆಗು ವದಿಲ್ಲ. ನಾನು ಒಬ್ಬನೇಯಾಕೆ ? ನನಗೆ ಅಣ್ಣ ತಮ್ಮಂದಿರಿಲ್ಲ. ಅಕ್ಕ ತಂಗಿಯರಿಲ್ಲ. ನಾನು ಒಬ್ಬನೇಯೇಕೆ ? ನೀನು ಒಬ್ಬಳೇ ಏಕೆ ? ಅಪ್ಪನು ಒಬ್ಬನೇ ಏಕೆ ? " ಎಂದನು ಶಶಾಂಕ

"ಹೌದು ಮಗುವೇ ನಾನು ಒಬ್ಬಳೇ ಇದ್ದೇನೆ ಅವರೂ ಒಬ್ಬರೇ ಇದ್ದರು ? ಎಂದಳು ವತ್ಸಲೆ.

' ಆದ್ದರಿಂದ ನಾನು ಒಬ್ಬನೇ ಏನು ನಿನ್ನಂತೆ ? " ಎಂದನು

"ನನ್ನಂತೆ ಎಲ್ಲಿ ಇರುವಿ ? ನಾನು ಕಪ್ಪಿರುವೆ, ನೀನು ಕೆಂಪಿರುವೆ" ಎಂದನ್ನುತ್ತ ನಾಗಾನಂದನು ಹಾಲು ತೆಗೆದುಕೊಂಡು ಬಂದನು.

' ನಿಜ ಆದರೆ ನಾನು ಇಬ್ಬರಂತೆಯೂ ಇರುವೆನು. ಅಂದು ಅವ್ವನು ' ಅವರಂತೆ ನಿನ್ನ ಕಣ್ಣು ಹಾಗೂ ಮೂಗುಗಳಿವೆ ' ಎಂದು ಹೇಳಿದ್ದಳು. ಅಂದರೆ ನಿನ್ನಂತೆ ಅಲ್ಲವೆ ? ' ಎಂದು ವಿಚಾರಿಸಿದನು.

' ಮಗುವೇ ಈ ಹಾಲು ಕುಡಿ ಹುಲಿಗಿಲಿ ಬಂದೀತು ? ' ಎಂದನು ನಾಗಾನಂದ.

' ಬಂದರೆ ಹೊಡೆಯುವೆನು. ನಾನು ದಿನಾಲು ಬೆಕ್ಕನ್ನು ಹೊಡೆಯು ತ್ತೇನೆ. ಅದು ನನಗೆ ಕಡಿಯುವದಿಲ್ಲ. ಹುಲಿಯನ್ನು ಹೊಡೆಯುವೆನು " ಎಂದನು ಶಶಾಂಕ.

" ಮಗುವೇ ಹುಲಿಯು ಕಡಿದರೆ " ಎಂದು ವಿಚಾರಿಸಿದಳು.

" ಕಡಿದರೆ ಅದಕ್ಕೆ ಹಾಕುವೆನು ಏಳೆಂಟು ಏಟು. ನಾನು ಅಂಜುವದಿಲ್ಲ ನಾನೊಬ್ಬನೇ ಕತ್ತಲೆಯಲ್ಲಿ ಮುಂದೆ ಹೋಗುವೆನು " ಎಂದನು ಶಶಾಂಕ.

" ಕತ್ತಲೆಯೊಳಗಿಂದ ನಾವೆಲ್ಲರೂ ಕೂಡಿಯೇ ಹೋಗೋಣ " ಎಂದನು ನಾಗಾನಂದ.

" ಕತ್ತಲೆಯೊಳಗಿಂದ ಬೆಳಕಿನ ಕಡೆಗೆ " ಎಂದಳು ವತ್ಸಲೆ.

"ಮನೆಯ ದೀಪವು ದೂರಿಂದಲೇ ಕಾಣುತ್ತಲಿದೆ" ಎಂದನು ಶಶಾಂಕ.



# ೧೩

ಆಸ್ತಿಕನು ಆಶ್ರಮದಲ್ಲಿದ್ದನು. ಎಲ್ಲ ಹುಡುಗರು ನಾಗದೇವಿಯ ಜಾತ್ರೆಗೆ ಹೋಗಿದ್ದರು. ಅದು ಬಹಳ ದೊಡ್ಡ ಜಾತ್ರೆ. ಒಬ್ಬ ನಾಗ ಜಾತಿಯ ರೈತನಿದ್ದ. ಒಮ್ಮೆ ಅವನು ಗುದ್ದಲಿಯಿಂದ ಬಣಿಯನ್ನು ಅಗಿಯುತ್ತಿದ್ದ. ಅಲ್ಲಿ ಒಂದು ಹಾವಿನ ಮರಿಯಿದ್ದಿತು. ಗುದ್ದಲಿಯು ಅದರ ಮೇಲೆ ಬಿದ್ದಿತು. ರಕ್ತ ಸುರಿಯಹತ್ತಿತು. ಆ ಒಕ್ಕಲಿಗನಿಗೆ ಬಹಳ ಕೆಡಕೆನಿಸಿತು. ಅವನು ಅಲ್ಲಿ ಅಳುತ್ತ ಕುಳಿತನು. ಒಳಗಿನಿಂದ ದೊಡ್ಡ ನಾಗರ ಹಾವು ಬಂದಿತು. ಸತ್ತ ಮರಿಯನ್ನು ನೋಡಿತು. ಸಿಟ್ಟಿಗೆದ್ದು ಭುಸಗುಡಹತ್ತಿತು. ಅತ್ತಿತ್ತ ಸುಳಿದಾಡಿತು. ಎದುರಿಗೆ ಒಕ್ಕಲಿಗನು ಅಳುತ್ತ ಕುಳಿತಿದ್ದ. ‘ ನನ್ನ ಮರಿಯು ಸತ್ತಿತೆಂದು ನಿನಗೂ ಕೆಡುಕೆನಿಸುತ್ತದೆ. ಅಂದಮೇಲೆ ನನಗೆಷ್ಟು ದುಃಖವಾಗಿರಬೇಕು ? ಇದನ್ನು ಹೊಡೆದವರಾರು ? ಇದು ಸತ್ತದ್ದನ್ನು ನೋಡಿ ‘ನೀನೇಕೆ ಅಳುವೆ ” ಎಂದು ಆ ಹಾವು ಕೇಳಿತು. “ ತಾಯಿಯೇ, ನನ್ನಿಂದಲೇ ಈ ಹಾವು ಸತ್ತಿತು. ನಾನು ಅಗಿಯುತ್ತಿದ್ದೆ. ಕೆಳಗೆ ಹಾವಿರಬಹುದೆಂಬ ಕಲ್ಪನೆ ನನಗಿರಲಿಲ್ಲ. ನಾನು ಗುದ್ದಲಿ ಹಾಕಿದೆ ಅದು ಈ ಮರಿಗೆ ಬಡಿಯಿತು. ತಾಯೀ ನನ್ನನ್ನು ಕ್ಷಮಿಸು ” ಎಂದನು. ಅದಕ್ಕೆ “ ನೀನು ಮರಿಯನ್ನು ಕೊಂದು ಓಡಿ ಹೋಗಿಲ್ಲ. ತಾಯಿಯುಬಂದು ಕಡೆಯುವದು ಎಂಬ ಭಾವನೆಯನ್ನು ಮನಸ್ಸಿನಲ್ಲಿ ತರದೆ ನೀನು ಅಳುತ್ತ ಕುಳಿತಿರುವೆ. ನಿನ್ನ ಅಂತಃಕರುಣವು ಶುದ್ಧವಿದೆ. ನಿನ್ನ ಜೀವನವು ಪವಿತ್ರ ವಿದೆ. ಇಂಥ ಮನುಷ್ಯನನ್ನು ನಾನು ನೋಡಿಲ್ಲ. ನೀನು ಹೋಗು ನಾನು ನಿನ್ನನ್ನು

ಕ್ಷಮಿಸಿರುವೆ" ಎಂದಿತು ನಾಗಿಣಿ. ಅವನು ನಮಸ್ಕಾರ ಮಾಡಿ ಹೊರಟು ಹೋದನು. ಆದರೆ ಎರಡನೆಯದಿವಸ ಬಂದು ನೋಡುತ್ತಾನೆ. ಆ ಹಾವೂ ಸತ್ತು ಬಿದ್ದಿತ್ತು. ಅದು ಏಕೆ ಪ್ರಾಣ ಬಿಟ್ಟಿತು ? ಮರಿಯು ಸತ್ತೊಡನೆ ಅದು ಏಕೆ ಸತ್ತಿತು ? ಅವನ ಅಂತಃಕರಣವು ಉಕ್ಕಿ ಬಂದಿತು. ತಿಳವಳಿಕೆ ಇಲ್ಲದ ಜಾತಿಯಾದರೂ ಮಕ್ಕಳ ಮೇಲೆ ಎಷ್ಟು ಮಾಯೆ! ಮತ್ತು ಮರಿಯನ್ನು ಕೊಂದವರನ್ನು ಕ್ಷಮಿಸುವ ಎಂಥ ದೊಡ್ಡ ಮನಸ್ಸು! ಅವನು ಹೂ, ಗಂಧವನ್ನು ತಂದನು. ಚಂದನ ಕಟ್ಟಿಗೆಗಳನ್ನು ಕೂಡಿಸಿ ಆ ತಾಯಿ ಮಕ್ಕಳಿಬ್ಬರಿಗೂ ಅಗ್ನಿ ಸಂಸ್ಕಾರವನ್ನು ಮಾಡಿದನು. ತಾಯಿಯ ಹತ್ತರ ಮರಿಯು ಆಡುತ್ತಿರುವಂತೆ ಮೂರ್ತಿಯನ್ನು ಕೊರೆಸಿದನು. ದೊಡ್ಡ ವಟ ವೃಕ್ಷದ ಕೆಳಗೆ ಈ ಮೂರ್ತಿ ಇದ್ದಿತು. ಅಲ್ಲಿಯೇ ಈ ದೊಡ್ಡ ಜಾತ್ರೆಯು ನೆರೆಯುತ್ತ ನಡೆಯಿತು. ಊರೂರಿಂದ ಜನ ಬರುತ್ತಾರೆ. ನಾಗರೂ ಆರ್ಯರೂ ಬರುತ್ತಾರೆ. ಅಂಗಡಿಕಾರರು ಅಂಗಡಿಯೊಂದಿಗೆ ಬರುತ್ತಾರೆ. ಹಣ್ಣು ಹಂಪಲಗಳ, ಹೂಗಳ ಮಿಠಾಯಿಗಳ ಅಂಗಡಿಗಳೂ ಭಾಂಡಿಯ ಅಂಗಡಿಗಳು ಬರುತ್ತವೆ. ಶಸ್ತ್ರಗಳನ್ನು ಮಾರುವ ಜನರು ಬರುತ್ತಾರೆ. ಕಂಬಾರರೂ ಕುಂಬಾರರೂ ಎಲ್ಲ ಉದ್ಯೋಗಸ್ಥರು ತಮ್ಮತಮ್ಮ ಸಾಮಾನು ಗಳನ್ನು ತೆಗೆದುಕೊಂಡು ಬರುತ್ತಾರೆ. ಜಟ್ಟಿಗಳು ಕುಸ್ತಿಯನ್ನಾಡುತ್ತಾರೆ ಮಕ್ಕಳು ಕೋಲು ಹಾಕುತ್ತಾರೆ. ಹುಡುಗೆಯರು ಗೋಪು ಹೆಣೆಯುತ್ತಾರೆ. ಎಷ್ಟು ಆನಂದ! ಆನಂದದ ಹೊಳೆಯೇ ಅಲ್ಲಿ ಹರಿಯುತ್ತದೆ.

ನಾಗಮೂರ್ತಿಯ ಮೇಲೆ ಹೂವಿನ ರಾಸಿಯೇ ಬೀಳುತ್ತದೆ. ಬಿಲ್ವ ಪತ್ರಿಯ ಪರ್ವತವೇ ಬೀಳುತ್ತದೆ. ಹಾಲಿನ ನದಿಯೇ ಹರಿಯುವಷ್ಟು ಹಾಲನ್ನು ಎರೆಯುವರು.

ಇಂಥ ಜಾತ್ರೆಗೆ ಆಶ್ರಮದ ದೊಡ್ಡ ಹುಡುಗರೆಲ್ಲರೂ ಹೋಗಿದ್ದರು. ಸಣ್ಣ ಮಕ್ಕಳು ಆಶ್ರಮದಲ್ಲಿದ್ದರು. ಅವರಿಗೆ ಬೇಸರ ಬರಬಾರದೆಂದು ಅವ ರನ್ನು ಕರೆದುಕೊಂಡು ಆಸ್ತಿಕರು ನದಿಗೆ ಹೋದರು. ನದಿಯ ನೀರಲ್ಲಿ ಆಟವಾಡಲು ಪ್ರಾರಂಭಿಸಿದರು. ರೊಟ್ಟಿ ಆಟವನ್ನು ಸುರುವು ಮಾಡಿದರು.

"ನೋಡಿರಿ, ನನ್ನ ಕಲ್ಲು ನೀರಲ್ಲಿ ಪುಟಿಯುತ್ತ ಹೊಗುತ್ತದೆ" ಎಂದನು ಶಶಾಂಕ.

"ಒಗೆ ಹಾಗಾದರೆ" ಎಂದನು ಆಸ್ತಿಕ.

ಶಶಾಂಕನು ಹಲಚಿಗಲ್ಲನ್ನೊಂದು ಒಗೆದನು. ಅದು ಏಳು ಸಲ ಪುಟಿಯಿತು. ಆಸ್ತಿಕರು ಒಂದು ಕಲ್ಲನ್ನು ತೆಗೆದುಕೊಂಡು ಒಗೆದರು. ಆದರೆ ಅದು ಒಮ್ಮೆಲೇ ಮುಳುಗಿತು.

'ನಿಮ್ಮದು ಮುಳುಗಿತು' ಎಂದನು ಶಶಾಂಕ.

"ನಿಲ್ಲು ನಾನು ಇನ್ನೊಂದು ಒಗೆಯುತ್ತೇನೆ" ಎಂದು ಎರಡನೆ ಕಲ್ಲನ್ನು ಒಗೆದರು. ಅದು ಟಣ್ ಟಣ್ ಜಿಗಿಯುತ್ತ ಹೋಯಿತು. ಕೊನೆಗೆ ಅದು ಕಾಣಿಸಲೇ ಇಲ್ಲ.

"ನಿಮ್ಮ ಕಲ್ಲು ಎಷ್ಟು ಚಂದವಾಗಿ ಹೋಯಿತು? ರತ್ನಾಕರನು ಅಂದನು.

"ಯೋಗ್ಯ ರೀತಿಯಿಂದ ಚಾಲನೆಯನ್ನು ಕೊಟ್ಟರೆ ಕಲ್ಲು ಹಾರುವದು, ನೀರಿನಲ್ಲಿ ತೇಲುವದು ಆದರಂತೆಯೇ ಮನುಷ್ಯನು ತನ್ನ ಜೀವನಕ್ಕೆ ಯೋಗ್ಯ ಗತಿಯನ್ನೂ ವೇಗವನ್ನೂ ಕೊಟ್ಟರೆ ಅದು ಮುಳುಗುವದಿಲ್ಲ. ಕೆಸರಲ್ಲಿ ಬೀಳುವದಿಲ್ಲ. ಆನಂದದ ಕಡೆಗೆ ಹೋಗುವದು" ಎಂದನು ಆಸ್ತಿಕ.

"ಕೆಲವು ಜನರು ಕೆಟ್ಟವರಿರುತ್ತಾರೆ" ಎಂದನು ಶಶಾಂಕ.

"ಅವರು ಒಳ್ಳೆಯವರಾಗುವದಿಲ್ಲವೆ?" ಎಂದನು ರತ್ನಾಕರ.

"ಏನು ಶಶಾಂಕ! ಮಾವಿನ ಮಿಡಿಯು ಹೇಗಿರುತ್ತದೆ?" ಎಂದು ಆಸ್ತಿಕನು ವಿಚಾರಿಸಿದನು.

"ಅದು ಒಗರು ಇರುತ್ತದೆ" ಎಂದನು ಶಶಾಂಕ.

"ಅದು ಸ್ವಲ್ಪ ದೊಡ್ಡದಾದರೆ ಹೇಗೆ ಹತ್ತುತ್ತದೆ?"

"ಅದು ಸ್ವಲ್ಪ ಹುಳಿಯಾಗುತ್ತದೆ."

"ಇನ್ನೂ ಸ್ವಲ್ಪ ದೊಡ್ಡದಾದರೆ?"

"ಅದು ಬಹಳ ಹುಳಿಯಾಗುತ್ತದೆ. ಹಲ್ಲುಗಳು ಚಳಿಯುತ್ತವೆ,"

" ಅದು ಇನ್ನು ದೊಡ್ಡದಾಗಿ ಹಣ್ಣಾದರೆ ? "

" ಒಳ್ಳೇ ರುಚಿ ಯಾಗುತ್ತದೆ. ಅದರ ಮೇಲಿನ ಬಣ್ಣ ಎಷ್ಟು ಚಂದ ? ಅದರ ರಸವೆಷ್ಟು ಸವಿ ! " ಎಂದನು ಶಶಾಂಕ

" ಶಶಾಂಕಾ, ಒಗರು ಮಿಡಿಯು ಹುಳಿಯಾಯಿತು. ಹುಳಿಯೇ ಮುಂದೆ ಸವಿಯಾಯಿತು. ಅದರಂತೆಯೇ ಮನುಷ್ಯ. ಕೆಟ್ಟಮನುಷ್ಯನು ಮುಂದೆ ಒಳ್ಳೆಯವನಾಗುವನು. ಅವನಿಗೆ ಅನುಭವಗಳು ಬರುತ್ತ ಹೋದಂತೆ ಅವನು ಬುದ್ಧಿವಂತನಾಗುವನು. ಮಿಡಿಗಳು ಹುಳಿಯೆಂದು ಹರಿದೊಗೆದರೆ ಮುಂದೆ ಸವಿಯಾದ ಹಣ್ಣುಗಳೇ ಸಿಗಲಾರವು ಅಲ್ಲವೇ ? " ಎಂದು ಆಚಾರ್ಯರು ವಿಚಾರಿಸಿದರು.

" ಮಿಡಿಯು ೨-೩ ತಿಂಗಳಲ್ಲಿಯೇ ಹಣ್ಣಾಗುತ್ತದೆ. ಮನುಷ್ಯನು ಎಷ್ಟ ದಿವಸಗಳಲ್ಲಿ ಹಣ್ಣಾಗುವನು ಮತ್ತು ಸವಿಯಾಗುವನು ?

" ಎಷ್ಟೇದಿನಗಳು ಹಿಡಿಯಲಿ, ಮನುಷ್ಯನ ಜೀವನವು ಒಮ್ಮೆ ಹಣ್ಣಾಗುವದು ನಿಶ್ಚಿತ. ಇದನ್ನು ಮರೆಯಲಾಗದು. ನೀನು ಹಣ್ಣಾಗುವಿ. ನಾನೂ ಹಣ್ಣಾಗುವೆ. ಎಲ್ಲರೂ ಹಣ್ಣಾಗುವರು " ಎಂದರು ಆಸ್ತಿಕರು.

" ಹುಳಿ ಮಿಡಿಯು ಸವಿ ಯಾಗುವದು. ಬತ್ತಿದ ನದಿಯು ತುಂಬಿ ಬರುವದು " ಎಂದನು ಶಶಾಕ.

' ಒಣಗಿದ ಗಿಡವು ಚಿಗುರುವುದು. ಕತ್ತಲೆ ಕಳೆದು ಪ್ರಕಾಶವು ಬರುವದು' " ಮೊಗ್ಗೆಯಿಂದ ಹೂ, ಹೂವಿನಿಂದ ಫಲ." ಎಂದನು ರತ್ನಾಕರ.

" ಸರುವಿನಿಂದ ಹಳ್ಳ, ಹಳ್ಳದಿಂದ ನದಿ. ನದಿಯಿಂದ ಸಮುದ್ರ ? ಎಂದನು ಶಶಾಂಕ.

" ಈ ಗಂಗೆಗೆ ಎಷ್ಟು ನದಿಗಳು ಕೂಡಿವೆ ಎಂಬುದು ಗೊತ್ತೇ ನಿಮಗೆ ?' ಎಂದನು ಆಸ್ತಿಕ.

" ಯಮುನಾ, ಘೋಗ್ರಾ, ಗಂಡಕಿ, ಶೋಣ ಮೊದಲಾದ ನದಿಗಳು ಕೂಡಿರುತ್ತವೆ " ಎಂದರು.

"ಗಂಗೆಯು ಅಭಿಮಾನದಿಂದ ಸರ್ವ ಪ್ರವಾಹಗಳಿಂದ ದೂರವಿದ್ದರೆ

ಯಮುನೆಯು ಕಪ್ಪಿದೆ. ಗಂಡಕಿಯಲ್ಲಿ ಕಲ್ಲುಗಳು ಬಹಳ ಇವೆ. ಘೋಗ್ರಾ ದೊಡ್ಡ ಸಪ್ಪಳವನ್ನು ಮಾಡುತ್ತದೆ, ಶೋಣವು ಎಚ್ಚರಿಲ್ಲದೆ ಹರಿಯುತ್ತವೆ." ಎಂದು ಗಂಗೆಯು ಅನ್ನುತ್ತ ಈ ನದಿಗಳನ್ನು ತನ್ನಲ್ಲಿ ಸೇರಿಸಿಕೊಳ್ಳದಿದ್ದರೆ ಏನಾಗುತ್ತಿತ್ತು? ಎಂದು ಆಸ್ತಿಕನು ವಿಚಾರಿಸಿದನು.

"ಗಂಗೆಯು ಕಾವಲಿಯಂತಿರುತ್ತಿತ್ತು. ಮತ್ತು ಕೂಡಲೇ ಬತ್ತುತ್ತಿತ್ತು" ಎಂದನು ಶಶಾಂಕ.

"ಅಭಿಮಾನದಿಂದ ಅಗಲಿ ಬೇರೆ ಉಳಿದರೆ ಅಳಿಯುವಿರಿ. ಪ್ರೇಮ ದಿಂದ ಸರ್ವ ಸಂಗ್ರಾಹಕರಾದರೆ ಉಳಿಯುವಿರಿ. ಎಂದು ಸೃಷ್ಟಿಯ ಸಂದೇಶ ವಿದೆ" ಎಂದು ಆಸ್ತಿಕನು ನುಡಿದನು.

"ಶಂಕರನ ಜಟಾಜೂಟದಿಂದ ಗಂಗೆ ಹೊರಟಳು ಎಂದರೆ ಏನು?" ಎಂದನು ಶಶಾಂಕ.

"ವಿಷ್ಣುವಿನ ಪಾದದಿಂದ ಹುಟ್ಟಿದಳು ಎಂದು ರಾಮಾಯಣದಲ್ಲಿದೆ" ಎಂದನು ರತ್ನಾಕರ.

"ವಿಷ್ಣುವೆಂದರೆ ಸೂರ್ಯ. ವಿಷ್ಣುವೆಂದರೆ ಎಲ್ಲ ಕಡೆಗೆ ಪ್ರವೇಶಿಸು ವವ. ಸೂರ್ಯನ ಪ್ರಕಾಶವು ಎಲ್ಲೆಡೆಗೂ ಹೋಗುತ್ತದೆ. ಪ್ರಕಾಶ ಸಿಗ ದಿದ್ದರೆ ವೃಕ್ಷಗಳೂ ವನಸ್ಪತಿಗಳೂ ಬೆಳೆಯಲಾರವು. ಹೂಗಳೂ ಹಣ್ಣುಗಳೂ ಆಗಲಾರವು. ನಾವೂ ಬದುಕಲಾರೆವು. ಉಷ್ಣತೆಯಿಲ್ಲದೆ ಬದುಕುವದಿಲ್ಲ. ಆದ್ದರಿಂದ ವಿಷ್ಣುವು ಎಲ್ಲರ ರಕ್ಷಕನಾಗಿದ್ದಾನೆ. ಸೂರ್ಯನು ಎಲ್ಲರ ಜೀವನವನ್ನು ನಡೆಸುತ್ತಾನೆ. ಸೂರ್ಯನೆಂದರೇನೇ ವಿಷ್ಣು, ಸೂರ್ಯನ ಕಿರಣಗಳೆಂದರೆ ವಿಷ್ಣುವಿನ ಪಾದಗಳು. ಕಿರಣಗಳಿಂದ ನೀರು ಉಗಿಯಾಗುತ್ತದೆ. ಆ ಉಗಿಯಿಂದ ಮೋಡಗಳಾಗುವವು. ಆ ಮೋಡ ಗಳಿಂದ ನಮಗೆ ಪುನಃ ನೀರು ಸಿಗುತ್ತದೆ. ನದಿಗಳು ತುಂಬಿ ಹರಿಯುತ್ತವೆ. ಆದ್ದರಿಂದಲೇ ಇವು ವಿಷ್ಣುವಿನ ಪಾದಗಳಿಂದ ಹುಟ್ಟಿರುತ್ತವೆ. ಗಂಗೆಯೊಬ್ಬಳೇಯೇಕೆ? ಎಲ್ಲ ನದಿಗಳೂ ವಿಷ್ಣುವಿನ ಪಾದದಿಂದಲೇ ಹುಟ್ಟಿರುತ್ತವೆ, ಆದರೆ ಗಂಗೆಗೆ ಮಾತ್ರ ಹೀಗೆ ಅನ್ನುತ್ತಾರೆ. ಇದಕ್ಕೆ ಒಂದು ಕಾರಣವಿದೆ. ಬೆಸಿಗೆಯಲ್ಲಿಯೂ ಸಹ ಗಂಗೆಗೆ ಮಹಾಪೂರ ಬರುತ್ತದೆ.

ವಿಷ್ಣುವಿನ ಪಾದವು ಅದನ್ನು ಪೋಷಿಸುತ್ತದೆ. ಆದ್ದರಿಂದಲೇ ಅವಳು ವಿಷ್ಣುಪಾದೋದ್ಭವೆಯೆನಿಸುವಳು. ಮತ್ತು ಶಂಕರನ ಜಟಾಜೂಟವೆಂದರೆ ಒಂದು ದೊಡ್ಡ ಕಾವ್ಯವಾಗಿದೆ. ಈ ಹಿಮಾಲಯದಲ್ಲಿರುವ ಕೈಲಾಸ ದಲ್ಲಿ ಶಿವಶಂಕರನಿರುವನೆಂದು ಹೇಳುತ್ತಾರೆ. ಈ ಶಂಕರನಾರು ? ಎಲಾ, ಆ ಕೈಲಾಸ ಶಿಖರವೆಂದರೇನೆ ಶಿವನು. ಭಸ್ಮ ಭೂಷಿತನೂ ಚಂದ್ರ ಚೂಡನೂ ಆದವನು ಶಿವನಲ್ಲದೆ ಮತ್ತಾರು ? ಹಾಲಿನ ನೊರೆಯಂತೆ ಬೆಳ್ಳಗಿರುವವನೂ ಕರ್ಪೂರ ಗೌರನೂ ಎಂಬ ವಿಶೇಷಣಗಳು ಈ ಶಿಖರಕ್ಕೇನೆ ಅನ್ವಯಿಸುತ್ತವೆ. ಇವಕ್ಕೆ ಶಿವ, ಶಂಕರ ಅನ್ನುತ್ತೇವೆ. ಯಾಕಂದರೆ ಈ ಶಿಖರಗಳು ಮೋಡ ಗಳನ್ನು ತಡೆಯುತ್ತವೆ. ಈ ಮೋಡಗಳು ಮುದ್ದಿಯಾಗುತ್ತವೆ. ಹಾಗು ಭಾರತ ವರ್ಷಕ್ಕೆ ಮಳೆ ಸುರಿಯುತ್ತದೆ. ಈ ಹಿಮಾಲಯದ ಶಿಖರಗಳು ಇರದಿದ್ದರೆ, ಎಲ್ಲಿಯ ಮಳೆ ? ಎಲ್ಲಿಯ ಜೀವನ ? ಆದುದರಿಂದಲೇ ಇವಕ್ಕೆ ಶಿವ, ಮೃತ್ಯುಂಜನು, ಎಂಬ ಹೆಸರನ್ನು ಕೊಟ್ಟಿರುವರು. ಈ ಶಂಕರನ ತಲೆ ಯಿಂದ ನೀರು ಹೊರಟಿತು, ಅಂದರೆ ಶಿಖರದಿಂದ ನೀರು ಹೊರಟಿತು. ಎಂದರ್ಥ. ಜಟಾಜೂಟವೆಂದರೆ ಹಿಮಾಲಯದಲ್ಲಿ ಹಬ್ಬಿದ ಪ್ರಚಂಡವನ. ಇದೆಲ್ಲವೂ ಕಾವ್ಯ. ನಮ್ಮ ಪೂರ್ವಜರು ಕವಿ ಹೃದಯರು. ದಟ್ಟವಾಗಿ ಮಂಜು ಮುಸುಕಿದೊಡನೆ ಈ ಹಿಮಾಲಯವು ಭಸ್ಮಾಚ್ಛಾದಿತ ಮುನಿ ಯಂತೆ ಕಾಣುವದು. ಹಿಮಾಲಯದಂಥ ಯೋಗಿಗಳಾರು ? ಕೈಲಾಸ ರಾಣಿಯಂಥ ತಪಸ್ವಿನಿಯಾರು ? ಎಂದು ವರ್ಣಿಸಿದರು. ಆದಕ್ಕೆ ಶಶಿಖಂಡಶಿಖಂಡಮಂಡನ, ಚಂದ್ರಶೇಖರ ಮೊದಲಾದ ಅನೇಕ ಹೆಸರು ಗಳನ್ನು ಕೊಟ್ಟರು. ಅನೇಕ ಪಶುಗಳಿಗೆ ಆಧಾರವಾದುದರಿಂದ ಪಶುಪತಿ ಯಾದನು. ಈ ಹಿಮಾಲಯದಲ್ಲಿ ಯಾರೋ ಯೋಗಿಗಳು ಧ್ಯಾನ ಮಾಡುತ್ತಾರೆಂದು ಮೂಲ ಕಲ್ಪನೆ. ಇದರಿಂದ ಅವನಿಗೆ ಧೂರ್ಜಟಿ ಮೊದ ಲಾದ ಹೆಸರುಗಳನ್ನು ಕೊಟ್ಟರು. ಹಿಮಾಲಯದಲ್ಲಿ ಹರಿಯುವ ನದಿಗಳು ತಾಯಿಯಂತೆ ಜಗತ್ತನ್ನು ಪೋಷಿಸುವವು. ಆ ಎಲ್ಲವುಗಳನ್ನು ಈ ಯೋಗಿ ರಾಜನು ತನ್ನ ಹತ್ತರ ಇಟ್ಟುಕೊಂಡಿದ್ದಾನೆ. ಅವುಗಳನ್ನು ರಕ್ಷಿಸುತ್ತಾನೆ. ಆದುದರಿಂದ ಸಾಂಬ, ಗಿರಿಜಾಪತಿ, ಗಿರಿಜಾರಮಣ ಎಂಬ ಹೆಸರುಗಳು

ಅವನಿಗೆ ಬಂದಿವೆ. ಸೃಷ್ಟಿಯಲ್ಲಿ ಯಾವ ಯಾವ ಉದಾತ್ತ ಸುಂದರ ಹಾಗೂ ಕಲ್ಯಾಣಮಯವಿರುವವೋ ಅವನ್ನೆಲ್ಲ ದೇವರೆಂದು ನಮ್ಮ ಜನ ಭಾವಿಸುತ್ತಿದ್ದರು" ಎಂದನು ಆಸ್ತಿಕ.

ಇಷ್ಟರಲ್ಲಿ ಹುಡುಗರು ಬರುವ ಧ್ವನಿ ಕೇಳಿಸಿತು. ಎಲ್ಲರೂ ಆಸ್ತಿಕನ ದರ್ಶನಕ್ಕಾಗಿ ಗಂಗಾನದಿಗೇ ಬಂದರು.

'ಎಲ್ಲರೂ ಬಂದರು' ಎಂದು ಶಶಾಂಕನು ಕುಣಿಯ ಹತ್ತಿದನು.

ಎಲ್ಲರೂ ಬಂದು ನಮಸ್ಕರಿಸಿದರು ಆಸ್ತಿಕನ ಸುತ್ತು ಮುತ್ತಲೂ ಕುಳಿತರು.

"ಏನು, ಜಾತ್ರೆಯು ಹೇಗಿತ್ತು? ಅಲ್ಲಿ ಬಹು ಅಂದವಿದ್ದಿಲ್ಲವೆ?" ಎಂದನು ಆಸ್ತಿಕ.

"ಈ ಯಾತ್ರೆಯನ್ನು ನಾವು ಎಂದೂ ಮರೆಯುವದಿಲ್ಲ. ಅಮರವಾದ ಯಾತ್ರೆ ಇದು." ಎಂದನು ನಾಗೇಶ.

"ಇಂದು ಅಲ್ಲಿ ಏನೇನು ನಡೆಯಿತು?" ಎಂದನು ಆಸ್ತಿಕ.

"ಎಲ್ಲವನ್ನು ಸಿದ್ಧಮತಿಯು ಹೇಳುವಳು" ಎಂದನು ಭೋಧಾಯನ.

"ಗುರು ದೇವಾ, ನೀವು ಇಲ್ಲಿ ಇದ್ದರೂ ನಿಮ್ಮ ಪ್ರೇಮದ ಸಂದೇಶವು ಎಲ್ಲೆಡೆಗೂ ಹಬ್ಬುತ್ತಲಿದೆ. ಪ್ರತಿ ವರ್ಷದಂತೆ ಸಾವಿರಾರು ಆರ್ಯ ಹಾಗು ನಾಗರು ಇದರಲ್ಲಿ ಭಾಗವಹಿಸಿದ್ದರು. ಸ್ತ್ರೀ ಪುರುಷರು ಮಕ್ಕಳು ಮರಿಗಳು ಗುಂಪು ಗುಂಪಾಗಿ ಬಂದು ಕೂಡಿದ್ದರು. ಯಾರು ರಥದಲ್ಲಿ, ಯಾರು ಚಕ್ಕಡಿಯಲ್ಲಿ, ಯಾರು ಕುದುರೆಗಳ ಮೇಲೆ ಬಂದಿದ್ದರು. ನಾಗಜಾತಿಯ ಕೆಲವು ತರುಣರು ಚಿಕ್ಕ ಚಿಕ್ಕ ಗದೆಗಳನ್ನು ತೆಗೆದುಕೊಂಡು ಬಂದಿದ್ದರು. ಅವರಲ್ಲಿ ಒಬ್ಬನು 'ನಾಗರೆಲ್ಲರೂ ಒಂದಾಗಿರಿ, ಇದು ನಾಗರ ದೇಶ. ನಮ್ಮ ಬೆಳೆಯುಳ್ಳ ಭೂಮಿಗಳನ್ನು ಆರ್ಯರು ತಕ್ಕೊಳ್ಳ ಹತ್ತಿದ್ದಾರೆ. ತಿರುಗಿ ಮತ್ತೆ ನಮಗೇ ದಸ್ಯುಗಳೆಂದೆನ್ನುತ್ತಾರೆ. ನಾಗರ ದೇವತೆಗಳ ವಿಡಂಬನೆ ಮಾಡುತ್ತಾರೆ. ಹಾವುಗಳನ್ನು ಹೊಡೆಯುತ್ತಾರೆ. ಅವುಗಳನ್ನು ನಾಗರ ದೇವರ ಮೇಲೆ ಒಗೆಯುತ್ತಾರೆ. ನಾಗಸ್ತ್ರೀಯರನ್ನು ದುರ್ದಶೆಗೊಳಿಸುತಾರೆ. ಮೊದಲು ವಿಶ್ವಾಸವನ್ನು ತೋರಿಸಿ ಹಿಂದುಗಡೆ ಮೋಸಗೊಳಿಸುತ್ತಾರೆ. ಆರ್ಯ

ಸ್ತ್ರೀಯರಿಗಿದ್ದ ಸ್ಥಾನವನ್ನು ಇವರಿಗೆ ಕೊಡುವದಿಲ್ಲ. ಅವರು ನಮ್ಮನ್ನು ಕೀಳರೆಂದು ಬಗೆಯುತ್ತಾರೆ. ಹೀಗಿರುವಾಗ ನಾವು ಅವರೊಳಗೇಕೆ ಸೇರ ಬೇಕು ? ಹೊಸ ಸಮ್ರಾಟನಾದ ಜನಮೇಜಯನಂತೂ ನಾಗರಿಗೆ ತೀರ ವಿರೋಧಿಯಾಗಿದ್ದಾನೆ. ಎಚ್ಚರಾಗಬೇಕು. ನಾಗರು ಸಂಘಟನೆಯನ್ನು ಎಲ್ಲ ಕಡೆಗೆ ಹಬ್ಬಿಸಬೇಕು,' ಎಂದು ಮುಂತಾಗಿ ಅವನ ಭಾಷಣವು ನಡೆದಿತ್ತು. ಇಷ್ಟರಲ್ಲಿ ಆರ್ಯರ ಗುಂಪೊಂದು ಅಲ್ಲಿಗೆ ಬಂದಿತು. ಬಿಲ್ಲು ಬಾಣಗಳನ್ನು ಅವರು ಧರಿಸಿದ್ದರು. ಅವರ ಮುಂದೆ ಗದ್ದಲವಾಯಿತು. ಆದರ ನಾಯಕನು ಮಾತನಾಡತೊಡಗಿದ. ಆರ್ಯ ಸ್ತ್ರೀ-ಪುರುಷರೇ, ಕೇಳಿರಿ. ನಾಗರ ಉತ್ಸವಗಳಿಗೆ ಬರಬೇಡಿರಿ. ನಾಗರನ್ನು ಕೂಡಿಕೊಳ್ಳುವದು ಪಾಪವು. ನಾಗಪೂಜೆ ಮಾಡಿ ದುಷ್ಟರಾಗಬೇಡಿರಿ. ಮನಸ್ಸು ಕೆಟ್ಟೀತು. ನಾಗ ಇದು ಹೀನಜಾತಿ. ನಾವು ಶ್ರೇಷ್ಟರಿದ್ದೇವೆ. ನಮ್ಮ ಬಣ್ಣವು ಬಿಳಿದು. ಆದರೆ ಇವರ ಸಹವಾಸದಿಂದ ಅದು ಮೆಲ್ಲಮೆಲ್ಲನೆ ಕಪ್ಪಾಗಬಹುದು. ನಾವು ಜ್ಞಾನಿಗಳು, ಗಾಯತ್ರಿ ಮಂತ್ರೋಪಾಸಕರು, ನಾವು ನಮ್ಮ ಅಧಃಪಾತ ವನ್ನು ಮಾಡಿಕೊಳ್ಳಬಾರದು. ಆರ್ಯಕನ್ಯೆಯರು ನಾಗರನ್ನು ಮದುವೆ ಯಾಗಬಾರದು. ಇದು ಬಹಳ ಕೆಡುಕು. ಅನೇಕ ಆರ್ಯಕನ್ಯೆಯರನ್ನು ಒಬ್ಬನೇ ಒಬ್ಬ ಆರ್ಯತರುಣನು ಮದುವೆಯಾಗಲು ಸಿದ್ಧನಿದ್ದಾನೆ. ಆರ್ಯರಲ್ಲಿ ಪುರುಷರ ಕೊರತೆ ಎಂಬ ನೆವವನ್ನು ಹೇಳಬಾರದು. ಆರ್ಯ ಕುಮಾರರೂ ನಾಗಕನ್ಯೆಯರೊಡನೆ ಸಂಬಂಧವನ್ನಿಟ್ಟುಕೊಳ್ಳಬಾರದು. ನಾಗಗಳಂತೆ ಈ ನಾಗಸ್ತ್ರೀಯರೂ ಹಾವಭಾವಗಳನ್ನು ತೋರಿಸುತ್ತಾರೆ. ಆದರೆ ಅವರಿಗೆ ಮೋಹಿಸಬಾರದು. ಎಲ್ಲ ಆರ್ಯರನ್ನು ಕಪ್ಪಾಗಿ ಮಾಡ ಬೇಕೆಂದು ಅವರ ಮನೀಷೆ" ಈ ಎರಡೂ ವಿರೋಧದ ಭಾಷಣಗಳು ನಡೆ ದಿದ್ದವು. ಕಟ್ಟ ಕಡೆಗೆ ಹೊಡೆದಾಟವು ಸುರುವಾಯಿತು. ಹೆಂಗಸರು ಹುಡುಗರನ್ನು ಕರಕೊಂಡು ಓಡಹತ್ತಿದರು. ಮುದುಕರು ಗದ್ದಲದಲ್ಲಿ ಒದ್ದಾಡತೊಡಗಿದರು. ದೂರಿದ್ದರೆ ಬಾಣವನ್ನು ಹೊಡೆಯಬಹುದು ಆದರೆ ಹತ್ತರವಿದ್ದರೆ ಅದರ ಉಪಯೋಗವೇನು ? ನಾಗತರುಣರು ಗದೆಗಳಿಂದ ಆರ್ಯರ ತಲೆಗೆ ಹೊಡೆಯ ಹತ್ತಿದರು. ಕೆಲವರು ಕಲ್ಲುಗಳನ್ನೊಗೆಯ

ಹತ್ತಿದರು. ಇಷ್ಟರಲ್ಲಿ ಒಂದು ಆಶ್ಚರ್ಯ ನಡೆಯಿತು. ಮಧುರವಾದ ಗಾಯನವು ಕೇಳಬಂದಿತು. ಕೊಳಲಿನ ಇಂಪಾದ ಧ್ವನಿಯು ಕೇಳಿಸಿತು. ಒಬ್ಬ ಸುಂದರ ಸ್ತ್ರೀಯು ಹಾಡುತ್ತಿದ್ದಳು. ಅವಳ ಪತಿಯು ಕೊಳಲೂದು ತಿದ್ದನು. ಅವರಿಬ್ಬರು ನಿರ್ಭಯದಿಂದ ಆ ಗದ್ದಲದಲ್ಲಿ ಹೊಕ್ಕರು. ಮಂಜುಳ ಧ್ವನಿ, ಇಂಪಾದ ಗಾನ! ಜಗಳಾಟವಾಡುವವರು ಒಬ್ಬರಿಗೊಬ್ಬರು ಅಪ್ಪಿ ಕೊಳ್ಳತೊಡಗಿದರು. ಹಗೆತನ ಮರೆಯಿತು. ದ್ವೇಷವು ಶಾಂತವಾಯಿತು. ಪ್ರೇಮದ ವಾತಾವರಣವು ತುಂಬಿತು. ಜನರ ಮೋರೆಗಳು ಅರಳಿದವು. ಆ ಇಬ್ಬರ ಎದುರು ಸಾವಿರಾರು ಜನರು ನಿಂತರು. ಹುಡುಗರು ಕುಣಿಯ ಹತ್ತಿದರು. ಸ್ತ್ರೀಯರು ನರ್ತಿಸತೊಡಗಿದರು. ಪುರುಷರೂ ಕುಣಿಯಹತ್ತಿ ದರು. ನಟರಾಜನ ವಿರಾಟ ನೃತ್ಯ! ಸುತ್ತುಮುತ್ತಲಿನ ಗಿಡ, ಕಲ್ಲುಗಳೆ ಲ್ಲವೂ ಕುಣಿಯುತ್ತಿರುವಂತೆನಿಸಿತು. ದೊಡ್ಡ ಸಂಗೀತದ ಸಮುದ್ರವೇ ಉಕ್ಕೇರಿತು.

ಶುದ್ಧಮತಿಯು ಸುಮ್ಮನಾದಳು. ಆಸ್ತಿಕನಿಗೆ ಸಮಾಧಿ ಹತ್ತಿದಂತಾ ಗಿತ್ತು. ಅವನು ಕಣ್ಣು ತೆರೆದನು. ಎಲ್ಲಕಡೆಗೂ ಪ್ರಸನ್ನತೆಯು ವ್ಯಾಪಿ ಸಿತು. ಗಂಗಾಪ್ರವಾಹವು ಹರಿಯುತ್ತಿತ್ತು. ಆಕಾಶವು ಕೆಂಪಾಗಿತ್ತು. ಎಲ್ಲಕಡೆಗೂ ಬಂಗಾರದಂತೆ ಹೊಳೆಯುತ್ತಿತ್ತು.

‘ ಸಂಗೀತವು ದೈವೀಕಲೆಯು. ಮೋಕ್ಷವನ್ನೀಯುವ ಕಲೆಯು. ಸಂಗೀತವೆಂದರೆ ಮಾನವನ ಪಕ್ಕ. ಈ ಪಕ್ಕಗಳಿಂದ ಅವನು ಮೋಕ್ಷವನ್ನು ಮುಟ್ಟುವನು. ಸಂಗೀತಕ್ಕೆ ಈ ಶಕ್ತಿಯು ಎಲ್ಲಿಂದ ಬಂದಿತು? ಪಕ್ಷಿಗಳ ಕಿಲಕಿಲಾಟವನ್ನೇ ಕೇಳಿರಿ, ನದಿಗಳ ಗುಣಗುಣ ಶಬ್ದಗಳನ್ನೇ ಕೇಳಿರಿ, ಎಲೆಗಳ ಮರಮರ ಧ್ವನಿಯನ್ನೇ ಕೇಳಿರಿ. ಅದರಿಂದ ಒಂದು ಬಗೆಯ ಪ್ರಸನ್ನತೆಯು ಉಂಟಾಗುತ್ತದೆ. ಸಂಗೀತದಲ್ಲಿ ಮೇಳವಿದೆ. ಸಂಗೀತ ವೆಂದರೆ ಸಂಯಮ ಹಾಗೂ ಸಹಕಾರ. ಸಂಗೀತವೆಂದರೆ ವಿರೋಧಗಳ ಕೊನೆ. ನಮ್ಮ ಜೀವನಕ್ಕೂ ಸಂಗೀತಕ್ಕೂ ಸಂಬಂಧವಿದೆ. ಸಂಗೀತಕೇಳಿ ಮನುಷ್ಯನೇಕೆ ಮುಗ್ಧನಾಗುತ್ತಾನೆ? ಯಾವದೇ ಕಲೆಯು ಮನುಷ್ಯನನ್ನು ಏಕೆ ಮುಗ್ಧಗೊಳಿಸುತ್ತದೆ? ಕಲೆಯೆಂದರೆ ಸತ್ಯ, ಶಿವ ಹಾಗೂ ಸುಂದರಗಳ

ಸಮ್ಮೇಲನ. ಕಲೆಯು ಸರ್ವವನ್ನು ಸಂಯಮಪೂರ್ವಕವಾಗಿ ಸ್ವೀಕರಿಸುತ್ತದೆ. ಸಂಗೀತದಿಂದ ನಮ್ಮ ಜೀವನಕ್ಕೆ ಆದರ್ಶವು ದೊರೆಯುತ್ತದೆ. ನಮ್ಮ ಜೀವನವೆಂದರೆ, ಒಂದು ಮಧುರವಾದ ಸಂಗೀತವೆಂದರ್ಥ! ಆದರೆ ನಾವು ಇದನ್ನು ಮರೆಯುತ್ತೇವೆ. ವಿರೋಧವನ್ನು ಮುಂದೆ ಮಾಡುತ್ತೇವೆ. ಪರಸ್ಪರರಲ್ಲಿ ಕೊಡಕೊಳ್ಳುವದಕ್ಕೆ ಸಿದ್ಧರಾಗುವದಿಲ್ಲ. ಇಬ್ಬರ ಜೀವನದಲ್ಲಿಯೂ ಸ್ವಲ್ಪ ಹೆಚ್ಚುಕಡಿಮೆ, ಮಾಡಬೇಕಾಗುತ್ತದೆ. ಪರಸ್ಪರರ ವ್ಯವಹಾರವೆಂದರೆ ತಕ್ಕಡಿಯ ತೂಕವಲ್ಲ. ಅಷ್ಟಕ್ಕಷ್ಟೇ ನಡೆದರೆ, ವವಹಾರಲ್ಲಿ ಮಾಧುರ್ಯವು ಉಂಟಾಗುವದಿಲ್ಲ. ಆದರೆ ಇದು ಮನುಷ್ಯರಿಗೆ ಎಂದು ತಿಳಿಯುವದು? ಕೊಳಲಿಗೆ ಏಳು ಸ್ವರಗಳು. ಆದರೆ ಮಾನವೀ ಜೀವನಕ್ಕೆ ಅನಂತ ಸ್ವರಗಳು. ಆ ಎಲ್ಲ ಸ್ವರಗಳನ್ನು ಕೂಡಿಸಲು ಸ್ವಲ್ಪ ವೇಳೆ ಬೇಕು. ಶಶಾಂಕಾ, ಈ ಗಂಗಾತೀರದಲ್ಲಿ ನೂರಾರು ಮೈಲು ವ್ಯಾಪಿಸಿದ ಈ ಭೂಮಿಯು ಬೆಳೆಯುಳ್ಳದ್ದಾಗಲು ಎಷ್ಟು ವರ್ಷಗಳು ಹಿಡಿದವೆಂಬುದನ್ನು ಹೇಳಬಲ್ಲೆಯಾ? ಈ ಭೂಮಿಯನ್ನು ಬೆಳೆಯುಳ್ಳದ್ದನ್ನಾಗಿ ಯಾರು ಮಾಡಿದರು? ಎಂಬುದು ಗೊತ್ತಿದೆಯೇ? ಇದನ್ನು ಯಾರಾದರೂ ಹೇಳಬಲ್ಲಿರಾ?' ಎಂದನು ಆಸ್ತಿಕ.

"ಮಹಾಪೂರದೊಡನೆ ರೇವೆಯು ಬಂದು ಬೀಳುವದು. ಆದರಿಂದ ಭೂಮಿಯು ಬೆಳೆಯುಳ್ಳದ್ದಾಗುವದು." ಎಂದಳು ಶುದ್ಧಮತಿ.

"ಅಹುದು, ಸರಿಯಾಗಿ ಹೇಳಿದೆ. ಆದರೆ ಈ ಕಾರ್ಯವು ಸಾವಿರಾರು ವರುಷ ಶಾಂತರೀತಿಯಿಂದ ನಡೆದಿರುತ್ತದೆ. ಅಂದಿನಿಂದ ರೇವೆಯು ಹಬ್ಬುತ್ತ ಹಬ್ಬುತ್ತ ಸಾವಿರಾರು ಮೈಲು ವ್ಯಾಪಿಸಿಲ್ಲವೇ? ಸೃಷ್ಟಿಯಲ್ಲಿ ದೊಡ್ಡ ದೊಡ್ಡ ಬದಲಾವಣೆಗಳಾಗಬೇಕಾದರೆ ನೂರಾರು ವರ್ಷಗಳನ್ನು ಶಾಂತರೀತಿಯಿಂದ ಕಳೆಯ ಬೇಕಾಗುತ್ತದೆ. ಪಂಚ ಮಹಾಭೂತಗಳಲ್ಲಿ ನೀರು, ಗಾಳಿ ಉಷ್ಣತೆಯಿಂದ ದೊಡ್ಡ ದೊಡ್ಡ ಬದಲಾವಣೆಗಳಾಗುತ್ತಿರುತ್ತವೆ. ಮನುಷ್ಯನಿಗೂ ಸಮಾಜದಲ್ಲಿ ಕ್ರಾಂತಿಯನ್ನುಂಟು ಮಾಡಬೇಕಾಗಿದ್ದರೆ, ಈ ಮೂರು ಶಕ್ತಿಗಳು ಅವನಲ್ಲಿ ಬೇಕು. ಉದಾರ ಭಾವನೆಯ ಗಾಳಿಯೂ ಬೇಕು. ಬುದ್ಧಿಪ್ರಖರತೆಯ ತೇಜವು ಬೇಕು. ಆಶೆಯ ನೀರರ ಬೇಕು. ಈ ಮೂರೂ ಶಕ್ತಿಗಳಿದ್ದವನೇ ಕ್ರಾಂತಿಯನ್ನುಂಟು ಮಾಡುವನು.

ಗಾಳಿ ತೇಜ, ಹಾಗೂ ನೀರು; ಭಾವನಾ, ಬುದ್ಧಿ ಮತ್ತು ಆಶೆ ಈ ಮೂರನ್ನು ಜೀವನದಲ್ಲಿ, ಉಂಟುಮಾಡಿಕೊಳ್ಳಿರಿ. ಆಶ್ರಮದಿಂದ ಈ ಮೂರನ್ನು ಒಯ್ಯಿರಿ ಅಂದರೆ ನೀವು ಕ್ರಾಂತಿಕಾರಕರಾಗುವಿರಿ." ಎಂದನು ಆಸ್ತಿಕ.

-:XXX●XXX:-

# ೧೪

ಜನಮೇಜಯನು ಸಾಮ್ರಾಟನಾಗಿದ್ದನು. ಅವನ ರಾಜ್ಯದ ವಿಸ್ತಾರವು ಬಹಳವಾಗಿದ್ದಿತು. ಅನೇಕ ಜನ ಮಾಂಡಲಿಕರು ಕಪ್ಪುಕಾಣಿಕೆಗಳನ್ನೊಪ್ಪಿಸುತ್ತಿದ್ದರು. ಚಿಕ್ಕಂದಿನಿಂದ ಜನಮೇಜಯನು, ನಾಗರ ದ್ವೇಷವನ್ನು ಮಾಡುತ್ತಿದ್ದ. ಅದಕೆಲ್ಲ ವಕ್ರತುಂಡನೇ ಕಾರಣ. ತಂದೆಯ ಮರಣದಿಂದಂತೂ ಆ ದ್ವೇಷವು ಶಿಖರಕ್ಕೆ ಮುಟ್ಟಿತು. "ಈ ಭೂಮಿಯನ್ನು ನಿರ್ನಾಗರನ್ನಾಗಿ ಮಾಡುವೆ" ನೆಂದು ಅವನು ಪ್ರತಿಜ್ಞೆಗೈದಿದ್ದನು. ಅದರ ಸಿದ್ಧತೆಯನ್ನು ನಡೆಸಿದ್ದನು. ನನ್ನ ತಂದೆಯ ಕೊಲೆಗೈದ ಜಾತಿಯು ದುಷ್ಟವಿರಲೇ ಬೇಕು. ನಾಗ ಪೂಜೆಯನ್ನು ಮಾಡುವವರೆಲ್ಲ ನಾಗನಂತೆಯೇ ದುಷ್ಟವಿರಬೇಕು. ಹಾವಿನ ಹಾಗೆಯೇ ವಕ್ರಗತಿಯುಳ್ಳ ಹಾಗೂ ವಿಷಕಾರುವಂಥವರಿರಬೇಕು. ಎಂದು ಅನ್ನುತ್ತಿದ್ದನು. ಅಧಿಕಾರವು ಕೈಯಲ್ಲಿ ಬರುವದಾರಿಯನ್ನೇ ನೋಡುತ್ತಿದ್ದನು. ಈಗ ಅವನ ಕೈ ಹಿಡಿಯುವರಾರು?

" ಸಾಮ್ರಾಜ್ಯದಲ್ಲಿ ಯಾರೂ ನಾಗಪೂಜೆಯನ್ನು ಮಾಡಕೂಡದು " ಎಂದು ಆಜ್ಞೆಯನ್ನು ಹೊರಡಿಸಿದನು. ನಾಗರ ಉತ್ಸವ ಹಾಗೂ ಯಾತ್ರೆಗಳನ್ನು ನಿಲ್ಲಿಸಿದನು. ಅಧಿಕಾರದ ಸ್ಥಳದಮೇಲೆ ನಾಗರನ್ನು ನಿಯಮಿಸಕೂಡದೆಂದು ಅಪ್ಪಣೆ ವಿಧಿಸಿದನು. ನಾಗರೊಡನೆ ಯಾರೂ ಮದುವೆಯಾಗಕೂಡದೆಂದು ಘೋಷಿಸಿದನು. ಅದರಂತೆಯೇ ಸರ್ವ ಮಾಂಡಲಿಕರೂ ನಡೆಯಬೇಕೆಂದು ಆಜ್ಞಾಪಿಸಿದನು "

ಎಲ್ಲ ಕಡೆಗೂ ನಾಗರ ಛಲವಾಗ ಹತ್ತಿತು. ಸರ್ವ ಮಾಂಡಲಿಕರು ರಾಜಾಜ್ಞೆಯನ್ನು ಸರಿಯಾಗಿ ಪಾಲಿಸುವರೋ ಇಲ್ಲವೊ ಎಂಬುದನ್ನು ವಕ್ರ

ತುಂಡ ಹಾಗೂ ಅವರ ಪ್ರಚಾರಕರು ಅಲ್ಲಲ್ಲಿ ಸಂಚರಿಸಿ ಜನಮೇಜಯನಿಗೆ ತಿಳಿಸುತ್ತಿದ್ದರು. ನಾಗ ಮೂರ್ತಿಗಳ ಧ್ವಂಸಕ್ಕೆ ಪ್ರಾರಂಭವಾಯಿತು. ಎಲ್ಲ ಕಡೆಗೂ ಅಸಂತೋಷವು ಹಬ್ಬಿತು.

ಆರ್ಯರ ಅನೇಕ ಹೆಣ್ಣು ಮಕ್ಕಳು ನಾಗ ಪೂಜಕರಿದ್ದರು. ಅವರು ಹೂ ಹಾಲುಗಳನ್ನು ತೆಗೆದುಕೊಂಡು ಊರ ಹೊರಗೆ ಹೋಗಿ ಹುತ್ತನ್ನು ಪೂಜಿಸಿ ಬರುತ್ತಿದ್ದರು. ಅದನ್ನು ನಿಲ್ಲಿಸಲಾಯಿತು. ಆರ್ಯ ಸ್ತ್ರೀಯರು ಗೋಡೆಯ ಮೇಲೆ ಗಂಧದಿಂದ ಹಾವಿನ ಚಿತ್ರವನ್ನು ತೆಗೆದು ಪೂಜಿಸ ಹತ್ತಿದರು. ಈ ಸುದ್ದಿಯು ರಾಜನಿಗೆ ತಿಳಿದರೆ ದಂಡ ವಾಗುತ್ತಿತ್ತು. ಎಲ್ಲಿ ನೋಡಿದಲ್ಲಿ ಗುಪ್ತ ಪೋಲೀಸರ ಸುಳಿದಾಟ. ಗೋಡೆಗೆ ಕೂಡ ಕಿವಿ ಬಂದವು. ಎಲ್ಲಿಯು ಶಾಂತತೆಯಿಲ್ಲ.

ಜನಮೇಜಯನ ಸಾಮ್ರಾಜ್ಯದಲ್ಲಿ ನಾಗರದೊಂದು ದೊಡ್ಡ ಪಟ್ಟಣವಿತ್ತು. ಅವರು ಆಜ್ಞಾ ಭಂಗವನ್ನು ಮಾಡಲು ನಿಶ್ಚಯಿಸಿದರು. ಅಲ್ಲಿ ಐದು ಹೆಡೆಯ ಒಂದು ದೊಡ್ಡ ಹಾವಿನ ಮೂರ್ತಿಯಿದ್ದಿತು. ಅದರ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತಿತ್ತು. "ಉತ್ಸವವನ್ನು ನಿಲ್ಲಿಸಬೇಕೆಂದು ಜನಮೇಜಯ ರಾಜನ ಆಜ್ಞೆಯಾಗಿದೆ. ಇಲ್ಲದಿದ್ದರೆ, ಮೂರ್ತಿಯನ್ನೇ ಕಿತ್ತು ಗೆಯುವೆವು". ಎಂಬ ಬೆದರಿಕೆಯ ಪತ್ರವು ನಾಗ ನಾಯಕರಿಗೆ ಬಂದಿತು. ಊರಲ್ಲಿಯ ನಾಗ ಸ್ತ್ರೀ ಪುರುಷರ ಪ್ರಚಂಡ ಸಭೆ ಸೇರಿತು. ಆ ಸಭೆಯಲ್ಲಿ ರಾಜಾಜ್ಞೆಯು ಪ್ರಕಟವಾಗಿಯೇ ಸುಡಲ್ಪಟ್ಟಿತು. ಉತ್ಸವವನ್ನು ಮಾಡಿಯೇ ತೀರಬೇಕೆಂದು ನಾಗರು ನಿಶ್ಚಯಿಸಿದರು. ರಾಜನ ಸೈನ್ಯವು ಬಂದರೆ ಅದರ ಸಮಾಚಾರವನ್ನು ತೆಗೆದು ಕೊಳ್ಳಲು, ನಾಗ ತರುಣರು ಸಿದ್ಧರಾದರು. ಗದೆ, ಕತ್ತಿ, ಢಾಲು, ಬಾಣ ಮೊದಲಾದ ಶಸ್ತ್ರಾಸ್ತ್ರಗಳು ಸಂಗ್ರಹಿಸಲ್ಪಟ್ಟವು. ಮಹಾ ದ್ವಾರದ ಬಳಿಯಲ್ಲಿ ಕಲ್ಲುಗಳು ಕೂಡಿಸಲ್ಪಟ್ಟವು.

ಉತ್ಸವದ ದಿವಸ ಬಂದಿತು. ಊರಲ್ಲಿ ಸಂಮಿಶ್ರ ಆನಂದ ವಿದ್ದಿತು. ಮಂಗಳ ವಾದ್ಯಗಳು ಬಾರಿಸಹತ್ತಿದವು. ಶಂಖಗಳು ಊದಲ್ಪಟ್ಟವು. ಊರೆಲ್ಲ ಶೃಂಗರಿಸಲ್ಪಟ್ಟಿತು. ಇಂದು ನಾಗೇಶ್ವರನ ಪೂಜೆ. ಈ ಪೂಜೆಯು

ಸಾದಾ ಪುಷ್ಪಗಳಿಂದಲೋ ಅಥವಾ ಶಿರಕಮಲಗಳಿಂದಲೋ ? ಇಂದು ರಕ್ತ ಪ್ರವಾಹವು ಹರಿಯುವದೇ ?

ಜನಮೇಜಯನ ಸೈನ್ಯವು ಬರುತ್ತಿದೆ, ಎಂಬ ಸುದ್ದಿಯು ಹತ್ತಿತು ಆಕಾಶದಲ್ಲಿ ಧೂಳಿಯು ಎದ್ದು ಕಾಣುತ್ತಿತ್ತು. ನಾಗರು ಎದುರಾಳಿಗಳನ್ನು ಎದುರಿಸಲು ಸಿದ್ಧರಾದರು. ಹೊಡೆಯೋಣ ಇಲ್ಲವೆ ಮಡಿಯೋಣವೆಂದು ಅವರು ಪ್ರತಿಜ್ಞೆಗೈದರು. ಬುದ್ಧಿವಂತರಾದ ನಾಗರು ಒಂದು ಸೈನ್ಯದ ತುಂಡನ್ನು ಜನಮೇಜಯನ ಸೈನ್ಯದ ಹಿಂದೆ ಹೋಗಿ ಅದರ ಮೇಲೆ ಬೀಳಲು ಕಳಿಸಿಕೊಟ್ಟರು. ಆ ಗುಂಪು ಗುಪ್ತವಾಗಿ ನಡೆಯಿತು. ಉಳಿದ ನಾಗರು ಹೊರಬಿದ್ದರು. ಶತ್ರುಗಳಿಂದ ಬಾಣಗಳು ಬರಹತ್ತಿದವು. ನಾಗರೂ ಅದಕ್ಕೆ ಉತ್ತರವಿತ್ತರು. ಸಾವಿರಾರು ಕವಣಿಗಳಿಂದ ಕಲ್ಲುಗಳು ಒಗೆಯಲ್ಪಡಹತ್ತಿದವು. ತಲೆಗಳು ಒಡೆಯಹತ್ತಿದವು. ಇಷ್ಟರಲ್ಲಿಯೇ ಜನಮೇಜಯನ ಸೈನ್ಯದ ಮೇಲೆ ನಾಗರ ಗುಪ್ತಸೈನ್ಯವು ಹಿಂದಿನಿಂದ ಎರಗಿತು. ಕತ್ತರಿಯಲ್ಲಿ ಸಿಕ್ಕಿತುರಾಜನ ಸೈನ್ಯ. ಅವರು ಗಾಬರಿಗೊಂಡರು. ಸಿಕ್ಕ ಸಿಕ್ಕ ಕಡೆಗೆ ಓಡಿಹೋದರು. ಅದರಲ್ಲಿ ಜೀವಂತ ಉಳಿದವರು ಬಹಳ ಕಡಿಮೆ.

ನಾಗರಿಗೆ ವಿಜಯವೇನೋ ಆಯಿತು. ಆದರೆ ಅದು ತಾತ್ಪೂರ್ತಿಕ ವಿದ್ದಿತು. ಇದರಿಂದ ರಾಜನು ಸಂತಾಪಗೊಳ್ಳುವನು, ದೊಡ್ಡ ಸೈನ್ಯವನ್ನು ತಕ್ಕೊಂಡು ಬರುವನು, ಎಂಬ ಸಂಗತಿಯು ನಾಗರಿಗೆ ನಿಶ್ಚಯವಾಗಿತ್ತು. ಅವರು ಊರು ಬಿಡುವ ನಿಶ್ಚಯ ಮಾಡಿದರು. ಯಾವ ಊರು ತಮ್ಮ ಲೀಲಾಭೂಮಿಯಾಗಿತ್ತೋ, ಆ ಊರನ್ನು ಬಿಡಲು ಅವರಿಗೆ ಬಹಳ ದುಃಖ ವಾಯಿತು. ಆದರೆ ಊರು ಬಿಡದೆ ಗತ್ಯಂತರವಿರಲಿಲ್ಲ.

ಹಿಮಾಲಯದ ಇಳುಕಲಿನಲ್ಲಿರುವ ಇಂದ್ರರಾಜನ ಆಶ್ರಯವನ್ನು ಪಡೆಯಬೇಕೆಂದು ಅವರು ನಿಶ್ಚಯಿಸಿದರು. ಎಲ್ಲರೂ ಹೊರಟರು. ಹುಡುಗರು ಮುದುಕರು ಮೊದಲಾದವರನ್ನು ರಥ ಅಥವಾ ಗಾಡಿಗಳಲ್ಲಿ ಕರೆದೊಯ್ದರು. ಕೆಲವರು ಕುದುರೆಗಳನ್ನೇರಿ ನಡೆದರು. ಬಹಳ ಜನರು ನಡೆಯುತ್ತಲೇ ಹೊರಟರು. ಆವಶ್ಯವಿದ್ದಷ್ಟೇ ಸಾಮಾನುಗಳನ್ನು ಸಂಗಡ

ತಕ್ಕೊಂಡರು. ನಾಯಿ, ಬೆಕ್ಕುಗಳನ್ನು ಒಯ್ದರು. ಮಾರ್ಗ ಕ್ರಮಿಸಹತ್ತಿದರು. ಹೆಂಗಸರು ದಣಿದರು. ಅವರ ಕಾಲುಗಳು ಒಡೆದವು. ಚಿಗುರೆಲೆಗಳನ್ನು ಅವರು ಕಾಲಿಗೆ ಸುತ್ತಿಗೊಂಡು ನಡೆದರು. ದಾರಿಯಲ್ಲಿ ವೇಳೆಗಳೆದರೆ ಗಂಡಾಂತರ ಒದಗುತ್ತಿತ್ತು.

ಹೋಗುವ ಮುಂದೆ ಆ ಭವ್ಯ ನಾಗಮೂರ್ತಿಯನ್ನು ಒಂದು ದೊಡ್ಡ ತೆಗ್ಗಿನಲ್ಲಿ ಹೂಳಿ ಹೋದರು. ಅದು ಅವರ ಪ್ರಾಣವನ್ನೇ ಹೂಳಿದಂತೆ ಅವರಿಗೆ ಅನಿಸಿತು. ಆ ಮೂರ್ತಿಗೆ ಕಣ್ಣೀರಿನಿಂದಲೂ ಹೂಗಳಿಂದಲೂ ಕಟ್ಟ ಕಡೆಯ ಪೂಜೆಯನ್ನು ಮಾಡಿದ ನಂತರ ಅದನ್ನು ಮಣ್ಣಿನಿಂದ ಮುಚ್ಚಿದರು.

ಇಂದ್ರರಾಜನ ಮನೆತನವು ಬಹಳ ಪ್ರಸಿದ್ಧವಿತ್ತು. ಆರ್ಯ ಮತ್ತು ನಾಗರೀರ್ವರೊಡನೆಯೂ ಅವನ ಸ್ನೇಹವಿತ್ತು. ಇಂದ್ರನು ನಮಗೆ ಆಶ್ರಯ ಕೊಡುವನೆಂಬ ಶ್ರದ್ಧೆಯು ನಾಗರಿಗಿತ್ತು. ಅತ್ಯಂತ ಕಷ್ಟ ನಷ್ಟಗಳನ್ನು ಸಹಿಸಿ, ಈ ಸ್ವಾತಂತ್ರ್ಯದ ಯಾತ್ರಿಕರು ಇಂದ್ರನ ರಾಜಧಾನಿಗೆ ಮುಟ್ಟಿದರು. ಇಂದ್ರನು ಇವರನ್ನು ಸ್ವಾಗತಿಸಿದನು. ಅವರಿಗೆ ಅಭಯ ದಾನ ಮಾಡಿದನು.

ಜನಮೇಜಯ ರಾಜನಿಗೆ ಇವೆಲ್ಲವೂ ತಿಳಿಯಿತು. ಜನಮೇಜಯ ಹಾಗು ವಕ್ರತುಂಡರು ಮಾತಾಡುತ್ತ ಕುಳಿತಾಗ ಪತ್ರವನ್ನು ಸುಟ್ಟ ಸುದ್ದಿಯನ್ನು ಸುದ್ದಿಗಾರನು ತಿಳಿಸಿದನು.

"ರಾಜನೆ, ಎಷ್ಟು ದಿನ ಸೌಮ್ಯವೃತ್ತಿಯನ್ನು ತೋರಿಸುವಿ ?" ಎಂದನು ವಕ್ರತುಂಡ.

"ಸೌಮ್ಯವೃತ್ತಿಯನ್ನು ತೋರಿಸುವದು ಇನ್ನು ಮುಗಿಯಿತು. ನನ್ನ ಪತ್ರ ಸುಟ್ಟವರನ್ನು ನಾನು ಸುಡುವೆ. ಸೇಡು ತೀರಿಸಿಕೊಳ್ಳುವೆ. ಸರ್ಪ ಯಜ್ಞವನ್ನು ಪ್ರಾರಂಭ ಮಾಡುವೆ, ನಾಗರನ್ನು ಸುಡುವ ಯಜ್ಞ!" ಎಂದನು. ಜನಮೇಜಯ.

"ಮಹಾರಾಜರೆ, ನಾಗರು ನಮ್ಮ ಸೈನ್ಯವನ್ನೆಲ್ಲ ಸಂಹಾರಮಾಡಿದರು. ಮತ್ತು ಈಗ ನಾಗರು ಇಂದ್ರನ ಆಶ್ರಯ ಪಡೆಯಲು ಹೋದರು" ಎಂದು ಸುದ್ದಿಗಾರನು ಸುದ್ದಿಯನ್ನು ಹೇಳಿದನು.

" ಏನು ! ಇಂದ್ರನು ನಮ್ಮ ಶತ್ರುಗಳಿಗೆ ಆಶ್ರಯವಿತ್ತನೇ? " ಎಂದು ಜನಮೇಜಯನು ಕಿಡಿಕಾರಿದನು.

" ರಾಜನೆ, ಇನ್ನು ಉಗ್ರೋಪಾಯವನ್ನು ಕೈಕೊಳ್ಳು. ಇಂದ್ರನಿಗೆ ಸ್ಪಷ್ಟವಾಗಿ ಪತ್ರ ಬರೆ. ನಾಗರ ಬಗ್ಗೆ ತೀಕ್ಷ್ಣೋಪಾಯಗಳನ್ನು ಯೋಜಿಸು ವಂತೆ ಇತರ ಮಾಂಡಲೀಕರಿಗೂ ಪತ್ರ ಬರೆ. ಅವರ ಧೋರಣೆಯು ಅಷ್ಟೊಂದು ತೀಕ್ಷ್ಣವಾಗಿಲ್ಲವೆಂದು ಕಾಣುತ್ತದೆ " ಎಂದನು ವಕ್ರತುಂಡ.

" ನಾಗರನ್ನೆಲ್ಲ ಹಿಡಿದು ಇಲ್ಲಿಗೇ ಕಳಿಸಲು ಬರೆಯುವೆ. ನಾಗರಿಗೆ ಶಿಕ್ಷೆ ಕೊಡುವ ಧೈರ್ಯವು ಆ ಮೂರ್ಖರಿಗಿಲ್ಲ. ಸಾವಿರಾರು ಜೇಲುಗಳನ್ನು ಇಲ್ಲಿ ಕಟ್ಟಿಸೋಣ.

" ಸೇಡನ್ನು ಪೂರ್ತಿಯಾಗಿ ತೀರಿಸಿಗೊಳ್ಳೋಣ. ಸರ್ಪಯಾಗ ಪ್ರಾರಂಭಿಸೋಣ ಎಂದನು ಜನಮೇಜಯ.

" ಬಹಳ ಒಳ್ಳೇದು. ಎಲ್ಲ ನಾಗರನ್ನು ಬಿಗಿದು ಇಲ್ಲಿಗೆ ತರಿಸಿರಿ. ರಾಜ ದೂತರು ಊರೂರಿಗೆ ಹೋಗಲಿ. ಸೈನಿಕರೂ ಹೋಗಲಿ " ಎಂದನು ವಕ್ರ ತುಂಡ.

" ಇಂದ್ರನ ಕೂಡ ಯುದ್ಧವನ್ನೇ ಮಾಡಬೇಕಾದೀತು " ಎಂದನು ಜನಮೇಜಯ.

" ಯುದ್ಧ ಮಾಡೋಣ. ನಿನ್ನ ಎಲ್ಲ ಮಾಂಡಲೀಕರೂ ಸೈನ್ಯಸಹಿತ ರಾಗಿ ನಿನ್ನ ಸಹಾಯಕ್ಕೆ ಬರುವರು. ಸೈನ್ಯ ಸಹಿತವಾಗಿ ಸಿದ್ಧರಾಗಿರಲು ಅವರಿಗೆ ಪತ್ರವನ್ನು ಬರೆ " ಎಂದನು ವಕ್ರತುಂಡ.

ಜನಮೇಜಯನು ಅತ್ಯಂತ ಉನ್ಮತ್ತನಾಗಿ ಇಂದ್ರನಿಗೆ ಪತ್ರ ಬರೆದನು.
" ಮಹಾರಾಜ ಇಂದ್ರನಿಗೆ—

ನಾಗಜಾತಿಯ ಜನರು ನಿಮ್ಮ ಆಶ್ರಯ ಪಡೆಯಲು ನಿಮ್ಮಲ್ಲಿಗೆ ಬಂದಿ ರುವರೆಂದು ತಿಳಿಯುತ್ತದೆ. ನಮಗೂ ನಾಗರಿಗೂ ವಿರೋಧವಿದೆ, ಎಂಬು ದನ್ನು ತಾವು ಬಲ್ಲಿರಿ. ನೀವು ಅವರಿಗೆ ಆಶ್ರಯವೀಯ ಬಾರದಾಗಿತ್ತು ನಾಗಜಾತಿಯು ದುಷ್ಟವಿದೆ. ಕ್ಷಮಿಸಲು ಯೋಗ್ಯವಿರದೆ, ಕೊಲ್ಲಲು ಯೋಗ ವಿದೆ. ಅವರು ನನ್ನ ಆಜ್ಞೆಯನ್ನು ಉಲ್ಲಂಘಿಸಿದ್ದಾರೆ; ಇಷ್ಟೇ ಅಲ್ಲ, ನಾನು

ಕಳಿಸಿದ ಆಜ್ಞಾಪತ್ರವನ್ನು ಕೂಡಿದ ಸಭೆಯಲ್ಲಿ ತಿರಸ್ಕಾರದಿಂದ ಸುಟ್ಟಿದ್ದಾರೆ. ನನ್ನ ಪತ್ರ ಸುಟ್ಟಜಾತಿಯನ್ನು ನಾನೂ ಸುಡಬೇಕೆಂಬ ನಿಶ್ಚಯ ಮಾಡಿದ್ದೇನೆ. ನಾಗರ ನಿಃಪಾತನನ್ನು ಮಾಡುವ ಪ್ರತಿಜ್ಞೆಗೈದಿದ್ದೇನೆ. ನಮ್ಮ ನಿಮ್ಮ ಮನೆತನಗಳ ಪೂರ್ವಾಪರ ಸಂಬಂಧವು ಬಹಳ ಸ್ನೇಹಮಯವಾಗಿತ್ತು ನನ್ನ ಮುತ್ತಜ್ಜನು ತಮ್ಮ ರಾಜಧಾನಿಯಲ್ಲಿದ್ದು ನೃತ್ಯ ಕಲೆಯನ್ನು ಕಲಿತು ಅನೇಕ ಶಸ್ತ್ರಾಸ್ತ್ರಗಳನ್ನು ಸಂಪಾದಿಸಿದ್ದನು. ನರಕೇಸರಿಯಾದ ಅರ್ಜುನನ ಮಹಿಮೆಯೆಂತೂ ತಿಳಿದ ವಿಷಯ. ಕುಂತಿಯ ವ್ರತದ ಪ್ರಿತ್ಯರ್ಥವಾಗಿ ತಾವು ಐರಾವತವನ್ನು ಕಳಿಸಿದ್ದಿರಿ. ನಾಗರಿಗೆ ಆಶ್ರಯವನ್ನಿತ್ತರೆ ಮೋಸ ಹೋಗುವಿರಿ. ಅವರು ನಿಮ್ಮ ಮೇಲೆಯೇ ತಿರುಗಿ ಬೀಳಬಹುದು ' ನನ್ನ ತಂದೆಯನ್ನು ಹೇಗೆ ಮೋಸಗೊಳಿಸಿದರೆಂಬದು ತಮಗೆ ಗೊತ್ತೇ ಇದೆ, ಇರಲಿ, ನಾಗರನ್ನು ಈ ಪತ್ರ ಕಂಡಕೂಡಲೆ ಹೊರಗೆ ಹಾಕುವಿರೆಂದು ನಂಬುವೆ.

ಮಹಾರಾಜಾಧಿರಾಜ ಜನಮೇಜಯ

ಜನಮೇಜಯನ ಪತ್ರಕ್ಕೆ ಇಂದ್ರನು ಬೆದರಲಿಲ್ಲ. ಪ್ರಮುಖ ನಾಗರನ್ನೆಲ್ಲ ಕರಿಸಿ, ಅವರೊಡನೆ ವಿಚಾರವಿನಿಮಯ ಮಾಡಿದನು. ಎಲ್ಲ ನಾಗರೂ ಅವನಿಗೆ ಬೆಂಬಲವೀಯಲು ಸಿದ್ಧರಿದ್ದರು. ಮತ್ತು ಮಣಿಪುರ ಮೊದಲಾದ ರಾಜ್ಯಗಳ ರಾಜರೂ ನಿಮಗೆ ಸಹಾಯ ಮಾಡುವರೆಂದು ಅವರು ಹೇಳಿದರು. ಒಂದು ವೇಳೆ ಯುದ್ಧಮಾಡುವ ಪ್ರಸಂಗ ಬಂದರೆ, ನಾಗರು ತಮ್ಮ ಸರ್ವಸ್ವವನ್ನು ಅರ್ಪಿಸಲು ಸಿದ್ಧರಿದ್ದಾರೆಂದು ವಚನವಿತ್ತರು.

ಇಂದ್ರನು ಜನಮೇಜಯನಿಗೆ ಉತ್ತರ ಬರೆದನು.

ರಾಜಾಧಿರಾಜ ಜನಮೇಜಯರಿಗೆ—

ನಿರಾಧಾರರಿಗೆ ಆಧಾರವೀಯುವದು, ಆಶ್ರಯಕ್ಕಾಗಿ ಬಂದವರಿಗೆ ಆಶ್ರಯವನ್ನು ಕೊಡುವದು ನಮ್ಮ ಕುಲವ್ರತವಾಗಿದೆ. ಆರ್ಯ ಹಾಗೂ ನಾಗರ ಸಂಬಂಧವು ಇಷ್ಟು ವಿಕೋಪಕ್ಕೆ ಎಂದೂ ಹೋಗಿಲ್ಲ. ಅಲ್ಲದೆ ಎರಡೂ ಸಮಾಜಗಳು ತೀರ ಹತ್ತಿರ ಬರಹತ್ತಿದ್ದವು. ಒಂದರಲ್ಲೊಂದು ಕೂಡಹತ್ತಿದ್ದವು. ಇಬ್ಬರ ಮಿಶ್ರಣದಿಂದ ಒಂದು ಸುಂದರ ಸಂಸ್ಕೃತಿಯು

ಹುಟ್ಟುತ್ತ ನಡೆದಿತ್ತು. ನೀವು ಪ್ರವಾಹದ ವಿರುದ್ಧ ಈಸಲು ಬಯಸುತ್ತೀರಿ. ಹೀಗೆ ಮಾಡಿದ್ದಾದರೆ ಮೋಸ ಹೋಗುವಿರಿ. ವ್ಯರ್ಥವಾಗಿ ಶ್ರಮ ವಾಗುವದು ತಾವು ತಳೆದ ಧೋರಣವು ಆರ್ಯರಿಗೆ ಶೋಭಿಸುವದಿಲ್ಲ. 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂದೆನ್ನುವ ಆರ್ಯರಿಗೆ ತಮ್ಮ ಧೋರಣದಿಂದ ದುಃಖ ವಾಗಬಹುದು. ಸಂಗ್ರಾಹಕ ಹಾಗು ಸಹಾನುಭೂತಿಯ ಧೋರಣವನ್ನು ಸ್ವೀಕರಿಸಿ, ಸರ್ವತ್ರ ಶಾಂತಿಯನ್ನು ಪ್ರಸ್ಥಾಪಿಸುವಿರೆಂದು ನಾನು ಆಶಿಸುತ್ತೇನೆ. ಆರ್ಯ ಹಾಗೂ ನಾಗರಲ್ಲಿ ಸ್ನೇಹ ಸಂಬಂಧವನ್ನು ನಿರ್ಮಿಸಲು, ತಾವು ಮುಂದಾದದ್ದಾದರೆ ನಾನು ತಮಗೆ ಆ ಕಾರ್ಯದಲ್ಲಿ ಪೂರ್ಣ ಸಹಾಯ ಮಾಡುವೆ.

ತಮ್ಮ
ಇಂದ್ರ.

ಜನಮೇಜಯನಿಗೆ ಪತ್ರ ಸಿಕ್ಕಿತು. ಅದನ್ನು ಅವನು ಕಾಲಿಸಿಂದ ತುಳಿದನು. 'ಇಂದ್ರನ ಸಹಿತವಾಗಿ ನಾಗರ ಹೋಳಿಯನ್ನು ಮಾಡುವೆ, ಎಂದು ಗರ್ಜಿಸಿದನು. ಇಂದ್ರನನ್ನು ಹೆಡಮುರಿಗೆ ಕಟ್ಟಿ ತಂದು ಬೆಂಕಿಯಲ್ಲಿ ಹಾಕುವೆ ಎಂದನು. ಸರ್ವ ಮಾಂಡಲೀಕರಿಗೆ ಸೈನ್ಯ ತೆಗೆದುಕೊಂಡು ಬರಲು ಪತ್ರವನ್ನು ಬರೆದನು. ಇತ್ತ ಇಂದ್ರನೂ ಸುಮ್ಮನೆ ಕೂಡಲಿಲ್ಲ. ಅವನು ಸಿದ್ಧತೆ ನಡಿಸಿದನು. ಬೇರೆ ಬೇರೆ ಸ್ಥಳಗಳಿಂದ ನಾಗರು ಇಂದ್ರನ ರಾಜ ಧಾನಿಗೆ ಬರಹತ್ತಿದ್ದರು. ಮಣಿಪುರದ ರಾಜನು ಇಂದ್ರನ ಸಹಾಯಕ್ಕೆ ಸಿದ್ಧನಾದನು. ಇಂದ್ರನ ಬಗ್ಗೆ ನಾಗರಲ್ಲಿ ಕೃತಜ್ಞತೆಯುಂಟಾಯಿತು. ಇಂದ್ರನ ಚತುರಂಗದಲವು ಸಿದ್ಧವಾಯಿತು.

ಮತ್ತೆ ಮಹಾಭಾರತವಾಗುವದೇ ? ಪುನಃ ಕುರುಕ್ಷೇತ್ರವೇ ? ಪುನಃ ಲಕ್ಷಾವಧಿ ಜನರು, ಒಬ್ಬ ವ್ಯಕ್ತಿಯ ಸಲುವಾಗಿ ರಣಕುಂಡದಲ್ಲಿ ಬೀಳಬೇಕೇ? ಲಕ್ಷಾವಧಿ ಸ್ತ್ರೀಯರು ಪತಿಹೀನ ರಾಗಬೇಕೆ ? ಮತ್ತೆ ಶೋಕ ಸಾಗ ರವು ಮನೆ ಮನೆಗೆ ಬಂದು ಮುಟ್ಟುವದೇ ? ಜನಮೇಜಯನ ಆಸುರೀ ಅಂಹಕಾರವನ್ನು ತಡೆಯುವವರಾರು ? ಈ ಮಹಾನ್ ಸಂಹಾರವನ್ನು ನಿಲ್ಲಿ ಸುವವರಾರು ?

ತನ್ನ ಸಾಮ್ರಾಜ್ಯದಿಂದಲೂ ಮಾಂಡಲೀಕರ ರಾಜ್ಯದಿಂದಲೂ ನಾಗರು ಇಂದ್ರನ ಕಡೆಗೆ ಹೋಗುತ್ತಿರುವರೆಂಬ ಸುದ್ದಿಯನ್ನು ಕೇಳಿ, ಜನಮೇಜಯನು ಹಲ್ಲು ಕಡಿಯಹತ್ತಿದನು. ಊರೂರಿಗೆ ಇರುವ ನಾಗರನ್ನೆಲ್ಲ ಬಂಧಿಸಿ, ರಾಜಧಾನಿಗೆ ಕಳಿಸಬೇಕೆಂದು ಕಟ್ಟಪ್ಪಣೆಯನ್ನು ಮಾಡಿದನು. ನಾಗರು ಮನೆ ಬಿಟ್ಟು ಹೊರಬೀಳಕೂಡದೆಂದು ಆಜ್ಞೆಯನ್ನು ವಿಧಿಸಿದನು. ಬಂಧಿತವಾದ ನಾಗರ ತಂಡಗಳು ರಾಜಧಾನಿಗೆ ಬರಹತ್ತಿದವು. ಕಾರಾಗ್ರಹಗಳೆಲ್ಲ ತುಂಬಿದವು.



೧೫

ಕಾರ್ತೀಕನು ವತ್ಸಲೆಯ ಹೊಲದಲ್ಲಿರುತ್ತಿದ್ದ ಹೊಲವಮಾಡುತ್ತಿದ್ದ. ನಾಗ ಹಾಗೂ ಆರ್ಯರಲ್ಲಿ ಸಖ್ಯವು ಬೆಳೆಯಲಿ, ಯುದ್ಧ ಆಗದಿರಲಿ, ನಾಗಾನಂದರ ಪ್ರಚಾರಕ್ಕೆ ಯಶ ದೊರೆಯಲಿ, ಆಸ್ತಿಕನ ಉದ್ದೇಶವು ಪೂರ್ಣವಾಗಲಿ. ಎಂದು ಮನಸ್ಸಿನಲ್ಲಿ ಅನ್ನುತ್ತಿದ್ದನು. ವತ್ಸಲೆಯು ಆವನ ಕಣ್ಣೆದುರಿಗೆ ಕಟ್ಟುತ್ತಿದ್ದಳು. ಧ್ಯೇಯವಾದಿಯಾದ ವತ್ಸಲೆ. ಸುಖ ಸಂಸಾರವನ್ನು ಬಿಟ್ಟು ಸಂಕಟವನ್ನಪ್ಪಿಕೊಳ್ಳುವ ವತ್ಸಲೆ. ನಿರ್ಭಯಳಾದ ವತ್ಸಲೆಗೆ ನಾಗಾನಂದನೇ ಯೋಗ್ಯ. ನಾನಲ್ಲ. ಎಂದು ಅನ್ನುತ್ತಿದ್ದನು.

ಆ ಊರಲ್ಲಿ ಒಬ್ಬ ನಾಗಕನ್ಯೆಯಿದ್ದಳು. ಅವಳ ಹೆಸರು ಕೃಷ್ಣಿ. ಅವಳ ಮೈಬಣ್ಣ ಸಾದಗಪ್ಪು. ಬಹಳ ಆಟಗಾರ್ತಿ. ಆದರೆ ಅವಳ ತಾಯಿಯು ಅವಳನ್ನು ಹೊರಗೆ ಹೋಗಗೊಡುತ್ತಿದ್ದಿಲ್ಲ. ಆದರೂ ತಾಯಿಯ ಕಣ್ಣು ತಪ್ಪಿಸಿ ಅವಳು ಹೋಗುತ್ತಿದ್ದಳು. ಕಾರ್ತೀಕನನ್ನು ನೋಡುವದಕ್ಕೆ ಕೃಷ್ಣಿಯು ಬರುತ್ತಿದ್ದಳು. ದೂರದಲ್ಲಿ ಗಿಡದ ಮರೆಗೆ ನಿಂತು ಅವನನ್ನು ನೋಡುತ್ತಿದ್ದಳು. ಒಮ್ಮೊಮ್ಮೆ ಅವಳು ಗಟ್ಟಿಯಾಗಿ ಚಪ್ಪಾಳೆ ಬಾರಿಸುತ್ತಿದ್ದಳು, ಗಟ್ಟಿಯಾಗಿ ನಗುತ್ತಿದ್ದಳು. ಕಾರ್ತೀಕ ಅತ್ತಿತ್ತ ನೋಡುವ, ಆದರೆ ಅವನಿಗೆ ಯಾರೂ ಕಾಣುತ್ತಿದ್ದಿಲ್ಲ.

ಕೃಷ್ಣಿಯು ಈಗ ಧಿಟ್ಟಳಾಗಿದ್ದಾಳೆ. ರಾತ್ರಿ ತಾಯಿಯು ಮಲಗಿದ ಮೇಲೆ ಏಳುವಳು. ಅವಳು ಆ ಹೊಲಕ್ಕೆ ಹೋಗುವಳು. ಪ್ರೇಮದ ದೀವಟಿಗೆಯನ್ನು ಹಿಡಕೊಂಡು ಹೋಗುತ್ತಿದ್ದಳು. ಮುಳ್ಳುಗಳು ನಡುತ್ತಿದ್ದಿಲ್ಲ. ಅಂಜಿಕೆ ಬರುತ್ತಿದ್ದಿಲ್ಲ. ಅವಳು ಕಾರ್ತೀಕನ ಗುಡಿಸಲಕ್ಕೆ ಪ್ರದಕ್ಷಿಣೆ

ಹಾಕುತ್ತ ಅಲ್ಲಿಯೇ ಇರುತ್ತಿದ್ದಳು. ಬೆಳಿಗ್ಗೆ ಕೋಳಿ ಕೂಗಿತೆಂದರೆ, ಅವಳು ಹೊರಡುವಳು. ಆದರೆ ಹೊರಡುವ ಮೊದಲು ನಾಲ್ಕಾರು ಹೂಗಳನ್ನು ಗುಡಿಸಲಿನಲ್ಲಿ ಒಗೆದು, ನಮಸ್ಕರಮಾಡಿ ಹೋಗುವಳು.

ಒಂದು ದಿವಸ ಕಾರ್ತಿಕನು ತನ್ನ ಹಾಸಿಗೆಮೇಲಿದ್ದ ಹೂಗಳನ್ನು ನೋಡಿದನು. ಈ ಹೂಗಳು ಎಲ್ಲಿಂದ ಬಂದವು? ಯಾರಾದರೂ ಒಗೆದರೊ, ಅಥವಾ ಮೇಲಿಂದ ಬಿದ್ದವೊ? ಅಥವಾ ಗಾಳಿಗೆ ಹಾರಿ ಒಳಗೆ ಬಂದಿವೆಯೋ? ಅವನಿಗೆ ತಿಳಿಯಲಿಲ್ಲ. ಅವನು ಆ ಹೂಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಕುಳಿತನು. ಕಾರ್ತಿಕನಿಗೆ ಈ ಹೂಗಳನ್ನಾರು ಕೊಟ್ಟರು? ನಾನಾರ ದೇವರು? ನಾನಾರ ಮಿತ್ರ?

ಒಂದು ದಿನ ಕೃಷ್ಣೆಯು ಒಂದು ಸುಂದರ ಹೂವಿನ ಹಾರವನ್ನು ಮನೆಯಲ್ಲಿ ಸಿದ್ಧಪಡಿಸಿದಳು. ಎಷ್ಟು ಹಾರಗಳು! ಎಷ್ಟು ಮಾಲೆಗಳು!

'ಕೃಷ್ಣೆ! ಈ ಹಾರಗಳು ಏತಕ್ಕಾಗಿ?' ಎಂದಳು ತಾಯಿ

'ನನ್ನ ದೇವರಿಗಾಗಿ' ಎಂದಳು ಆಕೆ

'ನಿನ್ನ ದೇವರೆಲ್ಲಿದ್ದಾನೆ' ಎಂದು ಪ್ರಶ್ನಿಸಿದಳು.

'ನಾಗರ ದೇವರು ಅಡವಿಯಲ್ಲಿರುತ್ತಾನೆ' ಎಂದಳಾಕೆ

'ಪೂಜೆಗಾಗಿ ಯಾವಾಗ ಹೋಗುವಿ? ರಾಜದೂತರು ಬರುವರು, ಮತ್ತು ಹಿಡಿಯುವರು! ನಾಗಪೂಜೆಯು ನಿಲ್ಲಿಸಲ್ಪಟ್ಟಿದೆ. ಸುಮ್ಮನೆ ತೊಂದರೆ ತರಬೇಡ. ಮುಂದೆ ಏನೇನಾಗುವದೋ ದೇವರಿಗೆ ಗೊತ್ತು' ಎಂದಳು ತಾಯಿ.

'ದೇವರ ಪೂಜೆಯನ್ನು ಮಾಡುತ್ತಿರುವಾಗ ಮರಣ ಬಂದರೆ ಕೆಡುಕೇ? ಅದು ನಿಜವಾದ ಪೂಜೆಯಾಗುವದು. ಆದರೆ ನಾನು ರಾತ್ರಿಯಲ್ಲಿ ಪೂಜೆಗಾಗಿ ಹೋಗುವೆನು, ಅಂದರೆ ಯಾರೂ ನೋಡಲಿಕ್ಕಿಲ್ಲ. ಅವ್ವಾ, ನಾನು ಹೋಗಲ್ಯಾ? ದಿನಾಲು ಹೋಗುವೆನು?' ಎಂದಳು

'ಒಬ್ಬಳೇ ಹೋಗುವಿಯೂ?' ಎಂದಳು ತಾಯಿ

'ದೇವರ ಹೆಸರು ಮತ್ತು ನಾನು. ಅಲ್ಲದೆ ಈ ಹೂವಿನಹಾರಗಳನ್ನೂ ಸಂಗಡ ಒಯ್ಯುವೆನಲ್ಲ? ಅಂದಮೇಲೆ ನಾನು ಒಬ್ಬಳೇ ಹೇಗೆ? ಭಕ್ತ ಯಾವಾಗಲೂ ಒಬ್ಬನೇ ಇರುವದಿಲ್ಲ' ಎಂದಳು ಆಕೆ.

‘ ಕೃಷ್ಣೆ, ನಾವೆಲ್ಲರೂ ಇಲ್ಲಿಂದ ಬೇಗನೇ ಹೋಗಬೇಕಾದೀತು. ಈ ಆರ್ಯರ ರಾಜ್ಯವೇಬೇಡ. ಪ್ರಸಂಗವು ಜೀವದ ಮೇಲೆ ಬಂದೀತು. ಎಂದು ನಮ್ಮ ಜನರು ಮಾತನಾಡುತ್ತಿದ್ದರು ’ ಎಂದಳು ತಾಯಿ

‘ ತಾಯಿ ನೀವು ಹೋಗಿರಿ. ನಾನು ಇಲ್ಲಿಯೇ ಇರುವೆ. ದೇವರನ್ನು ಭಕ್ತಿಯಿಂದ ಭಜಿಸುವೆ. ನೀವು ನಿಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳಿರಿ ’ ಎಂದಳು ಕೃಷ್ಣಿ

ಆ ದಿವಸ ರಾತ್ರಿ ಕೃಷ್ಣಿಯು ಆ ಹಾರಗಳನ್ನು ತಕ್ಕೊಂಡು ಹೊಲಕ್ಕೆ ಬಂದಳು. ಆವಳು ದೇವರ ಗುಡಿಯನ್ನು ಶೃಂಗರಿಸುವಂತೆ ಗುಡಿಸಲದ ಬಾಗಿಲಿಗೆ ಆ ಮಾಲೆಯನ್ನು ಕಟ್ಟಿದಳು. ಪ್ರದಕ್ಷಿಣೆ ಹಾಕಿದಳು. ಬೆಳಗಿನ ಸಮಯ ಸಮೀಪಿಸಿತು. ಒಂದು ಸುಂದರ ಹಾರವನ್ನು ಗುಡಿಸಲದೊಳಗೆ ಒಗೆದು ಆವಳು ಹೊರಟಳು.

ಕಾರ್ತೀಕನು ಎದ್ದನು. ಇಂದು ಹೂಗಳ ಬದಲು ಮಾಲೆಯನ್ನು ಕಂಡನು! ಹಾಸಿಗೆಯಲ್ಲಿ ಮಾಲೆ! ಬಾಗಿಲಕ್ಕೆ ಮಾಲೆಯ ತೋರಣ, ಏನಿದ್ದೀತಿದು? ಆವನಿಗೆ ಅಂಜಿಕೆ ಬಂದಿತು. ಆ ಹಾರವನ್ನು ತಕ್ಕೊಂಡು ಆವನು ಸುಶ್ರುತೆಯ ಕಡೆಗೆ ಬಂದನು.

“ ಆಜ್ಜಿ, ಆಜ್ಜಿ, ಒಂದು ಆಶ್ಚರ್ಯದ ಸಂಗತಿಯಿದೆ ” ಎಂದನು.

“ ಏನು ಚಮತ್ಕಾರ? ವತ್ಸಲೆ ನಾಗಾನಂದರು ಚಕ್ಕಂದದಿಂದ ಇದ್ದಾರೆ. ಆವರು ಜಾತ್ರೆಯಲ್ಲಿ ಹೊಕ್ಕರಂತೆ ವತ್ಸಲೆಯು ಪ್ರೇಮಗೀತವನ್ನು ಹಾಡಿದಳಂತೆ. ನಾಗಾನಂದನು ಕೊಳಲೂದಿದನಂತೆ. ಜಗಳವು ನಿಂತಿತಂತೆ, ಹೀಗೆಯೇ ತಿರುಗುತ್ತಿದ್ದಾರೆ. ಮತ್ತೇನು ಚಮತ್ಕಾರ! ” ಎಂದಳು ಸುಶ್ರುತೆ.

“ ಅಂತಹ ಚಮತ್ಕಾರವಿದಲ್ಲ. ನನ್ನ ಹಾಸಿಗೆಯ ಮೇಲೆ ಏಳುವದರೊಳಗಾಗಿ ಹೂಗಳು ಬಿದ್ದಿರುತ್ತವೆ. ಎಲ್ಲಿಂದ ಬಂದವು ಎನಿಸಿತು. ಮರುದಿನ ಹೂಗಳ ಬದಲು ಮಾಲೆಗಳು ಗುಡಿಸಲಿಗೆ ಹೂವಿನ ತೋರಣ. ಅಲ್ಲದೆ ಹಾಸಿಗೆಯ ಮೇಲೆಯೂ ಒಂದು ಮಾಲೆ. ಇದು ಏನಿರಬಹುದು? ನನಗೆ ಅಂಜಿಕೆ ಬರುತ್ತದೆ! ” ಎಂದನು.

"ಗಂಧರ್ವರು ಒಮ್ಮೊಮ್ಮೆ ರಾತ್ರಿಯಲ್ಲಿ ಬರುತ್ತಿರುವರೆಂದು ಕೇಳಿದ್ದೇನೆ. ಅವರಾಗಿರಲಿಕ್ಕಿಲ್ಲವಷ್ಟೆ ?" ಎಂದಳು ಸುಶ್ರುತೆ.

ಇಷ್ಟರಲ್ಲಿ ಕೃಷ್ಣಿಯ ತಾಯಿಯು ಸುಶ್ರುತೆಯಕಡೆಗೆ ಬಂದಳು. ಅವಳು ಹೊರಗೆ ನಿಂತಳು. ಅವಳು ಮಾತನಾಡಲಿಲ್ಲ.

"ನಿಮಗೆ ಏನು ಬೇಕು ?" ಎಂದನು ಕಾರ್ತೀಕ.

"ಇಂದು ಕೃಷ್ಣಿಗೆ ಸಾಕಷ್ಟು ಹೂ ಸಿಗಲಿಲ್ಲವೆಂದು ಅವಳು ಅಳುತ್ತಿದ್ದಾಳೆ. ಅವಳು ದಿನಾಲು ಅಡವಿಯಲ್ಲಿರುವ ದೇವರಿಗೆ ಹಾರವನ್ನು ಏರಿಸುತ್ತಿದ್ದಾಳೆ. ನಾಗರಾದ ನಮಗೆ ತೊಂದರೆ ಬರಬಾರವೆಂದು ಅವಳು ರಾತ್ರಿಯಲ್ಲಿ ಹೋಗುವಳು. ಪೂಜೆಮಾಡಿ, ಪ್ರದಕ್ಷಿಣೆ ಹಾಕಿ ಬರುವಳು. ಇಂದು ಹೂಗಳು ಸಿಗದ್ದರಿಂದ ಮಾಲೆ ಮಾಡುವಂತಿಲ್ಲ. 'ವತ್ಸಲೆಯ ಅಜ್ಜಿಯ ಕಡೆಗೆ ಹೋಗು. ಅವರಲ್ಲಿದ್ದರೆ ತಕ್ಕೊಂಡು ಬಾ" ಎಂದು ನನಗೆ ಹೇಳಿದಳು ಹೂಗಳಿವೆಯೇ ?" ಎಂದಳು ಆಕೆ.

"ಹೊಲದಲ್ಲಿ ಸಾಕಷ್ಟು ಹೂಗಳಿವೆ.' ಕಾರ್ತೀಕ, ಒಂದು ಬುಟ್ಟಿ ತುಂಬ ಹೂಗಳನ್ನು ತಂದು ಇವರಿಗೆ ಕೊಡು. ವತ್ಸಲೆಗೆ ಹೂಗಳ ಹುಚ್ಚು ಬಹಳ. ನಿಮ್ಮ ಹುಡುಗೆಯೂ ಹಾಗೆಯೇ ಅಲ್ಲವೇ ? ಎಂದಳು ಅಜ್ಜಿ.

"ಊರಲ್ಲಿಯ ಹುಡುಗೆಯರೊಡನೆ ಈಸಾಡಲು ಕಲಿಯುತ್ತಿದ್ದಳಲ್ಲ, ಅವಳೆ ಏನು ನಿಮ್ಮ ಹುಡುಗೆ ?' ಎಂದನು ಕಾರ್ತೀಕ.

"ಹೌದು" ಎಂದಳಾಕೆ.

"ಅವಳು ಇಲ್ಲಿ ಬಹಳ ವರ್ಷಗಳಿಂದ ಇದ್ದಂತೆ ಕಾಣುವದಿಲ್ಲ." ಎಂದನಾತ.

"ಅವಳು ತಮ್ಮ ಅಜ್ಜಿಯ ಮನೆಯಲ್ಲಿದ್ದಳು. ಆದರೆ ಈಗ ಬಂದು ಕೆಲವು ತಿಂಗಳಾದವು. ಇತ್ತೀಚೆಗೆ ಅವಳಿಗೆ ದೇವರ ಪೂಜೆಯ ಹುಚ್ಚು ಹಿಡಿದಿದೆ.' ಎಂದಳಾಕೆ.

"ದೊಡ್ಡವಳಾಗಿರಬಹುದು" ಎಂದನು ಕಾರ್ತೀಕ.

"ಹೌದು. ದೊಡ್ಡವಳಾಗಿದ್ದಾಳೆ. ರಾಜನ ರಾಣಿಯಂತೆ ಶೋಭಿಸುತ್ತಿದ್ದಾಳೆ." ಎಂದಳು ಆಕೆ.

‘ ನಾನು ಹೂಗಳನ್ನು ತಂದು ಕೊಡುವೆ ’ ಎಂದು ಹೇಳಿ ಕಾರ್ತೀಕನು ಹೋದನು.

ಕೃಷ್ಣಿಯ ತಾಯಿಯೂ ಹೋದಳು.

“ ಹೂಗಳು ಸಿಕ್ಕವೇ ? ಕೈಬೀಸುತ್ತ ಹಾಗೇ ಬಂದೆಯಲ್ಲ ? ” ಎಂದಳು ಕೃಷ್ಣಿ.

“ ಕಾರ್ತೀಕನು ಹೊಲದಿಂದ ಹೂಗಳನ್ನು ತಂದು ಕೊಡುವನು. ಅವನಿಗೆ ನಿನ್ನ ಪರಿಚಯವಿದೆ. ನಿಮಗೆ ಈಸಲು ಕಲಿಸುತ್ತಿದ್ದನಂತೆ ” ಎಂದಳು ತಾಯಿ.

“ ಹೌದು. ಆರ್ಯಕನ್ಯೆಯರೊಡನೆ ನನಗೂ ಕಲಿಸುತ್ತಿದ್ದರು. ಆ ಮಾತಿಗೆ ಬಹಳ ವರ್ಷಗಳಾದವು ಆಗ ನಾನು ಚಿಕ್ಕವಳಿದ್ದೆ. ಅವರೀಗ ದೊಡ್ಡವರಾಗಿರಬಹುದು. ಅವರ ಅಪ್ಪನು ನಾಗರನ್ನು ದ್ವೇಷಿಸುತ್ತಿದ್ದ. ಆದರೆ ಒಮ್ಮೆ ಅವರು ನನಗೊಂದು ಸವಿಯಾದ ಹಣ್ಣನ್ನು ಕೊಟ್ಟಿದ್ದರು. ಅವರಿಗೆ ಇದು ನೆನಪು ಕೂಡಾ ಇರಲಿಕ್ಕಿಲ್ಲ ” ಎಂದಳು.

“ ಅವರೀಗ ಮನೆಬಿಟ್ಟು ವತ್ಸಲೆಯ ಹೊಲದಲ್ಲಿದ್ದಾರೆ. ಅವರು ವತ್ಸಲೆಯನ್ನು ಲಗ್ನವಾಗಬೇಕೆಂದಿದ್ದರು. ಆದರೆ ನಿರಾಶರಾದರು. ‘ ಮುಂದಿನ ಜನ್ಮದಲ್ಲಿಯಾದರೂ ವತ್ಸಲೆಯು ಸಿಗಬಹುದು ’ ಎಂದು ಅನ್ನುತ್ತಾರೆ. ಅವರನ್ನು ನೋಡಿ ಕನಿಕರವೆನಿಸುತ್ತದೆ ” ಎಂದಳು.

ಇತ್ತ ಕಾರ್ತೀಕನು ಮನೋಹರವಾದ ಹೂಗಳನ್ನು ಹರಿದು, ಬುಟ್ಟಿಯನ್ನು ತುಂಬಿದನು. ನಾಗಾನಂದನು ಹೆಣೆದ ಬುಟ್ಟಿ. ಅದನ್ನು ತುಂಬಿಕೊಂಡು ಕೃಷ್ಣಿಯ ಮನೆಗೆ ನಡೆದನು.

“ ಮನೆಯಲ್ಲಿ ಯಾರಿದ್ದೀರಿ ? ” ಎಂದನು ಕಾರ್ತೀಕ. ಕೃಷ್ಣಿಯು ಹೊರಬಂದಳು. ಕಾರ್ತೀಕನ ಕಡೆಗೆ ನೋಡಹತ್ತಿದಳು.

“ ನಿಮ್ಮ ತಾಯಿ ಎಲ್ಲಿದ್ದಾಳೆ ? ” ಎಂದು ಕಾರ್ತೀಕನು ವಿಚಾರಿಸಿದ.

“ ನೀರಿಗೆ ಹೋಗಿದ್ದಾಳೆ ” ಎಂದಳಾಕೆ.

“ ನಿನಗೇ ಅಲ್ಲವೆ, ಹೂಗಳು ಬೇಕಾಗಿದ್ದು ? ಇವನ್ನು ತೆಗೆದುಕೋ ” ಎಂದನಾತ.

" ನಿಮಗೆ ತೊಂದರೆಯಾಯಿತು " ಎಂದಳಾಕೆ.

" ದೇವರ ಪೂಜೆಗಾಗಿ ಹೂವನ್ನು ತರುವದೇನು ತೊಂದರೆಯಲ್ಲ " ಎಂದನಾತ.

" ಆದರೆ ಇವು ನಾಗರದೇವರಿಗೆ ! " ಎಂದಳು.

" ನಾಗರು ಕೀಳರೆಂದು ನನಗೆ ಅನಿಸುವದಿಲ್ಲ. ನಾಗರು ದೊಡ್ಡ ಮನಸ್ಸಿನವರಿರುತ್ತಾರೆ. ಪ್ರೇಮಳ ಹೃದಯದವರಿರುತ್ತಾರೆ " ಎಂದನು.

" ಈ ಅನುಭವವು ನಿಮಗೆ ಎಂದು ಬಂದಿತು ? " ಎಂದಳು.

" ನಾಗಾನಂದನು ಈ ಬಗ್ಗೆ ಎಷ್ಟೋ ಮಾತು ಹೇಳಿರುವನು " ಎಂದನು.

" ಆ ನಾಗಾನಂದನೆಲ್ಲಿದ್ದಾನೆ ? " ಎಂದಳು.

" ವತ್ಸಲೆ ಹಾಗೂ ನಾಗಾನಂದರು ಪ್ರೇಮಧರ್ಮವನ್ನು ಪ್ರಸಾರ ಮಾಡುವದಕ್ಕಾಗಿ ಹೋಗಿದ್ದಾರೆ " ಎಂದನು.

" ನೀವೇಕೆ ಹೋಗುವದಿಲ್ಲ ? " ಎಂದಳು.

" ನನಗೆ ಸ್ಫೂರ್ತಿಲ್ಲ " ಎಂದನು.

" ನಿಮ್ಮ ಸ್ಫೂರ್ತಿಯೆಲ್ಲಿ ಹೋಯಿತು ? " ಎಂದಳು.

" ನನಗೆ ಗೊತ್ತಿಲ್ಲ. ಈ ಹೂಗಳನ್ನು ಸುರುವಿಕೊ. " ಎಂದನು

" ಇರಲಿ ಬಿಡಿರಿ ಬುಟ್ಟಿ. ಬುಟ್ಟಿಯು ಸುಂದರವಾಗಿವೆ, ಇದನ್ನು ನನಗೆ ಕೊಡುವಿರಾ ? " ಎಂದಳು.

, ನಿನಗೇತಕ್ಕೆ ಬೇಕು ? ' ಎಂದನು

' ನನಗೆ ಪ್ರಿತಿಯುಂಟಾಗಿದೆಯೆಂದು. ನಿಮ್ಮದಿದೆಯಂದು ' ಎಂದಳು

'' ನನ್ನದಿರುವದೆಂದೇ ? " ಎಂದು ಪ್ರಶ್ನಿಸಿದನು

" ಹೌದು. ನೀವು ಒಳ್ಳೇಯವರು. ನನಗೆ ಈಸಲು ಕಲಿಸುತ್ತಿದ್ದಿರಿ. ನಾನು ಚಿಕ್ಕವಳಿದ್ದೆ. ನೀವು ಚಿಕ್ಕವರಿದ್ದಿರಿ. ನನಗೆ ಒಮ್ಮೆ ಎರಡು ಹಣ್ಣು ಗಳನ್ನು ಕೊಟ್ಟದ್ದಿರಿ. ನೆನಪಿದೆಯೇ ? ನಾನು ಅಜ್ಜಿಯ ಊರಲ್ಲಿ ಭಾವಿ ಯಲ್ಲಿ ಮೇಲಿನಿಂದ ಜಿಗಿಯುತ್ತಿದ್ದೆ. ಜನರು ನನ್ನನ್ನು ಹೊಗಳುತ್ತಿದ್ದರು. ಕಾರ್ತೀಕನು ನನಗೆ ಕಲಿಸಿದನೆಂದು ಅವರಿಗೆ ಹೇಳುತ್ತಿದ್ದೆ. ಆರ್ಯನು

ನಾಗರಿಗೆ ಹೇಗೆ ಕಲಿಸಿದನೆಂದು ಅವರಿಗೆ ಆಶ್ಚರ್ಯವೆನಿಸಿತು. ಬುಟ್ಟಿಯನ್ನು ಇಟ್ಟುಕೊಳ್ಳಲಾ ? ಏನು ನಿಮಗೆ ಬೇಕೊ ? " ಎಂದು ಕೃಷ್ಣಿಯು ಪ್ರೇಮದಿಂದ ವಿಚಾರಿಸಿದಳು.

' ಈ ಬುಟ್ಟಿ ನನ್ನದಲ್ಲ ' ಎಂದನು

' ಹಾಗಾದರೆ ಯಾರದು ? ' ಎಂದಳು

" ಇದು ವತ್ಸಲೆಯದು. ನಾಗಾನಂದನು ಆಕೆಗೆ ಇದನ್ನು ಹೆಣೆದು ಕೊಟ್ಟಿದ್ದನು. ಅವಳ ಪ್ರೀತಿಯ ಬುಟ್ಟಿಯಿದು. " ಎಂದನು

ಇಷ್ಟರಲ್ಲಿ ಕೃಷ್ಣೆಯ ತಾಯಿಯು ಕೊಡಹೊತ್ತುಕೊಂಡು ಮನೆಗೆ ಬಂದಳು. ಹಾಗು ಒಳಗೆ ಕೊಡವನ್ನಿಟ್ಟು ಅಲ್ಲಿಗೆ ಬಂದಳು.

" ಇಷ್ಟೊಂದು ಹೂಗಳೇಕೆ ? " ಎಂದಳು ತಾಯಿ

" ಇಷ್ಟು ಹೂಗಳು ಸಾಲಲಿಕ್ಕಿಲ್ಲವೆಂದು ನನಗೆ ಅನಿಸಿತ್ತು. ದಿನಾಲು ತಂದು ಕೊಡಲೇನು ? " ಎಂದನು ಕಾರ್ತೀಕ

' ದಿನಾಲು ನಿಮಗೇಕೆ ತೊಂದರೆ ? ಎಂದಳು ತಾಯಿ

' ತೊಂದರೆ ಯಾತರದು ? ವತ್ಸಲೆಯ ಅಜ್ಜಿಯ ಕಡೆಗೆ ಬೆಳಿಗ್ಗೆ ಬರುತ್ತೇನೆ. ಇಲ್ಲಿಯೂ ಬರುವೆ. ಚಿಕ್ಕಂದಿನ ಗೆಳತಿಯ ಸಲುವಾಗಿ ಬರ ಬೇಡವೇ ? ಎಂದನು ಕಾರ್ತೀಕ

' ಆದರೆ ಇದರಲ್ಲಿ ಸಂಕಟವಿದೆ. ರಾಜದೂತರ ಡಂಗುರ ಕೇಳಿಲ್ಲ ವೇನು ? ಈಗ ಬಂದಿರಲ್ಲ ! ಇಷ್ಟೇ ಸಾಕು, ಮತ್ತೆ ಬರಬೇಡಿರಿ. ' ಎಂದಳು ತಾಯಿ

" ರಾಜದೂತರ ಆಜ್ಞೆಯನ್ನು ಉಲ್ಲಂಘಿಸಬೇಕು. ಪಾಪಕ್ಕೆ ಎಡೆ ಗೊಡಬೇಕೇ ? ಕಾರ್ತೀಕಾ, ನೀವು ಬನ್ನಿರಿ " ಎಂದಳು ಕೃಷ್ಣಿ.

" ನಾವು ಬೇಗನೆ ಈ ಊರು ಬಿಟ್ಟು ಹೋಗಲೇಬೇಕಾದೀತು. ಕೃಷ್ಣಿಯು ಇಲ್ಲಿಯೇ ಅಡವಿಯಲ್ಲಿರುವೆ, ಎನ್ನುತ್ತಾಳೆ " ಎಂದಳು ತಾಯಿ.

" ಅಡವಿಯಲ್ಲಿರುವೆ, ನನ್ನ ದೇವರನ್ನು ಪೂಜಿಸುವೆ " ಎಂದಳು ಕೃಷ್ಣಿ.

" ಆ ದೇವನು ಎಲ್ಲಿರುವನು ನನಗೆ ತೋರಿಸುವೆಯಾ ? " ಎಂದನು ಕಾರ್ತೀಕ.

" ನನ್ನ ದೇವರು ದಟ್ಟಡವಿಯಲ್ಲಿದ್ದಾನೆ. ನೀವು ಅಂಜಬಹುದು. ಅಲ್ಲಿ ಸೂರ್ಯನ ಕಿರಣಗಳೂ ಕೂಡ ಪ್ರವೇಶಿಸುವದಿಲ್ಲ. ನಿಜವಾಗಿ ಅದು ದಟ್ಟಡವಿ " ಎಂದಳು.

' ನಾನು ಅಂಜುಬುರುಕನೆಂದು ವತ್ಸಲೆಗೆ ಸೇರಲಿಲ್ಲ. ನಿನಗೂ ಹಾಗೆ ಅನಿಸುವದೇ ? ನನ್ನ ಅಂಜಿಕೆಯು ಹೋಗಲೇಬೇಕು. ' ಎಂದನು ಕಾರ್ತೀಕ

" ನಾನು ಅಂಜಿಕೆಯನ್ನು ಹೊಡೆದೋಡಿಸುವೆ. ಇಂದು ಮೂರನೆ ಪ್ರಹರಗಲ್ಲಿ ಹೋಗೋಣ. ನನ್ನ ಸಂಗಡ ಬರುವಿರಾ ? ಎಂದಳು ಕೃಷ್ಣೀ.

' ಒಳ್ಳೆಯದು. ನಿಶ್ಚಯವಾಗಿ ಬರುವೆ. ನೀನು ಹೊಲಕ್ಕೆ ಬಾ. ನಾನು ದಾರೀ ಕಾಯುತ್ತಿರುವೆ. ' ಎಂದನು ಕಾರ್ತೀಕ.

ಮೂರು ಗಂಟೆಯಾಯಿತು. ಬುಟ್ಟಿಯಲ್ಲಿ ಪೂವಾಲೆಗಳನ್ನಿಟ್ಟು ಕೊಂಡು ಕೃಷ್ಣಿಯು ಹೊರಟಳು. ಕಾರ್ತೀಕನು ಗುಡಿಸಲದಲ್ಲಿ ದಾರಿ ಕಾಯುತ್ತ ಕುಳಿತಿದ್ದನು. ಕೃಷ್ಣಿಯು ಒಳಗೆ ಬಂದಳು.

' ನೀವು ಇಲ್ಲಿಯೇ ಅಡಿಗೆ ಮಾಡುವಿರಲ್ಲವೇ ? ' ಎಂದಳು.

' ನಾನೇ ಬೀಸುವೆ, ರೊಟ್ಟಿಯನ್ನು ಸುಡುವೆ. ಇಂದು ರೊಟ್ಟಿ ಮಾಡುವಾಗ್ಗೆ ಕೈ ಸುಟ್ಟಿತು. ' ಎಂದನು

' ನೋಡುವಾ ? ಎಂದಳು'

ಅವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು. ಅವಳು ಅವನ ಸುಟ್ಟ ಬೆರಳನ್ನು ತನ್ನ ಬಾಯೊಳಗಿಟ್ಟುಕೊಂಡಳು.

' ಏನುಮಾಡುವಿ ಕೃಷ್ಣೀ ? ' ಎಂದನು

' ಉರಿಯುತ್ತಿರಬಹುದೆಂದು ಬಾಯಲ್ಲಿಟ್ಟೆ. ನಾನು ದಿನಾಲು ನಿಮಗಾಗಿ ರೊಟ್ಟಿಯನ್ನು ತರುವೆ. ನಾನೇ ಬೀಸುವೆ. ' ಎಂದಳು

' ನಡೆ, ದೇವರ ದರ್ಶನಕ್ಕೆ ಹೋಗಿ ಬರೋಣ ತಡವಾದೀತು ! ಅಡವಿಯಲ್ಲಿಯ ದೇವ. ದಟ್ಟಡವಿಯಲ್ಲಿರುವ ನಾಗರದೇವ. ' ಎಂದನು

ಇಬ್ಬರೂ ಹೊರಟರು. ಊರ ಹೊರಗಿದ್ದ ದಟ್ಟವಾದ ಅಡವಿಯ ಕಡೆಗೆ ನಡೆದರು. ಪಕ್ಷಿಗಳು ಕಿಲಕಿಲರವ ಗೈಯ್ಯುತ್ತಿದ್ದವು. ಎಷ್ಟು ಮಧುರವಾದ ಶಬ್ದ ! ಒಂದು ಪಕ್ಷಿಯ ಧ್ವನಿಯಂತೂ ಬಹಳ ಇಂಪಾಗಿತ್ತು.

" ಅದು ಗಂಡು ಪಕ್ಷಿಯಿದೆ. ತನ್ನ ಪ್ರೇಯಸಿಯನ್ನು ಕರೆಯುತ್ತಲಿದೆ. ಅದರ ಪ್ರೇಯಸಿಯು ಹತ್ತಿರದಲ್ಲಿಯೇ ಅಡಗಿ ಕುಳಿತಿದೆ. ಕೂಗಿ ಕೂಗಿ ದಣಿದ ಮೇಲೆ ಅದು ಮೆಲ್ಲನೆ ಬರುತ್ತದೆ. ಹಾಗು ಚುಂಚುವಿನಿಂದ ತಿವಿಯುತ್ತದೆ " ಎಂದಳು.

" ಇನ್ನೂ ಎಷ್ಟು ದೂರವಿದೆ ಆ ದೇವರು? ಹೊಲಕ್ಕೆ ಮರಳಿ ಹೋಗಲು ತಡವಾಗಬಹುದು. ನಿನಗೆ ಮನೆಗೆ ಹೋಗಲು ರಾತ್ರಿಯಾಗಬಹುದು " ಎಂದನು.

" ರಾತ್ರಿಯಂತೂ ನನ್ನ ಗೆಳತಿ, ದಿವಸವು ನನಗೆ ಹಗೆ " ಎಂದಳು.

" ಹಾವುಗಳು ರಾತ್ರಿಯಲ್ಲಿ ಹೊರ ಬರುತ್ತವೆ. ನಾಗ ಪೂಜಕರೂ ಹಾಗೇ ಮಾಡುವರೇನು ? " ಎಂದು ಕಾರ್ತಿಕನು ನಗುತ್ತ ಕೇಳಿದನು.

" ನನ್ನ ದೇವರು ದೂರೆಂದರೆ ದೂರ, ಹತ್ತಿರವೆಂದರೆ ಹತ್ತಿರವಿದ್ದಾನೆ" ಎಂದಳು.

" ಅಂದರೇನು ? " ಎಂದನು.

" ನಿಲ್ಲಿರಿ, ಅದೋ ಅಲ್ಲಿ ಹಾವು. ಅದನ್ನು ಹೋಗಗೊಡಿರಿ. ಈಗ ನಾವು ದೇವರ ಸಮೀಪಕ್ಕೆ ಬಂದೆವು.

ಅವನು ಅಂಜಿ ಅವಳ ಕೈಯ್ಯನ್ನು ಹಿಡಿದ.

" ಕೃಷ್ಣೇ, ತಿರುಗಿ ಹೋಗುವಾ " ಎಂದನು.

" ಅಂಜ ಬೇಡಿರಿ. ನಾನಿದ್ದೇನೆ. ದೇವದರ್ಶನವನ್ನು ತಕ್ಕೊಳ್ಳದೆ ಹೋಗಬಾರದು ? " ಎಂದಳು.

ಒಂದು ದೊಡ್ಡ ವೃಕ್ಷದ ಕೆಳಗೆ ಅವರು ನಿಂತರು.

" ನಿನ್ನ ದೇವರು ಬಂದಿತೇನು ? " ಎಂದನು.

" ನನ್ನ ದೇವರು, ನಿಮ್ಮ ದೇವರಲ್ಲವೇನು ? " ಎಂದಳು.

" ಬೇಗನೆ ಪೂಜೆಯನ್ನು ಮುಗಿಸು " ಎಂದನು.

ಅವಳು ಬುಟ್ಟಿಯಲ್ಲಿಯ ಹೂಮಾಲೆಯನ್ನು ಹೊರದೆಗೆದಳು.

' ನೀವು ಗಿಡದ ಬುಡದಲ್ಲಿ ಬನ್ನಿರಿ. ಬೊಡ್ಡೆಗಾತು ಕುಳಿತುಕೊಳ್ಳಿರಿ. ನಾನು ಈ ಗಿಡಕ್ಕೆ ಪ್ರದಕ್ಷಿಣೆಯನ್ನು ಹಾಕುವೆನು ' ಎಂದಳು.

ಅವನು ಗಿಡದ ಬುಡದಲ್ಲಿ ಕುಳಿತನು. ಕೈಯ್ಯಲ್ಲಿ ಮಾಲೆಯನ್ನು ಹಿಡಿದು ಆವಳು ಪ್ರದಕ್ಷಿಣೆ ಹಾಕುತ್ತಿದ್ದಳು. ದಣಿದ ಕಾರ್ತೀಕನು ಬೊಡ್ಡೆಗೆ ಆತು ಕಣ್ಣುಮುಚ್ಚಿ ಕುಳಿತನು. ಆವನಿಗೆ ನಿದ್ದೆ ಹತ್ತಿತ್ತೇನು ?

ಕೃಷ್ಣೆಯು ಎದುರಿಗೆ ನಿಂತಳು. ಕೈಯ್ಯಲ್ಲಿ ಮಾಲೆಹಿಡಿದು ಎದ್ದು ನಿಂತಿದ್ದಳು. ಕಾರ್ತೀಕನ ಕಡೆಗೆ ನೋಡುತ್ತಿದ್ದಳು.

" ಪೂಜೆ ಮುಗಿಯಿತೇ ? " ಎಂದನು.

ಅವಳು ಕೈಯ್ಯಲ್ಲಿಯ ಮಾಲೆಯನ್ನು ಅವನ ಕೊರಳಲ್ಲಿ ಹಾಕಿದಳು. ಅವನ ಚರಣಗಳ ಮೇಲೆ ಮಸ್ತಕವಿರಿಸಿದಳು.

" ಇದೇನು ? " ಎಂದನು.

" ಇದು ನನ್ನ ದೇವ ಪೂಜೆಯು " ಎಂದಳು.

" ಆಡವಿಯಲ್ಲಿಯ ದೇವರಲ್ಲಿದ್ದಾನೆ ? " ಎಂದು ಕೇಳಿದನು.

" ಈ ಜಗತ್ತಿನ ಆಡವಿಯಲ್ಲಿಯರುವ ನೀವೇ ನನ್ನ ದೇವರು. ನಾನು ನನ್ನ ಜೀವನವನ್ನು ನಿಮಗರ್ಪಿಸಿದ್ದೇನೆ. ನಾನು ನಿಮ್ಮಗುಡಿಸಲದಲ್ಲಿರುವೆ. ಬೀಸುವೆ, ರೊಟ್ಟಿಯನ್ನು ಸುಡುವೆ ನಿಮ್ಮ ಗಾಗಿ ಎಲ್ಲವನ್ನು ಮಾಡುವೆ. ನನ್ನ ಪಂಚ ಪ್ರಾಣಗಳನ್ನು ಆರ್ಪಿಸಿ, ನಿಮ್ಮನ್ನು ಪೂಜಿಸುವೆ. ಭಕ್ತನನ್ನು ದೂರ ಮಾಡದೆ ಪಾದದ ಬಳಿಯಲ್ಲಿರಿಸಿರಿ " ಎಂದಳು.

ಅವನು ಮಾತಾಡಲಿಲ್ಲ ಮೌನವಾಗಿ ಕುಳಿತನು.

" ಮಾತಾಡುವದಿಲ್ಲವೇನು ? " ಎಂದಳು.

' ನಿನ್ನ ದೇವಪೂಜೆಯಂತೂ ಆಯಿತು. ಆದರೆ ನನ್ನ ಪೂಜೆಯು ಉಳಿಯಿತು. ನಡೆ, ಬೇಗನೆ ಹೊಲಕ್ಕೆ ಹೋಗೋಣ. ನನ್ನ ಸಾಯಂ ಕಾಲದ ದೇವಪೂಜೆಯು ತಪ್ಪೀತು. ' ಎಂದನು

ಇಬ್ಬರೂ ಹೊಲಕ್ಕೆ ಬಂದರು.

' ಕೃಷ್ಣೆ, ನಿನಗೆ ಹಿಂಡಲು ಬರುವದೇ ? ' ಎಂದನು

" ಓ ಹೋ, ನಾನು ಹಿಂಡುವೆ " ಎಂದಳು

" ಹಿಂಡು ಹಾಗಾದರೆ, ನಾನು ನನ್ನ ದೇವರ ಪೂಜೆಯ ಸಿದ್ಧತೆ ಯನ್ನು ಮಾಡುವೆನು " ಎಂದನು

"ಕೃಷ್ಣೆಯು ಹಿಂಡುತ್ತಲಿದ್ದಳು. ಪಾತ್ರೆಯು ತುಂಬಿದರೂ ಸಹ ಧಾರೆಯು ನಿಲ್ಲಲಿಲ್ಲ. ಕೃಷ್ಣೆಯ ಬೆರಳುಗಳು ನೋವಾಗತೊಡಗಿದವು.

"ಎರಡನೇ ಪಾತ್ರೆ ಕೊಡಿರಿ. ಇದು ತುಂಬಿತು." ಎಂದಳು

ಕಾರ್ತೀಕನು ಪಾತ್ರೆ ತುಂಬಿದ್ದನ್ನು ನೋಡಿ ಆಶ್ಚರ್ಯಪಟ್ಟನು.

'ಇಷ್ಟು ಹಾಲು ಹೇಗೆ ಬಂದವು ?' ಎಂದನು

'ಇನ್ನೂ ಕೆಚ್ಚಲು ತುಂಬಿದೆ' ಎಂದಳು

"ನಿನ್ನ ಕೈಯಲ್ಲಿ ಮಂತ್ರತಂತ್ರವಿದೆಯೇ ?" ಎಂದನು.

'ನನ್ನ ಕೈಯು ಪ್ರೇಮದಿಂದ ತುಂಬಿದೆ. ಇಂದು ನನ್ನ ಶರೀರದ ರೋಮರೋಮಗಳಲ್ಲಿಯೂ ಅನಂತ ಪ್ರೇಮವು ತುಂಬಿತುಳುಕುತ್ತಿದೆ' ಎಂದಳು.

'ಹಿಂಡುವದನ್ನು ನಿಲ್ಲಿಸು.' ಎಂದನು

ಇಬ್ಬರೂ ಗುಡಿಸಲದಲ್ಲಿ ಬಂದರು.

"ನಿಮ್ಮ ದೇವ ಪೂಜೆಯು-ಮುಗಿಯಿತೇನು ?" ಎಂದಳು

"ಹೊರಗಿರುವ ಎತ್ತರವಾದ ಕಲ್ಲಿನ ಆಸನದ ಮೇಲೆ ನೀನು ಕೂಡ್ರು. ನಾನು ಬರುವೆ" ಎಂದನು.

ಅವಳು ಆ ಕಲ್ಲುಬಂಡೆಯ ಮೇಲೆ ಹೋಗಿ ಕುಳಿತಳು. ಇತ್ತ ಸೂರ್ಯನು ಪಶ್ಚಿಮಾಚಲವನ್ನು ಸೇರುತ್ತಲಿದ್ದ. ಕೆಂಪು ಬಣ್ಣವು ಹಬ್ಬಿತ್ತು. ತಂಗಾಳಿಯು ಬೀಸುತ್ತಲಿತ್ತು. ಸುಗಂಧ, ಹಾಗು ಶೀತಲವಾದ ಗಾಳಿ. ಕೃಷ್ಣಿಯ ಹೃದಯುವು ಅರಳಿತ್ತು, ಮೋರೆಯ ಮೇಲೆ ಪ್ರೇಮದ ಹಾಗು ಪ್ರಸನ್ನತೆಯ ಕಳೆಯು ಸುರಿಯುತ್ತಿತ್ತು. ಕಣ್ಣುಗಳು ಹೊಳೆಯುತ್ತಲಿದ್ದವು. ಕಾರ್ತೀಕನು ಅತ್ತಕಡೆಯಿಂದ ಬಂದ. ಅವನು ಕೃಷ್ಣಿಯ ಕೊರಳಲ್ಲಿ ಸುಂದರವಾದ ಹೂವಿನ ಹಾರವನ್ನು ಹಾಕಿದ. ಕೃಷ್ಣಿಯು ಒಮ್ಮೆಲೆ ಚಕಿತಳಾಗಿ ಎದ್ದಳು. ಆವನು ಆವಳನ್ನು ಆಪ್ಪಿಕೊಂಡನು.

"ಕೃಷ್ಣೆ, ನೀನು ನನ್ನ ದೇವತೆ" ಎಂದನು.

"ನೀವು ನನ್ನ ದೇವರು" ಎಂದಳು

ಇಬ್ಬರೂ ಆ ಬಂಡೆಗಲ್ಲಿನ ಮೇಲೆ ಕುಳಿತಿದ್ದರು. ಗಾಳಿಯಿಂದ ಕೃಷ್ಣೆಯ ಮುಂಗುರುಳು ಹಾರಾಡುತ್ತಿದ್ದವು. ಅವಳ ಹೃದಯವು ಪ್ರೇಮ ಸಾಗರದಲ್ಲಿ ಮುಳುಗಿತ್ತು

" ನಾವೀರ್ವರು ಮನೆಗೆ ಹೋಗೋಣ. ತಾಯಿಯ ಹಾಗು ಸುಶ್ಯ್ರ ತೆಯ ಆಶೀರ್ವಾದಗಳನ್ನು ಪಡೆಯೋಣ. ಎಂದಳು

" ನೀನೇ ಇಲ್ಲಿಗೆ ಬರುತ್ತಿದ್ದಿ, ಹೂಗಳನ್ನು ಒಗೆಯುತ್ತಿದ್ದಿ. ಬಾಗ ಲಲ್ಲಿ ತೋರಣವನ್ನು ಕಟ್ಟುತ್ತಿದ್ದಿ. ಅಜ್ಜಿ ಸುಶ್ರುತೆಯು ' ಗಂಧರ್ವರು ಹೀಗೆ ಮಾಡುತ್ತಿರುತ್ತಾರೆ ' ಎಂದಳು. ಆ ಗಂಧರ್ವನು ಇಂದು ಸಿಕ್ಕನು, ಆ ಅಪ್ಸರೆಯು ಸಿಕ್ಕಳು. ಕೃಷ್ಣೀ, ನಿನಗೆ ಅಂಜಿಕೆ ಬರಲಿಲ್ಲವೇ ?" ಎಂದನು.

" ಜೀವನವು ಪ್ರೇಮದಿಂದ ತುಂಬಿತೆಂದರೆ, ಅಂಜಿಕೆಯು ಹೋಗು ತ್ತದೆ. ಯಾವದಾದರೊಂದು ಭಾವನೆಯು ಶಿಖರವನ್ನು ಮುಟ್ಟಿತೆಂದರೆ ಉಳಿದ ಭಾವನೆಗಳು ಅಳಿಯುವವು. " ಎಂದಳು.

ಇಬ್ಬರೂ ಕೈ ಕೈ ಹಿಡಕೊಂಡು ಹೊರಟರು. ಅಜ್ಜಿ ಸುಶ್ರುತೆಯು. ಕೃಷ್ಣಾಜಿನದ ಮೇಲೆ ಕುಳಿತು, ಜಪವನ್ನು ಮಾಡುತ್ತಿದ್ದಳು. ಆ ವಧು ವರರಿಬ್ಬರೂ ಆಕೆಗೆ ನಮಸ್ಕರಿಸಿದರು.

' ಅಜ್ಜೀ. ಈ ಕೃಷ್ಣಿಯೇ ನನ್ನ ಗುಡಿಸಲವನ್ನು ಅಲಂಕರಿಸುತ್ತಿದ್ದಳು. ಒಳಗೆ ಹೂವನ್ನು ಒಗೆಯುತ್ತಿದ್ದಳು. ನಾನು ನಿದ್ರಿಸುವಾಗ ಇವಳು ನನಗೆ ಪ್ರೇಮಪೂಜೆ ಮಾಡಿ ಹೋಗುತ್ತಿದ್ದಳು. ಕಾರ್ತಿಕನಿಗೆ ಇವಳು ದೇವತ್ವ ವನ್ನು ತಂದು ಕೊಟ್ಟಿದ್ದಾಳೆ. ಈ ಮಣ್ಣುಮುದ್ದೆಯನ್ನು ಇವಳು ತನ್ನ ಪ್ರೇಮಶಕ್ತಿಯಿಂದ ಅಮೂಲ್ಯವಾದ ಮುತ್ತನ್ನಾಗಿ ಮಾಡಿದ್ದಾಳೆ. ಲೋಹ ವನ್ನು ಬಂಗಾರ ಮಾಡಿದ್ದಾಳೆ. ಅಜ್ಜಿ, ನಮಗೆ ಆಶೀರ್ವಾದವನ್ನುಕೊಡು ಸಾಯಂಕಾಲದಲ್ಲಿ ದೇವರು ಆಕಾಶದಲ್ಲಿ ಹೊತ್ತಿಸಿದ ಅಗ್ನಿಯ ಸಮಕ್ಷಮದಲ್ಲಿ ನಾವು ಸತಿಪತಿಗಳಾಗಿದ್ದೇವೆ. ' ಎಂದನು.

ಮುದುಕಿಯು ಕೃಷ್ಣೆಯನ್ನು ಹತ್ತರ ಕರೆದಳು. ಅವಳ ಮೈಮೇಲೆ ಕೈಯಾಡಿಸಿದಳು. ಆಶೀರ್ವದಿಸಿದಳು. ಹಣ್ಣು ತಿನ್ನಲು ಕೊಟ್ಟಳು.

ನಂತರ ಕೃಷ್ಣೆಯ ಮನೆಗೆ ಇಬ್ಬರೂ ಬಂದರು. ತಾಯಿಯು ದಾರಿ
ಾಯುತ್ತಲಿದ್ದಳು.

'ಬಂದಿರಾ ಒಮ್ಮೆ?' ಎಂದಳು

'ತಾಯಿಯೇ ಬಂದೆ. ಆದರೆ ಹೋಗುವದಕ್ಕಾಗಿಯೇ ಬಂದೆ. ಾನು ಕಾರ್ತೀಕನನ್ನು ವರಿಸಿದೆ. ಒಮ್ಮೆ ಪ್ರೇಮವನ್ನು ಮಾಡಿದರೆ, ಅದು ಡಲಿಕ್ಕಾಗುವದಿಲ್ಲ. ಆಶೀರ್ವಾದನಾಡು.' ಎಂದಳು ಕೃಷ್ಣೆ.

"ಕೃಷ್ಣೇ, ನಾನು ಆಶೀರ್ವದಿಸುವೆ. ಆದರೆ ನೀವು ವಿಚಾರ ಮಾಡದೆ ವಸರದಿಂದ ಎಲ್ಲವನ್ನೂ ಮುಗಿಸಿದಿರಿ" ಎಂದಳು ತಾಯಿ.

"ತಾಯೀ ಪ್ರೇಮವು ಯಾವಾಗಲೂ ಪೂರ್ಣವಿರುತ್ತದೆ. ಅದು ಯಾವಾಗಲೂ ಸರಿಯಾಗಿರುತ್ತದೆ. ಅದು ಎಂದೂ ಅವಸರಪಡಿಸುವದಿಲ್ಲ. ಎಂದೂ ತಡಮಾಡುವದಿಲ್ಲ ಸಮಯ ಬಂದೊಡನೆಯೆ ಮೊಗ್ಗೆಗಳು ಅರಳು ವು. ಪ್ರೇಮಕ್ಕೆ ವಿಚಾರವಿಲ್ಲ. ಮನನವಿಲ್ಲ. ಅಲ್ಲಿ ಸರ್ವಸ್ವವನ್ನು ರ್ಪಿಸುವದಿರುತ್ತದೆ. ಪ್ರೇಮವು ಹಿಂದೆ ಮುಂದೆ ನೋಡುವದಿಲ್ಲ. ಪ್ರೇಮಕ್ಕೆ ಲ್ಲೆಡೆಗೂ ಬೆಳಕೇ ಕಾಣುತ್ತದೆ. "ಮಧುರ ಪ್ರಕಾಶ" ಎಂದಳು ಕೃಷ್ಣೆ.

"ಕಾರ್ತೀಕಾ, ಜನಮೇಜಯನ ಆಜ್ಞೆಯನ್ನು ನೀವು ಉಲ್ಲಂಘಿಸಿ ರಿ. ನಾಗಕನ್ನೆಯೊಡನೆ ಲಗ್ನವಾಗಿ, ನೀವಿಬ್ಬರೂ ಅಪರಾಧಿಗಳಾಗಿದ್ದೀರಿ. ಪತ್ತು ಬರುವದು. ಕೃಷ್ಣೆ! ನಾಗರೆಲ್ಲರೂ ಇಲ್ಲಿಂದ ನಾಳೆ ಹೊರಡುವ ಶ್ಚಯ ಮಾಡಲಿದ್ದಾರೆ. ಆದರೆ ನೀನು ಇಂದು ಇದನ್ನೇನು ಮಾಡಿದೆ? ೀವಿಬ್ಬರೂ ನಮ್ಮ ಸಂಗಡ ಬರುವಿರಾ?" ಎಂದಳಾ ತಾಯಿ.

"ನಾನು ಹೇಗೆ ಬರಲಿ? ಅಜ್ಜಿ ಸುಶ್ರೂಷೆಗೆ ಯಾರಿದ್ದಾರೆ? ನಾಗಾ ಂದ ಹಾಗು ವತ್ಸಲೆಯರು, ಈ ಹೊಣೆಯನ್ನು ನನ್ನ ಮೇಲೆ ಹೊರಿಸಿದ್ದಾರೆ" ಂದನು.

"ಹೊತ್ತ ಹೊಣೆಯನ್ನು ಹೊರಲೇಬೇಕು. ವಿಶ್ವಾಸಘಾತದಂಥ ಾಪ ಇನ್ನೊಂದಿಲ್ಲ. ನೀವು ಇಲ್ಲಿಂದ ಹೊರಡಬಾರದು. ನಾನೂ ನಿಮ್ಮ ಂಗಡ ಇರುವೆ. ನಾವಿಬ್ಬರೂ ಈಗ ಲಗ್ನವಾಗಿದ್ದೇವೆ. ವಿವಾಹವು ಮಂಗಲ ಾಯಕವಾಗಿದೆ. ಇನ್ನು ಜೀವಿಸಿದರೇನು, ಸತ್ತರೇನು, ಎಲ್ಲವೂ

ಮಂಗಲವೇ. ಅಪ್ಪಾ ನಾವು ಇಲ್ಲಿರುವೆವು. ಸಾವಿರ ಜನರಿಗಾದದ್ದು ನಮಗೂ ಆದೀತು." ಎಂದಳು ಕೃಷ್ಣೆ.

"ಸಾವಿರ ಜನರದೇನಾಗುವದು ? ಆ ಸಾವಿರ ಜನರೇ ಜನಮೇಜಯನ ರಾಜ್ಯ ಬಿಟ್ಟು ಹೋಗುತ್ತಾರೆ. ನಾವಾಗಿ ವಿಪತ್ತಿನಲ್ಲಿ ಏಕೆ ಇರಬೇಕು ? ಅಜ್ಜಿ, ಸುಶ್ರುತೆಯನ್ನೂ ಕರೆದೊಯ್ಯುವಾ" ಎಂದಳು ತಾಯಿ.

'ಅವರೇಕೆ ಬಂದಾರು ? ನಾಗಾನಂದ ವತ್ಸಲೆಯರು ಇಲ್ಲಿಗೆ ಬಂದರೆ? ನಾವೂ ಇಲ್ಲಿಯೇ ಇರೋಣ. ಕೃಷ್ಣೆಯು ನನಗೆ ಧೈರ್ಯಕೊಡುವಳು. ಚಿಂಕಿಯಲ್ಲಿ ಹೋಗಲು, ಮಹಾಪೂರದಲ್ಲಿ ಜಿಗಿಯಲು ಅವಳು ಧೈರ್ಯವನ್ನೀಯುವಳು.' ಎಂದನು ಕಾರ್ತೀಕ.

'ತಾಯಿ, ನಾವು ಹೋಗುತ್ತೇವೆ' ಎಂದಳು ಕೃಷ್ಣೆ

'ಸುಖಿಗಳಾಗಿರಿ' ಎಂದಳು ತಾಯಿ

ಕೃಷ್ಣೆ ಹಾಗೂ ಕಾರ್ತೀಕರು ಹೊಲಕ್ಕೆ ಹೊರಟರು.

'ನೀವು ಈ ಹೊಲದಲ್ಲೇಕೆ ಇರುವಿರಿ ? ನಿಮ್ಮ ಅಪ್ಪನು ನಿಮ್ಮನ್ನು ಮನೆಯಿಂದ ಹೊರಗೆ ಹಾಕಿದ್ದಾನೇ ? ನೀವು ಒಬ್ಬರೇ ದೂರ ಇರುವದನ್ನು ನೋಡಿ, ನಿಮ್ಮ ತಾಯಿಗೆ ದುಃಖವಾಗುವದಿಲ್ಲವೇ ?" ಎಂದು ಕೃಷ್ಣೆ ಪ್ರಶ್ನಿಸಿದಳು.

'ತಾಯಿಗೆ ಕೆಟ್ಟೆನಿಸುವದು, ಆದರೆ ಮಾಡುವಳೇನು ? ನಾನು ನಾಗರಿಗೆ ಸಹಾನುಭೂತಿಯನ್ನು ತೋರಿಸುವದು ನಮ್ಮ ತಂದೆಗೆ ಸೇರುವದಿಲ್ಲ. ಮನೆಯಲ್ಲಿಯ ಈ ತೊಂದರೆಯನ್ನು ಸಹಿಸುವದಕ್ಕಿಂತ ದೂರವಿರುವದೇ ನನಗೆ ಲೇಸೆನಿಸಿತು. ನಿನಗೊಂದು ಮಾತನ್ನು ಹೇಳಲಾ ? ವತ್ಸಲೆಯನ್ನು ನಾನು ಬಹಳ ಪ್ರೀತಿಸುತ್ತಿದ್ದೆ. ಅವಳು ಆಶ್ರಮ ಬಿಟ್ಟು ಮನೆಗೆ ಬಂದದ್ದು ಕೇಳಿ, ನಾನೂ ಮನೆಗೆ ಬಂದೆ. ನಾನು ಅವಳ ಹತ್ತರ ಹೋಗುತ್ತಿದ್ದೆ. ಕೆಲವು ದಿನಗಳಮೇಲೆ ನಾಗಾನಂದನು ಬಂದ. ಅವನು ಅವಳ ಸಲುವಾಗಿ ಮಹಾಪೂರದಲ್ಲಿ ಹಾರಿದ. ಹುಲಿಯನ್ನು ಕೊಂದ. ವತ್ಸಲೆಗೆ ಅವನ ಹುಚ್ಚುಹಿಡಿಯಿತು. ನನಗೆ ದುಃಖವಾಯಿತು. ವತ್ಸಲೆಯ ಕೃತಿಯೆಲ್ಲ ನನಗೆ ಸೇರಹತ್ತಿತು. ನನಗೆ ಅವಳ ಸೇವೆಯನ್ನು ಮಾಡಬೇಕೆನಿಸಿತು.

ನನಗೆ ವತ್ಸಲೆಯ ಹುಚ್ಚು ಹಿಡಿದಿತ್ತು. ನಾನು ಸ್ವತಃ ನೂತ ನೂಲಿನ ವಸ್ತ್ರವನ್ನು ಅವಳಿಗೆ ಕೊಟ್ಟೆ. ಅವಳು ಅದನ್ನು ಸ್ವೀಕರಿಸದಿರಲಿಲ್ಲ. ಅವಳು ನನಗೆ ಸಹಾನುಭೂತಿಯನ್ನು ತೋರಿಸಿದಳು. ಆದರೆ ಪ್ರೇಮವು ಬೇರೆಯಾಗಿರುತ್ತದೆ. ಅವಳ ಹೂವಿನ ಬುಟ್ಟಿಯನ್ನು ನಾನು ಪ್ರೇಮದಿಂದ ಕೈಯ್ಯಲ್ಲಿ ತಕ್ಕೊಳ್ಳುತ್ತಿದ್ದೆ. ಆದರೆ ಈಗ ಹೊಸ ಮಂತ್ರಜ್ಞಳಾದ ನೀನು ಬಂದಿರುವಿ. ಜೀವನದಲ್ಲಿಯ ಒಂದು ಅಂಕು ಮುಗಿಯಿತು. ಎರಡನೆಯ ಅಂಕು ಪ್ರಾರಂಭವಾಗಿದೆ. ಇಷ್ಟು ವರ್ಷಗಳಲ್ಲಿ ನನಗೆ ನಿನ್ನ ನೆನಪಾಗಲಿಲ್ಲ. ಆದರೆ ನನ್ನ ಜೀವನದಲ್ಲೆಲ್ಲಿಯೋ ನೀನು ಅಡಗಿದ್ದೆ. ಅಡಗಿದ್ದ ನೀನು ಎದುರಿಗೆ ಬಂದೊಡನೆ ನನ್ನವಳೆಂದು ಅನಿಸತೊಡಗಿದೆ. ನಾನರಿಯದಂತೆ ನನ್ನ ಹೃದಯದಲ್ಲಿ ಮೆಲ್ಲಮೆಲ್ಲನೆ ನೀನು ಬೆಳೆಯುತ್ತಲಿದ್ದೆ. ನೀನು ಇಲ್ಲಿ ಹೂಗಳನ್ನಿಡುತ್ತಿದ್ದೆ. ನನಗಾಗಿ ಹೂಗಳನ್ನಿಟ್ಟವರಾರು ? ಎಂದು ನನಗೆ ಅನಿಸುತ್ತಿತ್ತು. ನಾನು ಒಮ್ಮೆ ವತ್ಸಲೆಗೆಂದೆ “ನಾನು ನಿನ್ನ ಸಲುವಾಗಿ ಅಳುತ್ತೇನೆ, ಆದರೆ ನನ್ನ ಸಲುವಾಗಿ ಅಳುವವರು ಯಾರು ? ನೀನು ಅತ್ತ ಅಳುತ್ತಲಿದ್ದೆ. ನನ್ನನ್ನು ನೆನಿಸುತ್ತಲಿದ್ದೆ. ಆದರೆ ನಾನು ವತ್ಸಲೆಗಾಗಿ ತಪವನ್ನು ಮಾಡುತ್ತಿದ್ದೆ. ನೀನು ನನಗಾಗಿ ತಪವನ್ನು ಮಾಡುತ್ತಿದ್ದೆ. ಇಬ್ಬರ ತಪ ಶ್ಚರ್ಯವು ಫಲಿಸಿತು. ಜೀವನವನ್ನು ಪೂರ್ಣಗೊಳಿಸುವವಳೊಬ್ಬಳು ಸಿಕ್ಕಳು.

ಕೃಷ್ಣೆ: ಅನೇಕ ಸಾರೆ, ನಮ್ಮವರೆಂದೆನಿಸುವವರಲ್ಲಿ ನಮ್ಮರಿರುವದಿಲ್ಲ. ನಮ್ಮವರು ದೂರವಿರುತ್ತಾರೆ. ಅವರ ರೂಪವನ್ನೆ ನಾವು ಸಮೀಪದವರಲ್ಲಿ ನೋಡಲು ಬಯಸುತ್ತೇವೆ. ಮೋಸ ಹೋಗುತ್ತೇವೆ. ನಮ್ಮವರು ದೃಷ್ಟಿಗೆ ಬಿದ್ದೊಡನೆ, ನಮ್ಮ ಮೋಸವು ನಮಗೆ ತಿಳಿಯುತ್ತದೆ. ನಿನ್ನ ರೂಪವನ್ನೇ ನಾನು ವತ್ಸಲೆಯಲ್ಲಿ ನೋಡುತ್ತಿರಬೇಕು. ಅದು ಆಗ ನನಗೆ ತಿಳಿಯ ಲಿಲ್ಲ. ಮಹಾಪೂರದಲ್ಲಿ ಮುಳುಗುತ್ತಲಿರುವ ವತ್ಸಲೆಯು ಕರೆ ದಾಗ ನನಗೆ ಹೋಗುವ ಧೈರ್ಯವಾಗಲಿಲ್ಲ. ಆದರೆ ನೀನು ಕರೆದಲ್ಲಿ ನಾನು ಬರುವೆ. ಏಕೆಂದರೆ ನೀನು ಪೂರ್ಣವಾಗಿ ನನ್ನವಳೆನಿಸುವಿ. ನಿನ್ನೊಡನೆ ನಾನು ಬರದಿದ್ದರೆ ಸತ್ತೇನು. ನಿನ್ನೊಡನೆ ಅಡವಿಗೆ ಬಂದೆ. ಎಲ್ಲಿ ಬೇಕಾದಲ್ಲಿ ಬರುವೆ. ಈ ಬಟ್ಟು ಸುಟ್ಟಿತೆಂದು ಕುರುಕರು ಮಾಡುವ

ನಾನು ನಿನ್ನೊಡನೆ ಅಗ್ನಿಯಲ್ಲಿ ಪ್ರವೇಶಿಸುವೆ. ಆ ಅಗ್ನಿಯು ನನಗೆ ಶೀತಲವಾದೀತು. ನಿನ್ನನ್ನು ನೋಡಿದೊಡನೆಯೇ ಎಲ್ಲವೂ ಹೊಸದೆನಿಸಹತ್ತಿದೆ. ಮುದುಡಿದ ನನ್ನ ಮನಸ್ಸಿನಲ್ಲಿ ಅಪಾರ ಸ್ಫೂರ್ತಿಯುಂಟಾಗಿದೆ. ಸಾಯಬೇಕೆನ್ನುವ ನನಗೆ ಬದುಕ ಬೇಕೆನಿಸಿದೆ. ಜೀವನಕ್ಕೆ ಹೊಸ ಅರ್ಥ, ಹೊಸ ಬಣ್ಣ, ಸೌಂದರ್ಯ, ಸವಿಗಳು ಉಂಟಾಗಿವೆ. ವತ್ಸಲೆಯನ್ನು ನೋಡಿ ನನಗೆ ಆನಂದವಾಗುತ್ತಿತ್ತು. ಆದರೆ ಅದು ಕ್ಷಣಿಕವು. ನಿನ್ನನ್ನು ನೋಡಿ ಆಗುವ ಆನಂದವು, ವತ್ಸಲೆಯನ್ನು ನೋಡಿ ಆಗುವ ಆನಂದಕ್ಕಿಂತ ಸಾವಿರ ಪಟ್ಟು ಮೇಲು. ಕೃಷ್ಣೇ ಇಷ್ಟು ದಿವಸಗಳ ವರೆಗೆ ನನ್ನನ್ನು ಜೀವಂತವಿಟ್ಟು, ಸತ್ತವನಂತೇಕೆ ಮಾಡಿದೆ. ನೀನು ಬೇಗನೆ ಏಕೆ ಬರಲಿಲ್ಲ, ಹೇಳು." ಎಂದು ಅವಳನ್ನು ಗಟ್ಟಿಯಾಗಿ ಹಿಡಿದು ಅಂದನು.

"ಏನಿದು ? ನನ್ನನ್ನು ಹೊಡೆಯುವಿರೋ ?"

"ನೀನು ನನ್ನನ್ನು ಆಳಲು ಹಚ್ಚಿದ್ದೇಕೆ ? ಹೇಳು"

"ನಿಮಗೆ ನಿಜವಾದ ಹಸಿವೆಯು ಆಗಲೆಂದು. ನಾನು ಆಗಲೇ ಬಂದಿದ್ದರೆ, ನನ್ನನ್ನು ಓಡಿಸಿ ಬಿಡುತ್ತಿದ್ದಿರಿ. ನನ್ನ ಗುರುತನ್ನು ಸಹ ಹಿಡಿಯುತ್ತಿದ್ದಿಲ್ಲ ನಿಮ್ಮ ಜೀವನವು ಬರಿದಾದ ಸಮಯಕ್ಕೆ ನಾನು ಬಂದಿರುವೆ. ತಾನು ತುಂಬಿ ತುಳುಕಿದರೆ, ಎರಡನೆಯವರಿಗೆ ಕೊಡಲು ಬರುತ್ತದೆ. ನನ್ನ ಜೀವದಲ್ಲಿ, ಪ್ರೇಮಪ್ರವಾಹವು ಎರಡೂ ದಂಡೆಯನ್ನು ತುಂಬಿ ಹೊರಸೂಸುವ ಸಮಯಲ್ಲಿ ನಾನು ಬಂದೆ. ನಿಮ್ಮ ಜೀವನದಲ್ಲಿ ಅದು ಹಬ್ಬಿ, ನಿಮ್ಮ ಜೀವನವು ಹಸರು ಹಸರಾಗಿ ಕಂಡೀತೆಂದು ನನಗೆ ಅನಿಸಿದಾಗ ನಾನು ಬಂದೆ" ಎಂದಳು.

ನಾಲ್ಕು ದಿನಗಳುರುಳಿದವು. ಕೃಷ್ಣೇ ಹಾಗೂ ಕಾರ್ತೀಕರು ಹೊರಗೆ ಕುಳಿತಿದ್ದರು. ಇಷ್ಟರಲ್ಲಿಯೇ ಕೃಷ್ಣೆಯ ತಾಯಿಯು ಅಲ್ಲಿಗೆ ಬಂದಳು. ರಾತ್ರಿಯಲ್ಲಿ ತಾಯಿಯು ಏಕೆ ಬಂದಿದ್ದಾಳು? ಅವಳು ಗಾಬರಿಯಾಗಿದ್ದಳು. ಹುಚ್ಚಳಾಗಿದ್ದಳು 'ಕೃಷ್ಣೆ ನಮ್ಮೊಡನೆ ಹೊರಡು. ನೀವು ಹೊರಡಿರಿ. ಜನಮೇಜಯನ ಗುಪ್ತಚಾರರು ಬಂದಿದ್ದಾರೆ. ಗಾಳಿಗೆ ರಾಜದೂತರು ಬರುವರೆಂದು ತಿಳಿಯಿತು. ಎಲ್ಲ ನಾಗರು ಇಂದು ಇಲ್ಲಿಂದ ಹೋಗುತ್ತಾರೆ. ಇಲ್ಲಿರುವದು ಕಷ್ಟ. ಹೆಡಮುರಿಗೆ ಕಟ್ಟಿ ಒಯ್ಯುವರು. ಅಗ್ನಿಯಲ್ಲಿ ಒಗೆಯುವರು. ನಡೆ

ಯಿರಿ. ಎದ್ದೇಳಿರಿ. ವಿಚಾರಮಾಡುತ್ತ ಕೂಡುವ ವೇಳೆ ಇದಲ್ಲ. ಏಳು, ಮಗಳೇ. ' ನೀವೂ ಏಳಿರಿ. ' ಎಂದಳು ತಾಯಿ.

' ಅವ್ವಾ, ನಾನು ಹೇಗೆ ಬರಲಿ ? ಇವರಾದರೂ ಹೇಗೆ ಬರುವರು ? ವತ್ಸಲಾ ಮತ್ತು ನಾಗಾನಂದರಿಗೆ ವಿಶ್ವಾಸಘಾತವನ್ನು ಮಾಡುವದು ಹೇಗೆ ? ನೀನು ಹೋಗು. ಏನಾಗುವದಿದೆಯೋ ಅದು ಆದೀತು. ' ಎಂದಳು ಕೃಷ್ಣೆ

' ನಾನು ಅಜ್ಜಿ ಸುಶ್ರುತೆಯ ಅಪ್ಪಣೆಯನ್ನು ದೊರಕಿಸುತ್ತೇನೆ' ಎಂದಳು ತಾಯಿ

' ಅವರು ಹೋಗು ಎಂದು ಹೇಳಬಹುದು. ಅದು ಅವರ ದೊಡ್ಡಿಸ್ತನ. ಆದರೆ ನಾವು ಬಿಟ್ಟು ಹೋಗುವದು ಹೇಗೆ? ' ಎಂದಳು ಕೃಷ್ಣೆ

' ಮಗಳೇ ಹಟ ಮಾಡಬೇಡ. ಈಗ ಸಮಯವಿಲ್ಲ. '

' ಬೇಡವ್ವಾ. ಈಗ ನನ್ನ ಜೀವನ ಪ್ರವಾಹವು ಬೇರೆಯಾಗಿರಲಾರದು. ನಾನೀಗ ಒಬ್ಬಳೇಯಿಲ್ಲ. ' ಎಂದಳು

' ನಾಳಿಗೆ ರಾಜನ ಅಧಿಕಾರಿಗಳು ಬರುತ್ತಾರೆ. ಮತ್ತು ಅವರು ಕೋಪದಿಂದ ವಿಚಾರಿಸಿದರೆ' ಕಾರ್ತಿಕನಿಗೆ ' ಹೋಗು ' ಅನ್ನ ಬಹುದು. ಯಾಕಂದರೆ ಅವನು ಆರ್ಯ. ಮೇಲಾಗಿ ಅವನ ತಂದೆಯು ಪ್ರಯತ್ನ ಮಾಡಿ ಅವನನ್ನು ಉಳಿಸಿ ಕೊಳ್ಳಬಹುದು. ಆದರೆ ನಿನ್ನ ಗತಿಯೇನು ? ಯಮದೂತರ ಕೈಯಲ್ಲಿ ನೀನು ಬೀಳುವೆ. ನಿನಗೆ ನಿನ್ನ ಜೀವವು ಬೇಡಾಗಿದೆಯೇ? ಅವ್ವನಮೊರೆ ಕೇಳು ' ಎಂದಳು ತಾಯಿ .

' ಅವ್ವಾ, ನೀನು ಇವರನ್ನು ಅನಮಾನಗೊಳಿಸಬೇಡ. ನನ್ನನ್ನು ರಾಜ್ಯಾಧಿಕಾರಿಗಳ ಕೈಗೆ ಒಪ್ಪಿಸುವಷ್ಟು ಇವರು ಅಂಜುಬುರುಕರೇ ? ಇವರು ಅಷ್ಟು ಹೇಡಿಗಳೇ ? ಅವ್ವಾ ನೀನು ನಿಶ್ಚಿಂತೆಯಿಂದಿರು. ಉಳಿದರೆ ಇಬ್ಬರೂ ಉಳಿಯುವೆವು. ಇಲ್ಲವೇ ಅಳಿಯುವೆವು. ಅವ್ವಾ ನೀನು ಹೋಗು ' ಎಂದಳು.

" ತಾಯಿ, ನೀವು ಚಿಂತೆ ಮಾಡಬೇಡಿರಿ. ನಾನೀಗ ಮೊದಲಿನ ಅಂಜುಬುರುಕ ಕಾರ್ತೀಕನಲ್ಲ. ಕಾರ್ತಿಕ ಈಗ ಸಿಂಹದಂತಿದ್ದಾನೆ. ನಾನು

ನನ್ನ ಹೆಸರನ್ನು ಬೆಳಗಿಸುವೆ. ಕೈ ಹಿಡಿದವಳನ್ನು ಎಂದೂ ಬಿಡುವದಿಲ್ಲ. ” ಎಂದನು ಕಾರ್ತೀಕ

“ ಹಾಗಾದರೆ ನಾನು ಹೋಗಲಾ ” ಎಂದಳು ತಾಯಿ

“ ಹೋಗು ” ಎಂದು ಇಬ್ಬರೂ ಹೇಳಿದರು

ತಾಯಿಯು ಹೋದಳು. ಊರೊಳಗಿನ ನಾಗರೆಲ್ಲ ರಾತ್ರಿಯಲ್ಲಿಯೇ ಹೋದರು. ರಾತ್ರಿಯೆಲ್ಲ ಊರಲ್ಲಿ ನಿದ್ರೆಯಿಲ್ಲ. ಕಾರ್ತೀಕನ ತಂದೆ ತಾಯಿಗಳು ಅಸ್ವಸ್ಥರಾಗಿದ್ದರು. ನಾಳಿಗೆ ಏನಾಗುವದೋ ಎಂದು ಎಲ್ಲರೂ ಚಿಂತಿಸುತ್ತಿದ್ದರು.

ಮಾರನೆ ದಿನ ರಾಜದೂತರು ಬಂದರು. ಅವರ ಸಂಗಡ ಸೈನಿಕರೂ ಇದ್ದರು. ಮನೆಯಲ್ಲಿ ಯಾರೂ ಉಳಿಯಕೂಡದು ಯಾರಾದರು ಉಳಿದರೆ. ಅವರ ಶಿರಚ್ಛೇದ ಮಾಡಲಾಗುವದು. ಎಲ್ಲ ಸ್ತ್ರೀಪುರುಷರು ಸಭೆಗೆ ಬರಬೇಕೆಂದು ಡಂಗುರ ಸಾರಿಸಿದರು. ಸಭೆ ನೆರೆಯಿತು. ರಾಜದೂತರು ಉಚ್ಚಾಸದನದಲ್ಲಿ ಕುಳಿತಿದ್ದರು.

ಮುಖ್ಯ ರಾಜದೂತನು ಎದ್ದುನಿಂತು. ‘ ಸಭಿಕರೆ ನಿಮ್ಮೂರಲ್ಲಿಯ ’ ನಾಗರನ್ನೆಲ್ಲ ಬಂಧಿಸುವದಕ್ಕಾಗಿ ಸೈನಿಕರೊಡನೆ ನಾನಿಲ್ಲಿ ಬಂದಿದ್ದೇನೆ. ಜನಮೇಜಯನ ಆಜ್ಞೆಯು ನಿಮ್ಮೆಲ್ಲರಿಗೆ ಗೊತ್ತಿದೆ. ನಿನ್ನೆಯೇ ನಿಮ್ಮೂರಲ್ಲಿಯ ನಾಗರೆಲ್ಲರು ಹೊರಟು ಹೋಗಿದ್ದಾರೆ. ಅವರನ್ನು ಆರ್ಯರು ತಡೆಯಬೇಕಾಗಿತ್ತು. ಒಬ್ಬ ನಾಗನೂ ಹೊರಗೆ ಹೋಗಕೂಡದೆಂದು ರಾಜಾಜ್ಞೆಯಿದೆ. ಈ ದೃಷ್ಟಿಯಿಂದ ಈ ಊರೇ ಅಪರಾಧಿ. ಎಲ್ಲರನ್ನು ಬಂಧಿಸಿ ಒಯ್ಯಬೇಕು. ಆದರೆ ಈ ಮಟ್ಟಕ್ಕೆ ನಾನು ಹೋಗುವದಿಲ್ಲ. ಊರಲ್ಲಿ ಯಾರಾದರು ನಾಗರಿದ್ದರೆ, ಅವರು ತಾವಾಗಿಯೇ ಬಂದು ನಮ್ಮ ಸ್ವಾಧೀನರಾಗಬೇಕು. ಎಲ್ಲಿಯಾದರೂ ಅವರು ಇದ್ದರೆ, ಗೊತ್ತಿದ್ದವರು ಅವರನ್ನು ಹಿಡಿಯಲು ಸಹಾಯ ಮಾಡಬೇಕು. ವೇಳೆಯಿಲ್ಲ. ಕೆಲಸವು ಬೇಗನೆ ಮುಗಿಯಬೇಕಾಗಿದೆ’ ಎಂದನು. ಸಭೆಯು ಸ್ತಬ್ಧವಿದ್ದಿತು. ಯಾರೂ ಮಾತನಾಡಲಿಲ್ಲ.

ರಾಜದೂತನು ಸಂತಾಪಗೊಂಡನು. ‘ ಏನು ಇಲ್ಲಿ ಯಾರೂ ನಾಗರಿಲ್ಲವೇ ? ನಿರ್ನಾಗವಾಗಿದೆಯೋ ಈ ಊರು ? ’ ಎಂದನು. ಆದರೂ ಯಾರೂ ಮಾತನಾಡಲಿಲ್ಲ.

ರಾಜದೂತನಿಗೆ ಸಿಟ್ಟು ತಡೆಯದಾಯಿತು. ಆವನು ಈ ಊರಿಗೇ ಬೆಂಕಿ ಹಚ್ಚುವೆ. ಉರಿಯುವ ಪಂಜುಗಳನ್ನು ತನ್ನಿರಿ. ನಾಗರಿಗೆ ಆಶ್ರಯವನ್ನು ಕೊಡುವ ಈ ಊರನ್ನು ಭಸ್ಮ ಮಾಡೋಣ. ನಿಮ್ಮ ಊರು ಸುರಕ್ಷಿತವಾಗಿ ಇರಬೇಕಾಗಿದ್ದರೆ, ಇದ್ದ ನಾಗರನ್ನೆಲ್ಲ ನಮ್ಮ ವಶಕ್ಕೆ ಕೊಡಿರಿ. ಜನಮೇಜಯನು ಅವರ ಹೋಳಿಯನ್ನು ಮಾಡುವನು. ಆವನು ಸರ್ಪಪೂಜಕರ ಹವನವನ್ನು ಪ್ರಾರಂಭಿಸಿದ್ದಾನೆ. ನಿಮ್ಮ ಊರು ಹವನಪಾಗ ಬಾರದೆಂದಿದ್ದರೆ, ಆವನ ಹವನಕ್ಕಾಗಿ ಬಲಿಯನ್ನು ಕೊಡಿರಿ ’ ಎಂದನು.

ತೇಜಸ್ವಿಯಾದ ಕೃಷ್ಣೆಯು ರಾಜದೂತನ ಕಡೆಗೆ ಹೊರಟಳು. ಎಲ್ಲರೂ ಆಕೆಯ ಕಡೆಗೆನೋಡ ಹತ್ತಿದರು. ಆಕೆಯು ನಿರ್ಭಯಳಾಗಿದ್ದಳು. ಆಕೆಯು ರಾಜದೂತನ ಎದುರು ಕ್ಷಣ ಹೊತ್ತು ನಿಂತು, ಮಾತನಾಡಲು ಪ್ರಾರಂಭಿಸಿದಳು.

ರಾಜನ ಸಿಟ್ಟನ್ನು ಇಳಿಸುವದಕ್ಕಾಗಿ ಬಲಿ ಬೇಕಾಗಿದ್ದರೆ ನಾನು ಬರುವೆ. ನಾನು ನಾಗಕನ್ಯೆ ಇರುವೆ. ಆದರೆ ನಾನು ಆರ್ಯನನ್ನು ಮದುವೆಯಾಗಿರುವೆ. ಪತ್ನಿಯು ಪತಿಯಲ್ಲಿ ಕೂಡಿ ಹೋಗುತ್ತಾಳೆ. ನನಗೆ ನಿಜವಾಗಿಯೂ ಸ್ವತಂತ್ರ ಅಸ್ತಿತ್ವವಿಲ್ಲ. ಈಗ ನಾನು ಆರ್ಯಳೋ ನಾಗಳೋ? ರಾಜದೂತನಿಗೆ ಹೇಳಲು ಬರುವದೇ ? ಪತಿಯು ಪತ್ನಿಯುವನಾಗುವನು. ಪತ್ನಿಯು ಪತಿಯುವಳಾಗುವಳು. ಈ ದೇಶದಲ್ಲಿ ಈಗ ನಿಜವಾದ ಆರ್ಯರಾರು ? ನಾಗರಾರು ? ನೂರಾರು ನಾಗಕನ್ಯೆಯರು ಆರ್ಯರನ್ನು ಲಗ್ನವಾಗಿದ್ದಾರೆ. ನೂರಾರು ಆರ್ಯಕನ್ಯೆಯರು ನಾಗರನ್ನು ಮದುವೆಯಾಗಿದ್ದಾರೆ. ಈ ಊರಲ್ಲಿಯ ಆರ್ಯಕನ್ಯೆಯಾದ ವತ್ಸಲೆಯು ನಾಗನನ್ನು ಮದುವೆಯಾಗಿದ್ದಾಳೆ. ನಾನು ನಾಗಕನ್ಯೆ, ಆರ್ಯನನ್ನು ಮದುವೆಯಾಗಿದ್ದೇನೆ. ನಾಗ ಹಾಗೂ ಆರ್ಯರಲ್ಲಿ ಏನು ಭೇದವಿದೆ ? ಆರ್ಯಮಾತೆಯರು ಮಕ್ಕಳನ್ನು ಬೆಳೆಸುವರು. ನಾಗರು ಹೊರಗೆ ಒಗೆಯುವರೋ ?

ಆರ್ಯರು ದೊಡ್ಡವರು, ನಾಗರು ಕೀಳರು, ಎಂದು ಎಲ್ಲಿ ಇದೆ? ಆರ್ಯ ಹಾಗು ನಾಗರಿಬ್ಬರು ಮಾನವರೆ.

ಇಡಿ ಊರುಸುಡುವದಕ್ಕಿಂತ ನಾನೊಬ್ಬಳೇ ಸಾಯುವೆ. ಸುಡಲಿ, ಜನ ಮೇಜಯನ ಅಗ್ನಿಕುಂಡವು ಆ ಅಗ್ನಿಕುಂಡವು ಸರ್ವ ಆರ್ಯರನ್ನು ಒಂದು ದಿನ ಭಸ್ಮ ಮಾಡುವದು. ಈ ಅಗ್ನಿಕುಂಡವನ್ನು ಆರ್ಯರು ಆರಿಸಬೇಕು. ನಾಗರ ಹೋಳಿಯನ್ನು ಮಾಡಿದರೆ, ನಿಮ್ಮ ಹೋಳಿಯೂ ಆಗುವದೆಂಬದನ್ನು ಲಕ್ಷ್ಯದಲ್ಲಿಡಿರಿ. ಯಾವುದನ್ನು ಬಿತ್ತುವರೋ ಅದನ್ನೇ ಬೆಳೆಯಬೇಕು. ನಾಗರು ನಿರ್ಭಯರಿರುತ್ತಾರೆ. ನನಗೆ ಹೊಡೆಯುವವರ ಭೀತಿಯಿಲ್ಲ. ಎಲ್ಲಿದೆ ನಿಮ್ಮ ಆ ಪಂಜು. ತನ್ನಿರಿ ಇತ್ತ. ಅದರಲ್ಲಿ ನನ್ನ ಕೈಯ್ಯನ್ನಿಡುವೆ. ನೋಡಿರಿ, ಹೂವಿನಂತಿರುವ ಈ ಕೈಗಳು ಅಗ್ನಿಯನ್ನು ಹಿಡಿಯಲು ಸಮರ್ಥವಿವೆ. ಬೆಂಕಿಯನ್ನು ಹೂವೆಂದು ತಿಳಿಯುವೆ. ಯಾರನ್ನು ಬೆದರಿಸುವಿರಿ ಮಂಗಗಳೇ? ನಿಮಗೆ ವಿವೇಕ ಹಾಗು ಮನುಷ್ಯತ್ವವಿಲ್ಲವೇ? ನೋಡಿರಿ, ನೂರಾರು ಜನ ಅಕ್ಕ ತಂಗಿಯವರು ಇಲ್ಲಿ ಕುಳಿತಿದ್ದಾರೆ. ಇವರ ಶಾಪವು ನಿಮ್ಮನ್ನು ಸುಟ್ಟು ಬಿಟ್ಟೀತು. ನೀವು ನಾಗರನ್ನು ಸುಡುವದಿಲ್ಲ. ನೀವು ನಿಮ್ಮ ಭಾವೀ ಕಲ್ಯಾಣವನ್ನು ಸುಡುತ್ತಿರುವಿರಿ. ಹಿಡಿಯಿರಿ ನನ್ನನ್ನು. ಬಂಧಿಸಿರಿ. ಮೋರೆಯನ್ನು ಕೆಳಗೆ ಹಾಕಬೇಡಿರಿ. ಆ ಹೋಳಿಯಲ್ಲಿ ನನ್ನನ್ನು ಒಯ್ದು ಒಗೆಯಿರಿ? ಎಂದಳು.

ಸಭೆಯು ಪ್ರಕ್ಷುಬ್ಧವಾಯಿತು. ಸುಶ್ರುತೆಯು ಅಲ್ಲಿಗೆ ಬಂದಳು. ಆ ಮುದುಕಿಯು ಎದ್ದುನಿಂತು, "ನನ್ನನ್ನು ಒಯ್ಯಿರಿ. ನನ್ನ ಹುಡುಗನು ಎಷ್ಟೋ ವರ್ಷ ಮುಂಚೆ ನಾಗರ ವಸತಿಗೆ ಆರ್ಯರು ಬೆಂಕಿ ಹಚ್ಚಿದಾಗ, ಬೆಂಕಿಯಲ್ಲಿ ಹೊಕ್ಕು ನಾಗರನ್ನುಳಿಸಿರುವನು. ಅವನ ತಾಯಿಯು ನಾನು. ನನಗೆ ಬೆಂಕಿಯಲ್ಲಿ ಹೋಗಗೊಡಿರಿ. ನಾಗರು ಬೆಂಕಿಯಲ್ಲಿ ಹೋಗುತ್ತಿದ್ದಾರೆ. ಆರ್ಯರು ದೂರ ಹೇಗೆ ಉಳಿದಾರು? ನಾಗಮಾತೆಯರು ಸುಡುತ್ತಿರುವಾಗ, ಆರ್ಯಮಾತೆಯರು ಸುಮ್ಮನೆ ಉಳಿಯುವರೇ? ನಾಗಪತ್ನಿಯರು ಪತಿಗಳೊಡನೆ ಎಳೆಯಲ್ಪಡುವಾಗ ಆರ್ಯಪತ್ನಿಯರು ಪತಿಯ ಹತ್ತರ ಇರುವದು ಹೇಗೆ? ಸ್ತ್ರೀಯರು ಸ್ತ್ರೀಧರ್ಮವನ್ನರಿಯಬೇಕು.

ಮಾತೃಗಳು ಮಾತೃಧರ್ಮವನ್ನರಿಯಬೇಕು. ನಿನ್ನೆ ಮದುವೆಯಾದ ಈ ಕೃಷ್ಣೆಯು ಹೊರಟಳು. ಅಗ್ನಿಯನ್ನು ಪ್ರವೇಶಿಸಲು ಕೋಮಲೆಯಾದ ಈ ಬಾಲೆಯು ಹೊರಟಿದ್ದಾಳೆ. ನಗುತ್ತ ಬೆಂಕಿಯನ್ನು ಹಿಡಿಯುತ್ತಿದ್ದಾಳೆ. ಯಾರಿಗೆ ಇದನ್ನು ನೋಡಿ ಸಹಸವಾಗುವದು? ಇಲ್ಲಿ ಯಾರಿಗಾದರೂ ನೋಡಲು ಆಗುತ್ತಿದೆಯೇ? ನಡೆಯಿರಿ ಎಲ್ಲರೂ ಹೋಗೋಣ. ಜನ ಮೇಜಯನೆದುರಿಗೆ ನಿಲ್ಲೋಣ. ಎಲ್ಲರನ್ನೂ ಸುಡು ಎನ್ನೋಣ. ಎಲ್ಲ ಅಕ್ಕತಂಗಿಯರನ್ನು ಸುಟ್ಟು, ನಿನ್ನ ಸಿಟ್ಟನ್ನು ಶಾಂತ ಮಾಡಿಕೊ, ಎಂದು ಹೇಳೋಣ. ಏಳಿರಿ. ಬನ್ನಿರಿ ಇತ್ತ ಕಡೆಗೆ. ರಾಜದೂತರೆ ನಮ್ಮನ್ನು ಹಿಡಿಯಿರಿ. ಒಯ್ಯಿರಿ ನನ್ನ ದೇಹವನ್ನು ಮೊದಲು ಯಜ್ಞಕುಂಡದಲ್ಲಿ ಒಗೆಯಿರಿ." ಎಂದಳು

ಕಾರ್ತಿಕನು ಒಮ್ಮೆಲೆ ಧಾವಿಸಿದನು. ಅವನೆಂದನು ಊರಲ್ಲಿಯ ಹೆಣ್ಣು ಮಕ್ಕಳೆಲ್ಲ ಹೊರಟಿದ್ದಾರೆ. ಗಂಡಸರು ಏಕೆ ಹಿಂದೆ? ನಡೆಯಿರಿ ನಾವೂ ಹೋಗೋಣ. ಯಜ್ಞವನ್ನು ಪೂರ್ಣಗೊಳಿಸೋಣ. ಸ್ತ್ರೀಯರಿಗಿಂತಲೂ ಮೊದಲು ಪುರುಷರು ಹೋಗೋಣ. ಸ್ತ್ರೀಯರು ಬೆಂಕಿಗೆ ಅಂಜುವದಿಲ್ಲ. ಅವರು ನಗುತ್ತ ಸತಿಹೋಗುತ್ತಾರೆ. ಈಗ ಪುರುಷರು ತಮ್ಮ ತೇಜವನ್ನು ತೋರಿಸಬೇಕಾಗಿದೆ. ಏಳಲಿ ಊರಿಗೆ ಊರು."

ಇಡಿ ಸಭೆಯೇ ಎದ್ದಿತು. ರಾಜದೂತರು ಗಾಬರಿಗೊಂಡರು. ಅವರ ಸುತ್ತುಮುತ್ತಲು ಜನರಾದರು. ಇಷ್ಟರಲ್ಲಿ ಕೊಳಲಿನ ಮಂಜುಳವಾದ ಧ್ವನಿ ಕೇಳಿತು. ವತ್ಸಲೆ ಹಾಗೂ ನಾಗಾನಂದರು ಬಂದರು. ಪ್ರೇಮ ಧರ್ಮವನ್ನು ತೆಗೆದುಕೊಂಡು ಬಂದರು. ಜೀವಂತವಿರುವವರಿಗೆ ನಿಜವಾಗಿಯೂ ಜೀವಂತ ಮಾಡಲು ಬಂದರು. ಇಡೀ ಸಭೆಯೇ ಸ್ತಬ್ಧವಾಯಿತು. ವತ್ಸಲೆಯು ಹಾಡುತ್ತಿದ್ದಳು. ನಾಗಾನಂದನು ಕೊಳಲೂದುತ್ತಿದ್ದನು. ಅಪೂರ್ವವಾದ ಗಾಯನ! ಅಪೂರ್ವವಾದ ಕೊಳಲು!

ಆಕಾಶದಿಂದ ಜೀವನವನ್ನೀಯುವ ಮಳೆಯು ಬೀಳುತ್ತದೆ. ತೃಪ್ತಿಯನ್ನುಂಟುಮಾಡುವ ಪ್ರಕಾಶವು ದೊರೆಯುತ್ತದೆ. ಮಾನವನೇ, ನಿನ್ನ

ಹೃದಯಾಕಾಶದಿಂದ ಜೀವನ ಸಂಹಾರಕವಾದ ದ್ವೇಷವನ್ನು ಏಕೆ ಕೊಡುವೆ. ಜೀವನವನ್ನೇ ನಷ್ಟಗೊಳಿಸುವ ಕ್ರೋಧವನ್ನೇಕೆ ನಿರ್ಮಿಸುವೆ.

ಎಲಾ, ಅಂಥ ಇಂಥ ಹೊಲಸು ವಸ್ತುಗಳನ್ನು ಹೊಲಕ್ಕೆ ಹಾಕಿ, ಸುಂದರವಾದ ಧಾನ್ಯವನ್ನು ದೊರಕಿಸುವಿರಿ. ಮನುಷ್ಯನು ಅದಕ್ಕಿಂತ ಕೆಟ್ಟ ಹನೇ ? ವಿಷದಲ್ಲಿ ಅಮೃತವನ್ನು ದೊರಕಿಸುವ, ಮಣ್ಣನ್ನು ಹೊನ್ನಾಗಿ ಮಾಡುವ, ಸಗಣಿಯ ಗೊಬ್ಬರದಿಂದ ಧಾನ್ಯವನ್ನು ನಿರ್ಮಿಸುವ, ಈ ಮಾನವನಿಗೆ, ಮಾನವರಲ್ಲಿ ಮಂಗಲ್ಯವು ಏಕೆ ಕಾಣಬಾರದು ?

ಬಂಧುಗಳೇ ಏಳಿರಿ, ತಾಯಂದಿರೇ ಏಳಿರಿ. ಎಲ್ಲಕಡೆಗೂ ಮಾಂಗಲ್ಯದ ಅನುಭವವನ್ನು ಪಡೆಯಿರಿ. ಎಲ್ಲವೂ ಸುಂದರವಿದೆ. ಶಿವವಿದೆ. ಸೂರ್ಯನು ತನ್ನ ಕಿರಣಗಳನ್ನು ಎಲ್ಲಡೆಗೆ ಹಬ್ಬಿಸುತ್ತಾನೆ. ಹಾಗು ಪ್ರಕಾಶವನ್ನು ಕೊಡುತ್ತಾನೆ. ನಾವೂ ಪ್ರೇಮದ ಕಿರಣಗಳನ್ನು ಸರ್ವತ್ರ ಹಬ್ಬಿಸೋಣ. ಎಲ್ಲವನ್ನು ಸುಂದರವಾಗಿ ಮಾಡೋಣ.

ಬೆಂಕಿಯು ಹೊತ್ತಿದೆ. ನಡೆಯಿರಿ ಆರಿಸಲಿಕ್ಕೆ. ನಮ್ಮ ಜೀವವನ್ನು ತೆಗೆದುಕೊಂಡು ನಡೆಯಿರಿ. ಮನುಷ್ಯರಿದ್ದವರೆಲ್ಲ ಬರುವರು. ಪಶುಗಳೆಲ್ಲ ಓಡಿ ಹೋಗುವವು. ಯಾರು ಬರುವಿರಿ ಹೇಳಿರಿ. ಮಾಂಗಲ್ಯವು ಕರೆಯುತ್ತಲಿದೆ. ಮನುಷ್ಯತ್ವವು ಕರೆಯುತ್ತಲಿದೆ. ನವಧರ್ಮವು ಕರೆಯುತ್ತಲಿದೆ. ಯಾರು ಬರುವಿರಿ? ಹೇಳಿರಿ.

ದ್ವೇಷದ ತೆರೆಯು ಬಂದಿದೆ. ಪ್ರೇಮಸಿಂಧುವನ್ನು ತೆಗೆದುಕೊಂಡು ಹೋಗಿರಿ. ಸಂಕುಚಿತ ವೃತ್ತಿಯು ಬರುತ್ತಿದೆ. ವಿಶಾಲತೆಯನ್ನು ತೆಗೆದುಕೊಂಡು ನಡೆಯಿರಿ. ಕ್ಷುದ್ರತೆಯು ಮುತ್ತಲು ಯತ್ನಿಸುತ್ತಿದೆ. ಉದಾರತೆಯು ಹೊರಬರಲಿ. ಕತ್ತಲೆಯು ಕವಿಯುತ್ತಲಿದೆ. ಬೆಳಕನ್ನು ತನ್ನಿರಿ. ದುರ್ಗಂಧವು ಬರುತ್ತಲಿದೆ. ಸುಗಂಧವನ್ನು ಪಸರಿಸಿರಿ. ಮರಣದ ಬೇಗೆಯು ಉರಿಯುತ್ತಲಿದೆ. ಜೀವನ ವೃಷ್ಟಿಯನ್ನು ಸುರಿಸಿರಿ. ಬಂಧನವು ಸುತ್ತುವರಿದಿದೆ. ಕಡಿಯಿರಿ ಆ ಬಂಧನವನ್ನು. ಮುಕ್ತರನ್ನಾಗಿ ಮಾಡಿರಿ. ಅಂದರೆ ಮುಕ್ತರಾಗುವಿರಿ. ಯಾರಾದರೂ ಮುಮುಕ್ಷುಗಳಿರುವರೇ ? ಇದ್ದವರೆಲ್ಲ ಏಳಿರಿ.

ಮೋಕ್ಷದ ನವಪ್ರಭಾತವು ಬರಲಿದೆ. ಜೀವನ ದೀಪವನ್ನು ಹೊತ್ತಿಸಿ ಸ್ವಾಗತಕ್ಕೆ ಹೋಗೋಣ. ನಡೆಯಿರಿ ಪರೀಕ್ಷೆಯನ್ನುಕೊಡಲು. ಬಂಗಾರ ವನ್ನು ಅಗ್ನಿಯಲ್ಲಿಯೇ ಪರೀಕ್ಷಿಸಬೇಕು. ನಮ್ಮ ಜೀವನವು ಬಂಗಾರವಿದೆ. ನಡೆಯಿರಿ. ಅದನ್ನು ಸಿದ್ಧಮಾಡಲಿಕ್ಕೆ. ಎಲ್ಲ ಮಾನವರು ನಡೆಯಿರಿ. ಸರ್ವ ತಂದೆತಾಯಿಗಳು ನಡೆಯಿರಿ. ಪತಿಪತ್ನಿಯರೆಲ್ಲ ನಡೆಯಿರಿ. ಅಕ್ಕತಂಗಿಯರೆಲ್ಲ ನಡೆಯಿರಿ. ಕಿರಿ ಹಿರಿಯರೆಲ್ಲ ನಡೆಯಿರಿ. ಆರ್ಯ, ನಾಗರೆಲ್ಲ ನಡೆಯಿರೀ ಇದು ಮನುಷ್ಯತ್ವದ ಪರೀಕ್ಷೆಯಿದೆ.

ವತ್ಸಲೆಯು ಹಾಡುತ್ತಿದ್ದಳು. ನಾಗಾನಂದನು ಕೊಳಲು ಊದ ತ್ತಿದ್ದನು. ಕೃಷ್ಣೆಯು ಬಂದು ಕುಣಿಯ ಹತ್ತಿದಳು. ಕಾರ್ತೀಕನೂ ಬಂದನು. ಎಲ್ಲರೂ ಬಂದರು, ಎಲ್ಲರೂ ಕುಣಿಯಹತ್ತಿದರು. ಎಲ್ಲರೂ ಹಾಡಹತ್ತಿದರು. ಆ ರಾಜಪುರುಷರೆಲ್ಲಿ ? ಆ ಸೈನಿಕರೆಲ್ಲಿ ? ಆ ಪಂಜು ಎಲ್ಲಿ ? ಬೆಂಕಿಯು ಆರಿತು. ಪ್ರೇಮವು ಪಸರಿಸಿತು.

ಹಾಡು "ನಿಂತಿತು. ಬಾರಿಸುವದೂ ಬಂದಾಯಿತು. ವತ್ಸಲೆಯು ಮಾತನಾಡಹತ್ತಿದಳು. ಈ ಊರು ನನ್ನದು. ಆಸ್ತಿಕನ ಸಂದೇಶವನ್ನು ತೆಗೆದುಕೊಂಡು ನಾನು ನನ್ನ ಊರಿಗೆ ಬಂದಿದ್ದೇನೆ. ಭಗವಾನ್ ಆಸ್ತಿಕರು ಸ್ತ್ರೀಯರಿಗೆ ಒಂದು ಪವಿತ್ರವಾದ ಕರ್ತವ್ಯವನ್ನು ಉಪದೇಶಿಸಿದ್ದಾರೆ. ಸ್ತ್ರೀ ಯರೇ ಹೊಸ ಮಕ್ಕಳನ್ನು ಜಗತ್ತಿಗೆ ಕೊಡುತ್ತಾರೆ. ಈ ದುಃಖಮಯವಾದ ಸಂಸಾರದಲ್ಲಿ ಅವರೇ ಹೊಸ ಸೃಷ್ಟಿಯನ್ನು ತರುತ್ತಾರೆ. ಭಗವಾನ್ ಆಸ್ತಿ ಕರು ನಮ್ಮಿಂದ ಹೊಸ ದಿವ್ಯತೆಯನ್ನಪೇಕ್ಷಿಸುತ್ತಾರೆ. ಮಾಂಡಲೀಕ ರಾಜರು ಸೈನ್ಯಸಮೇತರಾಗಿ ಜನಮೇಜಯನ ಕಡೆಗೆ ಹೊರಟಿದ್ದಾರೆ. ಆ ಸೈನ್ಯದೆದು ರಿಗೆ ನಾವೆಲ್ಲ ಹೆಣ್ಣುಮಕ್ಕಳು ಹೋಗೋಣ. ಅವರನ್ನು ಪರಾವೃತ್ತಗೊಳಿ ಸೋಣ. ಈ ಯುದ್ಧದಿಂದ ಹೆಚ್ಚು ದುಃಖವಾಗುವದು ಹೆಂಗಸರಿಗೇ. ನಮ್ಮ ಪತಿಗಳು, ಅಣ್ಣತಮ್ಮಂದಿರು, ಎಲ್ಲರೂ ಸಾಯುವರು. ಅಳುವದು ಮಾತ್ರ ನಮ್ಮ ಪಾಲಿಗೆ ಉಳಿಯುವದು. ನಾವು ಇಂಥಹ ಸಂಹಾರವನ್ನು ಸುಮ್ಮನೆ ಏಕೆ ಆಗಗೊಡಬೇಕು ? ಈ ಜನರಿಗೆ ಧ್ಯೇಯವಿಲ್ಲ ಧರ್ಮವಿಲ್ಲ. ಇದೆಲ್ಲವೂ ದ್ವೇಷದ ಪ್ರಚಾರವಿದೆ. ಪುರುಷರು ಹಾದಿಯನ್ನು ಬಿಟ್ಟರೆ, ಸ್ತ್ರೀ .

ಯರು ಸತ್ಪಥವನ್ನು ತೋರಿಸಬೇಕು. ನಾವೂ ಕಠೋರರಾಗೋಣ. ಶುಷ್ಕ ರಾದರೆ ಎಲ್ಲವೂ ಮುಗಿಯಿತು. ನಮ್ಮ ಸ್ತ್ರೀತ್ವವನ್ನು ಮುಂದೆ ಮಾಡಿ ಕೊಂಡು ಸಾಗೋಣ. ನಾವು ಹೊರಡೋಣ. ನಾವು ಪ್ರೇಮದಿಂದ ದ್ವೇಷ ವನ್ನು ಗೆದೆಯೋಣ. ನನ್ನ ಸಂಗಡ ಬರುವಿರಾ? ದಾರಿಯಲ್ಲಿ ನಮಗೆ ಅಸಂಖ್ಯಾತ ಸ್ತ್ರೀಯರು ಭೆಟ್ಟಿಯಾಗುವರು ಸ್ತ್ರೀರಾಜ್ಯದಿಂದ ನೂರಾರು ಸ್ತ್ರೀಯರು ಶಾಂತಿಪಥಕಗಳನ್ನು ತೆಗೆದುಕೊಂಡು ಬರುವರು. ಅನೇಕ ಪ್ರವಾಹಗಳು ನಡುವೆ ಬಂದು ಕೂಡುವವು. ಸ್ತ್ರೀಯರ ಶಾಂತಿಗಂಗೆಯು ದ್ವೇಷದ ಬೇಗೆಯನ್ನು ಆರಿಸಲು ಹೊರಡುವಳು. ಭಗೀರಥನು ಮಾನವರ ಉದ್ಧಾರಕ್ಕಾಗಿ ಗಂಗೆಯನ್ನು ತಂದನು. ಆದರೆ ಮಾನವರ ನಿಜವಾದ ಉದ್ಧಾರವು, ಯಾವ ಗಂಗೆಯಿಂದಾಗುವದು? ಸ್ತ್ರೀಯರ ಹೃದಯದಲ್ಲಿಯ ಗಂಗೆಯು ಹೊರಗೆ ಬರಬೇಕು. ಅದು ಸಂಘಟಿತವಾಗಿ 'ಧೋ' ಎಂನು ಧ್ವನಿ ಗೈಯುತ್ತ ಹೊರ ಹೊರಡಬೇಕು. ಆ ಸಮಯದಲ್ಲಿಯೇ ನಿಜವಾದ ಉದ್ಧಾರ ವಾಗುವದು"

ಕಾರ್ತೀಕನ ತಾಯಿಯು "ವತ್ಸಲೆ ನಾನು ನಿನ್ನೊಡನೆ ಬರುವೆ" ಎಂದಳು.

ಕೃಷ್ಣೀ ಹಾಗೂ ಸುಶ್ರುತೆ ನಾವೂ ಬರುವೆವೆಂದರು. ಅನೇಕ ಸ್ತ್ರೀ ಯರು ಹೊರಟರು ಅನೇಕ ಕನ್ಯೆಯರು ಹೊರಟರು. ಸ್ತ್ರೀಯರ ಶಾಂತಿ ಪಥಕವು ಸಿದ್ಧವಾಯಿತು.

"ಗಂಡಸರಾದ ನಾವು ಇಲ್ಲಿದ್ದು ಮಾಡುವದೇನು? ನಾವೂ ಪ್ರೇಮ ಧರ್ಮದ ಹಾಡನ್ನು ಹಾಡುತ್ತ ಹೋಗುವಾ. ಆರ್ಯ ಹಾಗೂ ನಾಗರ ಸಹಕಾರದ ಹಾಡನ್ನು ಹಾಡುವಾ. ಭಾರತದ ಭವಿತವ್ಯದ ಹಾಡನ್ನು ಹಾಡುತ್ತ ಹೊರಡುವಾ" ಎಂದನು ನಾಗಾನಂದ.

"ನಾನು ಸಿದ್ಧನಿರುವೆ. ಅಪೂರ್ವ ದಿವಸ! ಅಪೂರ್ವ ಪ್ರಯೋಗ! ಅಪೂರ್ವ ಸಂಧಿ! ನಡೆಯಿರಿ ಎಲ್ಲರೂ ಹೊರಡೋಣ." ಎಂದನು ಕಾರ್ತೀಕ

ಷುಖ್ಯ ರಾಜದೂತನು, "ನಾವೂ ನಿಮ್ಮೊಡನೆ ಬರುತ್ತಿದ್ದೆವು. ಆದರೆ ಬೇಡ. ನಾವು ಎರಡನೆಯ ರಾಜ್ಯಕ್ಕೆ ಹೋಗುತ್ತೇವೆ. ಎಲ್ಲವೂ ಶಾಂತ

ವಾದ ನಂತರ ತಿರುಗಿ ಬರುವೆವು. ನಿಮ್ಮ ಊರು ನಮಗೆ ಹೊಸ ಜೀವ ನವನ್ನು ಕೊಟ್ಟಿತು. ಧನ್ಯವಿದೆ ಈ ಊರು. ಭಗವಾನ್ ಆಸ್ತಿಕರ ಇಚ್ಛೆ ಯೂ ಸಫಲವಾಗುವದು. ಆಸ್ತಿಕರ ಆಶ್ರಮದಿಂದ ಹೊರಬಿದ್ದ ತರುಣರು ಸುಮ್ಮನೇ ಕುಳಿತಿಲ್ಲ. ಎಲ್ಲೆಡೆಯಲ್ಲಿ ಅವರು ನವಧರ್ಮವನ್ನು ಹಬ್ಬಿರು ತ್ತಿದ್ದಾರೆ. ಈ ಎಲ್ಲ ವೇದನೆಗಳಿಂದ ಮಂಗಳವೇ ಹೊರಬೀಳುವದು." ಎಂದನು.

ರಾಜದೂತರೂ ಸೈನಿಕರೂ ಹೊರಟು ಹೋದರು. ಸುಶ್ರುತೆ, ವತ್ಸಲಾ ಹಾಗು ನಾಗಾನಂದರು ಮನೆಗೆ ಬಂದರು. ಕಾರ್ತೀಕ ಹಾಗೂ ಕೃಷ್ಣೆಯರು ಬಂದರು.

ಕಾರ್ತೀಕ "ವತ್ಸಲೇ, ಇವಳೇ ನನ್ನ ಕೃಷ್ಣಿ"

ವತ್ಸಲೆ "ಎಷ್ಟು ದೊಡ್ಡವಳಾಗಿರುವೆ. ಇಷ್ಟು ದಿನ ನೀನು ಏಕೆ ಅಡಗಿದ್ದೆ ?"

ಕೃಷ್ಣಿ "ವೇಳೆಗೆ ಬರುವದಕ್ಕಾಗಿ"

ಸುಶ್ರುತೆ "ಕೃಷ್ಣೇ ನಿನ್ನ ಕೈನೋಡೋಣ. ಗುಳ್ಳೆಗಳೆಷ್ಟು ಎದ್ದಿವೆ ? ನಿಜವಾದ ಶೂರಳು ನೀನು"

ನಾಗಾನಂದ "ಎಂಥಹ ಗುಳ್ಳೇ ?"

ಕಾರ್ತೀಕ "ರಾಜದೂತರು ಪಂಜವನ್ನು ಹಿಡಿದು ನಿಮ್ಮನ್ನು ಸುಡುವೆವು ಎಂದು ಬೆದರಿಸಿದರು. ಕೃಷ್ಣೆಯು ಅದನ್ನು ಕಸಿದುಕೊಂಡು ಗಟ್ಟಿಯಾಗಿ ಹಿಡಿದು, ಯಾರಿಗೆ ಬೆದರಿಸುವಿರಿ? ಸತಿ ಹೋಗುವ ಸ್ತ್ರೀ ಯರು ಬೆಂಕಿಗೆ ಅಂಜುವದಿಲ್ಲ. ಬೆಂಕಿಯನ್ನು ಹೂವಿನಂತೆ ಉಡಿಯಲ್ಲಿ ಧರಿಸುವರು."

ವತ್ಸಲಾ ಕೃಷ್ಣೆಯನ್ನು ಅಪ್ಪಿಕೊಂಡು "ನಿಜವಾದ ನಾಗಕನ್ಯೆ. ನಾಗಪೂಜೆಯಿಂದ ಇಂಥ ಧೈರ್ಯವು ಬರುತ್ತಿದ್ದರೆ, ಯಾರು ತ್ಯಾಜ್ಯವೆಂದಾರು"

ಕಾರ್ತೀಕ "ಇಂದು ಎಲ್ಲವೂ ಸರಿಯಾಯಿತು. ಊರಲ್ಲಿಯ ಒಡಕು ಅಳಿಯಿತು. ಕೃಷ್ಣಿಯು ಸ್ವತಃ ಕೈಯ್ಯಲ್ಲಿ ಅಗ್ನಿಯನ್ನು ಹಿಡಿದಳು. ಮತ್ತು

ಊರಲ್ಲಿಯ ದ್ವೇಷದ ಮೇಲೆ ಅಗ್ನಿಯನ್ನಿಟ್ಟಳು. ನನ್ನ ತಾಯಿಯು ನಿಮ್ಮೊಡನೆ ಬರಲು ಸಿದ್ಧಳಾದಳು. ನಮ್ಮ ಅಪ್ಪನೂ ನಮ್ಮೊಡನೆ ಬರುವ"

ಕೃಷ್ಣಿ " ನಾವು ನಮ್ಮ ಮನೆಗೆ ಹೋಗುವಾ. ಹಿರಿಯರ ಆಶೀರ್ವಾದವನ್ನು ತೆಗೆದು ಕೊಳ್ಳುವಾ "

ಸುಶ್ರುತಾ " ಇದೇನು ಎರಡನೆಯವರ ಮನೆಯಲ್ಲ "

ಕೃಷ್ಣಿ " ನಾನು ಹಾಗೆ ಅನ್ನಲಿಲ್ಲ. ಅಜ್ಜೀ ನಾನು ನಿನ್ನವಳು. ನಾವು ನಿಮ್ಮವರೇ ಇರುತ್ತೇವೆ "

ಕಾರ್ತೀಕ ಹಾಗು ಕೃಷ್ಣಿಯರು ಕಾರ್ತೀಕನ ಮನೆಗೆ ಹೋದರು. ಕಾರ್ತೀಕನು ತನ್ನ ತಾಯಿಯನ್ನು ಕುರಿತು. " ಅವ್ವಾ ಇವಳು ನಿನ್ನ ಸೊಸೆ. ನಿನ್ನ ಮನ್ಸಿಗೆ ಬರುವದೋ ಇಲ್ಲೋ ಹೇಳು. " ಎಂದನು ತಾಯಿಯು ಆಕೆಯನ್ನು ಎದೆಗೆ ಅವಚಿಕೊಂಡು, " ನೀನು ಧನ್ಯಳಾಗಿರುವೆ. " ಎಂದಳು

ಆ ಮೇಲೆ ಇಬ್ಬರೂ ತಂದೆಗೆ ನಮಸ್ಕರಿಸಿದರು.

" ಅಪ್ಪಾ, ಹುಡುಗರ ಮೇಲೆ ಸಿಟ್ಟಾಗಬೇಡಿರಿ " ಎಂದನು ಕಾರ್ತೀಕ

' ನೀವು ಹುಡುಗರೇ ಚೆನ್ನಾಗಿದ್ದೀರಿ. ನಮಗೆ ಮುಂದಿನದೆಲ್ಲವೂ ಕಾಣಿಸುತ್ತದೆ. ನಮಗೆ ಹತ್ತರವಿದ್ದದ್ದು ಕಾಣದಂತಾಗುತ್ತದೆ. ನಿಜವಾಗಿಯೂ ನಾವು ಕುರುಡರಾಗಿದ್ದೇವೆ. ನಿಮಗೆ ಆಶೀರ್ವಾದವಿರಲಿ ನೀವು ಸಾಯಲು ಹೊರಟಾಗ ಸಾಯುತ್ತಿರುವ ನಾವೇಕೆ ಮನೆಯಲ್ಲಿ ಇರಬೇಕು ? ನಿಜವಾಗಿ ನಾವು ಮುದುಕರೆಲ್ಲ ಆ ಜನಮೇಜಯನ ಹೋಮ ಕುಂಡವನ್ನು ತುಂಬಿ ಬಿಡಬೇಕು. ನೀವು ಸುಖದಸಂಸಾರವನ್ನು ಕಿತ್ತೊಗೆದು, ಅಗ್ನಿಗೆ ಆಹುತಿಯಾಗಲು ಹೊರಟಿರುವಿರಿ. ಮಕ್ಕಳೇ ನೀವು ಧನ್ಯರು ! ನಿಮ್ಮ ಹತ್ತಿರವೇ ನಿಜವಾದ ಧರ್ಮವಿದೆ ! ದೇವರಿದ್ದಾನೆ ! ಮುದುಕರಾದ ನಾವು ಸುಮ್ಮನೆ ಗೊಳ್ಳುಕೊಚ್ಚುವೆವು. ಆಶೀರ್ವಾದ. ನಿಮಗೆ ಶತಾಶೀರ್ವಾದಗಳು. ಈ ಹುಡಿಗಿಯು ಕೈಯ್ಯಲ್ಲಿ ಬೆಂಕಿಯನ್ನು ಹಿಡಿದಾಗ. ನನ್ನ ಹೃದಯದದಲ್ಲಿಯೇ ಬೆಂಕಿಯನ್ನು ಸುರುವಿದಂತಾಯಿತು. ಇಂಥ ರತ್ನಗಳಿಗೆ ನಾವು ನಾಗರೆಂದು ಕೀಳು ಬಗೆಯುತ್ತೇವೆ. ನಿಜವಾಗಿಯೂ ನಾವೇ ಕೀಳರು. ಕೃಷ್ಣೇ, ಧನ್ಯರು ನಿನ್ನ ತಂದೆ ತಾಯಿಗಳು. ನಿನ್ನ ಕೈ ಹಿಡಿದ

ಕಾರ್ತೀಕನು ಧನ್ಯನು.' ಎಂದನು. ಕಾರ್ತೀಕನು ತಾಯಿಯನ್ನುದ್ದೇಶಿಸಿ 'ನಾವು ಸ್ವಲ್ಪಹೋಗಿ ಬರುತ್ತೇವೆ' ಎಂದನು.

ತಾಯಿ "ಹೋಗಿ ಬೇಗ ಬನ್ನಿರಿ. ಊಟ ತೀರಿಸಿಕೊಂಡು ಹೋಗಿರಿ" ಎಂದಳು.

ಕಾರ್ತೀಕ ಹಾಗೂ ಕೃಷ್ಣೆಯರು ಹೊರಬಿದ್ದರು. ಹೊಲಕ್ಕೆ ಹೋದರು. ಕಾರ್ತೀಕನು ಕೃಷ್ಣೆಯ ಸುಟ್ಟ ಕೈಯ್ಯನ್ನು ಹೃದಯದ ಮೇಲೆ ಇಟ್ಟು ಕೊಂಡಿದ್ದನು. ಯಾರೂ ಮಾತನಾಡುತ್ತಿದ್ದಿಲ್ಲ. ಇಬ್ಬರೂ ಕಲ್ಲಿನ ಮೇಲೆ ಕುಳಿತಿದ್ದರು.

'ನಾನು ಹಾಲು ಹಿಂಡುತ್ತೇನೇ' ಎಂದನು ಕಾರ್ತೀಕ

"ಹಿಂಡಿರಿ ನಾನು ಕೋಣೆಯಲ್ಲಿ ಮಲಗುವೆ" ಎಂದಳು.

ಕಾರ್ತೀಕನು ಹಿಂಡಲು ಹೋದನು. ಕೃಷ್ಣೆಯು ಕಾರ್ತಿಕನ ಮಂಚದ ಮೇಲೆ ಮಲಗಿದಳು. ಆಕೆಯು ಅಳುತ್ತಿದ್ದಳು. ಆಕೆಗೆ ದುಃಖವನ್ನು ಸಹನ ಮಾಡುವದಾಗಲಿಲ್ಲ. ಕಾರ್ತೀಕನು ಬಂದನು. ಅಳುವದನ್ನು ಕೇಳಿದನು. ಆಕೆಯ ಹತ್ತರ ಬಂದು ಕುಳಿತನು. ಆಕೆಯ ತಲೆಯನ್ನು ತೊಡೆಯಮೇಲಿಟ್ಟು ಕೊಂಡನು. ಕಣ್ಣೀರನ್ನು ಒರೆಸಿದನು. ಆದರೆ ಅವು ನಿಲ್ಲುವ ಬಗೆ ಹೇಗೆ? ಸಮುದ್ರಕ್ಕೆ ಒಡ್ಡು ಹಾಕುವವರಾರು ?

"ಕೃಷ್ಣೆ ಏನಾಗಿದೆ?" ಎಂದು ವಿಚಾರಿಸಿದನು.

"ಏನು ಹೇಳಲಿ. ನಾವಿಬ್ಬರೂ ಕೂಡಿ ಇನ್ನೂ ಎರಡು ದಿನಗಳಾಗಿಲ್ಲ. ನೀವು ಹೊರಟಿರಿ. ನಾವಿಬ್ಬರು ಇನ್ನು ಭೆಟ್ಟಿಯಾಗುವದೆಲ್ಲಿ? ಬೆಂಕಿಯಲ್ಲಾದರೂ ಕೂಡಲೇ ನಮ್ಮನ್ನು ಒಗೆಯುವರೇನು? ನಮ್ಮನ್ನು ಬಂಧಿಸುವರು. ಒಯ್ಯುವರು. ಛಲಿಸುವರು, ಸುಡುವರು. ನಿಮ್ಮ ತೊಡೆಯಮೇಲೆ ಒಂದು ದಿನವೂ ತಲೆಯನ್ನು ಇಡಲಿಲ್ಲ. ನಾನು ನಿಮಗೆ ಏನು ಕೊಟ್ಟೆ? ಸಾವು. ಕಾರ್ತೀಕ, ನಾನು ಆಕಸ್ಮಾತ್ತಾಗಿ ಬಂದೆ. ನಿಮ್ಮನ್ನು ಬೆಂಕಿಯಲ್ಲಿ ಹಾಕಿದೆ. ಏನು ಮಾಡಲಿ? ನಾವು ಓಡಿ ಏಕೆ ಹೋಗಲಿಲ್ಲ? ಅಡವಿಯಲ್ಲಿ ಇರುತ್ತಿದ್ದೆವು. ಎಲೆಗಳನ್ನು ತಿನ್ನುತ್ತಿದ್ದೆವು. ಸುಖವಾಗಿ ವಾಸಿಸುತ್ತಿದ್ದೆವು. ಪಕ್ಷಿಗಳ ಕಿಲಕಿಲಾಟವನ್ನು ಕೇಳುತ್ತಿದ್ದೆವು. ಚಿಗುರೆಲೆಗಳ ಮೃದುವಾದ ಹಾಸಿಗೆಯನ್ನು ಮಾಡುತ್ತಿದ್ದೆವು. ಪ್ರೇಮಜೀವನವನ್ನು ನಡೆಸುತ್ತಿದ್ದೆವು.

ಆದರೆ ಈಗೇನು? ನೀವು ಪ್ರಚಾರಕ್ಕಾಗಿ ಹೋಗುವಿರಿ. ನಾವೂ ಹೋಗುವೆವು. ನಾನು ಜೀವಂತವಿದ್ದೂ ಇಲ್ಲದಂತೆ. ನಿಮಗೆ ಸುಖವನ್ನು ಕೊಡಲಿಲ್ಲ. ನಿಮ್ಮ ಮುಖವನ್ನು ಕೂಡ ಹೊಟ್ಟೆ ತುಂಬ ನೋಡಲಿಲ್ಲ.' ಎಂದು ಅಳಹತ್ತಿದಳು.

'ಕೃಷ್ಣೆ, ನೀನು ಎಲ್ಲವನ್ನು ಕೊಟ್ಟಿರುವಿ. ಜೀವನವನ್ನು ಕೃತಾರ್ಥ ಮಾಡಿರುವಿ. ಜೀವನದ ಅನಂತತ್ವವನ್ನು ತೋರಿಸಿರುವಿರಿ. ಮರಣವನ್ನು ಮಿತ್ರನೆಂದು ತಿಳಿಯಲು ಕಲಿಸಿರುವಿ. ಅಳಬೇಡ. ಎರಡೇ ದಿನಸಗಳಲ್ಲಿಯೆ ನಾಕಷ್ಟು ಸುಗಂಧವನ್ನು ನನ್ನ ಜೀವನಕ್ಕೆ ಎರೆದಿರುವಿ. ಅದು ನಾನು ಜೀವಂತವಿರುವವರೆಗೆ ಸಾಕಾಗುವದು. ಅಳಬೇಡ. ನಗು. ನೀನು ಈಗ ಒಬ್ಬಳೇ ಇಲ್ಲ. ನಾನೂ ಒಬ್ಬನೇಯಿಲ್ಲ. ನಮ್ಮನ್ನು ಅಗಲಿಸುವವರಾರು? ನಡೆ ಹೋಗೋಣ. ನಮ್ಮ ಕ್ಷುದ್ರಸುಖದ ವಿಚಾರವೀಗೇಕೆ? ಹೊಸ ಧರ್ಮವನ್ನು ನಾವು ನಿರ್ಮಿಸುತ್ತಿರುವೆವು. ಬಿತ್ತುವ ಮೊದಲು ಭೂಮಿಯನ್ನು ಸುಡಬೇಕಾಗುತ್ತದೆಂದು ಅತ್ತ ಕಡೆಯ ಜನ ಹೇಳುತ್ತಾರೆ. ಅದರಂತೆ ನವಧರ್ಮದ ಬೀಜಗಳನ್ನು ಬಿತ್ತುವ ಮೊದಲು, ಬಲಿದಾನವನ್ನು ಮಾಡಬೇಕಾದೀತು. ಅಂದರೆ ಸುಂದರ ಅಂಕುರಗಳು ಹುಟ್ಟ್ಯಾವು. ನಮ್ಮ ಜೀವನವು ಧನ್ಯವಾದೀತು. ಈ ಧನ್ಯಜೀವನವನ್ನು ನನಗೆ ನೀನು ಕೊಡುತ್ತಿರುವಿ. ನಾನು ಅಂಜುಬುರುಕನಿದ್ದೆ. ನನ್ನನ್ನು ನೀನು ವೀರನನ್ನಾಗಿ ಮಾಡಿದೆ. ಊರಲ್ಲಿಯ ಸರ್ವ ಸ್ತ್ರೀಪುರುಷರಲ್ಲಿ ನವಸ್ಫೂರ್ತಿಯನ್ನು ತುಂಬಿದೆ. ಸರ್ವರಲ್ಲಿ ನವಜೀವನವನ್ನು ಉಂಟುಮಾಡಿದೆ. ಅಳಬೇಡ. ನಮ್ಮ ಸಂಸಾರವು ಕೃತಾರ್ಥವಾಯಿತು. ನವಧ್ಯೇಯದ ಮಗುವನ್ನು ಎಲ್ಲರಿಗೂ ಬೆಳೆಸಲು ಕೊಟ್ಟೆ. ಇದು ನಿಜವಲ್ಲವೇ?" ಎಂದು ಅವಳ ಕೈಯನ್ನು ಹಿಡಿದು ಮಾತನಾಡಿದನು.

ಆಕೆಯು ಸುಮ್ಮನೆ ಮಲಗಿದ್ದಳು.

ಕೈ ಉರಿಯುತ್ತದೇನು? ಎಂದನು.

"ನೀವು ಹೃದಯದ ಮೇಲೆ ಇಟ್ಟುಕೊಂಡಿರುವಿರಿ. ಅಂದ ಮೇಲೆ ಉರಿಯು ಆರಲಾರದೇ? ನಿಮ್ಮ ಹೃದಯವೆಂದರೆ ಪ್ರೇಮಸಿಂಧು" ಎಂದಳು.

‘ ಅಂದು ನೀನು ನನ್ನ ಸುಟ್ಟ ಬಟ್ಟೆನ್ನು ಒಮ್ಮೆಲೆ ಬಾಯಿಯಲ್ಲಿಟ್ಟು ಕೊಂಡೆ. ಹೆಂಗಸರಲ್ಲಿ ಎಷ್ಟು ಪ್ರೇಮ! ಗಂಡಸರಲ್ಲಿ ಕಡಿಮೆ. ಏನೇ ಅಂದರೂ ಗಂಡಸರಲ್ಲಿ ಪ್ರೇಮವು ಕಡಿಮೆಯೇ ಸರಿ ’ ಎಂದನು

“ ಹಾಗೆನ್ನಬೇಡಿರಿ. ಪುರುಷರು ಸಂಯಮಿಗಳಿರುವರು. ನಿಮ್ಮಲ್ಲಿ ಪ್ರೇಮ ಕಡಿಮೆಯಂದಲ್ಲ ” ಎಂದಳು.

‘ ನಡೆ ನಾವು ಹೋಗೋಣ ’ ಎಂದನು.

‘ ನಡೆಯಿರಿ ಹೋಗೋಣ ದಾರೀ ಕಾಯುತ್ತಿರಬಹುದು ’ ಎಂದಳು.



# ೧೬

ವತ್ಸಲೆಯು ಸ್ತ್ರೀಯರ ಶಾಂತಿಪಥಕವನ್ನು ತೆಗೆದುಕೊಂಡು ಹೊರಟಳು. ಊರೂರಿಗೆ ಪ್ರಚಾರ ನಡೆಯಿತು. ಪ್ರೇಮಧರ್ಮದ ಉಪನಿಷತ್ತನ್ನು ಹಾಡುತ್ತ ಅವರು ಹೋಗುತ್ತಿದ್ದರು. ಸ್ತ್ರೀಯರ ಶಕ್ತಿಯು ಅಪೂರ್ವವಾಗಿದೆ. ಅವರು ಒಮ್ಮೆ ಜಾಗ್ರತರಾದರೆ, ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡುತ್ತಾರೆ. ಹೆಂಗಸರು ಸಿಟ್ಟಾದರೆ, ಅವರು ಬೇಗನೆ ಮರೆಯುವದಿಲ್ಲ.

ಕಾಮರೂಪದೇಶದಲ್ಲಿ ಸ್ತ್ರೀರಾಜ್ಯವಿದ್ದಿತು. ಅಲ್ಲಿಂದಲೂ ಒಂದು ಪಥಕ ಬಂದಿತು. ಎಲ್ಲರಿಗೂ ಆಶ್ಚರ್ಯ. ದೊಡ್ಡ ಜಾತ್ರೆಯೇ ನಡೆಯಿತು. ಸತ್ಯಧರ್ಮದ, ಪ್ರೇಮದ, ವಿಶ್ವೈಕ್ಯದ, ಹಾಡುಗಳು ಆಕಾಶವನ್ನು ತುಂಬಿದವು. ವಕ್ರತುಂಡನ ವಕ್ರಧರ್ಮವನ್ನು ಕೇಳುವವರೇ ಇಲ್ಲ.

ಜನಮೇಜಯನೆಡೆಗೆ ಒಬ್ಬ ರಾಜನ ಸೈನ್ಯವು ನಡೆದಿತ್ತು. ಆ ಸೈನಿಕರಲ್ಲಿ ಉತ್ಸಾಹವಿದ್ದಿಲ್ಲ. ದಾರಿಯಲ್ಲಿ ಸ್ತ್ರೀಯರ ಈ ಶಾಂತಿಪಥಕವು ಸೈನಿಕರೆದುರು ಬಂದು ನಿಂತಿತು. ಸಂಸಾರದ ಆಪತ್ತುಗಳನ್ನು ಎದುರಿಸುವಂಥ, ಸ್ತ್ರೀಯರು ಸತ್ಯದ ವಿಜಯಾರ್ಥವಾಗಿ ಧೈರ್ಯದಿಂದ ನಿಂತಿದ್ದಾರೆ. ಅವರ ಕೈಯಲ್ಲಿ 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂಬ ಪವಿತ್ರ ಶಬ್ದಗಳನ್ನು ಬರೆದ ಪತಾಕೆಗಳಿದ್ದವು. ನಾಗ ಹಾಗು ಆರ್ಯರು ಒಬ್ಬರನ್ನೊಬ್ಬರು ಅಪ್ಪಿಕೊಳ್ಳುವ ಚಿತ್ರಗಳಿದ್ದ ಧ್ವಜಗಳನ್ನು ಹಿಡಿದಿದ್ದರು. 'ಮಾನವ ಧರ್ಮಕ್ಕೆ ವಿಜಯವಾಗಲಿ.' 'ಸತ್ಯಧರ್ಮಕ್ಕೆ ಜಯವಾಗಲಿ' ಎಂದು ಆ ಸ್ತ್ರೀಯರು ಘೋಷಿಸುತ್ತಿದ್ದರು.

ಆ ಸೈನ್ಯದ ಮುಖಂಡನು ಮುಂದೆ ಬಂದನು. 'ನಿಮಗೆ ಏನು ಬೇಕು?' ಎಂದು ಕೇಳಿದನು.

ವತ್ಸಲೆಯು, "ನಮಗೆ ವಿವೇಕ ಬೇಕು. ಮನುಷ್ಯತ್ವವು ಬೇಕು. ಸ್ತ್ರೀಯರಾದ ನಾವು ಅಧರ್ಮ ಮಾಡಗೊಡುವದಿಲ್ಲ. ಗಂಡಸರಿಗೆ ಸುಪಥವು ಕಾಣಿಸದಿದ್ದರೆ ನಾವು ತೋರಿಸುವೆವು. ಮನೆಯನ್ನು ನಾವು ಬೆಳಗಿಸುತ್ತೇವೆ. ಇನ್ನು ಜಗತ್ತನ್ನು ಬೆಳಗಿಸುವೆವು. ಬೆಳಕನ್ನು ತೋರಿಸುವದೇ ಸ್ತ್ರೀಯರ ಕೆಲಸ. ನೀವೆಲ್ಲ ಕತ್ತಲೆಯಲ್ಲಿ ಸುತ್ತುತ್ತಲಿರುವಿರಿ. ನೀವು ಎಲ್ಲಿಗೆ ಹೊರಟಿರಿ? ಜನಮೇಜಯನಿಗೆ ಸಹಾಯಮಾಡಲು ಹೊರಟಿರುವಿರಾ? ಅವನಲ್ಲಿರುವ ನಾಗರನ್ನು ಕೊಲ್ಲಲಿಕ್ಕಷ್ಟೇ? ಇಂದ್ರ ಮೊದಲಾದ ದೊಡ್ಡ ರಾಜರೊಡನೆ ಯುದ್ಧ ಮಾಡಲು ಹೊರಟಿರಾ? ನೀವು ಕೊಲ್ಲಲು ಹೋಗುತ್ತಿದ್ದರೆ, ಮೊದಲು ನಮ್ಮನ್ನು ಕೊಲ್ಲಿರಿ. ಈ ಸೈನಿಕರಿಗೆ ಯುದ್ಧಕ್ಕೆ ಹೋಗುವ ಇಚ್ಛೆ ನಿಜವಾಗಿಯೂ ಇಲ್ಲ. ನಮ್ಮ ಪತಿಗಳನ್ನೂ, ಅಣ್ಣತಮ್ಮಂದಿರನ್ನೂ ಹುಡುಗರನ್ನೂ ವ್ಯರ್ಥವಾಗಿ ರಣಾಂಗಣಕ್ಕೇಕೆ ಒಯ್ಯುವಿರಿ? ಕುರುಕ್ಷೇತ್ರದಲ್ಲಿ ಏನಾಯಿತು? ೧೮ ಅಕ್ಷೋಹಿಣಿ ಸೈನ್ಯದಲ್ಲಿ ೭ ಅಕ್ಷೋಹಿಣಿ ಸೈನ್ಯ ಮಾತ್ರ ಉಳಿಯಿತು. ಆದರೆ ಲಕ್ಷಾಂತರ ಸ್ತ್ರೀಯರು ನಿರಾಧಾರರಾದರು. ಅದನ್ನೇ ಈಗ ಮತ್ತೆ ಮಾಡುವಿರಾ? ಈ ಸೈನಿಕರ ಮನಸ್ಸಿನಲ್ಲಿ ಯಾರ ವಿಷಯವಾಗಿಯೂ ದ್ವೇಷಭಾವನೆಗಳಿಲ್ಲ ಅವರಿಗೆ ನಾಗಜಾತಿಯ ಗೆಳೆಯರಿರಬಹುದು. ಆಪ್ತರಿರಬಹುದು. ನಾಗರು ಕೆಡುಕರಲ್ಲ. ನಮ್ಮ ಸ್ತ್ರೀಯರಲ್ಲಿ ಅನೇಕರು ನಾಗರನ್ನು ಮದುವೆಯಾಗಿರಬಹುದು. ನಾಗರು ದೊಡ್ಡ ಮನಸ್ಸಿನವರಿದ್ದಾರೆ. ಮೊನ್ನೆ ಜನಮೇಜಯನ ಅಧಿಕಾರಿಗಳು ನಮ್ಮೂರಿಗೆ ಬಂದು, ನಮ್ಮನ್ನು ಸುಡುವೆನೆಂದು ಅಂಜಿಸುತ್ತಲಿರುವಾಗ ನಮ್ಮಲ್ಲಿಯ ಒಬ್ಬ ಶೂರ ನಾಗಕನ್ಯೆಯು ನಗುತ್ತ, ಕೈಯಲ್ಲಿ ಪಂಜನ್ನು ಹಿಡಿದು ಮಾತನಾಡಿದಳು. 'ಸ್ತ್ರೀಯರಿಗೆ ಸತಿ ಹೋಗುವ ರೂಢಿಯಿರುವದರಿಂದ ನಾವು ಬೆಂಕಿಗೆ ಅಂಜುವದಿಲ್ಲ. ಬೆಂಕಿಯೆಂದರೆ ನಮ್ಮ ಮನೆಯವನೇ ಇದ್ದಾನೆ' ಇದೋ ನೋಡಿರಿ, ಆ ಶೂರ ಸ್ತ್ರೀಯನ್ನು! ಇವಳ ಲಗ್ನವಾಗಿ ಹತ್ತು ದಿನಗಳು ಕೂಡ ಆಗಿಲ್ಲ. ಅಂದಮೇಲೆ ಇವಳನ್ನು ಕೊಲ್ಲುವದು ಹೇಗೆ? ಯಾವ ಪಾಪವನ್ನು ಇವಳು ಮಾಡಿದ್ದಾಳೆ? ಕೆಂಪು ಹಾಗೂ ಕಪ್ಪು ಬಣ್ಣಗಳ ಭೇದವನ್ನೆಣಿಸುವಿರೇಕೆ? ಕಪ್ಪು, ರಾತ್ರಿಯಲ್ಲಿ ಚಂದ್ರನೊಡನೆ ಲಗ್ನವಾಗುತ್ತಲಿದೆ. ಆ ಸಮಯದಲ್ಲಿ ಸಾವಿರಾರು ನಕ್ಷತ್ರಗಳ ಅಕ್ಷತೆಯು ಅದರ ಮೇಲೆ ಬೀಳುತ್ತಿರುತ್ತದೆ. ಅಂದಮೇಲೆ ಕಪ್ಪು ಬಣ್ಣವು ಕೆಡುಕು

ಹೇಗೆ ? ' ಅಂತರ್ಮುಖಿನಾಗು ' ಎಂದು ವೇದವು ಹೇಳುತ್ತದೆ. ಕರ್‍ರಗಿದ್ದ ಕವಳೀ ಹಣ್ಣುಗಳು ಕಟಿಯಿರುವವೇನು ? ಮಧುರವಾಗಿದ್ದವುಗಳನ್ನು ಒಗೆದರೆ ಮೂರ್ಖರೆನ್ನುವರು. ಈ ಕಪ್ಪು ನಾಗಕನ್ಯೆಯರೆಂದರೆ ಮಂಜುಳ ಮೈನಾಕ ಪಕ್ಷಿಗಳೂ ಕೋಕಿಲೆಗಳೂ ಆಗಿದ್ದಾರೆ. ಪ್ರೇಮ ಸಂಗೀತವನ್ನು ಅವರ ಬಾಯಿಂದಲೇ ಕೇಳಬೇಕು. ತ್ಯಾಗದ ಶ್ರುತಿಯನ್ನು ಜಗತ್ತಿಗೆ ಅವರೇ ಹೇಳಬೇಕು. ನೀವು ರಾಜನಿಗೆ ನೆರವಾಗಲು ಹೋಗುವಿರಿ. ನಾಗರನ್ನು ಶಿಕ್ಷಿಸುವದಕ್ಕಾಗಿ ಹೋಗುತ್ತಿರುವಿರಿ. ನಮ್ಮನ್ನು ಮೊದಲು ಶಿಕ್ಷಿಸಿರಿ. ನಾವು ಅಪರಾಧಿಗಳಿದ್ದೇವೆ. ನಾವು ನಾಗರನ್ನು ಪ್ರೀತಿಸುತ್ತೇವೆ. ಅವರನ್ನು ತಿರಸ್ಕರಿಸುವದಿಲ್ಲ. ನಾವೀರ್ವರೂ ಒಂದೇ ಎಂದು ತಿಳಿಯುತ್ತೇವೆ. ನಾವು ರಾಜಶಾಸನವನ್ನು ಮುರಿದಿದ್ದೇವೆ. ಕೊಲ್ಲಿರಿ ನಮ್ಮನ್ನು. ಎಲೋ ಸೈನಿಕರೇ, ನೀವು ಯುದ್ಧಕ್ಕೇಕೆ ಹೋಗುವಿರಿ ? ಅದರಲ್ಲಿ ನಿಮ್ಮ ಹಿತವೇನಿದೆ ? ಅದರಲ್ಲಿ ನ್ಯಾಯವಿದೆಯೇ, ಧರ್ಮವಿದೆಯೇ? ರಾಜನು ಕರೆದನು, ನೀವು ನಡೆದಿರಿ. ಮನುಷ್ಯನು ಸದಸದ್ವಿವೇಕವನ್ನು ದೂರಬಾರದು. ರಾಜನು ನಮ್ಮನ್ನು ಕುರುಡರನ್ನಾಗಿ ಮಾಡಲು ಯತ್ನಿಸಿದರೆ, ನಾವು ಬಲಿಬೀಳಬಾರದು. ಬೌದ್ಧಿಕ ಶಕ್ತಿಯನ್ನು ಕಳೆದುಕೊಳ್ಳುವದು ಎಲ್ಲಕ್ಕಿಂತಲೂ ಮಹತ್ಪಾಪ. ಆರ್ಯರಾದ ನಾವು ವೇದಧರ್ಮವನ್ನು ಮನ್ನಿಸುತ್ತೇವೆ. ವೇದಧರ್ಮವೆಂದರೆ ವಿಚಾರಧರ್ಮ. ಗಾಯತ್ರಿ ಮಂತ್ರವು “ ಬುದ್ಧಿಯನ್ನು ಜಾಗೃತವಿಡು ” ಎಂದು ಹೇಳುತ್ತದೆ. ನೀವು ವಿಚಾರ ಮಾಡಿದ್ದೀರಾ ? ಅವಿಚಾರದಿಂದ ಅವಸರಪಡಬೇಡಿರಿ. “ ರಾಜನು ಕೊಡುತ್ತಾನೆ. ನಾವು ಹಣದ ದಾಸರು ” ಎಂದು ನೀವು ಅನ್ನಬಹುದು. ಆದರೆ ರಾಜನು ಆ ಹಣವನ್ನು ಎಲ್ಲಿಂದ ತರುತ್ತಾನೆ ? ನಮ್ಮ ಧಾನ್ಯದಲ್ಲಿಯ ಧಾನ್ಯವನ್ನು ತಕ್ಕೊಳ್ಳುತ್ತಾನೆ. ನಮ್ಮ ಆಕಳುಗಳಲ್ಲಿಯ ಆಕಳುಗಳನ್ನು ತಕ್ಕೊಳ್ಳುತ್ತಾನೆ. ರಾಜನಲ್ಲಿ ಲಕ್ಷಾವಧಿ ಆಕಳು ಇರುತ್ತವೆ. ಅವೆಲ್ಲ ಎಲ್ಲಿಂದ ಬಂದವು ? ಅವು ನಾವು ಕೊಟ್ಟ ಆಕಳುಗಳೇ ? ರಾಜನ ಕೋಶವನ್ನು ನಾವೇ ತುಂಬಿದ್ದೇವೆ. ಅದರಿಂದಲೇ ನಿಮಗೆ ಹಣ ಸಿಗುವದು. ಸಾವಿರಾರು, ಅದೇಕೆ ಲಕ್ಷಾವಧಿ ನಾಗರು ಆರ್ಯರಿಗಿಂತ ಹೆಚ್ಚು ಶ್ರಮಬಡುತ್ತಾರೆ. ಅವರ ಈ ದುಡಿತದಿಂದ ನಿಮಗೆ ಧನ ಧಾನ್ಯಗಳು ಸಿಗುತ್ತವೆ. ಇಂಥವರನ್ನು ನೀವು ಕೊಲ್ಲುವಿರಾ ? ಇದು

ಅಧರ್ಮ, ಇದು ಕೃತಘ್ನತೆ. ಪ್ರಜೆಗಳ ಮಾತನ್ನು ಕೇಳದೆ, ರಾಜನ ಮಾತನ್ನೇ ಕೇಳುವದು ಮೂರ್ಖತನ. ಪ್ರಜೆಗಳ ಮತ ಕೇಳದಿರುವ ರಾಜನು ರಾಜನೇ ಅಲ್ಲ, ಅವನು ಕಳ್ಳ. ಅವನ ಮಾತನ್ನು ಕೇಳುವದೆಂದರೆ ಕಳ್ಳನಿಗೆ ಸಹಾಯವಿತ್ತಂತೆ. ಇದು ಆರ್ಯಧರ್ಮವೇ ? ಊರೂರಿಗೆ ಹೋಗಿ ನೋಡಿರಿ. ಅಲ್ಲಿ ನಾಗ ಹಾಗೂ ಆರ್ಯರು ಪ್ರೇಮದಿಂದಲೇ ಇರುವರು. ಒಂದೇ ಜೋಕಾಲಿಯಲ್ಲಿಯೇ ಆರ್ಯ ಹಾಗೂ ನಾಗರ ಮಕ್ಕಳು ತೂಗಾಡುತ್ತಿರುತ್ತಾರೆ. ಆದರೆ ಕೆಲವು ದೊಡ್ಡವರ ಮನಸ್ಸಿನಲ್ಲಿ ದ್ವೇಷವು ಹುಟ್ಟಿತು. ಅವರು ಅಡ್ಡ ಬಂದರು, ಅವರಿಗೆ ಆಟ, ಜನರಿಗೆ ಪ್ರಾಣ ಸಂಕಟ. ಜನಮೇಜಯನಿಗೆ ನಾಗರು ಸೇರುವದಿಲ್ಲವಂತೆ! ನಾಗರನ್ನು ಕಂಡರೆ ಮುಖ ಮುದಡುವನಂತೆ ಆ ವಕ್ರತುಂಡ! ಒಗಿದ್ದರೆ ಅವರಿಗೆಸ್ವರ್ಗಕ್ಕೆ ಹೋಗ ಹೇಳಿರಿ. ಈ ಜಗತ್ತಿನಲ್ಲೆಲ್ಲ ನಾನೇ ಇರುವೆವು. ಒಬ್ಬರನ್ನೊಬ್ಬರು ಪ್ರೀತಿಸುವೆವು. ಯಾಕೆ ಸೈನಿಕರೇ ? ಮಾತಾಡಿರಿ. ನಿಮ್ಮ ಮನಸ್ಸಿನಲ್ಲಿ ನಾಗರ ದ್ವೇಷವಿದೆಯೇ ? ಹೇಳಿರಿ. (ಇಲ್ಲ, ಇಲ್ಲವೆನ್ನುತ್ತಾರೆ.) ಇಲ್ಲದಿದ್ದರೆ ಹೋಗುವಿರೆಲ್ಲಿ ? ಅನಾಥರನ್ನು ರಕ್ಷಿಸುವದೇ ಕ್ಷತ್ರಿಯಧರ್ಮ. ಇಂದು ನಾಗರು ಅನಾಥರು. ಅವರ ಬೆನ್ನು ಕಟ್ಟಿರಿ. ಇಂದ್ರನಿಗೆ ನೆರವೀಯಲು ಹೋಗಿರಿ. ಅವನು ನಾಗರಿಗೆ ಅಭಯನ್ನಿತ್ತಿದ್ದಾನೆ. ಸತ್ಯದ ಪಕ್ಷವನ್ನು ನೀವು ಹಿಡಿಯಿರಿ. ನಿಜವಾದ ಧರ್ಮದ ಪಕ್ಷವನ್ನು ಹಿಡಿಯಿರಿ. ಸತ್ಯವೇ ನಮ್ಮ ರಾಜ. ಜನಮೇಜಯನಲ್ಲ. ಹಿಂದಕ್ಕೆ ಹೋಗಿರಿ, ಸತ್ಯಧರ್ಮದ ಸೈನಿಕರಾಗಿರಿ. ಅಸತ್ಯಕ್ಕೆ ನೆರವಾಗುವದಿದ್ದರೆ, ನಮ್ಮ ಹೆಣವನ್ನು ತುಳಿದು ಹೋಗಿರಿ. ನೋಡಿರಿ, ನಿಮ್ಮೆದುರಿಗೆ ನಿಮ್ಮ ಅಕ್ಕತಂಗಿಯರು ನಿಂತಿದ್ದೇವೆ. ನಡೆಯಲಿ ನಿಮ್ಮ ಕತ್ತಿಯ ಚಳಕು. ಬಾಣಗಳನ್ನು ಬಿಡಿರಿ, ಭಾಲೆಗಳನ್ನು ಒಗೆಯಿರಿ! ನಮ್ಮ ಬಲಿದಾನವಾಗಲಿ” ಎಂದಳು.

ಆ ಸೈನಿಕರೆಲ್ಲ ಗರ್ಜಿಸಹತ್ತಿದರು. ಹಿಂದಿರುಗಿದರು. ‘ನಾವು ಸತ್ಯವನ್ನು ತಿಳಿಯೋಣ, ನಾಗರು ನಮ್ಮ ಅಣ್ಣತಮ್ಮಂದಿರು. ಈ ರಾಜನು ನಮ್ಮನ್ನು ಮೋಸ ಮಾಡಹತ್ತಿದ್ದಾನೆ. ಕಪಟಿಯಾದ ರಾಜನು. ಧನ್ಯ! ಸ್ತ್ರೀಯರೇ ನೀವು ಧನ್ಯ! ನೀವು ನಿಜವಾದ ಧರ್ಮವನ್ನು ತೋರಿಸಿದಿರಿ. ಜ್ಞಾನ

ಜ್ಯೋತಿಯನ್ನು ಬೆಳಗಿಸಿದಿರಿ. ಪ್ರೇಮದ ವಿಜಯವಾಗಲಿ! ನಿಜವಾದ ಶಾಂತಿಗೆ ಜಯವಾಗಲಿ ' ಎಂದು ಗರ್ಜಿಸುತ್ತ, ಸೈನಿಕರು ಹಿಂದಿರುಗಿದರು.

ಈ ಸುದ್ದಿಯು ಕ್ಷಣದಲ್ಲಿ ಎಲ್ಲೆಡೆಗೆ ಹಬ್ಬಿತು. ಸೈನಿಕರು ಗುಂಪು ಗುಂಪಾಗಿ ಹೋಗುವದು ನಿಂತಿತು. ಎಲ್ಲ ರಾಜರಿಗೂ ಕ್ರಾಂತಿಯಾಗುವ ದೆಂಬ ಭೀತಿಯು ಹುಟ್ಟಿತು. ಇಂದ್ರನು ಆನಂದಭರಿತನಾದನು. ಸಾವಿರಾರು ಸೈನಿಕರು ಸ್ವೇಚ್ಛೆಯಾಗಿ ಇಂದ್ರನ ಕಡೆಗೆ ಬರತೊಡಗಿದರು. ಜನಮೇಜಯನ ಮೋರೆ ಕಪ್ಪಿಟ್ಟಿತು. ಆವನು ಚಿಂತೆಗೊಳಗಾದನು. ತನ್ನ ಸ್ವಂತದ ಸಾಮ್ರಾಜ್ಯವೇ ಅಲ್ಲಾಡಬಹುದು. ಊರೂರಿಗೆ ಸ್ವತಂತ್ರ ರಾಜ್ಯಗಳಾಗಬಹುದು. ಎಂದು ಅವನಿಗೆ ಅನಿಸಹತ್ತಿತು.

“ ರಾಜನೆ ಧೈರ್ಯ ಬಿಡಬೇಡ. ನಾಗಾನಂದ ಹಾಗು ಅವನ ಪತ್ನಿ ವತ್ಸಲೆಯರು ಇಷ್ಟೆಲ್ಲ ಚಳವಳಿಯನ್ನು ನಡಿಸಿದ್ದಾರೆ. ಅವರಿಬ್ಬರನ್ನು ಹಿಡಿದು ತಂದರೆ, ಈ ಚಳವಳಿಯು ನಿಲ್ಲುವದು. ಎಲ್ಲವೂ ಸರಳವಾಗುವದು” ಎಂದನು ವಕ್ರತುಂಡ.

“ ಬೇರೆ ಸ್ತ್ರೀಯರು ಮುಂದೆ ಬರುವರು. ಅಲ್ಲದೆ ಈ ಆರ್ಯಸ್ತ್ರೀಯರನ್ನು ನಾನು ಛಲಿಸುವದೆಂತು ? ನಾಗರಂತೂ ಒಂದು ಕಡೆಗೆ ಉಳಿದರು. ಆರ್ಯಮಾತೆಯರ ಮೇಲೆ ನಾನು ಕತ್ತಿಯನ್ನು ಹಿರಿಯಲಾ ? ” ಎಂದನು ಜನಮೇಜಯ.

“ ರಾಜಾ ! ಈ ಸ್ತ್ರೀಯರು ಆರ್ಯರೇ ಅಲ್ಲ. ನಾಗರನ್ನು ಪ್ರೀತಿಸುವವರು ಆರ್ಯರೇ ಅಲ್ಲ. ನಾಗರೆಂದರೇ ತಿಳಿಯಬೇಕು. ಸ್ತ್ರೀಯರಿರಲಿ ಪುರುಷನಿರಲಿ ಅಪರಾಧಿಯನ್ನು ದಂಡಿಸುವದು ರಾಜನ ಕರ್ತವ್ಯ. ಅಬಲೆಯರೆಂದು ಬಿಟ್ಟು ಬಿಡಬೇಡ. ಅಬಲೆಯರಿದ್ದರೆ ಮನೆಯಲ್ಲಿರುತ್ತಿದ್ದರು. ಹೊರಬಂದರೆಂದ ಮೇಲೆ, ಎಲ್ಲರಿಗೂ ಒಂದೇ ನಿಯಮ. ರಾಜಾ ! ಕಾರುಣ್ಯವಂತನಾಗಬೇಡ. ಕ್ಷತ್ರಿಯರಿಗೆ ಆಸ್ಥಾನದಲ್ಲಿ ಕರುಣವು ಶೋಭಿಸುವದಿಲ್ಲ. ಧರ್ಮಕ್ಕಾಗಿ ಕಠೋರನಾಗು ! ಆರ್ಯಧರ್ಮವನ್ನು ನಿರ್ಮಲವಿಡಬೇಕು” ಎಂದು ವಕ್ರತುಂಡನು ವಿಷ ಕುಡಿಸಹತ್ತಿದನು.

“ ಆರ್ಯಧರ್ಮವೆಂದರೇನು ? ” ಎಂದನು ರಾಜ.

" ಆರ್ಯಧರ್ಮವೆಂದರೆ, ಅನಾರ್ಯರನ್ನು ನಾಶಪಡಿಸುವದು. ಅಥವಾ ಅವರಿಗೆ ಆರ್ಯಧರ್ಮದ ದೀಕ್ಷೆಯನ್ನು ಕೊಡುವದು. ಅನಾರ್ಯರ ವೈಶಿಷ್ಟ್ಯವನ್ನು ನಷ್ಟಮಾಡಿ ಆರ್ಯತ್ವವನ್ನು ಅವರಲ್ಲಿ ಸ್ಥಾಪಿಸುವದು " ಎಂದನು ವಕ್ರತುಂಡ.

" ಪ್ರಸಂಗವು ಮಾತ್ರ ಕಠಿಣವಾಗುತ್ತ ನಡೆಯಿತು " ಎಂದನು ಜನಮೇಜಯ.

" ರಾಜನೆ, ನಾನು ವತ್ಸಲೆ ಹಾಗು ನಾಗಾನಂದರನ್ನು ಕಟ್ಟಿತರುತ್ತೇನೆ. ಅವರದೇ ಈ ಚೇಷ್ಟೆ " ರಾಜನು, ರಾಜನೇ ಅಲ್ಲ. ಆ ಜನಮೇಜಯನು ದರೋಡೆಖೋರನಿದ್ದಾನೆ, ಕಳ್ಳನಿದ್ದಾನೆ. " ಹೀಗೆ ಹೇಳುತ್ತಿದ್ದಾರೆ. ಅವರ ನಾಲಿಗೆಯನ್ನು ಕಿತ್ತಬೇಕು. ಹೋಳಿಯಲ್ಲಿ ಒಗೆಯಬೇಕು " ಎಂದನು ವಕ್ರ ತುಂಡ.

" ಹೋಗು ಅವರನ್ನು ಕಟ್ಟಿ ತಕ್ಕೊಂಡು ಬಾ. ಇಷ್ಟದಿನ ತಡೆಯುತ್ತ ಬಂದೆ. ಆದರೆ ನನ್ನ ಈ ಸಂಯಮವನ್ನು ಹೇಡಿತನವೆಂದು ಅವರು ತಿಳಿದಿದ್ದಾರೆ. ಹೋಳಿಯನ್ನೇ ಮಾಡುವಾ. ತಗೊಂಡುಬಾ. ಆರ್ಯನಿರಲಿ, ನಾಗರಿರಲಿ. ಸ್ತ್ರೀಯರಿರಲಿ, ಪುರುಷರಿರಲಿ. ಕಟ್ಟಿ ತೆಗೆದುಕೊಂಡು ಬಾ. ನನ್ನ ಆಜ್ಞೆಯನ್ನು ಮುರಿಯುವ ಅಪರಾಧಿಗಳನ್ನೆಲ್ಲ ತನ್ನಿರಿ. ಆಜ್ಞೆಯನ್ನು ಮೀರಿದ ಹೊಟ್ಟೆಯ್ಯ ನುಗನನ್ನು ಸಹ ಹಂಸಧ್ವಜ ರಾಜನು ತಪ್ತವಾದ ಎಣ್ಣೆಯಲ್ಲಿ ಒಗೆಸಿದನು. ಈಗ ನಾನು ಕಠೋರನಾಗಲೇಬೇಕು. ವಕ್ರತುಂಡನೇ ಹೋಗು. ಆ ಉನ್ಮಟರನ್ನು ಹೆಡಮುರಿಗಿಕಟ್ಟಿ ತಕ್ಕೊಂಡು ಬಾ." ಎಂದು ಸಂತಪ್ತನಾಗಿ ಹೇಳಿದನು.

" ಒಳ್ಳೇದು ಮಹಾರಾಜ. ಆರ್ಯಧರ್ಮಕ್ಕೆ ಜಯವಾಗಲಿ " ಎಂದು ವಕ್ರತುಂಡನು ಹೊರಟು ಹೋದನು.

—:XXX●XXX:—

## ೧೭

ಆಶ್ರಮದಲ್ಲಿ ಮಗು ಶಶಾಂಕನು ಜ್ವರದಿಂದ ಬಳಲುತ್ತಿದ್ದನು. ಆಸ್ತಿಕನು ಹತ್ತರ ಕುಳಿತಿದ್ದನು. ನಾಗಾನಂದ ಹಾಗು ವತ್ಸಲೆಯರು ಪ್ರಚಾರಕ್ಕೆ ಹೋಗಿದ್ದರು. ಅವರಿಗೆ ಸುದ್ದಿ ಕಳಿಸಲ್ಪಟ್ಟಿತು. ಆದರೆ ಅದು ಅವರಿಗೆ ಯಾವಾಗ ಮುಟ್ಟುವದು?

'ಶಶಾಂಕಾ ನಿನಗೆ ಸಮಾಧಾನವೆನಿಸುವದೇ ?' ಎಂದು ಆಸ್ತಿಕನು ತಲೆಯ ಮೇಲೆ ಕೈಯಿಟ್ಟು ವಿಚಾರಿಸಿದನು.

'ಭಗವಾನ್ ನಿಮಗೇಕೆ ತೊಂದರೆ. ನೀವು ಅತ್ತಕಡೆಗೆ ಹೋಗಿ, ಹುಡುಗರಿಗೆ ಏನಾದರೂ ಹೇಳಿರಿ. ನನ್ನ ಸಲುವಾಗಿ ಅವರಿಗೇಕೆ ಪಾಠವಿಲ್ಲ ?' ಎಂದನು.

'ಶಶಾಂಕಾ, ಆಶ್ರಮದಲ್ಲಿ ಎರಡನೆಯದನ್ನು ಏನು ಕಲಿಯುವದಿದೆ ? ಎರಡನೆಯವರ ಸುಖದುಃಖದಲ್ಲಿ ಭಾಗಿಯಾಗುವದೇ ನಿಜವಾದ ಶಿಕ್ಷಣ. ನಿನ್ನ ಸೇವೆಯೇ ನಿಜವಾದ ಶಿಕ್ಷಣ. ನಾನು ನಿನ್ನ ಸೇವೆ ಮಾಡುವಾಗ ಉಳಿದವರೆಲ್ಲ, ತಮ್ಮ ಕಾರ್ಯದಲ್ಲಿ ನಿರತರಾಗುವದೇ ಶಿಕ್ಷಣ. ಶಿಕ್ಷಣವೆಂದರೆ ಒಂದು ಬಗೆಯ ದೃಷ್ಟಿ. ಅದು ಬಂದರೆ ತೀರಿತು. ನೀನು ಮನಸ್ಸಿಗೆ ಏನೂ ಹಚ್ಚಿಕೊಳ್ಳಬೇಡ. ಹಣೆಯ ಮೇಲೆ ಭಸ್ಮ ಬೆರೆತ ಮಸರನ್ನು ಹಾಕಲಾ? ತಂಪು ಎನಿಸೀತು?' ಎಂದು ಪ್ರೇಮದಿಂದ ಆಸ್ತಿಕನು ನುಡಿದನು.

'ಹಾಕಿರಿ. ನೀವೇ ಹಾಕಿರಿ. ನಾಗೇಶನು ಹಾಕಿದಾಗ ಕಣ್ಣಲ್ಲಿ ಬಿತ್ತು. ನಾನು ಏನೂ ಮಾತಾಡಲಿಲ್ಲ. ಅವನು ನನ್ನನ್ನು ಪ್ರೀತಿಸುವ. ಅವನು ನನಗೆ ಸೇರುವ' ಎಂದನು ಶಶಾಂಕ.

‘ ಅವನೇ ಸೇವೆಯನ್ನು ಮಾಡಲಿ. ನಿನಗೆ ಹಾಲು ಕೊಟ್ಟನಷ್ಟೆ ? ’ ಎಂದರು.

ಆಸ್ತಿಕರು ಒಂದು ದೊನ್ನೆಯಲ್ಲಿ ಬೂದಿಯನ್ನು ಕಲಿಸಿದ ಮಸರನ್ನು ತಂದರು. ಅವನ ಹಣೆಗೆ ಹಾಕಿದರು. ಬಾಯಿಂದ ಸುಂದರ ವೇದಮಂತ್ರಗಳನ್ನು ಅನ್ನುತ್ತಿದ್ದರು. ನಡು ನಡುವೆ ಉಪನಿಷತ್ತುಗಳನ್ನನ್ನುತ್ತಿದ್ದರು. ಅದು ಮಂಗಳಕಾರಕವೆನಿಸುತ್ತಿತ್ತು.

‘ ಎಂತಹ ಸುಂದರವಿವೆ ಈ ಮಂತ್ರ? ಎಷ್ಟು ಮಧುರ! ’ ಎಂದನು ಶಶಾಂಕ

‘ ಅಹುದು. ಈ ಮಂತ್ರದ್ರಷ್ಟಾರರ ದೃಷ್ಟಿಯು, ಸೃಷ್ಟಿಯ ಅಂತರಂಗವನ್ನು ಭೇದಿಸಿದೆ. ಅವರಿಗೆ ಸರ್ವತ್ರ ಮಧು ಕಾಣಿಸುತ್ತಿದೆ. ಮಧುಸಾಗರರೂಪಿ ಪರಮಾತ್ಮನು ಕಾಣಿಸುತ್ತಿದ್ದಾನೆ. ಆ ಋಷಿಗಳಿಗೆ ಉಷಾ, ನಿಶಾ, ಎಲ್ಲವೂ ಸವಿ. ಇಷ್ಟೇ ಅಲ್ಲ. ‘ ಮಧುಮತ್ ಪಾರ್ಥಿವಂ ರಜಃ ’ ಮಣ್ಣಿನಕಣವೂ ಅವರಿಗೆ ಸವಿ. ಮಣ್ಣಿನಕಣ ಕ್ಷುದ್ರವೇ. ಮಳೆ ಬಿದ್ದೊಡನೆ, ಅದರಿಂದ ಸುಗಂಧವು ಹೊರಬೀಳುತ್ತದೆ. ಹಸಿರು ಹುಲ್ಲು ಹುಟ್ಟುತ್ತದೆ. ಹಣ್ಣು ಹಂಪಲಗಳ, ಹೂಗಳ, ಅನಂತ ಬಣ್ಣ ಹಾಗೂ ರಸಗಳು ಎಲ್ಲಿಂದ ಹೊರಬಿದ್ದವು? ಆ ಮಣ್ಣಿನಕಣದಿಂದಲ್ಲವೇ? ಎಂತಹ ದೊಡ್ಡ ದೃಷ್ಟಿ! ’ ಎಂದು ಆಸ್ತಿಕನು ‘ ಮಧುವಾತಾ ಋತಾಯತೇ ’ ಎಂಬ ಮಂತ್ರವನ್ನು ಅನ್ನುತ್ತ ಶಶಾಂಕನ ತಲೆ ತಟ್ಟಹತ್ತಿದರು. ಅವನಿಗೆ ನಿದ್ದೆ ಹತ್ತಿತು.

‘ ನೀವು ಹೋಗಿರಿ. ನಾನು ಕೂಡುವೆ. ’ ಎಂದನು ನಾಗೇಶ.

‘ ಎಲ್ಲರ ಊಟವಾಯಿತೇ? ನೀನು ಉಂಡೆಯಾ? ’ ಎಂದು ನಗುತ್ತ ಕೇಳಿದರು.

‘ ನನಗೆ ಎಲ್ಲರೂ ಚೇಷ್ಟೆ ಮಾಡುವರು. ಆದುದರಿಂದ ಸ್ವಲ್ಪೇ ಉಂಡಿದ್ದೇನೆ. ಎಲ್ಲರೂ ನನ್ನನ್ನು ರೇಗಿಸುವರು. ’ ಎಂದನು ನಾಗೇಶ.

‘ ನೀನು ನನ್ನೊಡನೆ ಊಟಮಾಡು. ಅವರು ರೇಗಿಸಿದರೆ ನೀನೂ ಅವರನ್ನು ರೇಗಿಸಬೇಕು. ’ ಎಂದರು

ಆಸ್ತಿಕರು ಹೋದರು. ಇಂದು ಆಶ್ರಮಕ್ಕೆ ಋಷಿಗಳು ಬರುವವರಿದ್ದರು. ಸಧ್ಯಸ್ಥಿತಿಯ ವಿಚಾರವಿನಿಮಯವಾಗುವದಿತ್ತು. ಆಸ್ತಿಕರು ಅಂಗಳದಲ್ಲಿ ಅತ್ತಿತ್ತ ಅಡ್ಡಾಡಹತ್ತಿದರು.

ಆಸ್ತಿಕ! ಎಂತಹ ಮಂಗಲ ನಾಮ! ಮಾನವ್ಯದ ಮೇಲೆ ವಿಶ್ವಾಸ ವಿಡುವವರೇ ನಿಜವಾದ ಆಸ್ತಿಕರು. ದೇವಧರ್ಮದ ಮೇಲೆ ವಿಶ್ವಾಸವಿಟ್ಟು ಮನುಷ್ಯರನ್ನು ತಿರಸ್ಕರಿಸುವವರು ಆಸ್ತಿಕರೇ ?' ತಾವೇ ಶ್ರೇಷ್ಠರು, ತಮ್ಮ ಜಾತಿಯೇ ಶ್ರೇಷ್ಠ, ತಮ್ಮ ರಾಷ್ಟ್ರವೇ ಶ್ರೇಷ್ಠ ಎಂದು ತಿಳಿದು, ಉಳಿದವರನ್ನು ಕೀಳುಬಗೆಯುವವರು ಆಸ್ತಿಕರೇ ?

ಆಸ್ತಿಕರು ಅಂಗಳದಲ್ಲಿ ವಿಚಾರ ಮಗ್ನರಾಗಿ ಓಡಾಡುತ್ತಿದ್ದರು. ಅವರಿಂದ ಶ್ರದ್ಧಾ, ತ್ಯಾಗಗಳು ಭಾರತವರ್ಷದಲೆಲ್ಲ ಹರಡುತ್ತಿದ್ದವು ಅಲ್ಲಿಂದಲೇ ನವತರುಣರಿಗೆ ಸ್ಫೂರ್ತಿದೊರೆಯುತ್ತಿತ್ತು. ನವನಾರಿಯರಿಗೆ ನವಜೀವನವು ಸಿಗುತ್ತಿತ್ತು. ಹೊಸ ಕಲ್ಪನೆಗಳಿಗೆ ಅವರೇ ಆಧಾರ. ಸರ್ವರ ಅಂತಃಕರಣವನ್ನು ತಣಿಸುವ ಶಕ್ತಿಯೇ ಅವರು. ಎಲ್ಲರಿಗೂ ಬೆಳಕನ್ನು ಕೊಡುವ ಸೂರ್ಯರವರು.

ಪ್ರತಿಯುಗದಲ್ಲಿಯೂ ಇಂಥ ವಿಭೂತಿಗಳು ಹುಟ್ಟುತ್ತಿರುತ್ತಾರೆ. ಈ ವಿರಾಟ ಸಂಸಾರವನ್ನು ಮೆಲ್ಲಗೆ ವಿಕಾಸಗೊಳಿಸುತ್ತಾರೆ. ಒಂದೊಂದು ಪಕಳಿ ಅರಳಲು ಒಂದೊಂದುಯುಗ ಬೇಕು. ಹೊಸ ಯುಗವು ಹಳೆಯದನ್ನು ಕಳಚಿ ಒಗೆದು, ಮಾಂಗಲ್ಯಮಯವಾದ ಹೊಸ ಬೆಳಕನ್ನು ಜಗತ್ತಿಗೆ ತೋರಿಸುವದು. ಹೀಗೆಯೇ ಅದರ ವಿಕಾಸ. ಆಯಾ ಶತಕಗಳಲ್ಲಿಯ ದುಷ್ಟ ರೂಢಿಗಳು ಹಿಂದೆ ಬಿದ್ದು, ಹೊಸ ಸಾಂಪ್ರದಾಯಗಳು ಮುಂದೆ ಬರುತ್ತವೆ.

ಈ ಮಾನವಿ ಸಮಾಜರೂಪಿ ತತ್ತಿಗೆ, ಒಂದೇ ಸವನೇ ಶಕೆ ಕೊಡಲ್ಪಡುತ್ತದೆ. ಸಜ್ಜನರ ತಪಸ್ಸಿನಿಂದ ಅದಕ್ಕೆ ಶಕೆ ದೊರೆಯುತ್ತದೆ. ಕೋಳಿಯ ಮೊಟ್ಟೆಯು ಸ್ವಲ್ಪ ಶಕೆಯಿಂದ ಒಡೆದು ಮರಿಯು ಹೊರಬರುತ್ತದೆ. ಆದರೆ ಆದಕ್ಕೆ ಹಾರಲು ಬರುವದಿಲ್ಲ. ಪಕ್ಷಿರಾಜನಾದ ಗರುಡನ ತತ್ತಿಗೆ ಅವನ ತಾಯಿಯಾದ ವಿನತಾತಾಯಿಯು ಸಾವಿರ ವರುಷ ಶಕೆ ಕೊಟ್ಟಳಂತೆ. ಆಗ ಆ ಪ್ರತಾಪೀ ಗರುಡನು ಹೊರಬಿದ್ದನು. ವಿಶ್ವವ್ಯಾಪಿಯಾದ ಪರಮಾತ್ಮನನ್ನೇ

ಹೊತ್ತು ಕುಣಿದನು. ಆ ಗರುಡನಾರು? ಆ ಮಹಾತ್ಮನು ಎಲ್ಲಿಯವನು? ವಿನತಾತಾಯಿಯಾರು?

ಮಾನವೀಜೀವನವೇ ಗರುಡ. ಪೂರ್ಣತ್ವವನ್ನು ಪಡೆಯಲು ಅಪೇಕ್ಷಿಸುವ ಜೀವ. ಆ ಗರುಡನಾಗಬೇಕಾದರೆ ದಾರಿಯನ್ನು ಕಾಯ ಬೇಕು. ವಿನತಾ ತಾಯಿಯಂದರೆ, ವಿನಮ್ರವೃತ್ತಿ. ನಮ್ರತೆಯಿಂದ ಕಾರ್ಯವಾಗುವದು. ವಿನಮ್ರರಾಗಿ ಧ್ಯೇಯದಲ್ಲಿ ಶ್ರಧ್ಧೆಯನ್ನಿಟ್ಟು ತಪ ಮಾಡಬೇಕು.

ಇಂತಹ ತಪಸ್ವಿಗಳು ಮಾನವನ ಪರಿಪೂರ್ಣತೆಗೆ ಶಿಕೆಯನ್ನು ಕೊಡು ತ್ತಾರೆ. ಅಂಥ ತಪಸ್ವಿಗಳಲ್ಲಿ ಈ ಆಸ್ತಿಕರೊಬ್ಬರು.

ಇಷ್ಟರಲ್ಲಿ, ಆಶ್ರಮಕ್ಕೆ ಋಷಿಗಳು ಬಂದರು. ಆಸ್ತಿಕರು ಬರಮಾಡಿ ಕೊಂಡರು. ಕುಶಲ ಪ್ರಶ್ನೆಗಳನ್ನು ಕೇಳಿದರು. ಪಾದಪ್ರಕ್ಷಾಲನೆಯನ್ನು ಮಾಡಿದರು. ಸ್ವಲ್ಪ ಉಪಹಾರವನ್ನು ಕೊಟ್ಟರು. ಹುಡುಗರೆಲ್ಲ ಮಲಗಿ ದ್ದರು. ಎಲ್ಲ ವ್ಯವಸ್ಥೆಯನ್ನು ಆಸ್ತಿಕರೇ ಮಾಡಿದ್ದರು. ನಂತರ ಎಲ್ಲ ಋಷಿಗಳು ಅಂಗಳದಲ್ಲಿ ಬಂದು ಕುಳಿತರು- ಬಕುಲ ವೃಕ್ಷವು ಸುಗಂಧವನ್ನು ಬೀರುತ್ತಿತ್ತು.

' ಹೂಗಳ ಪರಿಮಳವು ಬರುತ್ತಿದೆ ' ಎಂದನು ಹಾರೀತ

' ಆಯಾ ಋತುಗಳಲ್ಲಿ ಆಯಾ ಹೂಗಳು. ಸೃಷ್ಟಿಯ ವಿವಿಧತೆಯು ಅಪೂರ್ವವಿದೆ. ವಿವಿಧತೆಯಲ್ಲಿ ಆನಂದವಿದೆ. ಜೀವನಕ್ಕೆ ಒಂದು ಬಗೆಯ ನಾವೀನ್ಯತೆಯನ್ನು ಕೊಡುತ್ತದೆ " ಎಂದನು ದಧೀಚಿ

" ಆದರೆ ಈ ವಿವಿಧತೆಯು ಇಂದು ಬೇಡವಾಗಿದೆ. ಯಾವದು ಭಾಗ್ಯವೋ ಅದು ದುರ್ಭಾಗ್ಯವೆನಿಸಹತ್ತಿದೆ. ಆರ್ಯರಿಗೆ ನಾಗರು ಬೇಡವಾಗಿ ದ್ದಾರೆ. ಜನಮೇಜಯನು ಹಟ ಹಿಡಿದಿದ್ದಾನೆ. ಇದಕ್ಕೇನು ಉಪಾಯ? ಮತ್ತೆ ಯುದ್ಧವಾಗುವದೇ? ಏನೂ ತಿಳಿಯಲೊಲ್ಲದು." ಎಂದನು ಯಜ್ಞ ಮೂರ್ತಿ.

" ಪ್ರಾಚೀನ ಕಾಲದಲ್ಲಿ ದಧೀಚಿಯು ಮಾಡಿದಂತೆ ನಾವೂ ಇಂದು ತ್ಯಾಗ ಮಾಡೋಣ ಬನ್ನಿ. ತಪೋಮೂರ್ತಿ ದಧೀಚಿಯು ತನ್ನ ಬಲಿ

ದಾನವನ್ನು ಮಾಡಿದ. ಅವನ ಎಲುವುಗಳನ್ನು ತೆಗೆದುಕೊಂಡು ಇಂದ್ರನು ವಜ್ರಾಯುಧವನ್ನು ಮಾಡಿದ. ಇದರ ಅರ್ಥವೇನು ? ಆ ಮುಷ್ಟಿಯಷ್ಟಿರುವ ಎಲುವಿನಲ್ಲಿ ಇಂದ್ರನ ವಜ್ರಕ್ಕಿಂತಲೂ ಹೆಚ್ಚು ಸಾಮರ್ಥ್ಯವಿದ್ದಿತೇ ? ಅಹುದು. ಅದರಲ್ಲಿ ಅನಂತ ತ್ಯಾಗವಿದ್ದಿತು. ಮಾನವಜಾತಿಯ ಬಗ್ಗೆ ಪ್ರೇಮ ತುಂಬಿದ್ದಿತು. ಹುತಾತ್ಮಾ ದಧೀಚಿಯ ಆ ಎಲುಬನ್ನು ನೋಡಿದೊಡನೆಯೇ ವೃತ್ರಾಸುರನು ನೆಲಕ್ಕೇ ಬಿದ್ದನು. ಈ ಅಂಜಿಕೆಯಿಂದಲೇ ಅವನು ಪ್ರಾಣವನ್ನೇ ಬಿಟ್ಟನು. "ತ್ಯಾಗೇನ ಏಕೇನ ಅಮೃತತ್ವಮಾನಶುಃ" ತ್ಯಾಗದಿಂದ ಎಲ್ಲವೂ ಸಿಗುವದು. ತನ್ನ ಜೀವವನ್ನರ್ಪಿಸುವದಕ್ಕಿಂತ ಹೆಚ್ಚಿನ ತ್ಯಾಗ ವೇನಿದೆ ? "ಜನಮೇಜಯನ ಎದುರಿಗೆ ಹೋಗಿ ನಿಲ್ಲಬೇಕು. ಅವನು ನಾಗರನ್ನು ಅಗ್ನಿಯಲ್ಲಿ ಹಾಕಹತ್ತಿದ್ದಾನೆ. ಅದಕ್ಕೆ ಸರ್ಪಸತ್ರವೆಂದು ಹೆಸರಿಟ್ಟಿರುವನು. ನಾಗಜನಾಂಗವು ಸರ್ಪ ? ಛೀ ? ಇವರನ್ನು ಕೊಲ್ಲುವದರಿಂದ ದೇವರು ತುಷ್ಟನಾಗುವನೇ ? ಅವನ ಅಹಂಕಾರವು ಶಾಂತವಾದೀತು. ಜನಮೇಜಯನ ಕಣ್ಣು ತೆರೆಯುವದಕ್ಕಾಗಿ, ನಾವು ನಮ್ಮ ಪ್ರಾಣಗಳನ್ನು ಹೋಮಿಸೋಣ ಬನ್ನಿ. ಅವನ ನರಮೇಧದಲ್ಲಿ ಆಹುತಿಯಾಗೋಣ ಬನ್ನಿ. ಆಶ್ರಮದಲ್ಲಿಯ ಅನೇಕ ವಿದ್ಯಾರ್ಥಿಗಳೂ ನನ್ನೊಡನೆ ಬರುವವರಿದ್ದಾರೆ. ಆದರೆ ಅವರನ್ನು ಮೊದಲು ಅವರ ತಂದೆತಾಯಿಗಳಿಗೆ ಒಪ್ಪಿಸುತ್ತೇನೆ. ಮುಂದೆ ಅವರು ಬೇಕಾದದ್ದನ್ನು ಮಾಡಲಿ. ಎಂದು ಹೇಳುವವನಿರುವೆ. ನನಗಂತೂ ಹೋಗಬೇಕೆನಿಸಿದೆ. ದಾರಿಯಲ್ಲಿ ಸಮಾನಧರ್ಮಿಗಳು ಸಿಗಬಹುದು. ಇದರಿಂದ ಜನಮೇಜಯನ ಮೇಲೆ, ದೊಡ್ಡ ಪರಿಣಾಮವಾಗುವದು. ನಿಸ್ವಾರ್ಥ ಬಲಿದಾನದಲ್ಲಿ ಪರ್ವತವನ್ನು ಕೂಡ ಒಡೆಯುವ ಸಾಮರ್ಥ್ಯವಿದೆ. ಸಾವಾಗಿಯೇ ಮಾಡಿದ ಪ್ರಾಣಾರ್ಪಣವು ಅಪೂರ್ವವಾದುದು" ಎಂದು ನನ್ನ ಮನಸ್ಸಿನಲ್ಲಿ ವಿಚಾರಗಳು ಬರುತ್ತವೆ ಎಂದು ಆಸ್ತಿಕರು ಮಾತನಾಡಿದರು.

"ಇಂದ್ರನು ದಂಡೆತ್ತಿ ಬರುವನೆಂದು ಕೇಳುತ್ತೇವೆ. ಜನಮೇಜಯನು ಅವನಿಗೆ ಅಪಮಾನಕಾರಕ ಪತ್ರ ಬರೆದಿರುವನಂತೆ." ಎಂದನು **ಹಾರೀತ.**

" ಎರಡೂ ಕಡೆಯ ಸಾವಿರಾರು ಸೈನಿಕರು ಪ್ರಾಣ ಕಳೆದುಕೊಳ್ಳುವ ಮೊದಲೇ, ನಾವು ಈ ಪ್ರಯೋಗವನ್ನು ಮಾಡೋಣ. ತಪಸ್ವಿಗಳಾದ ನಾವು ಈ ಅಗ್ನಿಯಲ್ಲಿ ದೇಹವನ್ನು ಹೋಮಿಸುವ ತಪವನ್ನಾಚರಿಸೋಣ. ಅಂದರೆ ಇಂದ್ರನಿಗೆ ಯುದ್ಧ ಮಾಡುವ ಪ್ರಸಂಗವೇ ಬರಲಿಕ್ಕಿಲ್ಲ. ಪ್ರೇಮ ಹುಟ್ಟಬೇಕು. ದ್ವೇಷಾಸೂಯೆಗಳು ಶಮನವಾಗಬೇಕೆಂದು ನಾವು ಆತ್ಮಾರ್ಪಣೆಯನ್ನು ಮಾಡಿದರೆ ಅದು ವ್ಯರ್ಥವಾಗುವದೇ! ಅದು ವ್ಯರ್ಥವಾದರೆ, ಯುದ್ಧ ಮಾಡುವವರು ಮಾಡೇ ಮಾಡುವರು. ಆದರೆ ಜಗತ್ತಿನಲ್ಲಿ ಯಾವದೂ ವ್ಯರ್ಥ ಹೋಗುವದಿಲ್ಲವೆಂಬುದನ್ನು ಮರೆಯಬಾರದು. ಕೊನೆಗೆ ನಮ್ಮ ಬಲಿದಾನವು ವಿಚಾರ ಮಾಡಲಿಕ್ಕೆ ಹಚ್ಚುವದು. ಮನುಷ್ಯನು ಎಷ್ಟೇ ದುಷ್ಟನಾದರೂ ಅವನ ಅಂತಃಕರಣದೊಳಗೆ ಸ್ವಲ್ಪಾದರೂ ಒಳ್ಳೇತನವಿದ್ದೇ ಇರುತ್ತದೆ. ಭೂಗರ್ಭದಲ್ಲಿ ಶಿಲೆಗಳಿವೆ. ಮೇಲಿನ ಕಲ್ಲು ಮಣ್ಣುಗಳನ್ನು ತೆಗೆದರೆ, ಹರಿಯುವ ನೀರು ಕಂಡಿತು. ಮನುಷ್ಯನ ಸತ್ವವೃತ್ತಿಯ ಮೇಲೆ, ಅಹಂಕಾರದ ದುಷ್ಟ ಆಕಾಂಕ್ಷೆಗಳ ಕಲ್ಲು ಮಣ್ಣುಗಳಿದ್ದು, ನಮ್ಮ ಬಲಿದಾನದಿಂದ ಅವುಗಳನ್ನು ಸರಿಸಲು ಯತ್ನಿಸೋಣ. ನಾವು ದಿನಾಲು ಅಗ್ನಿಯನ್ನು ಪೂಜಿಸುತ್ತೇವೆ. ಸಮಿಧಗಳನ್ನು ಅರ್ಪಿಸುತ್ತೇವೆ. ಆದರೆ ಒಂದು ದಿನ ಕೆಳಗಿನ ವಿಚಾರಗಳು ಬಂದವು. ಧೈರ್ಯಸಿದ್ಧಿಗಾಗಿ ದೇಹಾರ್ಪಣ ಮಾಡುವದೇ ನಿಜವಾದ ಅಗ್ನಿಪೂಜೆ. ಈ ಕಟ್ಟಿಗೆಗಳನ್ನು ಸುಡುವುದರಿಂದ ನಮಗೆ ಬೆಳಕು ದೊರೆಯಲಾರದು. ಜೀವನದಲ್ಲಿ ಜ್ಞಾನಾಗ್ನಿಯು ಬೆಳಗಲಾರದು. ದೇಹದ ಸಮಿಧವನ್ನು ಅರ್ಪಿಸೋಣ. ನಮ್ಮ ಆಸಕ್ತಿ, ಕ್ಷುದ್ರವಾಸನಾ ವಿಕಾರಗಳ ಸಮಿಧವನ್ನು ಹೋಮಿಸಿದರೇ ಜ್ಞಾನಾಗ್ನಿಯು ಪ್ರಜ್ವಲಿತವಾಗುವದು. ಇಂದಿನ ಅಜ್ಞಾನಾಂಧಃಕಾರದಲ್ಲಿ ವಿಚಾರಾಗ್ನಿಯನ್ನು ಹೊತ್ತಿಸಬೇಕಾಗಿದೆ. ದ್ವೇಷವು ಥೈ ಥೈ ಕುಣಿಯುತ್ತಿರುವಾಗ ಪ್ರೇಮಜ್ಯೋತಿಯನ್ನು ಬೆಳಗಿಸಬೇಕಾಗಿದೆ. ಇದಕ್ಕೆ–ಆತ್ಮ ಹೋಮ ಒಂದೇ ಉಪಾಯ. " ಏಷ ಏವ ಪಂಥಾ ವಿದ್ಯತೆ ಆಯನಾಯ ನಾನ್ಯಃ ಪಂಥಾ " | ಎಂಬ ಒಂದೇ ದಾರಿ. ಯುದ್ಧ ಮಾಡಬಹುದು. ಆದರಿಂದ ದ್ವೇಷವು ಇನ್ನೂ ಹೆಚ್ಚಬಹುದು. ಮುಂದಿನ ಸಂತತಿಗೂ ಈ ವೈರವನ್ನು ಮುಟ್ಟಿ

ಸುವದು. ಈ ಎಲ್ಲವುಗಳಿಗಿಂತ ನಿರ್ವೈರವಾಗುವ ಮಾರ್ಗವನ್ನು ಅವಲಂಬಿಸೋಣ ಬನ್ನಿ. ಆತ್ಮನೇ ಯಜಮಾನ, ಶ್ರದ್ಧೆಯೇ ಪತ್ನಿ, ಈ ದೇಹವೇ ಹವಿಸ್ಸು, ಇಂತ ದಿವ್ಯ ಯಜ್ಞವನ್ನು ಮಾಡೋಣ ಬನ್ನಿ. ತಮಗೆಲ್ಲ ಏನೆನಿಸುವದು ?" ಎಂದನು ಆಸ್ತಿಕ.

"ತಮ್ಮ ವಿಚಾರಗಳು ಯೋಗ್ಯವಾಗಿವೆ. ಭರತಖಂಡಕ್ಕೆ ಯಾವಾಗಲೂ ಪ್ರಕಾಶವನ್ನು ಕೊಡುವ, ಮಾರ್ಗದರ್ಶಕ ಮಾಡುವ, ಪವಿತ್ರವಾದ ಪ್ರೇಮ ಜ್ಯೋತಿಯೊಂದನ್ನು ಹೊತ್ತಿಸೋಣ. ನನ್ನ ಹೆಸರು ಯಜ್ಞಮೂರ್ತಿ. ನಿಮ್ಮೊಡನೆ ನನ್ನ ಹೆಸರನ್ನೂ ಸಾರ್ಥಕ ಮಾಡಗೊಡಿರಿ." ಎಂದನು ಯಜ್ಞಮೂರ್ತಿ.

'ನನ್ನ ಹೆಸರು ದಧೀಚಿ. ಆ ಮಹಋಷಿಯ ಹೆಸರಿನ ಕೀರ್ತಿ ಉಳಿಯುವಂತೆ ನನಗೂ ಅವಕಾಶ ಕೊಡಿರಿ.' ಎಂದನು ದಧೀಚಿ.

ನನ್ನ ಹೆಸರು ಹಾರೀತ. ಸರ್ವಸೃಷ್ಟಿಯನ್ನು ಹಸರು ಮಾಡುವವನು ಹಾರೀತನೇ ? ಜೀವನದಲ್ಲಿ ಹಸಿರು ಉಂಟು ಮಾಡುವವನು ಹಾರೀತನೇ ? ಇಂದು ಜೀವನವು ನೀರಸವಾಗಿದೆ. ಶುಷ್ಕವಾಗಿದೆ. ಸಹಾನುಭೂತಿಯು ಸಂಪುಷ್ಟಕ್ಕೆ ಬಂದಿದೆ. ಮಾನವೀ ಜೀವನಕ್ಕೆ ಜೀವಕಳೆಯನ್ನು ಕೊಡುವ ಎಲ್ಲ ಕಲೆಗಳು ಬತ್ತಿ ಹೋಗಿವೆ. ಹೀಗೆ ಮಾನವ ಸಮಾಜವು ಭಣಗುಟ್ಟುತ್ತಲಿದೆ. ಇಂತಹ ಸಮಯದಲ್ಲಿ ಕೊನೆಯ ಯಜ್ಞವನ್ನು ನನಗೆ ಮಾಡಗೊಡಿರಿ. 'ಯಜ್ಞಾತ್ ಭವತಿ ಪರ್ಜನ್ಯಃ' ಎಂದು ಕೃಷ್ಣ ಹೇಳಿದ್ದಾನೆ. ನಾವು ಬಲಿದಾನಮಾಡೋಣ. ಅಂದರೆ ಎರಡನೆಯವರ ಹೃದಯದಲ್ಲಿ ಪ್ರೇಮದ ಮಳೆಯಾದೀತು. ಅವರ ಕಣ್ಣುಗಳಿಂದ ಪ್ರೇಮದ ಮಳೆ ಬಂದೀತು. ನಿಜವಾಗಿಯೂ 'ಯಜ್ಞಾತ್ ಭವತಿ ಪರ್ಜನ್ಯಃ ಎಂಬ ಚರಣದ ಅರ್ಥವು ಈಗ ನನಗೆ ಹೊಳೆಯಿತು. ಗಂಭೀರವಾದ ಅರ್ಥ. ಆಕಾಶದ ಮಳೆಗಾಗಿ ಹೊರಗಿನ ಸಮಿಧೆಗಳು. ಜೀವನದಲ್ಲಿಯ ಮಳೆಗಾಗಿ ದೇಹವೇ ಸಮಿಧೆ." ಎಂದನು ಹಾರೀತ.

"ಏನೇನು ಬೇಕೋ ಅದೆಲ್ಲವೂ ಯಜ್ಞದಿಂದ ದೊರೆಯುವದೆಂದು ಭಗವಂತನು ಮೊದಲೇ ಹೇಳಿದ್ದಾನೆ. ಯಜ್ಞವೆಂದರೆ ಕಾಮಧೇನು, ಕಲ್ಪ

ವೃಕ್ಷ. ನಾವೂ ಯಜ್ಞವನ್ನು ಮಾಡೋಣ. ಜ್ಞಾನದೀಪವನ್ನು ಹಚ್ಚೋಣ." ಎಂದನು ಆಸ್ತಿಕ.

'ಗುರುದೇವ! ಶಶಾಂಕನು ನಿಮ್ಮನ್ನು ಕರೆಯುವನು." ಎಂದನು ನಾಗೇಶ.

"ನಾನು ಸ್ವಲ್ಪ ಹೋಗಿಬರುವೆ. ನೀವು ವಿಚಾರ ಮಾಡಿರಿ. ಶಶಾಂಕ ಜೇನೆ ಬಿದ್ದಿರುವ. ವತ್ಸಲಾ ನಾಗಾನಂದರ ಮಗ. ನೀವೂ ಅವರ ಹೆಸರನ್ನು ಕೇಳಿರಬೇಕು. ಪವಿತ್ರವಾದ ಹೆಸರುಗಳು "ಎನ್ನುತ್ತ ಆಸ್ತಿಕನು ಒಳಗೆ ಹೋದನು.

ಶಶಾಂಕನು ತಳಮಳಿಸುತ್ತಿದ್ದನು. ಆಸ್ತಿಕರು ಅವನ ಕೈಹಿಡಿದು ನೋಡುತ್ತಾರೆ ಬೆಂಕಿಯಾಗಿದೆ, ತಲೆಯಮೇಲೆ ಪ್ರೇಮದಿಂದ ಕೈಯಾಡಿಸಿದರು. ಜ್ವರದಿಂದ ಕುದಿಯುತ್ತದೆ ಮೈ.

'ಮಗು ಹೇಗೆನಿಸುತ್ತಿದೆ?' ಎಂದನು ಆಸ್ತಿಕ.

''ನೀವು ಕೈಯಾಡಿಸಿದರೆ ನನಗೆ ಸಮಾಧಾನವೆನಿಸುತ್ತದೆ. ನಿಮ್ಮ ಕೈಯು ತಾಯಿಯದಿದ್ದಂತಿದೆ. ನೀವು ಜಗತ್ತಿನ ತಾಯಿ. ತಾಯಿಯ ಕೈಗಿಂತಲೂ ಪ್ರೇಮದ ಕೈ ನಿಮ್ಮದು. ನೀವು ಎಲ್ಲಿ ಹೋಗಿದ್ದಿರಿ? ಈಗ ಇಲ್ಲಿಯೇ ಕೂಡಿರಿ. ನಾಗೇಶ ಮಲಗಲಿ. ತಾತಾ, ನೀವು ಏನುಮಾಡುತ್ತಿದ್ದೀರಿ?" ಎಂದು ಶಶಾಂಕನು ಪ್ರೇಮದ ದೃಷ್ಟಿಯಿಂದ ನೋಡಿದನು.

"ಹಾರೀತ ಮೊದಲಾದ ಮಹರ್ಷಿಗಳು ಆಶ್ರಮಕ್ಕೆ ಬಂದಿದ್ದಾರೆ. ಜನಮೇಜಯನ ದ್ವೇಷಾಗ್ನಿಯನ್ನು ಹೇಗೆ ಕಡಿಮೆ ಮಾಡಬೇಕೆಂದು ವಿಚಾರಿಸುತ್ತಿದ್ದೆವು." ಎಂದನು ಆಸ್ತಿಕ

"ನನ್ನ ತಂದೆಯ ಕೊಳಲು ಶಾಂತ ಮಾಡುವದು. ಎಂತಹ ಸವಿ ಆ ಕೊಳಲು. ಅಲ್ಲವೆ ತಾತ?" ಎಂದನು ಶಶಾಂಕ.

"ಅಹುದು. ನಿಮ್ಮ ತಂದೆಯ ಜೀವನವೇ ಅಂತಹ ಪ್ರೇಮಮಯ. ಆದುದರಿಂದ ಆ ಕೊಳಲು ಹಾಗೇ ನುಡಿಯುತ್ತದೆ. ಅವನು ತನ್ನ ಜೀವನವನ್ನು ಮಧುರಗೊಳಿಸಿದ್ದಾನೆ. ಯಾರ ಜೀವನದ ಕೊಳಲಲ್ಲಿ ಅಪಸ್ವರವಿಲ್ಲವೋ ಅವರ ಕೊಳಲು ಮಧುರ ನುಡಿಯುತ್ತದೆ." ಎಂದನು ಆಸ್ತಿಕ

"ನೀವು ಇಲ್ಲಿಂದ ಏಕೆ ಹೋಗುವಿರಿ? ನನ್ನನ್ನು ಬಿಟ್ಟು ಹೋಗಬೇಡಿರಿ. ಇಂದು ನೀವು ಅನ್ನುತ್ತಿದ್ದಂತೆ, ಹೋಮಕುಂಡದಲ್ಲಿ ನಿಮ್ಮೊಡನೆ ನಾನು ಹಾರುವೆ, ನಾಗೇಶನು ಹತ್ತರವಿದ್ದರೆ, ಗಂಗೆಯಲ್ಲಿ ಜಿಗಿಯುವೆ. ನೀವು ಹತ್ತರವಿದ್ದರೆ, ಅಗ್ನಿಯಲ್ಲಿ ಧುಮುಕುವೆ, ನನ್ನನ್ನು ಕರೆದೊಯ್ಯುವಿರಷ್ಟೇ ?" ಎಂದು ತೊಡೆಯ ಮೇಲೆ ತಲೆಯಿಟ್ಟು ವಿಚಾರಿಸಿದನು.

"ನಿನ್ನ ತಲೆ ಎಷ್ಟು ಸುಡುತ್ತದೆ! ದೇವರು ಮೊದಲು ನಿನ್ನನ್ನು ಶುದ್ಧ ಮಾಡುವಂತೆ ಕಾಣುತ್ತದೆ. ಶಶಾಂಕಾ! ನಾನು ಸ್ವಲ್ಪ ಹೋಗಿಬರಲಾ! ಅಲ್ಲಿ ಕಾದು ಕೂತಿದ್ದಾರೆ." ಎಂದನು ಆಸ್ತಿಕ.

"ಹೋಗಿರಿ! ನಡನಡುವೆ ಬನ್ನಿರಿ. ನಿಮ್ಮನ್ನು ನೋಡಬೇಕೆನಿಸುತ್ತದೆ ತಾತಾ!" ಎಂದನು.

"ಇಲ್ಲಿ ನಾಗೇಶನಿರುವನು," ಎಂದು ಆಸ್ತಿಕನು ಹೊರಟನು.

ಇತ್ತ ಋಷಿಗಳ ಚರ್ಚೆಯು ಸಾಗಿತ್ತು,

"ಆಶ್ರಮವಾಸಿಗಳ ಮೇಲೆ ಆಸ್ತಿಕರದು ಎಷ್ಟು ಪ್ರೇಮ!" ಎಂದನು ದಧೀಚಿ.

"ಇವರ ಆಶ್ರಮದಿಂದ ಹೊರಬಿದ್ದವರೆಲ್ಲರೂ ದೊಡ್ಡದೊಡ್ಡ ಕಾರ್ಯಗಳನ್ನು ಮಾಡುತ್ತಿದ್ದಾರೆ. ಆಸ್ತಿಕನೆಂದರೆ ಸೇವಾಮೂರ್ತಿ. ಪ್ರೇಮಮೂರ್ತಿ. ಜ್ಞಾನಮೂರ್ತಿ. ನಾನು ಹಿಂದೊಮ್ಮೆ ಬಂದಿದ್ದೆ. ಆಸ್ತಿಕರು ಒಬ್ಬ ಹುಡುಗನ ಹಲ್ಲನ್ನು ತಿಕ್ಕುತ್ತಿದ್ದರು. ಸಿಟ್ಟಿನಿಂದಲ್ಲ, ಪ್ರೇಮದಿಂದ. ನನಗೆ ಆಶ್ಚರ್ಯವಾಯಿತು." ಎಂದನು ಯಜ್ಞಮೂರ್ತಿ.

"ನಾನು ಇಲ್ಲಿಗೆ ಒಮ್ಮೆ ಬಂದಿದ್ದೆ. ಕಟ್ಟಿಗೆಯನ್ನು ತರುವದಕ್ಕೆ ಎಲ್ಲ ಹುಡುಗರ ಸಂಗಡ ಹೋಗಿದ್ದೆ. ಕೆಲವು ಹುಡುಗರು ಹಸಿರು ಟೊಂಗೆಯನ್ನು ಮುರಿಯಹತ್ತಿದರು. ಆಗ ಆಸ್ತಿಕರೆಂದರು 'ಒಣ ಕಟ್ಟಿಗೆ ಬೇಕಾದಷ್ಟಿವೆ. ಹಸಿರು ಟೊಂಗೆಯನ್ನೇಕೆ ಮುರಿಯುವಿ? ಒಣ ಕಟ್ಟಿಗೆಗಳಿಲ್ಲದಿದ್ದಾಗ ಹಸಿ ಕಟ್ಟಿಗೆಯನ್ನು ಒಯ್ಯಬೇಕು. ಒಣಗಿದ ಕಟ್ಟಿಗೆಗಳನ್ನು ಮೊದಲು ಒಯ್ಯುವಾ' ಅವರ ದೃಷ್ಟಿ ಇಂತಹದು. ನಾನು ಆಶ್ಚರ್ಯಚಕಿತನಾದೆ. ಗಿಡದ ಟೊಂಗೆಗಳನ್ನು ಮುರಿದು ಸುಮ್ಮ ಸುಮ್ಮನೆ ಗಿಡಕ್ಕೆ ಯಾಕೆ

ದುಃಖಕೊಡಬೇಕೆನ್ನುವ ಪ್ರೇಮಲ ದೃಷ್ಟಿಯು ಅವರದಿದೆ. ಜನಮೇಜಯ ನೆದುರಿಗೆ ಹೋಗಿ ಅವರು ನಿಂತರೆ, ಅವನ ಸ್ಥಿತಿಯೇನಾದೀತು ? ಅವರು ಹೋಗುವಾಗ ಮಾರ್ಗದಲ್ಲಿಯ ಲಕ್ಷಾಂತರ ಜನರಿಗೆ ಅವರನ್ನು ನೋಡಿ ಏನೆನಿಸಬಹುದು ? ಲಕ್ಷಾಂತರ ಜನರೇನು ಸುಮ್ಮನಿರುವರೋ ? ಅವರು ಅವರ ಬೆನ್ನಹತ್ತಬಹುದು. ಇಂದ್ರನ ಸೈನ್ಯ ನಾಶವಾಗಬಹುದು. ಆದರೆ ಈ ಶಾಂತಿ ಸೈನ್ಯವು ಹೇಗೆ ನಾಶವಾದೀತು ? ನಾವು ಭೂಮಿಯನ್ನು ಹಸಿರು ಹಸಿರಾಗಿ ಮಾಡುವಾ, ಜೀವನಸೃಷ್ಟಿ, ಭಾರತೀಯ ಸೃಷ್ಟಿ ! ಸುಂದರ ವಾದ ಈ ಭಾರತ ಭೂಮಿಯಲ್ಲಿರುವ ಜೀವನವು ಸಹ ಸುಂದರವಾದೀತು. ! ಭಾರತ ವರ್ಷದಲ್ಲಿ ತೇಜಸ್ವಿಗಳೂ, ಶಾಂತರೂ ಇದ್ದರೆ ! ಇಲ್ಲಿಯ ಜನತೆ ಯಲ್ಲಿ ನಿರ್ಮಲವಾದ ಜ್ಞಾನಸೂರ್ಯನಿರಲಿ; ಮಧುರ ಪ್ರೇಮದ, ಶಾಂತ ಭಾವನೆಗಳ ಚಂದ್ರನು ಬೆಳಗಲಿ. ಸುಂದರವಾದ ಬಾಲಸೃಷ್ಟಿ, ಸುಂದರ ಅನಂತಸೃಷ್ಟಿ! ಆಸ್ತಿಕರು ಮಾರ್ಗವನ್ನು ತೋರಿಸುವರು." ಎಂದನು ಹಾರೀತ

ಈ ಪ್ರಕಾರ ಅವರ ಮಾತುಗಳು ನಡೆದಿದ್ದವು. ಆಸ್ತಿಕರು ಬಂದರು.

" ತಡವಾಗಲಿಲ್ಲವಷ್ಟೇ ? " ಎಂದು ನಮ್ರತೆಯಿಂದ ಕೇಳಿದರು.

" ತಡವಾದರೆ ಏನು ಆಗುತ್ತಿತ್ತು ? ಹುಡುಗನು ನೆಟ್ಟಗಿರುವನೆ ? " ಎಂದನು ಯಜ್ಞಮೂರ್ತಿ

" ಅವನಿಗೆ ನನ್ನ ಹುಚ್ಚು ಹಿಡಿದಿದೆ. ಎಷ್ಟು ಜಾಣ ಹುಡುಗ ! ಇವನ ತಂದೆಯು ಅಲ್ಲಿ ಕೊಳಲೂದುತ್ತ ದ್ವೇಷವನ್ನು ಶಾಂತಗೊಳಿಸುತ್ತಿ ದ್ದಾನೆ. ಈ ಹುಡುಗನ ಮಾತುಗಳು ಕೊಳಲ ಧ್ವನಿಯಂತೆ ಇಂಪಾಗಿವೆ. " ಎಂದು ಆಶ್ಚರ್ಯದಿಂದ ಆಸ್ತಿಕರು ಅಂದರು.

" ಒಬ್ಬ ರಾಜನ ಸೈನ್ಯವನ್ನು ಹೆಂಗಸರು ದಾರಿಯಲ್ಲಿಯೇ ತಡೆದು, ಅವನ್ನು ಹಿಂದಕ್ಕೆ ಕಳಿಸಿದರಂತೆ. ನೂರಾರು ಸ್ತ್ರೀಯರು ಶಾಂತಿಸೂಕ್ತ ಪಠಿ ಸುತ್ತ, ಪ್ರೇಮಗೀತಗಳನ್ನು ಹಾಡುತ್ತ ನಡೆದಿದ್ದರು. ಆ ರಾಜನ ಸೈನ್ಯದೆ ದುರು ಇವರು ನಿಂತರು. " ನಮ್ಮನ್ನು ಕೊಂದು, ಆ ಮೇಲೆ ಮುಂದೆ ಹೋಗಿರಿ. ನಮ್ಮನ್ನು ಆಳಲಿಕ್ಕಾಗಿ ಇಡಬೇಡಿರಿ " ಎಂದು ಅವರು ಅಂದರು.

ಈ ಸ್ತ್ರೀಸೈನ್ಯಕ್ಕೆ ವತ್ಸಲೆಯೇ ಮುಖಂಡಳು. ಅವಳು ಈ ಹುಡುಗನ ತಾಯಿಯಲ್ಲವೇ ? ” ಎಂದನು ಹಾರೀತ.

‘ ಹೌದು ’ ಎಂದರು ಆಸ್ತಿಕರು

‘ ಮತ್ತು ಒಬ್ಬ ನಾಗಕನ್ಯೆಯು ಕೈಯಲ್ಲಿ ಪಂಜನ್ನು ಹಿಡಿದು ರಾಜ ಪುರುಷರಿಗೆ ‘ ಹೋಮಕುಂಡಕ್ಕೆ ಹೆಂಗಸರು ಹೆದರುವದಿಲ್ಲ ’ ಎಂಬುದನ್ನು ತೋರಿಸಿ ಕೊಟ್ಟಳಂತೆ. ರಾಜನ ಅಧಿಕಾರಿಗಳು ಅಲ್ಲಿಂದ ಓಡಿ ಹೋದರಂತೆ. ಆ ಊರಲ್ಲಿಯ ದ್ವೇಷವು ಶಾಂತವಾಗಿ ಸ್ವರಾಜ್ಯ ಸ್ಥಾಪನೆಯಾಗಿದೆಯಂತೆ. ಎಲ್ಲವೂಆಶ್ಚರ್ಯರ್ಕವೇ ’ ಎಂದನು ದಧೀಚಿ

‘ ಇದು ಹೊಸಯುಗವು ಬರುವ ಲಕ್ಷಣ. ಎಲ್ಲ ಸ್ತ್ರೀಪುರುಷರ ಹೃದಯದಲ್ಲಿ ಒಂದೇ ಭಾವನೆ. ಜಾಗೃತವಾಗಿದೆ. ಸ್ತ್ರೀಪುರುಷರಲ್ಲಿ ಅಡ ಗಿದ್ದ ಶಕ್ತಿಯನ್ನು ಜಾಗೃತಗೊಳಿಸಿದ ಶ್ರೇಯಸ್ಸು ಜನಮೇಜಯರಾಜನಿಗೆ ಸಲ್ಲುವದು.’ ಎಂದರು ಆಸ್ತಿಕರು.

‘ ಹಾಗಾದರೆ ಏನು ನಿಶ್ಚಯವಾಯಿತು ? ’ ಎಂದನು ಯಜ್ಞ ಮೂರ್ತಿ

‘ ಒಂದು ದಿವಸ ಹೊರಡೋಣ. ಆಸ್ತಿಕರು ಹೊರಡುವ ದಿವಸ ವನ್ನು ತಿಳಿಸಲಿ. ’ ಎಂದನು ದಧೀಚಿ

‘ ದೊಡ್ಡ ಯಜ್ಞವಾಗುವದೇನು ? ’ ಎಂದರು ಆಸ್ತಿಕರು

‘ ಹೌದು ’ ಎಂದನು ಹಾರೀತ

‘ ಹಾಗಾದರೆ ನೀವು ಈಗ ಪ್ರಚಾರ ಮಾಡಿರಿ. ಹೋಗುವ ದಿವಸವನ್ನು ನಾನು ತಿಳಿಸುವೆನು, ’ ಎಂದರು ಆಸ್ತಿಕರು

‘ ಒಳ್ಳೇದು ’ ಎಂದು ಎಲ್ಲರೂ ಅಂದರು

ಋಷಿಗಳೆಲ್ಲ ನಸುಕಿನಲ್ಲಿ ಬೇಗನೆದ್ದು ಹೊರಟು ಹೋದರು. ಅವರೆಲ್ಲ ಹೋದರು. ಮತ್ತು ವತ್ಸಲಾ ಹಾಗೂ ನಾಗಾನಂದರು ಬಂದರು. ಬಂದು ಶಶಾಂಕನ ಹತ್ತಿರ ಕುಳಿತರು.

‘ ಅವ್ವಾ, ಇಷ್ಟೇಕೆ ತಡಮಾಡಿದೆ ? ’ ಎಂದನು ಶಶಾಂಕ

‘ ನನ್ನಗಿಂತ ಹಿತದವರು ಇಲ್ಲಿದ್ದಾರೆ ಎಂದು ನಾನು ಬರಲಿಲ್ಲ. ಮಗುವೇ, ಈಗಲೂ ನಾನು ಇರುವಂತಿಲ್ಲ. ನಿನಗೆ ಭೆಟ್ಟಿಯಾಗಿ ಹೋಗುವೆ. ಸ್ತ್ರೀಶಾಂತಿಸೇನೆಯೊಡನೆ ನಾನು ಪ್ರಚಾರಕ್ಕೆ ಹೊರಟಿರುವೆ. ತಮ್ಮ ಮಕ್ಕಳು ಮರಿಗಳನ್ನು ಬಿಟ್ಟು, ಅಕ್ಕತಂಗಿಯರು ನನ್ನೊಡನೆ ಬಂದಿದ್ದಾರೆ. ಅಂದಮೇಲೆ ನಾನು ಹೇಗೆ ಇರಲಿ ?” ಅದು ಮೋಹ ಹಾಗೂ ಆಸಕ್ತಿ ಎಂದು ಅನಿಸುವದಿಲ್ಲವೆ ? ಅವರು ಕೂಡ, ಪುರುಷರ ತಂಡವನ್ನು ತೆಗೆದು ಕೊಂಡು ತಿರುಗುತ್ತಿದ್ದಾರೆ. ತಮ್ಮ ಕೊಳಲಿನಿಂದ ಪ್ರೇಮದ ಹುಚ್ಚು ಹಿಡಿಸುತ್ತಿದ್ದಾರೆ. ನಿನ್ನ ಭೆಟ್ಟಿಗಾಗಿ ಬಂದಿದ್ದೇವೆ. ಬೇಗನೆ ನೆಟ್ಟಗಾಗು ’ ಎಂದಳು ವತ್ಸಲೆ.

‘ ಅವ್ವಾ, ನಾನು ನೆಟ್ಟಗಾದೊಡನೆ ತಾತನಕೂಡ ಹೋಗುವೆ. ಅವರು ಒಂದು ವೇಳೆ ಯಜ್ಞಕುಂಡದಲ್ಲಿ ಹಾರಿದರೆ, ನಾನೂ ಅವರೊಡನೆ ಹಾರುವೆ. ಪ್ರಲ್ಹಾದನು ಅಳಲಿಲ್ಲ. ಸುಧನ್ವನು ಶೋಕಿಸಲಿಲ್ಲ. ನಾನು ಕೂಡ ಅಳುವದಿಲ್ಲ. ನಗುತ್ತ ಅಗ್ನಿಯಲ್ಲಿ ಹಾರುವೆ. ನೀನು ಅಳಬೇಡ. ಇದೇನು ಅಳುತ್ತೀಯೇಕೆ ? ’ ಎಂದನು.

“ ನೀನು ಒಬ್ಬನೇ ಇರುವಿ. ಎಂದು ಅಳು ಬಂದಿತು. ” ಎಂದಳು

‘ ನಾನೊಬ್ಬನೇ ಬದುಕುವೆನೆ ? ಬದುಕಿದರೂ ಮುಂದೆ ಸಾಯುವೆ. ಈ ಬೇನೆಯಲ್ಲಿಯೇ ಸತ್ತರೆ ? ಅವ್ವಾ ! ನಾನು ಸಾಯುವದಿಲ್ಲ. ಜನರು ನನ್ನನ್ನು ಅಮರನನ್ನಾಗಿ ಮಾಡುವರು. ನಿನ್ನ ಶಶಾಂಕನು ಅನೇಕ ದಿನ ಗಳ ವರೆಗೆ ಜನರ ನಾಲಿಗೆಯಲ್ಲಿ ನಲಿಯುವನು. ಅವರ ಹೃದಯವಲ್ಲಿ ವಾಸಿಸುವನು. ಶಶಾಂಕನು ಚಿರಂಜೀವಿಯಾಗುವನು ’ ಎಂದನು.

“ ಮಗುವೆ ನೀನು ಒಬ್ಬನೇ ಹೋಗುವಿಯಲ್ಲ, ಎಂದು ದುಃಖವಾಗಿಲ್ಲ. ಈ ಮಹಾಕಾರ್ಯಕ್ಕೆ ಅರ್ಪಿಸಲು ಒಬ್ಬನೇ ಇರುವಿಯಲ್ಲ ಎಂದು ದುಃಖ ವಾಗುತ್ತದೆ.” ಎಂದನು ನಾಗಾನಂದ

‘ ನನಗೂ ಹಿಂದೆ ಹೀಗೇ ಅನಿಸುತ್ತಿತ್ತು ನನಗೆ ಅಣ್ಣನಿಲ್ಲ; ತಮ್ಮನಿಲ್ಲ. ಎಂದು ಅನಿಸುತ್ತಿತ್ತು. ಆದರೆ ಈ ಆಶ್ರಮಕ್ಕೆ ಬಂದೊಡನೆ ಎಷ್ಟು ಮಂದಿ ಅಣ್ಣತಮ್ಮಂದಿರು ಸಿಕ್ಕರು ? ’ ಎಂದನು ಶಶಾಂಕ

'ನಿನಗೆ ಹಾಲು ಕೊಡಲಾ' ಎಂದಳು ತಾಯಿ

'ಕೊಡು' ಎಂದನು

ಆಕೆಯು ಹಾಲು ಕೊಟ್ಟಳು. ತಲೆಯ ಮೇಲೆ ಕೈಯ್ಯಾಡಿಸುತ್ತ ಕುಳಿತಳು.

'ನೀವು ಶೀತಲಾಯಿಯ ಹಾಡನ್ನು ಹಾಡುವಿರಾ?' ಎಂದು ಕೇಳಿದಳು.

"ನಾನು ಈಗ ಮರೆತಿದ್ದೇನೆ" ಎಂದನು ನಾಗಾನಂದ.

"ನೀವು ನನಗೆ ಅಂದು ತೋರಿಸಿದ್ದಿಲ್ಲವೇ ಹಿಂದಕ್ಕೆ?" ಎಂದಳು.

"ಅಹುದು ನೆನಪಿದೆ. ಕಪ್ರೋತಾಕ್ಷಿಯ ತೀರದಲ್ಲಿ. ಬಂಗಾರದ ಮಳೆ ಬಿದ್ದ ದಿನವಲ್ಲವೇ?" ಎಂದನು.

"ಬಂಗಾರದ ಮಳೆಯೋ ?" ಎಂದನು ಶಶಾಂಕ.

"ಅಹುದು ಮಗುವೇ" ಎಂದಳು ತಾಯಿ.

"ನೀವು ಸಂಗ್ರಹಿಸಲಿಲ್ಲವೇ?" ಎಂದನು ಶಶಾಂಕ.

"ತುಂಬಾ ಸಂಗ್ರಹಿಸಿದೆವು. ಆದರಲ್ಲಿಯೋ ಮುಂದೆ ನೀನು ಸಿಕ್ಕಿ. ಹಿಡಿದಿಟ್ಟ ಹೃದಯದ ಪೆಟ್ಟಿಗೆಯಲ್ಲಿ ತುಂಬಿದ ಬಂಗಾರದೊಳಗೆ ನಿನ್ನ ಮೂರ್ತಿಯು ಪ್ರಕಾಶಿಸಿತು. ಬಂಗಾರದ ಮೂರ್ತಿ!" ಎಂದಳು ವತ್ಸಲೆ.

"ಏನು! ನಾನು ಬಂಗಾರನೇ? ಹಾಗಾದರೆ ಅದನ್ನು ಅಗ್ನಿಯಲ್ಲಿ ಹಾಕಿ ಪರೀಕ್ಷಿಸಿ ನೋಡೋಣವೇ?" ಎಂದನು ಶಶಾಂಕ.

"ನೋಡು" ಎಂದಳು ತಾಯಿ.

"ಅಪ್ಪನು ನನಗೆ ಕೊಳಲೂದಲು ಕಲಿಸಲಿಲ್ಲ. ನಾನು ಇಲ್ಲಿ ಕಲಿತೆ. ನೀವು ಎಲ್ಲರ ಮುಂದೆ ಊದುವಿರಿ. ನನ್ನ ಮುಂದೇಕೆ ಊದುವದಿಲ್ಲ? ಇಲ್ಲಿ ಊದಿರಿ. ನಾನು ಕೇಳುವೆ. ಆಶ್ರಮವಾಸಿಗಳೂ ಕೇಳುವರು" ಎಂದನು ಶಶಾಂಕ.

"ನೀನು ನೆಟ್ಟಗಾಗು. ಆ ಮೇಲೆ ಊದುವೆ, ಈಗ ಬೇಡ." ಎಂದನು ನಾಗಾನಂದ.

" ನೆಟ್ಟಿಗಾಗದಿದ್ದರೆ ? " ಎಂದನು ಶಶಾಂಕ.

" ಒಳ್ಳೇದು, ಊದುವೆನು " ಎಂದನು ನಾಗಾನಂದ.

" ಎಲ್ಲರೂ ಕೇಳಿರಿ " ಎಂದು ಹಿಂದೆ ನಿಂತ ಆಸ್ತಿಕರು ನುಡಿದರು.

ಎಲ್ಲರೂ ಕೂಡಿದರು. ಆಸ್ತಿಕರು ಕುಳಿತರು. ನಾಗಾನಂದನು ಕೊಳಲು ನುಡಿಸಿದನು. ಎಂಥ ಸುಂದರ ಹಾಡು ! ಹುಡುಗರಿಗೆ ಸುಮ್ಮನೆ ಕೂಡುವದಾಗಲಿಲ್ಲ. ಕೈ ಕೈ ಹಿಡಿದು ಕುಣಿಯಹತ್ತಿದರು. ಶಶಾಂಕನು ಹಾವಿನ ಹೆಡೆಯಂತೆ ಗೋಣನ್ನೆತ್ತಿ ನೋಡುತ್ತ ಕುಳಿತನು. ಕೊಳಲು ನಿಂತಿತು.

" ನಮಗೆ ಕಲ್ಪನೆ ಬಂದಿತು. ಜನರಿಗೆ ಏಕೆ ಹುಚ್ಚು ಹಿಡಿಯುವದೆಂಬದು ತಿಳಿಯಿತು. ಕೊರಡನ್ನು ಕೊನರಿಸುವ, ಕಲ್ಲನ್ನು ಕರಗಿಸುವ ಶಕ್ತಿಯಿದೆ. ಈ ಸಂಗೀತಕ್ಕೆ " ಎಂದರು ಆಸ್ತಿಕ

" ಬಿದುರಿನ ಕೊಳಲಿನಲ್ಲಿ ಮಧುರ ಸ್ವರವನ್ನು ಹೊರಡಿಸುವದು ಸುಲಭ. ಆದರೆ ಜೀವನದ ಕೊಳಲಿನಲ್ಲಿ ಮಧುರಸ್ವರವು ಹೊರಟರೇ ನಿಜ. ಭಗವಾನ್, ತಮ್ಮ ಜೀವನವೇ ಅಮರವಾದ ಕೊಳಲು. ಅದು ಯಾವಾಗಲೂ ಸಂಗೀತವನ್ನು ಸ್ರವಿಸುತ್ತದೆ " ಎಂದನು ನಾಗಾನಂದ.

ನಾಗಾನಂದ ಹಾಗೂ ವತ್ಸಲೆಯರು ಹೊರಟರು. ಶಶಾಂಕನಿಗೆ ಪ್ರೇಮಾಶ್ರುಗಳಿಂದ ಸ್ನಾನ ಮಾಡಿಸಿದರು.

" ಭಗವಾನ್, ನಾವು ಕರ್ತವ್ಯಕ್ಕಾಗಿ ಹೊರಡುತ್ತೇವೆ " ಎಂದನು ನಾಗಾನಂದ.

" ನನ್ನ ಕೂಸಿಗೆ ಗುರುಮಹಾರಾಜರೇ ದೊಡ್ಡತಾಯಿ. ಈ ತಾಯಿಯ ಆವಶ್ಯಕತೆಯಿಲ್ಲ " ಎಂದಳು ವತ್ಸಲೆ.

" ತಾಯಿಯ ಪ್ರೇಮಸಿಂಧುವಿನ ಒಂದು ಬಿಂದುವಿನಲ್ಲಿ ಕೋಟಿ ಕೋಟಿ ಆಸ್ತಿಕರು ತೇಲಿ ಹೋಗುವರು " ಎಂದರು ಆಸ್ತಿಕ

ಆಸ್ತಿಕರು ಕಳಿಸಲು ಹೊರಬಂದರು. ಇಬ್ಬರೂ ನಮಸ್ಕರಿಸಿದರು. ಆಸ್ತಿಕರು ಆಶೀರ್ವದಿಸಿದರು. ಜಲಾಶಯದವರೆಗೆ ಕಳಿಸಿ ಬಂದರು. ಆಶ್ರಮದ ಹುಡುಗರೆಲ್ಲ ಆಶ್ಚರ್ಯದಿಂದ ನೋಡುತ್ತ ನಿಂತಿದ್ದರು.

"ಬೇನೆ ಬಿದ್ದ ಹುಡುಗನನ್ನು ಬಿಟ್ಟು, ತಂದೆತಾಯಿಗಳು ಹೋಗುವದನ್ನು ನಾನು ಇಂದೇ ನೋಡಿದೆ!' ಎಂದನು. ಒಬ್ಬ ವಿದ್ಯಾರ್ಥಿ.

"ಇಂತಹ ಅನೇಕ ಸಂಗತಿಗಳನ್ನು ನೀನು ಬೇಗನೇ ನೋಡುವಿ" ಎಂದರು ಆಸ್ತಿಕ.

---

# ೧೮

ನಾಗಾನಂದ ಹಾಗು ವತ್ಸಲೆಯರು ಎಲ್ಲಿರುವರೆಂಬುದನ್ನು ವಕ್ರ ತುಂಡನು ಶೋಧಿಸುತ್ತಲೇ ಇದ್ದನು. ಆಸ್ತಿಕನ ಆಶ್ರಮಕ್ಕೆ ಬಂದಿರುವ ರೆಂದು ತಿಳಿಯಿತು. ಸೈನ್ಯಸಮೇತನಾಗಿ ಅವರನ್ನು ಹಿಡಿಯಲು ದಾರಿ ಯಲ್ಲಿ ಕುಳಿತಿದ್ದನು ಅವರಿಬ್ಬರನ್ನು ಬಂಧಿಸಿದನು. ಅವನಿಗೆ ಪರಮಾ ನಂದವಾಯಿತು. ರಾಜನಮುಂದೆ ಇವರನ್ನು ಯಾವಾಗ ನಿಲ್ಲಿಸುವೆನೊ ಎಂದು ಅವನಿಗಾಗಿತ್ತು.

ಹಸ್ತಿನಾಪುರಕ್ಕೆ ರಾಜಬಂದಿಗಳೊಡನೆ ಅವನು ರಾತ್ರಿಯಲ್ಲಿ ಬಂದನು. ಅವರನ್ನು ಒಂದು ಕೋಣೆಯಲ್ಲಿ ಹಾಕಿದರು. ಹತ್ತಿರದಲ್ಲಿರುವ ಕೋಣೆಗಳಲ್ಲಿ ಸಾವಿರಾರು ಸ್ಥಾನಬದ್ಧ ನಾಗರಿದ್ದರು. ಅವರಿಗೆ ನಾಗಾನಂದ ಹಾಗು ವತ್ಸಲೆಯರು ಬಂದ ಸುದ್ದಿ ತಿಳಿಯಿತು. ಕೂಡಲೆ ಅವರೆಲ್ಲರೂ 'ವತ್ಸಲಾ ನಾಗಾನಂದರಕೀ ಜಯ' ಎಂದು ಜಯಘೋಷ ಮಾಡಿದರು. ಆದರೆ ನಾಗಾನಂದನು, ಪೋಲೀಸರ ಮುಖಾಂತರ 'ನಮ್ಮ ಜಯ ಜಯಕಾರ ವನ್ನು ಮಾಡಬೇಡಿರಿ. ಆಸ್ತಿಕರ ಜಯ ಜಯಕಾರವನ್ನು ಮಾಡಿರಿ. ಪ್ರೇಮ ಧರ್ಮದ ಹಾಗೂ ಐಕ್ಯಧರ್ಮದ ಜಯ ಜಯಕಾರ ಮಾಡಿರಿ." ಎಂದು ಹೇಳಿ ಕಳಿಸಿದನು.

ಎಲ್ಲ ರಾಜಬಂದಿಗಳು "ಭಗವಾನ್ ಆಸ್ತಿಕರಿಗೆ ಜಯವಾಗಲಿ! ಪ್ರೇಮಧರ್ಮಕ್ಕೆ ವಿಜಯವಾಗಲಿ" ಎಂದು ಗರ್ಜಿಸಿದರು. ಈ ಗರ್ಜ ನೆಯು ಜನಮೇಜಯನ ಕಿವಿಗೆ ಬಿದ್ದಿತು. ಈ ಗರ್ಜನೆಯೇಕೆ ಎಂಬುದು ಅವನಿಗೆ ಹೊಳೆಯಲಿಲ್ಲ. ಅಷ್ಟರಲ್ಲಿ ವಕ್ರತುಂಡನು ಬಂದನು

"ಇಬ್ಬರನ್ನೂ ಹಿಡಿದು ತಂದಿದ್ದೇನೆ" ಎಂದು ದರ್ಪದಿಂದ ಹೇಳಿದನು.

" ಅದಕ್ಕೆಯೋ ಈ ಗರ್ಜನೆ! ಅವರನ್ನು ನೋಡಿ ಗರ್ಜಿಸುವಂತಿದೆ " ಎಂದನು ಜನಮೇಜಯ

" ಆ ಹುಚ್ಚರಿಗೆ ಮರಣವು ಸಮೀಪಿಸಿದೆ ಎಂಬುದು ಗೊತ್ತಿಲ್ಲ. ಈಗ ಗರ್ಜಿಸುವರು, ಆಗ ಅಳುವರು. " ಎಂದನು ವಕ್ರತುಂಡ

" ಗರ್ಜಿಸುವ ಮೇಘವನ್ನು ಕೊನೆಗೆ ಮಿಂಚು ಸುಡುತ್ತದೆ. ಆಗ ಅದು ಅಳುತ್ತದೆ " ಎಂದನು ಜನಮೇಜಯ

" ನಾಳೆ ಬೆಳಿಗ್ಗೆ ಎಲ್ಲ ರಾಜಬಂದಿಗಳನ್ನು ಹೊರತೆಗೆಯಿರಿ. ಶೃಂಖಲೆ ಸಹಿತವಾಗಿ ತೆಗೆಯಿರಿ. ಅವರ ಎದುರು ನಾಗಾನಂದ ಹಾಗು ವತ್ಸಲೆಯುರನ್ನು ಮೊದಲನೇ ಆಹುತಿಯನ್ನು ಕೊಡಿರಿ. ದಾಂಪತ್ಯದ ಸಂಯುಕ್ತ ಆಹುತಿ. ಇಂತಹ ಸಂಯುಕ್ತ ಆಹುತಿಗಳು ಎಷ್ಟು ಇವೆ ? " ಎಂದನು ಜನಮೇಜಯ

" ಎರಡು ಸಾವಿರದ ಮೇಲೆ. ಇನ್ನೂ ಬರುತ್ತಿರುವರು " ಎಂದನು ವಕ್ರತುಂಡ

ಪ್ರಭಾತವಾಯಿತು. ಇಂದು ಸೂರ್ಯನು ಕೆಂಪು ಕೆಂಡದಂತಿರುವನು ಅವನೇಕೆ ಸಂತಪ್ತನಾಗಿರುವ ? ಸಂಸಾರವನ್ನು ಸ್ಮಶಾನ ಮಾಡುವ ಮಾನವರ ಬಗ್ಗೆ ತಿರಸ್ಕಾರವೆನಿಸುತ್ತಿತ್ತೆ ? ನಾನು ಇವರ ಸಲುವಾಗಿ ಹಗಲಿರುಳು ಸುಟ್ಟುಕೊಂಡರೂ ಈ ಮಾನವ ಜಾತಿಗೆ ಒಂದು ಪೈ ಕೂಡ ಬೆಲೆಯಿಲ್ಲ ಎಂದು ಸಂತಾಪಗೊಂಡನೋ. ತಾನೇ ದ್ವಾದಶ ನೇತ್ರವನ್ನು ತೆಗೆದು ಜಗತ್ತನ್ನೆಲ್ಲ ಭಸ್ಮ ಮಾಡಬೇಕೆಂದೆನಿಸುತ್ತಿರುವದೋ ? ದೇವರಿಗೆ ಹೀಗನಿಸುವದಿಲ್ಲ. ಅವನು ಆಶಾವಾದಿ. ಕೊನೆಗೆ ಎಲ್ಲವೂ ಒಳ್ಳೇದಾಗುವದೆಂದು ಅವನಿಗೆ ಅನಿಸುವದು.

ಪ್ರಚಂಡ ಹೋಮ ಕುಂಡವು, ಧಗ ಧಗ ಉರಿಯುತ್ತಿದೆ. ಸೈನಿಕರ ಗುಂಪುಗಳು ಅಲ್ಲಲ್ಲಿ ಸಜ್ಜಾಗಿ ನಿಂತಿವೆ. ಕಾರಾಗೃಹದಲ್ಲಿಯ ಸರ್ವ ಸ್ತ್ರೀ ಪುರುಷರನ್ನು ಹೊರತೆಗೆದರು. ಅವರನ್ನೆಲ್ಲ ಹಗ್ಗದಿಂದ ಬಂಧಿಸಿದ್ದರು.

ನಾಗಾನಂದ ಹಾಗು ವತ್ಸಲೆಯರನ್ನು ಹೊರ ತಂದರು. ಅವರನ್ನು ಒಂದೆಡೆ ನಿಲ್ಲಿಸಿದರು.

ರಾಜಧಾನಿಯಲ್ಲಿಯ ಸ್ತ್ರೀಪುರುಷರು ಬಂದಿದ್ದರು. ಎಲ್ಲರ ಕಣ್ಣು ಗಳಿಂದಲೂ ನೀರು ಸುರಿಯುತ್ತಿದ್ದವು. ಈ ನಿರಪರಾಧಿ ಜನರನ್ನೇಕೆ ಅಗ್ನಿ ಯಲ್ಲಿ ಒಗೆಯುವರು ? ಅದಕ್ಕಾಗಿ ಈ ಹೋಮಕುಂಡವೇ ? ಅಹಹಾ ! ಧ್ಯೇಯಕ್ಕಾಗಿ ತಳಮಳಿಸುವ ಜೀವಗಳ ಆತ್ಮದಂತೆ ಆ ಕಿಡಿಗಳು ಕಾಣುತ್ತಿ ದ್ದವು. ಮಾನವರಲ್ಲಿ ಪ್ರೇಮವು ಹಬ್ಬಬೇಕು. ಬಂಧು ಭಾವವು ಬೆಳೆಯ ಬೇಕು. ಎಂದು ಚಡಪಡಿಸುವ ಜೀವರನ್ನು ಭೆಟ್ಟಿಯಾಗಿ ಪವಿತ್ರವಾಗುವ ದಕ್ಕಾಗಿ ಆ ಜ್ವಾಲೆಗಳು ಹಾತೊರೆಯುತ್ತಿದ್ದವು. ಧ್ಯೇಯಾರ್ಥಿಗಳಾದ ವ್ಯಕ್ತಿಗಳಿಗೆ ಧ್ಯೇಯದ ಮಾರ್ಗವನ್ನು ವಿಚಾರಿಸುವದರ ಸಲುವಾಗಿ ಆ ಕಿಡಿ ಗಳು ಹಾರುತ್ತಿದ್ದವು, ಆ ತೇಜಸ್ವಿಯಾದ ಸೂರ್ಯನಾರಾಯಣನ ಚರಣ ಗಳನ್ನು ಸೇರುವಬಗೆ ಹೇಗೆ? ಎಂದು ಆಜ್ವಾಲೆಗಳಿಗೆ ವಿಚಾರ ಮಾಡುವ ದಿತ್ತು. ಸೂರ್ಯನೇ ಅವುಗಳ ಧ್ಯೇಯ. ತೇಜಸ್ಸಿನ ಸಮುದ್ರದಲ್ಲಿ ಮುಳುಗಲಿಚ್ಛಿಸಿ ಅವು ಮೇಲೆ ಹೋಗಬಯಸುತ್ತಿದ್ದವು. ಪ್ರೇಮ ಸಮುದ್ರ ದಲ್ಲಿ ಮುಳುಗುವ ಮಾನವರೇ ತಮಗೆ ದಾರಿ ತೋರಿಸುವರೆಂದು ಅವು ಗಳಿಗೆ ಅನಿಸುತ್ತಿತ್ತು. ಜ್ವಾಲೆಗಳೇ! ಮೇಲೆ ಮೇಲೆ ಹೋಗುವ ಜ್ವಾಲೆಗಳೇ! ನಡೆಯಲಿ ನಿಮ್ಮ ತಳಮಳ ! ಉತ್ತರೋತ್ತರ ಮೇಲೆ ಹೋಗುವ ತಳಮಳ!

ಜನಮೇಜಯನು ಬಂದ ವಕ್ರತುಂಡನು ಬಂದ. ಉಳಿದ ರಾಜ ಪುರುಷರು ಬಂದರು. ಜನಮೇಜಯನು ಸಿಂಹಾಸನಾರೂಢನಾದನು. ಅವನ ಹೆಸರಿನಿಂದ ಜಯಜಯಕಾರ ಮಾಡಲ್ಪಟ್ಟಿತು. ಆದರೆ ಎಲ್ಲ ನಾಗ ಬಂದಿಗಳು 'ಪ್ರೇಮಧರ್ಮದ ವಿಜಯವಾಗಲಿ' ಎಂದು ಗರ್ಜಿಸಿದರು.

'ನಿಮ್ಮ ನಾಲಿಗೆಯನ್ನು ಸೀಳೇವು' ಎಂದರು ಅಧಿಕಾರಿಗಳು.

'ನಮ್ಮನ್ನು ಸುಟ್ಟರೂ ಆ ಬೂದಿಯೊಳಗಿಂದ 'ಪ್ರೇಮಧರ್ಮಕ್ಕೆ ವಿಜಯವಾಗಲಿ' ಎಂಬ ಗರ್ಜನೆಯು ಹೊರಟೀತು. ಅದು ನಿಮ್ಮ ಕಿವಿಯಲ್ಲಿ ಹೊಕ್ಕು, ಹೃದಯವನ್ನು ಭೇದಿಸೀತು. ಆ ಗರ್ಜನೆಯನ್ನು ಕೇಳದೆ ನಿಮಗೆ ಗತ್ಯಂತರವಿಲ್ಲ.' ಎಂದನು ನಾಗಾನಂದ.

ಜನಮೇಜಯನು ತಿರಸ್ಕಾರ ದೃಷ್ಟಿಯಿಂದ ಆವನ ಕಡೆಗೆ ನೋಡಿದನು. ವಕ್ರತುಂಡನು ಹುಚ್ಚನಂತೆ ನಕ್ಕನು.

' ಅವರಿಬ್ಬರನ್ನು ಮುಂದೆ ತನ್ನಿರಿ.' ಎಂದನು ಜನಮೇಜಯ.

' ಇಬ್ಬರನ್ನೂ ಮುಂದೆ ತಂದರು.

" ನೀನು ಆರ್ಯಳಂತೆ ಕಾಣುವಿ. ಅನಾರ್ಯರೊಡನೆ ಮದುವೆ ಯೇಕೆ ಆದೆ ? ಕಸ್ತೂರಿಯು ಮಣ್ಣಿನಲ್ಲಿ ಕೂಡಬೇಕೆ ? ಪತಿಯನ್ನು ಬಿಡಲು ನೀನು ಸಿದ್ಧಳಿದ್ದರೆ, ನಿನ್ನನ್ನು ಬಿಡುವೆ. ಆರ್ಯಹತ್ಯೆಯು ನನ್ನಿಂದ ಆದಷ್ಟು ಕಡಿಮೆ ಯಾಗಲೆಂದು ನನ್ನ ಇಚ್ಛೆ. ಹೇಳು, ನೀನು ಸಿದ್ಧಳಿರುವಿಯಾ ? ಆರ್ಯಧರ್ಮದ ಸೇವೆಯನ್ನು ಮಾಡಲು ಸಿದ್ಧಳಿದ್ದೀಯಾ ? ಆರ್ಯಧರ್ಮ ವನ್ನು ನಿರ್ಮೂಲವಾಗಿಡಲು ಸಿದ್ಧಳಿದ್ದೀಯಾ? " ಎಂದು ವಿಚಾರಿಸಿದನು.

' ನಾನು ಬದುಕಲು ಇಚ್ಛಿಸುವದಿಲ್ಲ. ಸಾಯಲು ಬಯಸುವೆ. ಆರ್ಯಪುರುಷರಂತೆ ನಾನು ಉಲ್ಲೂ ಇಲ್ಲ. ನಾನು ಆರ್ಯಸ್ತ್ರೀ ಇರುವೆ. ಆರ್ಯಪುರುಷರು ಮನಬಂದಂತೆ ನಾಗಸ್ತ್ರೀಯರನ್ನು ಭೋಗಿಸಿ, ಅವರನ್ನು ಬಿಟ್ಟು ಬಿಟ್ಟರು. ಅಂಥಹ ಆರ್ಯಧರ್ಮವು ನನ್ನದಲ್ಲ. ಆರ್ಯ ಪುರುಷ ರಾದ ನೀವು ಸ್ತ್ರೀಯರನ್ನು ಕಸವೆಂದು ತಿಳಿದಿರಬಹುದು. ಆದರೆ ಆರ್ಯ ಸ್ತ್ರೀಯರಾದ ನಾವು ಪುರುಷರನ್ನು ಕೀಳು ಬಗೆಯುವದಿಲ್ಲ. ನಿಮ್ಮ ಅರ್ಜು ನನು ಉಲೂಪಿ, ಚಿತ್ರಾಂಗದೆಯರನ್ನು ಆಳಲು ಹಚ್ಚಿದನು. ಇದೇ ನಿಮ್ಮ ಆರ್ಯ ಧರ್ಮ ಕಾಣುತ್ತದೆ? ಆರ್ಯ ಪುರುಷರ ಧರ್ಮವು ಇದು ಇದ್ದರೆ, ಆರ್ಯ ಸ್ತ್ರೀಯರ ಧರ್ಮವು ಬೇರೆಯಾಗಿದೆ. ನಾನು ನಾಗಾನಂದನನ್ನು ಬಿಡುವದಿಲ್ಲ. ಪತ್ನಿಯನ್ನು ಬಿಟ್ಟು, ಪತಿ ಹೋಗುತ್ತಿರಬಹುದು. ಆದರೆ ಪತಿಯನ್ನು ಬಿಟ್ಟು ಸತ್ನಿಯು ಹೋಗುವದಿಲ್ಲ. ' ಗಂಡಸನ್ನು ಬಿಡು ' ಎಂದು ನೀನು ಯಾವ ಬಾಯಿಂದ ಹೇಳುವಿ? ಸಾವಿತ್ರಿಯ ಕಥೆಯನ್ನು ಎಂದಾದರೂ ಕೇಳಿರುವಿಯಾ? ನದಿಯು ಸಮುದ್ರದ ಕಡೆಗೇ ಹೋಗುವದು. ಅದು ತಿರುಗಿ ಹರಿಯುವದೇ? ರಾಜಾ ! ಅಧರ್ಮವನ್ನು ಮಾಡಲು ನೀನು ಹೇಗೆ ಹೇಳುವಿ? ಇದೇ ಏನು ನಿನ್ನ ಸಂಸ್ಕೃತಿ? ಪುರುಷರಾದ ನೀವು ಸಂಸ್ಕೃತಿಯನ್ನು ಮುಳುಗಿಸಲು ಹೊರಟರೂ ಸ್ತ್ರೀಯರಾದ ನಾವು ಅದನ್ನು

ಮುಳುಗಗೊಡುವದಿಲ್ಲ. ನಾಗಜಾತಿಯು ಕೆಡುಕು ಏಕೆ ? ಅವರಲ್ಲಿ ಏನು ಕೆಡುಕಿದೆ? ಮೂಸಿ ಬಿಡುವ ಆರ್ಯರ ಪ್ರೇಮ ಸ್ಮರಣ ಮಾಡುತ್ತ, ಪತಿವ್ರತೆಯರಾಗಿ ಉಳಿಯುವ ಆ ನಾಗಸ್ತ್ರೀಯರ ಚರಣತೀರ್ಥವನ್ನು ತಕ್ಕೊಂಡು ನೀನು ಪವಿತ್ರನಾಗು ನಿನ್ನಲ್ಲಿ ಹೆಚ್ಚಿನದೇನಿದೆ? ಆರ್ಯರು ಏಕೆ ಜಂಭ ಕೊಚ್ಚಬೇಕು ?' ಎಂದು ಉಜ್ವಲವಾದ ವಾಣಿಯಿಂದ ವತ್ಸಲೆಯು ಮಾತನಾಡಿದಳು.

'ಆರ್ಯರು ಕ್ರೂರ ಸರ್ಪದ ಪೂಜೆಗೈದು ದ್ವೇಷಿಗಳಾಗುವದಿಲ್ಲ. ನಾಗರು ದ್ವೇಷಿಗಳಿರುತ್ತಾರೆ. ಮನಸ್ಸಿನಲ್ಲಿ ಕುನುಸು ಹಿಡಿದು ನನ್ನ ತಂದೆಯನ್ನು ಹೇಗೆ ಕೊಂದನೆಂಬುದನ್ನು ನೀನು ಬಲ್ಲೆಯಾ ? ಇಂತಹ ಜಾತಿಯಿದು ಆರ್ಯರು ಸೂರ್ಯನ ಉಪಾಸನೆಮಾಡುವರು. ಪರಬ್ರಹ್ಮನನ್ನು ಕಂಡುಕೊಳ್ಳುವರು.' ಎಂದನು ಜನಮೇಜಯ

'ನಿಮ್ಮ ತಂದೆಯು ನಾಗಋಷಿಯ ಅಪಮಾನವನ್ನು ಮಾಡಿದನು. ಹಾವನ್ನು ಹೊಡೆದು ಅವನ ಕೊರಳೊಳಗೆ ಹಾಕಿದನು. ಎಂದು ಆ ನಾಗನು ನಿಮ್ಮ ತಂದೆಯನ್ನು ಕೊಂದನು. ಆದರೆ ಆ ತರುಣನು ದ್ವೇಷಿಯೆಂದು ತಿಳಿಯೋಣ. ಆದರೆ ಒಬ್ಬನ ಕೊಲೆಗೆ ಸಾವಿರಾರು ನಾಗರನ್ನು ಬಲಿ ತೆಗೆದುಕೊಳ್ಳುವ ನೀನು, ದ್ವೇಷಿ? ನಾಗಪೂಜೆಯನ್ನುಮಾಡಿ ನಾಗರು ದ್ವೇಷಿಗಳಾಗುವದಿಲ್ಲ. ನಿಮಗಿಂತಲೂ ಅವರು ಅತ್ಯಂತ ಉದಾರರಾಗಿದ್ದಾರೆ. ನಾಗಪೂಜೆಯನ್ನು ನಾಗನಂತೆ ಕ್ರೂರರಾಗಲು ಮಾಡುವದಿಲ್ಲ. ಕ್ರೂರವಿದ್ದ ನಾಗಗಳಲ್ಲಿ ಕೂಡ ಪರಬ್ರಹ್ಮನನ್ನು ಕಂಡು, ಅವನ ಉಪಾಸನೆಯನ್ನು ಮಾಡುತ್ತಾರೆ. ಸೂರ್ಯನು ತೇಜಸ್ವಿಯಿದ್ದಾನೆ. ಮಂಗಲನಿದ್ದಾನೆ. ಅವನಲ್ಲಿ ಪೂಜ್ಯಭಾವವನ್ನು ತಾಳುವದು ಸುಲಭ. ಆದರೆ ಅಂಕುಡೊಂಕುಳ್ಳ, ವಿಷವುಳ್ಳ ಸರ್ಪದಲ್ಲಿಯೂ ಮಾಂಗಲ್ಯವನ್ನು ನೋಡಲು ದೊಡ್ಡ ದೃಷ್ಟಿಯೇಬೇಕು. ಆರ್ಯರಿಗಿಂತಲೂ ಈ ದೃಷ್ಟಿಯು ವಿಶಾಲವಾಗಿದೆ. ಈ ಭಾವನೆಯಿಂದ ನಾಗಪೂಜೆಯನ್ನುಮಾಡಿ ನಾಗರು ಉದಾರಚರಿತರಾಗಿದ್ದಾರೆ. ನಮ್ಮ ಊರಲ್ಲಿ ನಾನು ನೀರಲ್ಲಿ ಮುಳುಗುವಾಗ ಒಬ್ಬ ನಾಗತರುಣನೇ ಉಳಿಸಲು ಮುಂದೆ ಬಂದನು. ಆ ತರುಣನ ಪಾದಕಮಲಗಳಲ್ಲಿ ನಾನು ಪ್ರೇಮವನ್ನು ಅರ್ಪಿಸದೆ

ಕಲ್ಲಿನಂಥ ಆರ್ಯರಿಗೆ ಅರ್ಪಿಸಲೋ ? ನಾನು ನಾಗರ ಬಗೆಗೆ ಸಹಾನು ಭೂತಿಯುಳ್ಳವಳೆಂದು ಬಗೆದು, ಊರಲ್ಲಿಯ ಒಬ್ಬ ಆರ್ಯನು ನನ್ನನ್ನು ನೀರಿನಿಂದ ಉಳಿಸಲು ಮುಂದೆ ಬರಲಿಲ್ಲ. ಇದೇಯೋ ಆರ್ಯಧರ್ಮ ? ಇದು ದ್ವೇಷ ಧರ್ಮ. ರಾಜಾ ! ಊರಲ್ಲಿ ಹುಲಿಯು ಉಪದ್ರವವಾದಾಗ ಈ ನಾಗಾನಂದನೇ ಮುಂದೆ ಬಂದು, ಆ ಸಂಕಟವನ್ನು ದೂರ ಮಾಡಿದನು. ತನ್ನ ಪ್ರಾಣವನ್ನು ಸಂಕಟದಲ್ಲಿ ನೂಕಿದನು. ಹೀಗಿರುವರು ನಾಗರು. ಆರ್ಯರಾದ ನೀವೇ ಕ್ರೂರರು. ನಿಮ್ಮ ಪೂರ್ವಜರು ಅಣ್ಣ ತಮ್ಮಂದಿರ ಕಲಹಕ್ಕಾಗಿ ಭರತಖಂಡದ ಕ್ಷತ್ರಿಯರ ನಾಶವನ್ನು ಮಾಡಿದರು. ನಮ್ಮ ಅಜ್ಜನು ನಿಮ್ಮ ಪೂರ್ವಜರ ಯುದ್ಧದಲ್ಲಿಯೇ ಸತ್ತನು. ನೀವು ನಿಮ್ಮ ಕ್ಷುದ್ರ ಜಗಳಕ್ಕಾಗಿ ಲಕ್ಷಾವಧಿ ಸ್ತ್ರೀಯರನ್ನು ಅಳಲು ಹಚ್ಚಿದಿರಿ. ಮತ್ತು ಈಗ ನೀನು ನಿನ್ನ ದ್ವೇಷಕ್ಕೋಸುಗ ಲಕ್ಷಾವಧಿ ನಿರಪರಾಧಿ ನಾಗರ ಹನನ ಹಾಗು ಹವನ ಮಾಡುತ್ತಿರುವಿ. ನಿಮ್ಮ ಧರ್ಮವು ಇದನ್ನೆ ಹೇಳುವದೇ ? ನಿಮ್ಮ ಧರ್ಮವು ಕಟುಕರ ಧರ್ಮವೇ ? ನಿಮ್ಮ ಸಂಸ್ಕೃತಿಯು ಹೀಗೆ ಅನುದಾರ ಹಾಗೂ ನೃಶಂಶವಿದ್ದರೆ, ಯಾರಿಗೆ ಇದರ ಬಗ್ಗೆ ಅಭಿಮಾನವೆನಿಸುವದು ? ನಿಮ್ಮ ಧರ್ಮವು ಕಟುಕರದೇ ಇದ್ದರೆ, ಅದನ್ನು ಪ್ರೀತಿಸುವವರಾರು ? ಇಂಥ ಸಂಸ್ಕೃತಿ ಎದುರಿಗೆ ತಲೆಬಾಗುವದಕ್ಕಿಂತ ಸಾಯುವದೇನು ಕೆಡುಕು ? ಇಂತಹ ಪಾಪದಲ್ಲಿ ಸಹಕಾರಿಯಾಗುವದಕ್ಕಿಂತ ಸಾಯುವದೇ ಲೇಸು. ರಾಜಾ, ಸುಟ್ಟು ಬಿಡು. ಸತ್ಯವನ್ನು, ಪ್ರೇಮವನ್ನು, ತಪಶ್ಚರ್ಯವನ್ನು, ಸತೀತ್ವವನ್ನು ಪಾವಿತ್ರ್ಯವನ್ನು, ಹಾಗೂ ನಿರಪರಾಧಿತನವನ್ನು ಸುಟ್ಟು ಬಿಡು. ತಾಯಿಂದಿರನ್ನು ಮಕ್ಕಳೊಡನೆ ಸುಡು. ಪತಿಯನ್ನು ಪತ್ನಿಯೊಡನೆ ಸುಡು. ಮಿತ್ರರನ್ನು ಮಿತ್ರರ ಸಂಗಡ ಸುಡು. ಆರ್ಯಧರ್ಮದ ಈ ದ್ವೇಷದ ಧ್ವಜವನ್ನು ಹಾರಿಸು. ಸೂರ್ಯನ ಉಪಾಸನೆಯನ್ನು ಮಾಡುವ ಆರ್ಯರು ನೀವು. ಸೂರ್ಯನಂತೆ ಸರ್ವರ ಜೀವನವನ್ನು ಸಮೃದ್ಧಗೊಳಿಸುವದು, ಪ್ರಕಾಶಮಾನವಾಗಿ ಮಾಡುವದು, ಆನಂದಮಯವಾಗಿ ಮಾಡುವದು ಇವೆ ನಿಜವಾದ ಸೂರ್ಯೋಪಾಸಕರ ಧರ್ಮ. ನೀವು ವಿಷ್ಣು ಪೂಜಕರು. ಅಂತ ರ್ಯಾಮಿಯಾದ ಆ ತೇಜೋಮಯನನ್ನು ನೋಡುವವದು, ಸರ್ವಸ್ಥಗಳಲ್ಲಿ

ಪ್ರಕಾಶವನ್ನು ನೋಡುವದೂ ಪಾವಿತ್ರ್ಯವನ್ನೂ ಕಾಣುವದೂ ಮಾಂಗಲ್ಯವನ್ನು ನೋಡುವದೂ ಅಂದರೆ ಪರಬ್ರಹ್ಮನ ಪ್ರಾಪ್ತಿ. ರಾಜಾ! ದ್ವೇಷದಿಂದ ದೇವರ ದರ್ಶವಾಗುವದಿಲ್ಲ. ಮೋರೆಯನ್ನೇಕೆ ಕೆಳಗೆ ಹಾಕುವಿ? ನಿನ್ನ ದ್ವೇಷಾಗ್ನಿಯನ್ನು ಶಾಂತಗೊಳಿಸಲು ನಿನ್ನ ಅಕ್ಕತಂಗಿಯರಾದ ನಾವು ಇಲ್ಲಿ ಎದುರಿಗೆ ನಿಂತಿದ್ದೇವೆ. ಮೊದಲು ನಮ್ಮಿಬ್ಬರನ್ನು ಬಲಿಗೊಡು. ಪ್ರೇಮ ಪೂರ್ಣ ಜೀವನಗಳ ಆಹುತಿಯನ್ನು ಕೊಡು.' ಎಂದಳು ವತ್ಸಲೆ.

'ರಾಜಾ, ಇವರನ್ನು ಅರ್ಪಣ ಮಾಡೋಣವೇ?' ಎಂದನು ವಕ್ರತುಂಡ.

ರಾಜನು ಮಾತನಾಡಲಿಲ್ಲ. ತಲೆ ಕೆಳಗೆ ಹಾಕಿಕೊಂಡು ಸುಮ್ಮನೆ ಕುಳಿತಿದ್ದನು.

'ರಾಜಾ, ಏನಿದೆ ನಿನ್ನ ಅಜ್ಞೆ?' ಎಂದು ಮತ್ತೆ ಕೇಳಿದನು ವಕ್ರತುಂಡ

'ಇಂದು ಎಲ್ಲರನ್ನು ತೆಗೆದುಕೊಂಡು ಹೋಗಿರಿ. ವಿಚಾರಮಾಡಲು ಅವರಿಗೆ ಸಂಧಿಯನ್ನು ಕೊಡಿರಿ. ವತ್ಸಲೇ, ಇನ್ನೂ ವಿಚಾರಮಾಡಲು ಅವಧಿಯನ್ನು ಕೊಟ್ಟಿದ್ದೇನೆ. ಎಷ್ಟು ಎಂಬುದನ್ನು ಈಗ ಹೇಳುವದಿಲ್ಲ. ಇವರೆಲ್ಲರನ್ನು ಕರೆದುಕೊಂಡು ಹೋಗಿರಿ' ಎಂದು ಅಜ್ಞಾಪಿಸಿದನು.

ಎಲ್ಲರಿಗೂ ಹಾಯ್ ಎನಿಸಿತು. ಎಲ್ಲರೂ ದೇವರಿಗೆ ಧನ್ಯವಾದಗಳನ್ನರ್ಪಿಸಿದರು. ಅವರ ಹೃದಯವು ತುಂಬಿ ಬಂದಿತ್ತು.

—:XXX●XXX:—

೧೯

ಇಂದು ಆಶ್ರಮದಲ್ಲಿ ಮಹತ್ವದ ಸಭೆಗೂಡಿತ್ತು. ವಾತಾವರಣವು ಗಂಭೀರವಾಗಿತ್ತು. ಹೊಸ ಹಳೆ ವಿದ್ಯಾರ್ಥಿಗಳೆಲ್ಲ ಬಂದಿದ್ದರು. ತ್ಯಾಗ ವೀರರ ಆಗಮ್ಯವಾದ ಒಂದು ಸೈನ್ಯದಂತೆ ಆ ಗುಂಪು ಕಾಣುತ್ತಿತ್ತು. "ನಾಳೆ ಸೂರ್ಯೋದಯವಾದೊಡನೆಯೆ ನಾವು ಹೊರಡಬೇಕು. ಕತ್ತಲೆಯಲ್ಲಿ ಬೆಳ ಕನ್ನು ತರುವದಕ್ಕಾಗಿ, ಜನಮೇಜಯನ ಕ್ರೋಧಾಗ್ನಿಯನ್ನು ಶಾಂತಗೊಳಿಸು ವದಕ್ಕಾಗಿ ನಾವು ಹೊರಡೋಣ. ನಮ್ಮ ಪ್ರೇಮಮಯ ಜೀವನದಿಂದ ಸಮಾಜದಲ್ಲಿಯ ದ್ವೇಷಮಯ ಜೀವನವನ್ನು ಶುದ್ಧಗೊಳಿಸುವದಕ್ಕಾಗಿ ಹೊರಡೋಣ. ನಾವು ದೊಡ್ಡ ದೊಡ್ಡ ಮಾತುಗಳನ್ನಾಡುತ್ತೇವೆ. ಆ ವಾಕ್ಯ ಗಳನ್ನು ನಮ್ಮ ಜೀವನದಲ್ಲಿ ತರೋಣ. ನೀವು ತಂದೆ ತಾಯಿಗಳ ಆಜ್ಞೆ ಯನ್ನು ಪಡೆದು ಬಂದಿರುವಿರಿ. ದೇಶಕ್ಕೆ ಯಾವಾಗಲೂ ಸ್ಫೂರ್ತಿಯನ್ನೀಯು ವಂಥ ಅಮರವಾದ ಅಗ್ನಿಯನ್ನು ಹೊತ್ತಿಸೋಣ. ರಾಷ್ಟ್ರದಲ್ಲಿ ಮುಂದಿನ ಜನಾಂಗಕ್ಕೆ ಸಂಕುಚಿತವೃತ್ತಿ, ಸ್ವಾರ್ಥ ಹಾಗೂ ದ್ವೇಷಗಳು ಯಾವ ಯಾವ ವೇಳೆಯಲ್ಲಿ ಮುತ್ತುವವೋ ಆ ಆ ಸಮಯದಲ್ಲೆಲ್ಲ ಅವರಿಗೆ ನವಜೀವನ ವನ್ನು ಈ ಬಲಿದಾನವು ಕೊಡುವಂತೆ ಮಾಡೋಣ. ಧ್ಯೇಯವನ್ನು ಸಾಧಿಸಿಯೇ ತೀರಬೇಕೆಂದು ಯಾರ ಅಂತಃಕರಣವು ಉಕ್ಕೇರುತ್ತಿದೆಯೋ ಅವರೆಲ್ಲ ನನ್ನೊಡನೆ ಬರಲಿ ನನ್ನಲ್ಲಿಯೂ ನಾಗರಕ್ತವಿದೆ. ಜನಮೇಜಯನು ನನ್ನನ್ನೇಕೆ ಬಂಧಿಸುವದಿಲ್ಲ? ನಾನಾಗಿಯೇ ಹೋಗುವೆ. ಹೋಮಕುಂಡ ದಲ್ಲಿ ದೇಹವನ್ನು ಅರ್ಪಿಸುವೆ ನನ್ನೊಡನೆ ಈ ಮಹರ್ಷಿಗಳು ಬರುತ್ತಲಿ ದ್ದಾರೆ. ಅವರಲ್ಲಿ ಅನೇಕರು ಆರ್ಯರೂ ನಾಗರೂ ಇದ್ದಾರೆ. ಕೆಲವರು

ಸಂಮಿಶ್ರರಿದ್ದಾರೆ. ಎಲ್ಲರೂ ಹೊರಡುವ ನಿಶ್ಚಯವನ್ನು ಮಾಡಿದ್ದೇವೆ. ನಮ್ಮ ಆಶ್ರಮವು ಕೃತಾರ್ಥವಾಯಿತು. ಪವಿತ್ರವಾಯಿತು. ಇಂದಿನಿಂದ ಆಶ್ರಮವು ಪ್ರತಿಯೊಬ್ಬರ ಹೃದಯದಲ್ಲಿ ನಿರ್ಮಾಣವಾಗುವದು. ಈ ಆಶ್ರಮವು ಮಾಯವಾದೀತು. ಆದರೆ ಸರ್ವರ ಹೃದಯದಲ್ಲಿ ಅಮರವಾಗುವದು." ಎಂದರು ಆಸ್ತಿಕರು.

"ನಾವೆಲ್ಲ ನಿಮ್ಮೊಡನೆ ಬರುವೆವು" ಎಂದರು ತರುಣರು

"ಶಶಾಂಕ ಹಾಗು ನಾನು ಇಬ್ಬರು ಕೈ ಹಿಡಿದುಕೊಂಡು ಹಾರುವೆವು. ನಾಗ ಹಾಗು ಆರ್ಯರಲ್ಲಿ ಸ್ಥಿರವಾದ ಐಕ್ಯವನ್ನು ನಿರ್ಮಿಸುವೆವು." ಎಂದನು ನಾಗೇಶ

'ಅಗ್ನೆ ನಯ ಸುಪಥಾ ರಾಯೇ ಅಸ್ಮಾನ್' ಎಂಬ ಮಂತ್ರವನ್ನುಚ್ಚರಿಸುತ್ತ ನಾನು ಹಾರುವೆ," ಎಂದನು ಪದ್ಮನಾಭ

ರಾತ್ರಿಯಲ್ಲಿ ಎಲ್ಲರೂ ಮಲಗಿದರು. ದೊಡ್ಡ ಬೆಳಗಿನಲ್ಲಿ ಆಸ್ತಿಕನೆದ್ದನು. ಸರ್ವ ಋಷಿಗಳೆದ್ದರು. ಎಲ್ಲರೂ ಎದ್ದರು. ಗಂಗೆಯಲ್ಲಿ ಸ್ನಾನಮಾಡಿ ಬಂದರು. ಸೂರ್ಯನು ಮೇಲೆ ಬರುವವನಿದ್ದ. ಭಾರತದ ಭಾಗ್ಯವು ಮೇಲೆ ಬರುತ್ತಲಿತ್ತು. ಅಪೂರ್ವ ತೇಜವು ಜನ್ಮತಾಳುತ್ತಿತ್ತು. ಭಗವಾನ್ ಆಸ್ತಿಕರು "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕದಾಚನ" ಈ ವಿಷಯದ ಮೇಲೆ ಎರಡು ಶಬ್ದಗಳನ್ನು ಮಾತಾಡಿದರು.

"ನಾವು ಆಶ್ರಮದಲ್ಲಿ "ಅಸತ್ಯದಿಂದ ನಮ್ಮನ್ನು ಸತ್ಯದ ಕಡೆಗೆ ಒಯ್ಯಿರಿ, ಮೃತ್ಯುವಿನಿಂದ ಅಮೃತತತ್ವದ ಕಡೆಗೆ ಒಯ್ಯಿರಿ, ಕತ್ತಲೆಯಿಂದ ಪ್ರಕಾಶದ ಕಡೆ ಒಯ್ಯಿರಿ" ಎಂದು ದಿನಾಲು ಪ್ರಾರ್ಥಿಸುತ್ತೇವೆ. ಆ ಪ್ರಾರ್ಥನೆಯ ಫಲವು ಇಂದು ಸಿಗುತ್ತಿದೆ. ಇಂದು ದೇಹದ ಮೇಲೆ ಏರಿ ಹೋಗುವವರಿದ್ದೇವೆ. ಈ ದೇಹವು ಧ್ಯೇಯದ ಸಾಧನವೆಂದು ಯಾರು ತಿಳಿದಿರುವರೋ ಅವರು ಅಮೃತತತ್ವವನ್ನು ಪಡೆದಿರುವರು ಕಟ್ಟಿಗೆಯನ್ನು ಒಲೆಯಲ್ಲಿ ಹಾಕುವಂತೆ, ಧ್ಯೇಯಕ್ಕಾಗಿ ಈ ದೇಹವನ್ನು ಅಗ್ನಿಯಲ್ಲಿ ಹಾಕುವದಿರುತ್ತದೆ. ನಾವು ಇಂದು ಅದನ್ನೇ ಮಾಡುತ್ತಿದ್ದೇವೆ. ಹೀಗೆ ಮಾಡುವದರಿಂದ ಕತ್ತಲೆಯಿಂದ ಪ್ರಕಾಶ ಹೊರಬರುತ್ತದೆ. ಪ್ರಕಾಶವೆಂದರೆ

ಜ್ಞಾನ, ಸತ್ಯತೆ. ದೇಹದ ಆಶಕ್ತಿಯನ್ನು ಬಿಡುವದೆಂದರೆ, ಅಸತ್ಯದಿಂದ ಸತ್ಯದ ಕಡೆಗೆ ಹೋಗುವದು. ಈ ಮೂರು ವಚನಗಳ ಅರ್ಥವು ಒಂದೇ ಇದೆ. ಈ ಮೂರು ವಾಕ್ಯಗಳನ್ನು ಇಂದು ಸಾಕ್ಷಾತ್ಕರಿಸಿಕೊಳ್ಳಬೇಕಾಗಿದೆ. ಈ ಸಾಕ್ಷಾತ್ಕಾರದ ಆನಂದವು ಯಾರ ಕಣ್ಣೆದುರಿಗಿದೆಯೋ ಅವರಿಗೆ ಚಿಂತೆ ಇಲ್ಲ. ಭೀತಿಯಿಲ್ಲ. ಅವರು ಧ್ಯೇಯ ಪ್ರಾಪ್ತಿಯ ಆನಂದದಿಂದ ಮತ್ತರಿರುತ್ತಾರೆ.

ಜನಮೇಜಯನ ಬಗೆಗೆ ನಮ್ಮಲ್ಲಿ ದ್ವೇಷ ಮತ್ಸರಗಳು ಬೇಡ. ನಮ್ಮ ಜ್ಞಾನ ಪರೀಕ್ಷೆಗಾಗಿ ಅವನು ನಿಮಿತ್ತನಾಗಿದ್ದಾನೆ. ಪೂರ್ವದಲ್ಲಿ ವಿಶ್ವಾಮಿತ್ರನು ವಶಿಷ್ಠನ ಪರೀಕ್ಷೆಯನ್ನು ಹೀಗೇ ತೆಗೆದುಕೊಂಡನು. ಅವನ ಮಕ್ಕಳನ್ನೆಲ್ಲ ವಿಶ್ವಾಮಿತ್ರನು ಕೊಂದರೂ ವಶಿಷ್ಠನು ಶಾಂತವಾಗಿಯೇ ಉಳಿದನು. ಅರುಂಧತಿಯು ಬಂದು ಬೆಳದಿಂಗಳು 'ಹೇಗೆ ಬಿದ್ದಿದೆ' ಎಂದು ವಿಚಾರಿಸಿದಾಗ ಆ ಮಹಾತ್ಮನು ' ವಿಶ್ವಾಮಿತ್ರನ ತಪಸ್ಸಿನ ಹಾಗಿದೆ ಈ ಬೆಳದಿಂಗಳು ' ಎಂದನು. ತನ್ನ ನೂರು ಮಕ್ಕಳನ್ನು ಕೊಂದ ವಿಶ್ವಾಮಿತ್ರನ ಬಗೆಗೆ ವಶಿಷ್ಠರ ಉದ್ಗಾರವೆಂತಹದು ! ಈ ಪರಂಪರೆಯನ್ನು ನಾವು ಕಾಯೋಣ.

ಈ ಸೃಷ್ಟಿಯನ್ನು ನಿರ್ಮಿಸಿ ದೇವರು ಸಾಧನವೆಂದು ಯಜ್ಞವನ್ನು ನಮಗೆ ಕೊಟ್ಟಿದ್ದಾನೆ. ಈ ಯಜ್ಞದಿಂದ ಎಲ್ಲವನ್ನು ಸಂಪಾದಿಸಿರೆಂದು ಆಶೀರ್ವದಿಸಿದ್ದಾನೆ. ಈ ಯಜ್ಞ ಸಾಧನವನ್ನು ಕಾಯ್ದುಕೊಂಡಿರುವರೋ ಇಲ್ಲವೊ ಎಂಬುದನ್ನು ನಡುನಡುವೆ ಪರೀಕ್ಷಿಸುತ್ತಾನೆ. ಮಾನವರ ಶ್ರದ್ಧೆಯು ಸ್ಥಿರವಾಗಿದೆಯೋ ಇಲ್ಲವೋ ಎಂಬುದನ್ನು ನೋಡುತ್ತಾನೆ. ಇಂದು ಕತ್ತಲೆ ಕಾಣುತ್ತಿದೆ. ದ್ವೇಷವು ಪೂರ್ಣವಾಗಿ ಹಬ್ಬಿದೆ. ಉಪಾಯವೇನು ? ಬಲಿದಾನ ! ಸ್ವೇಚ್ಛೆಯ ಬಲಿದಾನ. ಯಜ್ಞ ಸಾಧನವನ್ನು ನಾವು ಜೀವಂತ ವಿಟ್ಟಿರುವೆ ಎಂಬುದನ್ನು ತೋರಿಸೋಣ. ಆ ಉಪಾಸನೆಯು ನಮ್ಮಲ್ಲಿ ಇನ್ನೂ ಇದೆ. ದೇವರು ನೋಡಿ ಪ್ರಸನ್ನನಾಗಬಹುದು. ಜನಮೇಜಯನ ಹೃದಯವು ಪುನಃ ಕರಗಬಹುದು. ಉಜ್ವಲ ಭವಿಷ್ಯವು ಪ್ರಾರಂಭವಾಗಬಹುದು. ನಡೆಯಿರಿ, ನಾವು ಯಾತ್ರಿಕರಿದ್ದೇವೆ. ಸತ್ಯದೇವನ ಯಾತ್ರಿಕರು. ಮಾನವ

ಜಾತಿಯ ಈ ಮಹಾನ್ ಯಾತ್ರೆಯು ಎಂದೋ ಪ್ರಾರಂಭವಾಗಿದೆ. ಎಂದು ಮುಗಿಯುವದೆಂಬುದನ್ನು ನಾನು ಹೇಗೆ ಹೇಳಲಿ ? ಆದರೆ ನಾವು ಈ ಸತ್ಯ ದೇವನ ಯಾತ್ರೆಯಲ್ಲಿ ಭಾಗಿಗಳಾಗಿದ್ದೇವೆಂದು, ಪ್ರತಿಯೊಬ್ಬರಿಗೆ ತಿಳಿದರೆ ಎಷ್ಟು ಸುಂದರವಾದೀತು !

"ಎಲ್ಲರೂ ಸಿದ್ಧರಾಗಿರಿ. ನಮ್ರರಾಗಿರಿ. ನಿರಹಂಕಾರಿಗಳಾಗಿರಿ. ಪ್ರೇಮದಿಂದ, ಭಕ್ತಿಯಿಂದ, ಧ್ಯೇಯಾನಂದದಿಂದ ಮತ್ತರಾಗಿ, ಅನಾಸಕ್ತ ರಾಗಿ, ಕಲ್ಪನೆಯಿಂದ ಕುಣಿದು, ಹೃದಯವು ಉಕ್ಕೇರಿ, ನಿರ್ಭಯರಾಗಿ ಪ್ರಯಾಣಕ್ಕೆ ಸಿದ್ಧರಾಗಿರಿ. ಓಂ ಶಾಂತಿಃ ಶಾಂತಿಃ ಶಾಂತಿಃ"

ಆಶ್ರಮದಲ್ಲಿ ಎಲ್ಲವನ್ನು ನೋಡಿಕೊಳ್ಳಲು, ವೃದ್ಧ ನಕುಲನು ಇರುವವ ನಿದ್ದ.

'ನಕುಲಾ, ನನ್ನ ಚಿಗರೆಯನ್ನು ಹೊಡೆಯಬೇಡ. ಅದು ನನ್ನನ್ನು ಅತ್ತಿತ್ತ ಹುಡುಕೀತು. ಎಲ್ಲಿಯಾದರೂ ಹೋದೀತು. ಎಲ್ಲಿಯಾದರೂ ಹುಲಿಗಿಲಿಯು ತಿಂದೀತು. ನನ್ನ ನೆನಪು ಅದಕ್ಕೆ ಆಗದಂತೆ ಮಾಡು. ಅದು ಹುಲ್ಲನ್ನು ತಿನ್ನಲಿಕ್ಕಿಲ್ಲ. ಶಶಾಂಕನು ಹೇಳಿದನೆಂದು ಹೇಳು ಅಂದರೆ ತಿನ್ನು ವದು ಎಂದನು. ನಾನು ಹಚ್ಚಿದ ಈ ಪುನ್ನಾಗಕ್ಕೆ ನೀರು ಹಾಕು. ಅದು ಎಷ್ಟು ಸುಂದರವಿದೆ ನೋಡು!' ಎಂದನು ಶಶಾಂಕ.

'ನನ್ನ ನವಿಲನ್ನು ಜಪ್ಪಿಸು. ನನ್ನ ಹೆಸರು ಹೇಳು ಅಂದರೆ ಅದು ಕುಣಿಯುವದು' ಎಂದನು ನಾಗೇಶ.

'ಆ ರತ್ನಿಯ ಕರುವಿಗೆ ಹೊಟ್ಟೆ ತುಂಬ ಹಾಲು ಬಿಡು' ಎಂದನು ರತ್ನಾಕರ.

ಹೀಗೆಯೇ ಹೇಳುವದು ನಡೆಯಿತು. ಗಿಡಗಳಿಂದ ಪಟ ಪಟ ಹನಿ ಗಳುದುರುತ್ತಿದ್ದವು. ಅವು ಇಬ್ಬನ್ನಿಯ ಹನಿಗಳೊ ಅಥವಾ ಪ್ರೇಮಾಶ್ರು ಗಳೊ. ಗಾಳಿಯಲ್ಲಿ ಒಮ್ಮೆಲೆ ಅತಿಶಯವಾದ ಸುಗಂಧವು ಬಂದಿತು. ಆಶ್ರಮದಲ್ಲಿಯ ಹೂಗಳು ತಮ್ಮ ಸುಗಂಧವನ್ನೆಲ್ಲ ಕೊಟ್ಟು ಬಿಟ್ಟವೇ ? ನವಿಲು ಒದರ ಹತ್ತಿತು. ಆಕಳುಗಳು ಅಂಬಾ ಎಂದು ಒದರ ಹತ್ತಿದವು.

ಬೆಕ್ಕು ಆಸ್ತಿಕರ ಕಾಲಲ್ಲಿ ಓಡಾಡಹತ್ತಿತು. ಚಪಲವಾದ ಹರಿಣವು ದೀನವಾಗಿ ನೋಡುತ್ತ ನಿಂತ್ತಿತ್ತು. ಪಕ್ಷಿಗಳು ಗಿಡದ ಮೇಲೆ ನಿಸ್ತಬ್ಧವಾಗಿ ಕುಳಿತಿದ್ದವು. ಇನ್ನು ಮೇಲೆ ನಮಗೆ ಕಾಳನ್ನು ಹಾಕುವವರಾರೆಂದು ಚಿಂತಿಸುತ್ತಿದ್ದವೊ? ಆಸ್ತಿಕನ ಪ್ರೇಮಲ ಹಸ್ತದಿಂದ ಇನ್ನು ನಮಗೆ ಕಾಳು ಸಿಗುವವೇ? ಎಂದು ಅವುಗಳಿಗೆ ಅನಿಸಿತೆ. ಸೃಷ್ಟಿಯೆಲ್ಲ ತುಂಬಿ ಬಂದಿತ್ತು. ಆಶ್ರಮದಲ್ಲಿಯ ಪಶು ಪಕ್ಷಿಗಳ, ವೃಕ್ಷ ವನಸ್ಪತಿಗಳ ರೋಮ ರೋಮಗಳಲ್ಲಿ ಒಂದು ಬಗೆಯ ತೀವ್ರ ಸಂವೇದನೆಯು ತುಂಬಿತ್ತು.

ಆಸ್ತಿಕರು ಆಶ್ರಮದಲ್ಲಿಯ ವೃಕ್ಷ ಹಾಗೂ ಹೂಗಳನ್ನು ಕುರಿತು ಮಾತನಾಡ ಹತ್ತಿದರು. ನಾವು ಹೋಗಿ ಬರುತ್ತೇವೆ. ನೀವು ನಮ್ಮ ಸದ್ಗುರು. ಪ್ರೇಮಳ ವೃಕ್ಷಗಳೇ ನಮಗೆ ಆಶೀರ್ವಾದಗಳನ್ನು ಕೊಡಿರಿ. ನೀವು ಸರ್ವ ಜಗತ್ತಿಗೆ ಹೂ, ಹಣ್ಣು ಹಂಪಲ, ನೆರಳನ್ನು ಕೊಡುವಿರಿ. ನಿಮ್ಮನ್ನು ಮುರಿಯುವವರಿಗೂ ನೆರಳನ್ನೀಯುವಿರಿ. ದುಷ್ಟರಿರಲಿ ಶಿಷ್ಟರಿರಲಿ, ಅವರನ್ನು ಹತ್ತರ ಕರೆದು ಕೊಳ್ಳುವಿರಿ. ಕಲ್ಲು ಒಗೆಯುವವರಿಗೆ ಒಳ್ಳೇ ಹಣ್ಣುಗಳನ್ನು ಕೊಡುವಿರಿ. ನಿಮ್ಮ ಬೇರುಗಳು ಹಗಲು ರಾತ್ರಿ ಭೂಗರ್ಭದಲ್ಲಿ ಶ್ರಮಿಸುತ್ತಿವೆ. ಆದರೆ ಈ ಶ್ರಮದಿಂದ ಸಿಗುವ ಸರ್ವ ಸಂಪತ್ತನ್ನು ಜನಕ್ಕೆ ಕೊಡುವಿರಿ. ನೀವು ನಮ್ಮ ಸಲುವಾಗಿ ಚಳಿ, ಬಿಸಿಲುಗಳಲ್ಲಿ, ಮಳೆಯಲ್ಲಿ ನಿಂತಿರುವಿರಿ. ನಮ್ಮ ಸಲುವಾಗಿ ತ್ಯಾಗ ಮಾಡುವಿರಿ. ನಿಮ್ಮ ಜೀವನವೇ ನಮ್ಮ ಸಲುವಾಗಿ. ನಿಮ್ಮಂತೆಯೆ ಅಗ್ನಿಯಲ್ಲಿ ಪ್ರವೇಶಿಸಲು ನಮಗೆ ಧೈರ್ಯ ಬರಲಿ. ಸ್ವಂತದ ಸರ್ವಸ್ವವನ್ನು ನಮ್ರದಿಂದ ಮಾತನಾಡದೆ, ಜಗತ್ತಿಗೆ ಅರ್ಪಿಸುವ ಇಚ್ಛೆ ಬರಲಿ.

ಆಶ್ರಮದಲ್ಲಿರುವ ಹೂಗಳೇ, ನಿಮ್ಮಂತೆಯೇ ನಮ್ಮ ಜೀವನವು ನಿರ್ಮಲ, ಸುಂದರ ಹಾಗೂ ಸುಗಂಧಯುಕ್ತವಾಗಲಿ. ನಿಮ್ಮ ಜೀವನವು ಚಿಕ್ಕದು. ಆದರೆ ಎಷ್ಟು ಪರಿಪೂರ್ಣ! ಎಷ್ಟು ಕೃತಕೃತ್ಯ! ನೀವು ಸೃಷ್ಟಿಯ ಅಂತರಂಗ! ಸೃಷ್ಟಿಯ ಮೌನ ಸಂಗೀತ. ನಾವು ಹೋಗಿ ಬರುವೆವು. ಮುಳ್ಳಿನ ಮೇಲೆ ನೀವು ಎದ್ದು ನಿಂತು ನಗುತ್ತ ಸುಗಂಧವನ್ನು ಬೀರುವಿರಿ. ನಮಗೂ ಅಗ್ನಿಯಲ್ಲಿ ಪ್ರವೇಶಿಸುವಾಗ ನಗೆ ಬರಲಿ. ಜಗತ್ತಿಗೆ ಸುಗಂಧವನ್ನು ಕೊಡಗೊಡಿರಿ.

ಆಶ್ರಮದಲ್ಲಿರುವ ಪಕ್ಷಿಗಳೇ ! ನಿಮ್ಮ ಪ್ರೇಮವೆಷ್ಟು ! ನಾವು ಒಂದು ಹಿಡಿ ಕಾಳನ್ನು ಒಗೆದರೆ, ನೀವು ದಿನವೆಲ್ಲ ನಮಗೆ ಸಂಗೀತವನ್ನು ಕೇಳಿಸುವಿರಿ. ನಮ್ಮ ಹೆಗಲ ಮೇಲೆ ಬಂದು ಕೂಡುವಿರಿ. ಕೈಯ್ಯಲ್ಲಿಯ ಕಾಳನ್ನು ತಿನ್ನುವಿರಿ. ನಿಮಗೆ ಪ್ರೇಮವು ತಿಳಿಯುವದು. ಮಾನವಗೇಕೆ ತಿಳಿಯಬಾರದು ? ನಮ್ಮ ರಕ್ತಿ ಆಕಳು ಧ್ವನಿಯನ್ನು ಗುರುತಿಸುತ್ತದೆ. ಪ್ರೇಮದ ಕೈಗಳು ಕೆಚ್ಚಲಕ್ಕೆ ಹಾಕಿದರೆ, ಹೆಚ್ಚು ಹಾಲು ಕರೆಯುತ್ತದೆ. ಈ ಚಿಗರಿಯು ಎಷ್ಟು ಪ್ರೇಮದಿಂದ ಹತ್ತರ ಬರುತ್ತದೆ. ನವಿಲು ಪ್ರೇಮದ ಮನುಷ್ಯರನ್ನು ನೋಡಿ, ತನ್ನ ಗರಿಯನ್ನು ಪಸರಿಸುತ್ತದೆ. ಎಂತಹ ನಿಮ್ಮ ಮನಸ್ಸು ! ಹಾಗೂ ಈ ಬೆಕ್ಕು ನಿನ್ನಿನಿಂದ ಮೆಂವ್ ಮೆಂವ್ ಎಂದು ಕರೆಯುತ್ತಿದೆ. ನಾನು ಬರಲ್ಯಾ ಎಂದು ಕೇಳುತ್ತಿದೆ.

ಪ್ರೇಮಳ ಮಾನವೇತರ ಪಶುಪಕ್ಷಿಗಳ ಸೃಷ್ಟಿಯಿದು. ಮಾನವನಿಗೂ ಕೂಡ ಕೃತಜ್ಞತೆಯ ಪ್ರೇಮ ಹಾಗು ಸ್ನೇಹದ ಪಾಠವನ್ನು ಕಲಿಸುವ ಸೃಷ್ಟಿ. ಇದಕ್ಕೆ ನಮ್ಮ ನಮಸ್ಕಾರ. ಈ ಸೃಷ್ಟಿ ನಮಗೆ ಆಶೀರ್ವಾದಗಳನ್ನು ಮಾಡಲಿ.

ಆಸ್ತಿಕರು ಕ್ಷಣ ಹೊತ್ತು ಕಣ್ಣು ಮುಚ್ಚಿದರು. ಪುನಃ ಅವರು ಗಂಭೀರರಾದರು. ಹೊರಟರು. ಋಷಿ ಮುನಿಗಳು ಬೆನ್ನು ಹತ್ತಿದರು ಅವರ ಹಿಂದೆ ತರುಣರಿದ್ದರು. ತ್ಯಾಗಮೂರ್ತಿಗಳಾದ ಅವರು ಹೊರಟರು. 'ಭಗವಾನ್ ಆಸ್ತಿಕರು ಹೊರಡುವರು, ಹೊರಡುವರು' ಎಂಬ ಸುದ್ದಿಯನ್ನು ಹಾರೀತ, ಯಜ್ಞಮೂರ್ತಿ, ದಧೀಚಿಯರು ಮೊದಲೇ ಪ್ರಚಾರ ಮಾಡಿದ್ದರು. ಅವರು ದಾರಿಯಲ್ಲಿ ಬಂದು ಕೂಡಿದರು. ಪ್ರಾಣಯಜ್ಞಕ್ಕೆ ಸಿದ್ಧರಾಗಿ ಅನೇಕ ಜನರು ಬಂದು ಕೂಡಿದರು. ಅಲ್ಲಿ ನೋಡಿರಿ ಕಾರ್ತೀಕನು ಬರುತ್ತಿದ್ದಾನೆ. ಕಾರ್ತೀಕನು ಆಸ್ತಿಕರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಅವರು ಅವನನ್ನು ಅಪ್ಪಿಕೊಂಡರು.

"ನಿನ್ನ ಹೆಂಡತಿಯಲ್ಲವೇ ಕೈಯಲ್ಲಿ ಪಂಜು ಹಿಡಿದವಳು ? ನೀನು ಧನ್ಯನಿರುವಿ. ನಿಮ್ಮ ಜೋಡು ಧನ್ಯವಾದುದು !" ಎಂದು ಆಸ್ತಿಕರ, ಬೆನ್ನ ಮೇಲೆ ಕೈಯಾಡಿಸಿದರು.

ಭಕ್ತರು ಬೆನ್ನಮೇಲೆ ಕೈಯಾಡಿಸಿದರೆ ಎಂಥ ಸುಖವಾಗುವದು. ಅದು ದೇವರ ಮಂಗಳ ಸ್ಪರ್ಶವೇ ಇರುತ್ತದೆ. ಆ ಸ್ಪರ್ಶದಿಂದ ಶರೀರದಲ್ಲಿಯ ಅಣುರೇಣುಗಳು ಪವಿತ್ರವಾಗುತ್ತವೆ. ಪುಲಕಿತವಾಗುತ್ತವೆ.

ಸ್ವಲ್ಪ ಮುಂದೆ ಸ್ತ್ರೀಯರ ಶಾಂತಿಸೇನೆಯು ಬಂದು ಕೂಡಿತು. ಕೈಯಲ್ಲಿ ಶಾಂತಿಧ್ವಜ, ಬಗಲಲ್ಲಿ ಕೂಸುಗಳನ್ನೆತ್ತಿಕೊಂಡು ಹೋಗುವ ಮಾತೆಯರು. ಜಗತ್ತಿಗೆ ಪ್ರೇಮಧರ್ಮವನ್ನು ತಾಯಂದಿರು ಕಲಿಸದೆ ಯಾರು ಕಲಿಸಬೇಕು.? ಆ ಎಲ್ಲ ಸ್ತ್ರೀಯರು ಒಬ್ಬರಹಿಂದೊಬ್ಬರು ಬಂದು ಆಸ್ತಿಕರಿಗೆ ನಮಸ್ಕರಿಸಿದರು. ಆಸ್ತಿಕರ ಕಣ್ಣುಗಳಿಂದ ಪಾವಿತ್ರ್ಯ ಹಾಗೂ ಮಂಗಲವು ಹರಿಯುತ್ತಿತ್ತು. ಈ ದೃಶ್ಯವನ್ನು ಕಂಡು ಅವರ ಅಂತಃಕರಣವು ತುಂಬಿ ಬಂದಿತು.

“ ಇವರು ಕಾರ್ತಿಕನ ತಾಯಿ. ಆವಳು ಹೆಂಡತಿ ? ಎಂದು ಒಬ್ಬರು ಪರಿಚಯ ಮಾಡಿಕೊಟ್ಟರು.

“ ಇನ್ನೂ ಕೈಯಲ್ಲಿಯ ಗುಳ್ಳೆಗಳು ಮಾದಿಲ್ಲವೆಂದು ತೋರುತ್ತದೆ. ಹೂವಿನಂಥ ಕೋಮಲ ಕೈಗಳಲ್ಲಿ ಎಂಥ ಅದ್ಭುತ ಶಕ್ತಿ ! ” ಎಂದರು ಆಸ್ತಿಕರು.

ತ್ರಿವೇಣೀ ಸಂಗಮ ಮುಂದೆ ನಡೆಯಿತು. ಲಕ್ಷಾವಧಿ ಸ್ತ್ರೀ ಪುರುಷರು ಹಳ್ಳಿ ಹಳ್ಳಿಗಳಿಂದ ಈ ಅಮರ ಯಾತ್ರೆಯನ್ನು ನೋಡಲು ಹೊರಟರು. ಇಡೀ ದೇಶವೇ ನಡುಗಿತು. ಭರತಖಂಡದ ಹೃದಯವೇ ತುಂಬಿಬಂದಿತು. ಹಿಮಾಲಯವು ಕರಗಿ ಹರಿಯಹತ್ತಿತು. ಸಮುದ್ರವು ಉಕ್ಕೇರಿ ಕುಣಿಯಹತ್ತಿತು. ನದಿಗಳು ಹೊರಸೂಸಿದವು. ಅದು ಅಪೂರ್ವವಾದ ಕ್ಷಣವಿದ್ದಿತು.



# ೨೦

‘ ಜನಮೇಜಯನು ಸಿಟ್ಟಿನಿಂದ ಕುದಿಯುತ್ತಿದ್ದನು. ಎಲ್ಲ ಕಡೆಗೂ ಅವನಿಗೆ ಛೀ. ಥೂ. ಅನ್ನಹತ್ತಿದ್ದರು. ಇಂದು ಕೈದಿಗಳನ್ನೆಲ್ಲ ಹೊರತೆಗೆದಿದ್ದಾರೆ. ಹಗ್ಗದಿಂದ ಎಲ್ಲರನ್ನೂ ಬಿಗಿದಿದ್ದಾರೆ. ಗಂಡಹೆಂಡಿರನ್ನು ಜೋಡಿ ಜೋಡಿಯಾಗಿ ನಿಲ್ಲಿಸಿದ್ದಾರೆ. ಎಷ್ಟೋಜನರ ಕೈಯಲ್ಲಿ ಮಕ್ಕಳಿವೆ. ಹೋಮಕುಂಡವು ಪ್ರಜ್ವಲಿಸುತ್ತಲಿದೆ. ಆ ಜ್ವಾಲೆಗಳು ನಾಲಿಗೆ ಚಾಚುತ್ತಲಿವೆ.

“ ಎಲ್ಲಿರುವಳು ಆ ವತ್ಸಲೆ? ‘ ಜನಮೇಜಯನು ರಾಜನೇ ಅಲ್ಲ. ಪ್ರಜೆಗಳನ್ನು ಮನ್ನಿಸದವನು ರಾಜನು ಹೇಗೆ? ಅವನು ಕಳ್ಳ. ಸುಲಿಗೆಗಾರ, ಎಂದು ಅವಳು ಅಂದಿಲ್ಲವೇ? ತನ್ನಿರಿ ಆಕೆಯನ್ನಿಲ್ಲಿ. ಆಕೆಯ ಗಂಡನನ್ನು ಎಳೆಯಿರಿ. ” ಎಂದು ಗರ್ಜಿಸಿದನು.

ಇಬ್ಬರನ್ನೂ ಬಂಧಿಸಿ ಎದುರಿಗೆ ತಂದು ನಿಲ್ಲಿಸಿದರು.

‘ ವತ್ಸಲೇ, ವಿಚಾರ ಮಾಡಿದೆಯಾ? ಈ ಗಂಡನನ್ನು ಬಿಡು. ಕ್ಷಮೆ ಕೇಳು, ಪ್ರಾಣಬೇಡವಾಗಿದ್ದರೆ ಸಿದ್ಧಳಾಗು. ಬೇಕಿದ್ದರೆ. ಆಜ್ಞೆಮನ್ನಿಸು. ’ ಎಂದನು.

‘ ಕಡುಪಾಪಿಯೇ, ಹೋಗು! ನಿನ್ನ ಮೋರೆ ನೋಡಲು ಕೂಡ ನನಗೆ ಇಚ್ಛೆಯಿಲ್ಲ. ನಿನ್ನ ಅಪವಿತ್ರ ಶಬ್ದ ಕೇಳಲೂ ಇಚ್ಛೆಯಿಲ್ಲ. ನಿನ್ನಂಥ ಪಾಪಾತ್ಮರು ಇರುವ ಭೂಮಿಯನ್ನೇ ತ್ಯಜಿಸಲು ನಾನು ಉತ್ಸುಕಳಾಗಿದ್ದೇನೆ. ದೇವಲೋಕಕ್ಕೆ ಹೋಗುವೆ. ಗಂಡನನ್ನು ಬಿಟ್ಟು ಹೆಂಡತಿಯು ಇರುವದು ಶಕ್ಯವಿಲ್ಲೆಂದು ಎಷ್ಟುಸಲ ನಿನಗೆ ಹೇಳಬೇಕು? ಪ್ರಭೆಯು ಪ್ರಭಾಕರನನ್ನು

ಬಿಡುವದಿಲ್ಲ. ಬೆಳದಿಂಗಳು ಚಂದ್ರನನ್ನು ಬಿಟ್ಟಿರುವದೇ ? ನಾಗರು ಪವಿತ್ರರು. ನೀನು ಮಾತ್ರ ಧರ್ಮಭ್ರಷ್ಟ. ಸಾವಿರಾರು ಜನ ಸ್ತ್ರೀಪುರುಷರ, ಮಕ್ಕಳುಮರಿಗಳ ಹವನಮಾಡುವ ನೀನು ಮನುಷ್ಯನೇ ? ನೀನು, ವೃಕ. ವ್ಯಾಘ್ರನಿರುವಿ. ವೃಕ,ವ್ಯಾಘ್ರವೂ ಬೇಕು. ಅವು ರಕ್ತಕ್ಕೆ ಇಷ್ಟು ಹಪಾಪಿಸಿರುವದಿಲ್ಲ. ನಿನ್ನ ಪಶುತ್ವಕ್ಕೆ, ದುಷ್ಟತನಕ್ಕೆ ತುಲನೆಯೇ ಇಲ್ಲ. ನನಗೆ ಧರ್ಮವನ್ನು ಕಲಿಸುವಿಯಾ ! ಈ ನಿನ್ನ ರಕ್ತಲಾಂಛಿತ ಧರ್ಮವು, ಧರ್ಮವೇ? ನಿರಪರಾಧಿಗಳ ರಕ್ತ ಹರಿಸುವದು ಧರ್ಮವೇ ? ಇದು ಧರ್ಮವಲ್ಲ. ಇದು ನಿನ್ನ ಉನ್ಮತ್ತತನ. ದ್ವೇಷದ ಉರಿ. ವಿಷದ ತೆರೆ. ಈ ನಿನ್ನ ರಾಜ್ಯದಲ್ಲಿ ಕ್ಷಣವೂ ಕೂಡ ಬದುಕಲು ಇಚ್ಛೆಯಿಲ್ಲ, ಎಲ್ಲಿ ಸರ್ವರ ವಿಕಾಸಕ್ಕೆ ಅವಕಾಶವಿಲ್ಲವೋ ಅದು ಕೇವಲ ಪಾಪದ ರಾಜ್ಯ. ನಿಮ್ಮ ಕಟ್ಟಳೆ, ನಿಮ್ಮ ಸಂಸ್ಥೆಗಳು ಸರ್ವರ ವಿಕಾಸಕ್ಕೆ ಎಷ್ಟು ಉಪಯೋಗ ಬೀಳುವವೋ ಅದರ ಮೇಲೆ ನಿಮ್ಮ ರಾಜ್ಯದ ಹಾಗು ಧರ್ಮದ ಪ್ರತಿಷ್ಠೆಯು. ನಿನ್ನ ರಾಜ್ಯವೂ ಬೇಡ. ನಿನ್ನ ಧರ್ಮವೂ ಬೇಡ. ನಮಗೆ ಬೇಗ ಹೋಗಬೇಕಾಗಿದೆ. ಯಾವ ಕುಂಡದಲ್ಲಿ ಹಾರಲಿ ಹೇಳು. ನಾವಿಬ್ಬರೂ ಕೈ ಕೈ ಹಿಡಿದುಕೊಂಡು ಪ್ರವೇಶಮಾಡುವೆವು. ನೋಡು, ಆ ಜ್ವಾಲೆಗಳು ನಮ್ಮನ್ನು ಕಾಣಲು ಕುಣಿಯುತ್ತಿವೆ. ಎಲ್ಲಿ ಹಾರೋಣ ಹೇಳು, ನಮ್ಮ ಶರೀರಗಳು ಸುಡುವದನ್ನು ನೋಡಿ, ನಿನ್ನ ಕಣ್ಣುಗಳು ಕೃತಾರ್ಥವಾಗಲಿ. ನಿನ್ನ ಆರ್ಯಧರ್ಮವು ಸಫಲವಾಗಲಿ. ನಮ್ಮ ಮಾಂಸವು ಚುರು ಚುರು ಸುಡುವದನ್ನು ಕಂಡು, ನಿನ್ನ ಶರೀರದ ಮೇಲೆ ಮಾಂಸವು ಹೆಚ್ಚಾಗಲಿ. ನಮ್ಮ ಸಾವಿರಾರು ಜನರ ಆಹುತಿಯಿಂದ ನಿನ್ನ ಸಿಟ್ಟು ಶಾಂತವಾದರೆ ಎಷ್ಟೋ ಒಳ್ಳೇದಾಗುವದು. ಸೂರ್ಯನು ಹುಟ್ಟುವಾಗ ಪೂರ್ವದಿಕ್ಕೆಲ್ಲ ಕೆಂಪು, ಕೆಂಪಾಗಿರುತ್ತದೆ. ಬರಬರುತ್ತ ಅದು ಕಡಿಮೆಯಾಗುತ್ತದೆ. ಬಾಲ ಸೂರ್ಯನು ಮೇಲೇರುತ್ತಾನೆ. ನಿನ್ನ ಜೀವನದಲ್ಲಿ ಜ್ಞಾನರವಿಯು ಉದಯವಾಗಲೆಂದು ನಾವು ಸಾವಿರಾರು ಹಿರಿಕಿರಿಯರೆಲ್ಲರೂ ನಮ್ಮ ರಕ್ತವನ್ನು ಚೆಲ್ಲಲು ಸಿದ್ಧರಾಗಿ ನಿಂತಿದ್ದೇವೆ. ಹೇಳು ! ರಾಜಾ ಹೇಳು........"

ವತ್ಸಲೆಯು ಇತ್ತ ಮಾತಾಡುತ್ತಿರುವಾಗ ಅತ್ತ ಪ್ರಚಂಡ ಜಯಜಯಕಾರವು ಕಿವಿಗೆ ಬಿದ್ದಿತು. 'ಭಗವಾನ್ ಆಸ್ತಿಕರಿಗೆ ಜಯವಾಗಲಿ, ಐಕ್ಯದ

ವಿಜಯವಾಗಲಿ' ಎಂಬ ಗರ್ಜನೆ. ಸಸೈನ್ಯವಾಗಿ ಇಂದ್ರನು ಬಂದನೇ? ಆಸ್ತಿಕರ ಜಯಜಯಕಾರವೇಕೆ? ಆಸ್ತಿಕರು ಬಂದರೇ? ಈ ಸುದ್ದಿ ನನಗೇಕೆ ಹತ್ತಲಿಲ್ಲ? ವಕ್ರತುಂಡನೇಕೆ ಹೇಳಲಿಲ್ಲ? ಎಂದು ಜನಮೇಜಯನು ವಿಚಾರ ಮಗ್ನನಾದ. ರಾಜನು ಎದ್ದು ನಿಂತು ನೋಡುತ್ತಾನೆ. ರಾಜ್ಯದಲ್ಲಿ ಎಲ್ಲ ಪ್ರಜೆಗಳು ಬರುತ್ತಿರುವಂತೆ ಕಂಡಿತು. ಲಕ್ಷಾವಧಿ ಸ್ತ್ರೀಪುರುಷರು ಸಮುದ್ರದಂತೆ ಬರುತ್ತಿದ್ದಾರೆ. ಕೈಯಲ್ಲಿ ಹಳದೀ ಬಣ್ಣದ ಶಾಂತಿಧ್ವಜಗಳು ಕಾಣುತ್ತಲಿವೆ.

ಬಾಲಕನಾದ ಶಶಾಂಕನ ಕೈ ಹಿಡಿದುಕೊಂಡು ಆಸ್ತಿಕರು ಎಲ್ಲಕ್ಕೂ ಮುಂದೆ ಇದ್ದರು. ಹಿಂದೆ ಜನತೆ. ಜನಮೇಜಯನು ಎದ್ದು ನಿಂತನು. ಆಸ್ತಿಕರೂ ಶಾಂತಿಧ್ವಜದೊಡನೆ ಎದುರು ಬಂದು ನಿಂತರು. ಶಶಾಂಕನು ತಂದೆ ತಾಯಿಗಳನ್ನು ನೋಡಿದೊಡನೆಯೇ ಓಡಿ ಹೋಗಿ ತಾಯಿಯನ್ನು ಅಪ್ಪಿಕೊಂಡನು. ಸೈನಿಕರು ಅವನನ್ನು ಜಗ್ಗ ಹತ್ತಿದರು.

"ನಿಲ್ಲಿರಿ ಜಗ್ಗಬೇಡಿರಿ. ಇವಳು ನನ್ನ ತಾಯಿ. ಇವಳೊಡನೆ ನಾನು ಅಗ್ನಿಯಲ್ಲಿ ಜಿಗಿಯುವೆ. ಅವ್ವಾ! ನನ್ನದೊಂದು ಕೈಯನ್ನು ನೀನು ಹಿಡಿ. ಇನ್ನೊಂದನ್ನು ಅಪ್ಪನು ಹಿಡಿಯಲಿ. ನಾವೆಲ್ಲರೂ ಹಾರೋಣ. ಎಲ್ಲಿದೆ ಹೋಮಕುಂಡ?' ಎಂದನು ಶಶಾಂಕ.

ಶಶಾಂಕನ ಈ ತೇಜಸ್ವಿ ನುಡಿಗಳನ್ನು ಕೇಳಿ, ಜನತೆಗೆ ಆಶ್ಚರ್ಯವಾಯಿತು. ಜನಮೇಜಯನು ತಲೆ ಕೆಳಗೆ ಹಾಕಿದನು. ಆದರೆ ಸಹಸ್ರಾರು ಜನರ ಮೋರೆಗಳು ಅಭಿಮಾನದಿಂದ ಮೇಲಕ್ಕೆದ್ದವು.

"ರಾಜಾ! ಸಪ್ರೇಮ ಪ್ರಣಾಮಗಳು," ಎಂದರು ಆಸ್ತಿಕರು

"ಭಗವಾನ್ ನನ್ನನ್ನು ನಾಚಿಸಬೇಡಿರಿ. ತಮ್ಮ ಪಾದಧೂಳಿಯಿಂದ ನಾವು ಪಾವನರಾಗುವೆವು" ಎಂದು ರಾಜನು ಸಾಷ್ಟಾಂಗವಾಗಿ ಪಾದಕ್ಕೆ ಎರಗಿದನು. ಆಸ್ತಿಕರು ಅವನನ್ನು ಎಬ್ಬಿಸಿ ಅಪ್ಪಿಕೊಂಡರು.

ರಾಜನು ಬದ್ಧಾಂಜಲಿಯಾಗಿ, "ತಾವು ಎಲ್ಲಿಂದ ಬರೋಣವಾಯಿತು? ಬಂದ ಉದ್ದೇಶವೇನು? ತಮ್ಮಂತಹ ಪುಣ್ಯವರ್ತಿಗಳ, ಮಹರ್ಷಿಗಳ

ದರ್ಶನವು ದುರ್ಲಭವು. ನನ್ನ ನೂರು ಜನ್ಮದ ಪುಣ್ಯವು ಫಲಕೊಡಲು ಬಂದುದರಿಂದಲೇ ತಮ್ಮ ದರ್ಶನವಾಯಿತು," ಎಂದು ನುಡಿದನು.

"ರಾಜಾ! ಸುಮ್ಮನೆ ಔಪಚಾರಿಕವಾಗಿ ಮಾತನಾಡುವದರಲ್ಲಿ ಅರ್ಥವಿಲ್ಲ. ಇದು ವೇಳೆಯೂ ಅಲ್ಲ. ನಾನು ನನ್ನ ಬಲಿದಾನ ಮಾಡಲು ಬಂದಿದ್ದೇನೆ. ನಾನು ಹಾಗು ನನ್ನ ಎಲ್ಲ ಆಶ್ರಮವಾಸಿಗಳು ಮತ್ತು ಎಲ್ಲ ಋಷಿ, ಮುನಿಗಳು ನಿನ್ನ ಹೋಮಕುಂಡದಲ್ಲಿ ಪ್ರವೇಶಿಸಲು ಬಂದಿದ್ದೇವೆ. ದಾರಿಯಲ್ಲಿ ಸಹಸ್ರಾರು ಜನ ಬಂದು ಕೂಡಿದ್ದಾರೆ. ನೀನು ಪ್ರಾರಂಭಿಸಿದ ಈ ನರಮೇಧದಲ್ಲಿ ನಮ್ಮ ಆಹುತಿಯೂ ಆಗಿ, ನಿನ್ನ ನಾಗದ್ವೇಷಾಗ್ನಿಯು ಶಾಂತವಾಗಲಿ. ಈ ಶಶಾಂಕ, ನಾಗೇಶ, ಪದ್ಮನಾಭ, ನೊದಲಾದವರ ಆಹುತಿಯಾಗಲಿ, ನಿರ್ಮಲರಾದ ಈ ಕುಮಾರರ ಬಲಿಯಾಗಲಿ, ವತ್ಸಲಾ, ಕೃಷ್ಣೆಯರಂಥ ದೊಡ್ಡ ಪತಿವ್ರತೆಯರನ್ನು ಬಲಿಕೊಡು. ಅಲ್ಲಿ ನೋಡು, ವೃದ್ಧಳಾದ ಸುಶ್ರುತೆ ಅಜ್ಜಿಯನ್ನು. ಆಕೆಯೂ ನಿನ್ನ ದ್ವೇಷಾಗ್ನಿಯನ್ನು ಶಾಂತಗೊಳಿಸಲು ಬಂದಿದ್ದಾಳೆ. ರಾಜಾ ನನ್ನಲ್ಲಿಯೂ ಕೂಡ ನಿನ್ನ ದೃಷ್ಟಿಯಿಂದ ಅಪವಿತ್ರವಾದ ನಾಗರಕ್ತವಿದೆ. ಈ ಅಪವಿತ್ರ ದೇಹವನ್ನು ಅಗ್ನಿಗೆ ಅರ್ಪಿಸು. ನಿನ್ನ ಧರ್ಮವು ಬೆಳಗಲಿ. ಪೃಥ್ವಿಯು ಪಾವನವಾಗಲಿ," ಎಂದರು ಆಸ್ತಿಕರು.

"ತಪೋಧನರೇ! ನಿಮ್ಮ ಅಸ್ತಿತ್ವದಿಂದಲೇ ಪಾವಿತ್ರ್ಯವು ಪವಿತ್ರವಾಗುವದು. ಧರ್ಮವು ಸನಾಥವಾಗುವದು. ನೀವೇಕೆ ಹೀಗೆ ಮಾತನಾಡುವಿರಿ? ನಾನು ಎಂದಾದರೂ ನಿಮ್ಮನ್ನು ಅಪಮಾನಗೊಳಿಸಿರುವೆನೆ? ನಿಮ್ಮ ಆಶ್ರಮಕ್ಕೆ ಸೈನ್ಯ ಕಳಿಸಿರುವೆನೇ? ತಮ್ಮ ಬಗೆಗೆ ನನ್ನಲ್ಲಿ ಅತ್ಯಂತ ಪೂಜ್ಯಬುದ್ಧಿಯಿದೆ" ಎಂದನು ಜನಮೇಜಯ.

"ರಾಜಾ! ನನಗಿಂತಲೂ ದೊಡ್ಡ ವ್ಯಕ್ತಿಗಳನ್ನು ಬೆಂಕಿಯಲ್ಲಿ ಒಗೆಯಲು ನಿಲ್ಲಿಸಿರುವಿ. ಈ ಸಹಸ್ರಾರು ತಾಯಿಗಳಲ್ಲಿ ದಿವ್ಯತೆಯಿಲ್ಲವ? ಇಲ್ಲಿ ನಿಂತ, ಈ ಪುರುಷರಲ್ಲಿ ಪುಣ್ಯವಿಲ್ಲವೆ? ನೀನು ಕಟ್ಟಿ ನಿಲ್ಲಿಸಿದ ಈ ನೂರಾರು ಮಕ್ಕಳಿಗಿಂತ, ನಿರ್ಮಲರು ಯಾರಿರುವರು? ಈ ಪೃಥ್ವಿಯಲ್ಲಿ ಏನಾದರೂ ಪಾವಿತ್ರ್ಯ ಹಾಗು ಮಧುರತೆಯಿದ್ದರೆ, ಏನಾದರೂ ಅಲ್ಪ ಸ್ವಲ್ಪ

ಶಾಂತಿ ಸುಖಗಳು ದೊರೆಯುತ್ತಿದ್ದರೆ ಅದು ಈ ಅಕಪಟ ಮಕ್ಕಳಿಂದ. ಮಕ್ಕಳೆಂದರೆ ಸಂಸಾರವೃಕ್ಷದ ಹೂಗಳು. ಈ ಎಲ್ಲ ಜನರನ್ನು ಬಲಿಗೊಟ್ಟು ನನ್ನನ್ನು ಉಳಿಸುವೆಯಾ ? ಎಂತಹ ಭಯಂಕರ ಆಸುರಿ ಸಂಹಾರವನ್ನು ಪ್ರಾರಂಭಿಸಿರುವೆ! ನಾವಿದನ್ನು ನೋಡುವದೆಂತು ? ರಾಜಾ ! ನಮ್ಮನ್ನೂ ಬಲಿಗೊಡು. ಯಾವ ಹೋಮಕುಂಡದಲ್ಲಿ ಪ್ರವೇಶಿಸಲಿ ? ಗುರುಗಳು ಮಾರ್ಗದರ್ಶನ ಮಾಡಬೇಕು. ನಾನು ಮೊದಲು ಪ್ರವೇಶಿಸುವೆ. ನಂತರ ಈ ಶಿಷ್ಯವರ್ಗವು ಬರುವದು " ಎಂದು ಶಾಂತ ರೀತಿಯಿಂದ ಆಸ್ತಿಕರು ನುಡಿದರು.

" ಭಗವಾನ್, ನಾನು ನಾಗರನ್ನು ಕಂಡು ಏಕೆ ಸಿಟ್ಟಾಗಬಾರದು ? ನನ್ನ ತಂದೆಯನ್ನು ಇವರಲ್ಲಿಯ ಒಬ್ಬನು ಕೊಲ್ಲಲಿಲ್ಲವೇ ? ಈ ಜನರು ದುಷ್ಟರಲ್ಲವೆ ? " ಎಂದನು ರಾಜ.

" ರಾಜಾ ಅರ್ಜುನನು ತಕ್ಷಕರ ವಸಹಾತನ್ನೇ ಪೂರ್ಣವಾಗಿ ಸುಟ್ಟನು. ಆದರಲ್ಲಿ ಸಾವಿರಾರು ನಾಗರು ಸುಟ್ಟು ಭಸ್ಮವಾದರು. ಅಲ್ಲಿಂದ ಓಡಿ ಹೋಗುವವರನ್ನು ಎಳೆದುತಂದು ಬೆಂಕಿಯಲ್ಲಿ ಒಗೆದರು. ಒಬ್ಬ ತರುಣನು ಮಾತ್ರ ಉಳಿದ. ನಿನ್ನ ತಂದೆಯಂತೂ ಋಷಿಯ ಅಪಮಾನ ಮಾಡಿದ್ದು ನಿನಗೆ ಗೊತ್ತಿದೆ. ಆರ್ಯರಾದ ನೀವು ನಾಗರನ್ನು ಹುರಿದು ಬಿಟ್ಟಿರುವಿರಿ. ನಾಗರಿಗೆ ಆದ ಅನ್ಯಾಯಕ್ಕೆ ಶಾಸನವನ್ನೇ ಮಾಡುವದಾದರೆ, ನಿಮ್ಮ ಆರ್ಯರನ್ನೆಲ್ಲ ಸಾಸಿವೆ ಕಾಳಿನಷ್ಟು ಕಡಿದು ತುಂಡು ಮಾಡಬೇಕು. ಅವರನ್ನು ಛಲಿಸಿದಿರಿ, ಸುಟ್ಟಿರಿ. ಅವರ ಮನೆಮಾರುಗಳನ್ನು ಸೂರೆಗೊಂಡಿರಿ. ಅವರನ್ನು ದೂರ ಅಟ್ಟಿದಿರಿ. ಅವರ ಸ್ತ್ರೀಯರನ್ನು ಉಪಯೋಗಿಸಿಕೊಂಡು ಬೀಸಾಡಿದಿರಿ. ಇಷ್ಟಾದರೂ ಅವರು ಶಾಂತರಿದ್ದರು. ಅವರ ಮೂರ್ತಿಗಳನ್ನು ಕಿತ್ತೊಗೆಯಹತ್ತಿದಕೂಡಲೆ ನಿಮ್ಮ ಸಹಸ್ರಾರು ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡ ಅವರು ರೊಚ್ಚಿಗೆದ್ದರೆ ಅವರು ಕ್ರೂರರೋ ? ನೀವೋ, ? ಜೇತೃಗಳಿಗೆ ತಮ್ಮ ಕ್ರೂರತನವು ಕಾಣಿಸುವದಿಲ್ಲ. ಸೋತವರನ್ನು ಕೊಲ್ಲುವದೇ ಅವರ ಮೇಲೆ ಕರುಣೆಯೆಂದು ತಿಳಿಯುವರು. ಅವರನ್ನು ಸುಲಿಯುವದರಲ್ಲಿಯೇ ಅವರ ಹಿತವದೆ. ಅವರನ್ನು ದಾಸ

ರನ್ನಾಗಿ ಮಾಡುವದೆಂದರೇ ಅವರಿಗೆ ಸಂಸ್ಕೃತಿಯನ್ನು ಕೊಟ್ಟಂತೆ ಎಂದು ಭಾವಿಸುತ್ತಾರೆ. ಖಡ್ಗವೆಂದರೆ ಸಂಸ್ಕೃತಿಯಲ್ಲ. ಎರಡನೆಯವರ ಗುಡಿ ಸಲಗಳನ್ನು ಸುಟ್ಟು, ಅರಮನೆಗಳನ್ನು ಕಟ್ಟುವದು ಸುಧಾರಣೆಯಲ್ಲ. ಯಾವುದರಿಂದ ಮನುಷ್ಯತ್ವವು ಬೆಳೆಯುವದೋ ಅದು ಸುಧಾರಣೆ. ನನಗೆ ಇದರಲ್ಲಿ ಹೀನವೃತ್ತಿಯು ಕಾಣಿಸುತ್ತಿದೆ. ಕೇವಲ ದ್ವೇಷವು ಕಾಣುತ್ತದೆ ನಾಗರೆಂದರೆ ಕ್ರೂರರು. ನಾಗರೆಂದರೆ ಕೆಡುಕು ಯಾಕೆ? ದೇವರು ವಿಶಿಷ್ಟ ಜಾತಿಯು ಕ್ರೂರವೆಂದು ಹುಟ್ಟಿಸಿರುವನೇ? ಒಳ್ಳೇ ಕೆಟ್ಟ ಜನರು ಎಲ್ಲರಲ್ಲಿಯೂ ಇದ್ದಾರೆ. ಆರ್ಯರಲ್ಲಿ ಅತ್ಯಂತ ದುಷ್ಟರಿದ್ದರೆ, ನಾಗರಲ್ಲಿ ಮಹಾತ್ಮರೂ ಸಿಗುವರು. ಯಾರೂ ಯಾರಿಗೂ ನಗಬಾರದು. ಬೆಳಕು ಕತ್ತಲೆಗಳು ಎಲ್ಲೆಡೆಯಲ್ಲಿವೆ. ಕೇವಲ ಪವಿತ್ರ, ನಿಸ್ವಾರ್ಥ, ನಿಷ್ಕಲಂಕ ಜ್ಯೋತಿಯು ಯಾವುದಿದೆ? ಸರ್ವಸುಂದರನು ಪರಮಾತ್ಮನೊಬ್ಬನೇ ನಾವು ಒಬ್ಬರಿಗೊಬ್ಬರು ಗುಣಗಳನ್ನು ತಕ್ಕೊಳ್ಳುತ್ತ, ದೋಷಗಳನ್ನು ದೂರ ಮಾಡುತ್ತ ಮುಂದೆ ಸಾಗಬೇಕು. ಎರಡನೆಯವರ ಕೊಲೆ ಮಾಡುವವರಿಗೆ ದೇವ ರಾಜ್ಯದಲ್ಲಿ ಪ್ರವೇಶವಿಲ್ಲ.

ನಾಗರಮೇಲೆ ನೀನು ಸುಮ್ಮನೆ ಸಿಟ್ಟಿಗೆದ್ದಿರುವಿ. ಹಳ್ಳಿಹಳ್ಳಿಗಳಲ್ಲಿ ನೋಡಿ ದರೆ ಇಬ್ಬರಲ್ಲಿಯೂ ಒಳ್ಳೆ ಸಂಬಂಧವು ಬೆಳೆಯುತ್ತ ನಡೆದಿತ್ತು. ಅದಕ್ಕೆ ಮತ್ತೆ ಖೋ ಹಾಕಿದಿ. ಕೆಲವು ನಾಗರು ಇಂದ್ರನ ಕಡೆಗೆ ಹೋಗಿದ್ದಾರೆ. ಅವರೊಡನೆ ಯುದ್ಧ ಮಾಡುವಿಯಾ? ಮತ್ತೆ ರಕ್ತದ ಕಾಲುವೆ ಹರಿ ಸುವಿರಾ? ನಾವೆಲ್ಲ ಗಂಗಾ, ಯಮುನಾ, ಸಿಂಧು, ಕಾವೇರಿ ಮೊದಲಾದ ನದಿ ಗಳಿಂದ ಪವಿತ್ರಳಾದ ಈ ಭಾರತಮಾತೆಯ ಮಕ್ಕಳಲ್ಲವೇ? ತನ್ನ ಮಕ್ಕಳ ರಕ್ತದ ಕಾಲುವೆ ಹರಿಯುವದನ್ನು ಯಾವ ತಾಯಿಗೆ ನೋಡುವದಾದೀತು? ಈ ಭಾರತಮಾತೆ ಪಾತಾಳಕ್ಕೆ ಹೋದಾಳು? ಅನ್ನವು ನಿಮ್ಮನಷ್ಟೇ ಪವಿತ್ರಗೊಳಿಸಿ, ನಾಗರನ್ನು ಅಪವಿತ್ರರನ್ನಾಗಿ ಮಾಡುವದೋ? ಇದೆಲ್ಲವೂ ಅಹಂಕಾರ.

" ರಾಜನೆ, ದ್ವೇಷದಿಂದ ದ್ವೇಷವು ಶಾಂತವಾಗುವದಿಲ್ಲ. ಮತ್ಸರ ದಿಂದ ಮತ್ಸರವು ಸಾಯುವದಿಲ್ಲ. ಆರ್ಯರಲ್ಲಿ ಕೆಲವು ಸುಂದರ

ಗುಣಗಳಿದ್ದಂತೆ ನಾಗರಲ್ಲಿಯೂ ಒಳ್ಳೆಯ ನಡತೆಗಳಿವೆ. ಇಬ್ಬರೂ ಒಂದಾದರೆ ಧರ್ಮಕ್ಕೆ ಮತ್ತಿಷ್ಟು ಕಳೆ ಬಂದೀತು. ಹಿಮಾಲಯವು ಅನೇಕ ಶಿಖರಗಳಿಂದ ಶೋಭಿಸುತ್ತದೆ. ಭಾರತೀಯ ಧರ್ಮದಲ್ಲಿ ನೂರಾರು ಸುಂದರ ವಿಚಾರ ಆಚಾರಗಳ ಶಿಖರಗಳು ಕಾಣಲಿ. ವಿವಿಧತೆಯು ಒಂದು ಬಗೆಯ ವೈಭವವೇ. ಆದರೆ ವೈಭವದ ಹಿಂದೆ ಐಕ್ಯತೆ ಮಾತ್ರ ಇರಬೇಕು. ಒಂದೇ ಗಿಡದ ಟೊಂಗೆಗಳಂತೆ, ಒಂದೇ ನದಿಯ ಪ್ರವಾಹಗಳಂತೆ, ಆಕಾಶದಲ್ಲಿಯ ನಕ್ಷತ್ರಗಳಂತೆ.

ರಾಜಾ, ಆರ್ಯರ ವಿಷ್ಣುವೂ ಈ ನಾಗರ ಶಿವನ ಹೆಡೆಯ ನಾಗನೂ ಒಂದೆಡೆಯಲ್ಲಿ ಸೇರಲಿ. ದೇವರು ಬಂದರೆ ಭಕ್ತರೂ ತಾವಾಗಿಯೇ ಒಂದಾಗುವರು. ಶೇಷಶಾಹಿಯಾದ ಪರಮಾತ್ಮನನ್ನು ನಾವು ನಿರ್ಮಿಸೋಣ. ದೇವರ ಸಂಪತ್ತನ್ನು ಬೆಳೆಸೋಣ, ಶೇಷಶಾಹಿ ವಿಷ್ಣುವೆಂದರೆ ನಾಗರ ಆಧಾರದಿಂದ ಜೀವಿಸುವ ಆರ್ಯರು. ನಾಗರು ಮೂಲವಾಸಿಗಳು. ಅವರ ಸಹಾಯ ಪಡೆಯಿರಿ. ಸಹಕಾರವನ್ನು ಮಾಡಿರಿ. ಇಬ್ಬರೂ ಪ್ರೀತಿಯಿಂದ ಬಾಳಿರಿ. ಆರ್ಯ ಹಾಗೂ ನಾಗರ ಸಂಸ್ಕೃತಿಗಳು ಒತ್ತಟ್ಟಿಗೆ ಸೇರಲಿ. ಇಬ್ಬರೂ ಸೇರಿ ಹೊಸದಾದ ಒಂದು ಸಂಮಿಶ್ರ ಸಂಸ್ಕೃತಿಯು ಹೊರಬರಲಿ. ಶುಭ್ರವಾದ ಗಂಗೆಯಲ್ಲಿ ಕಪ್ಪಾದ ಯಮುನೆಯು ಸೇರಲಿ. ಪ್ರವಾಹವು ವಿಶಾಲವಾಗಲಿ. ಗಂಭೀರವಾಗಲಿ. ಮುಂದಿನ ಜನಾಂಗಕ್ಕೆ ಆದರ್ಶವಾಗಲಿ.

ರಾಜನೆ, ಪವಿತ್ರ ಹಾಗು, ಸುಂದರವಾದ ಸಮೃದ್ಧ ಹಾಗೂ ಸಸ್ಯ ಶಾಮಲೆಯಾದ ಈ ಭೂಮಿಯಲ್ಲಿ ಅನೇಕ ಜಾತಿ ಪಂಥಗಳು ಇರುತ್ತವೆ. ಆರ್ಯರಾದ ನೀವು ಬಂದಂತೆ, ಬೇರೆಯವರು ಬರಬಹುದು. ಈ ಭೂಮಿಯ ಪ್ರೇಮದಿಂದ ಬೇರೆ ಬೇರೆ ಧರ್ಮಗಳು ಬರಬಹುದು. ದರಿದ್ರ ಹಾಗು ಅನ್ನವಿಲ್ಲದ ರಾಷ್ಟ್ರಗಳು ಭಾರತಮಾತೆಯ ಬಳಿಯಲ್ಲಿ ಬರಬಹುದು. ಅವಳು ಅವರನ್ನು ಸ್ವಾಗತಿಸಿ, ಪೋಷಿಸಬಹುದು. ಆದರೆ ನೀವು ಬೇರೆ ಬೇರೆಯಾಗಿದ್ದರೆ ಬಡಿದಾಡಬಹುದು; ತಾಯಿಗೆ ಕಷ್ಟಕೊಡಬಹುದು. ಮುಂದೆ ಬರಲಿರುವ ಜನಾಂಗಕ್ಕೆ ಹೇಗೆ ನಡೆದುಕೊಳ್ಳಬೇಕೆಂಬ ಉದಾಹರಣೆಯನ್ನು ನೀವು ಇಂದು ಆಚರಿಸಿ ತೋರಿಸಿರಿ.

ಒಬ್ಬರನ್ನೊಬ್ಬರು ಉಚ್ಚನೀಚರೆಂದು ತಿಳಿಯಬಾರದು. ಇಲ್ಲದ್ದನ್ನು ತೆಗೆಯಬೇಡಿರಿ. ವೇಳೆಯನ್ನು ವ್ಯರ್ಥವಾಗಿ ಕಳೆಯಬೇಡಿರಿ. ಮಾಂಗಲ್ಯವನ್ನು ನಿರ್ಮಿಸುವದಕ್ಕಾಗಿ ಬಾಳುವವನೇ ನಿಜವಾದ ಮನುಷ್ಯ. ಜಾತಿ ಜಾತಿಗಳಲ್ಲಿ ಪ್ರೇಮ ಹುಟ್ಟಿಸುವದಕ್ಕಾಗಿ ಸಾಯುವವನೇ ನಿಜವಾದ ಮನುಷ್ಯ. ತನ್ನಲ್ಲಿರುವ ಶ್ರೇಷ್ಠತೆಯನ್ನು ತಾನು ತಿಳಿದು ಅದನ್ನು ಎರಡನೆಯವರಿಗೆ ತಿಳಿಯುವಂತೆ ಮಾಡುವದೇ ನಿಜವಾದ ಮನುಷ್ಯತ್ವ. ಈ ಭರತ ಖಂಡದಲ್ಲಿ ಬೇರೆ ಬೇರೆ ಸಂಸ್ಕೃತಿಯ ಜನರು ಬರಬಹುದು. ದೊಡ್ಡ ಗಿಡದಲ್ಲಿ ಬೇರೆ ಬೇರೆ ಬಣ್ಣಗಳುಳ್ಳ, ಬೇರೆ ಬೇರೆ ಸ್ವರಗಳುಳ್ಳ, ಅನೇಕ ಪಾರಿವಾಳಗಳು ಬಂದು ಕೂಡಬಹುದು. ಅದು ವಿಶಾಲವಿದೆಯೆಂದೇ ಬರುವವು. ಬೇರೆ ಬೇರೆ ಜನರು ಒಂದೆಡೆ ಸೇರಿ ವಿಶ್ವಸಂಗ್ರಾಹಕವೂ ಪರಮ ಮಂಗಲವೂ ಆದ ಬೇರೊಂದು ಸಂಸ್ಕೃತಿಯನ್ನು ನಿರ್ಮಿಸಬಹುದು. ಭಾರತ ಭೂಮಿಯು ಮನುಷ್ಯತ್ವದ ತೀರ್ಥಕ್ಷೇತ್ರವಾದೀತು. ನಾನಾ ಸಂಸ್ಕೃತಿಗಳ ಸಂಮಿಶ್ರಿತ ಸಹಸ್ರದಳ ಕಮಲವೊಂದು ಅರಳೀತು.

ರಾಜನೆ, ಅಹಂಕಾರದಿಂದ ವಿಕಾಸಕ್ಕೆ ತಡೆಯಾಗುವದು. ಸಂಕುಚಿತ ವೃತ್ತಿಯು ಕಟ್ಟಕಡೆಗೆ ಸತ್ತುಹೋಗಬಹುದು. ಸಹಾನುಭೂತಿಯಿಲ್ಲದ, ಸಹಕಾರವಿಲ್ಲದ, ಜೀವನವೆಂದರೆ ಕಾಯ್ದ ಉಸುಕಿನ ಮರುಭೂಮಿ. ದೊಡ್ಡವರಾದ ನಮ್ಮಪೂರ್ವಜರು 'ಶೃಣ್ವಂತು ಸರ್ವೇ ಅಮೃತಸ್ಯ ಪುತ್ರಾಃ' ಎಂದು ಎಲ್ಲರನ್ನು ಕರೆದರು. 'ಅಮೃತಸ್ಯ ಪುತ್ರಾಃ ನತು ಕೇವಲಂ ಆರ್ಯಾಣಾಂ ನತು ನಾಗಾನಾಮ್।!' ಯಾವ ವಿಶ್ವಶಕ್ತಿಯಿಂದ ಆರ್ಯರು ಹುಟ್ಟಿದರೋ ಅದೇ ಶಕ್ತಿಯಿಂದ ನಾಗರೂ ಹುಟ್ಟಿದ್ದಾರೆ. ಯಾವ ತತ್ವವು ಆರ್ಯರಲ್ಲಿದೆಯೋ ಅದು ನಾಗರಲ್ಲಿಯೂ ಇದೆ. ಆರ್ಯರಿಗೆ ಹಸಿವೆಯನ್ನು ಹಿಂಗಿಸಲು ಅನ್ನ ಬೇಕು, ಅದರಂತೆಯೇ ನಾಗರಿಗೂ ಬೇಕು. ಇದನ್ನಾರು ನೋಡುವರೋ (ತಿಳಿಯುವರೋ) ಅವರೇ ನಿಜವಾದ ಮನುಷ್ಯರು. ಅವರೇ ಕಣ್ಣುಳ್ಳವರು. ಉಳಿದವರೆಲ್ಲ ಕುರುಡರು, ಕಣ್ಣಿದ್ದೂ ಕುರುಡರು.

ರಾಜನೆ ತಿಳಿದು ನೋಡು. ನಿರ್ಮಲ, ನಿರಹಂಕಾರ ಪ್ರೇಮಳ ದೃಷ್ಟಿಯಿಂದ ಶಾಂತ ಚಿತ್ತದಿಂದ ಮನಸ್ಸಿನಲ್ಲಿ ವಿಚಾರಮಾಡಿ ನೋಡು. ನನ್ನ

ಅಭಿಪ್ರಾಯವು ನಿನಗೆ ತಿಳಿದೀತು. ನೀನು ನನ್ನನ್ನು ಉಳಿಸಬೇಕೆಂದು ನಾನು ಇದನ್ನು ಹೇಳುವದಿಲ್ಲ. ಈ ನಾಗರನ್ನು ಇವರನ್ನು ಸಾಹಾನುಭೂತಿಯಿಂದ ನೋಡುವವರನ್ನೂ ನೀನು ಕೊಲ್ಲುವಿಯಾದರೆ ನನ್ನನ್ನೂ ಕೊಲ್ಲು. ನಾಗ ಜಾತಿಯು ಸಮೂಲವಾಗಿ ನಷ್ಟವಾಗುತ್ತಿರುವಾಗ ಆದಾವನು ಆಶ್ರಮದಲ್ಲಿ ಜಪ ತಪ ಮಾಡುತ್ತ ಕೂಡುವನು ? ದೇವರ ಸಹಸ್ರಾವಧಿ ಮಕ್ಕಳ ಆಮಾನುಷ ಛಲವು ನಡೆದಿರುವಾಗ ಯಾರು ಸುಮ್ಮನಿದ್ದಾರು ? ಇಂದ್ರನಂತೆ ಸಿನ್ನೊಡನೆ ಶಸ್ತ್ರಾಸ್ತ್ರಗಳಿಂದ ಯುದ್ಧ ಮಾಡುವರು. ಕೈಯಲ್ಲಿ ಖಡ್ಗ ಹಿಡಿದು ಯುದ್ಧ ಮಾಡುವದು ನನ್ನ ಕೆಲಸವಲ್ಲ. ನನ್ನಂಥ ತಪೋನಿಷ್ಠನು ಖಡ್ಗದೆದುರು ಶಾಂತನಾಗಿ ನಿಲ್ಲಬಹುದು. ತನ್ನನ್ನೇ ಬಲಿಕೊಟ್ಟು ಅನ್ಯಾಯವನ್ನು ಎದುರಿಸಬಹುದು. ಪಶುತ್ವದ ವಿರುದ್ಧವಾಗಿ ಮನುಷ್ಯತ್ವವು ಕೆಲಸ ಮಾಡೀತು. ರಾಜಾ, ಈ ಮಹಾ ತಾಯಂದಿರನ್ನು ಆಕಳುಗಳಂತೆ ನೀನು ನಿಲ್ಲಿಸಿರುವೆ. ರಾಜನೆ, ಯಾರಾದರು ನಿನ್ನ ಅಕ್ಕತಂಗಿಯರನ್ನು ತಾಯಿಯನ್ನು ನಿನ್ನ ಕುಟುಂಬದ ಜನರನ್ನು ಕಟ್ಟಿತಂದು ಹೀಗೆ ನಿಲ್ಲಿಸಿದ್ದರೆ, ನೀನು ಸುಮ್ಮ ನಿರುತ್ತಿದ್ದೆಯಾ ? ಪ್ರತಿಯೊಂದು ಮಾತನ್ನು ಸ್ವಂತ ವಿಚಾರದಿಂದಲೇ ಮಾಡಬೇಕು. ಎಲೊ, ಈ ತಾಯಿ ತಂಗೆಂದಿರು ನಿನ್ನವರೇ ಇದ್ದಾರೆ. ಆರ್ಜುನನು ನಾಗಕನ್ನೆಯರನ್ನು ವಿವಾಹವಾಗಿದ್ದಿಲ್ಲೇನು ? ಆ ದ್ರೌಪದಿ ದೇವಿಯಾದರು ಯಾರೆಂದು ತಿಳಿದಿರುವೆ ? ಅವಳು ನಾಗಕನ್ಯೆಯೇ ಇರಬಹುದೆಂದು ನನಗೆನಿಸುತ್ತದೆ. ಯಾಕಂದರೆ ಅಗ್ನಿಋಷಿಯು ಆವಳನ್ನು ದ್ರುಪದರಾಜನಿಗೆ ಕೊಟ್ಟನು. ದ್ರುಪದರಾಜನಿಗೆ ಮಕ್ಕಳಿದ್ದಿಲ್ಲ. ಅಗ್ನಿಋಷಿಯು ಆರ್ಯರ ವಸತಿಯನ್ನು ಬೆಳೆಸಬೇಕೆನ್ನುವವ. ಆವನು ನಾಗರನ್ನು ಛಲಿಸಿದನು. ಆದರೆ ಸುಂದರಳಾದ ನಾಗಬಾಲಿಕೆಯನ್ನು ನೋಡಿ ಆವನ ಹೃದಯವು ಕರಗಿತು. ಆ ಚಿಕ್ಕ ಮಗುವನ್ನು ದ್ರುಪದನಿಗೆ ಕೊಟ್ಟನು. ನನ್ನ ಮತದಂತೆ ಕಪ್ಪಿದ್ದವರು ಆರ್ಯರಲ್ಲವೆಂಬ ಸಿದ್ಧಾಂತವನ್ನು ಮಂಡಿಸಲು ಬರಲಾರದು. ನಾಗರಲ್ಲಿಯೂ ಎಷ್ಟೋ ಜನರು ಕೆಂಪಿದ್ದಾರೆ. ಆರ್ಯರಲ್ಲಿಯೂ ಕಪ್ಪು ಬಣ್ಣದವರಿದ್ದಾರೆ. ಏನೆ ಇರಲಿ. ಅಗ್ನಿಯು ದ್ರುಪದೆಯನ್ನು ತಂದು ಕೊಟ್ಟನೆಂಬ ಮಾತು ಸತ್ಯ. ನಾಗಮಾತೆಯರು ಒಂದು ಬಗೆ

ಯಿಂದ ನಿನ್ನ ತಾಯಿಯರು. ಅವರ ಬಲಿದಾನವನ್ನು ಮಾಡುವದಿದ್ದರೆ ಮಾಡು.

ರಾಜನೆ, ಈ ಪೃಥ್ವಿಯದಲ್ಲಿ ಶಾಂತಿಯ ರಾಜ್ಯವಿರಬೇಕೆಂದು ನಿಮ್ಮ ಮೊದಲಿನ ಮಹರ್ಷಿಗಳ ಇಚ್ಛೆಯಿದ್ದಿತು. ಆದುದರಿಂದಲೇ ವೇದ ಮಂತ್ರ ಗಳ ಕೊನೆಗೆ ಓಂ ಶಾಂತಿಃ ಶಾಂತಿಃ ಶಾಂತಿಃ ಎಂಬ ಉದಾತ್ತ ಧ್ಯೇಯವನ್ನು ತ್ರಿವಾರ ಘೋಷಿಸಿದ್ದಾರೆ. ಈ ಧ್ಯೇಯದ ಬೆಳವಣಿಗೆಯನ್ನು ಮಾಡುವದು ಮುಂದಿನ ಪೀಳಿಗೆಯ ಕರ್ತವ್ಯ. ಆದರೆ ಆ ಧ್ಯೇಯವನ್ನು ನೀನು ಮಣ್ಣು ಗೂಡಿಸುತ್ತಿರುವೆ. ನೀನು ಈ ನಾಗರನ್ನು ಬಲಿಗೊಡಲು ಸಿದ್ಧನಾದರೆ, ನಿಮ್ಮ ಪೂರ್ವಜರ ಧ್ಯೇಯ, ಆಶೆ ಆಕಾಂಕ್ಷೆ, ಅವರ ಸ್ವಪ್ನ ಎಲ್ಲವನ್ನು ಮಣ್ಣು ಗೂಡಿಸುವೆ. ಮನುಷ್ಯತ್ವವು ಎಲ್ಲಿದೆ ಎಂಬುದನ್ನು ತಿಳಿದುಕೊ. ಪಶುತ್ವ ವನ್ನು ತ್ಯಾಗಮಾಡಿ ದಿವ್ಯತ್ವದ ಕಡೆಗೆ ಸಾಗುವದೇ ಮನುಷ್ಯತ್ವವು. ನೀನು ಎತ್ತ ಸಾಗಿರುವೆ ಎಂಬುದನ್ನು ನೋಡು. ರಾಜನು ಮತಿಭ್ರಷ್ಟ ನಾದರೆ ರಾಷ್ಟ್ರವೇ ನಾಶವಾಗುವದು. ಭಗವಾನ್ ಶುಕಾಚಾರ್ಯರಮಾತು ಕೇಳಿ, ನಿನ್ನ ತಂದೆಯು ವಿಷಕೊಟ್ಟ ನಾಗನನ್ನು ಕ್ಷಮಿಸಲಿಲ್ಲವೇ ! ಪ್ರೇಮವನ್ನು ತೋರಿಸಲಿಲ್ಲವೇ ! ಇಂದು ಪರೀಕ್ಷಿತನು ಏನು ಅಂದಾನು ? ಅವನು ತೋರಿದ ದಿವ್ಯತ್ವವನ್ನು ನೀನು ಹಾಳು ಮಾಡುವಿಯಾ !

ರಾಜಾ. ಇನ್ನೊಮ್ಮೆ ವಿಚಾರಮಾಡು. ನಾಗ ಹಾಗು ಆರ್ಯರ ಐಕ್ಯಕ್ಕಾಗಿ ಯತ್ನಿಸಿದ ರಾಜನೆಂದು ನಿನ್ನ ಹೆಸರು ಇತಿಹಾಸದಲ್ಲುಳಿಯಲಿ. ನಾಗರ ಹವನ ಪ್ರಾರಂಭಮಾಡಿದವನೆಂದಂತೂ ಉಳಿಯುವದು. ಅದನ್ನು ನಿಲ್ಲಿಸಿ ಇಬ್ಬರಲ್ಲಿ ಐಕ್ಯಮಾಡಿದನೆಂದೂ ಇತಿಹಾಸವು ಹೇಳಲಿ. ಇಬ್ಬರನ್ನೂ ಕೂಡಿಸು, ಈ ಪತಿವ್ರತೆಯರಿಗೂ, ಅಕ್ಕತಂಗಿಯರಿಗೂ ಆದರದಿಂದ ವಸ್ತ್ರಾ ಲಂಕಾರಗಳನ್ನು ಕೊಡು. ಸರ್ವರ ಸತ್ಕಾರಮಾಡು. ನಾಗರನ್ನು ಹತ್ತರ ಕರೆ. ಪ್ರೇಮವನ್ನುಮಾಡು. ಇಂದ್ರ ಮೊದಲಾದ ಸರ್ವರಾಜರನ್ನು ಕರೆ ಯಿಸು. ಭರತಖಂಡದಲ್ಲೆಲ್ಲ ಆರ್ಯನಾಗರ ಐಕ್ಯದ ಸಂದೇಶವು ಹೋಗಲಿ. ಎರಡೂ ಜಾತಿಗಳು ಒಂದೆಡೆ ಬರಲಿ. ಭಾರತದ ಮುಖ ಮುದ್ರೆಯು ನವ ತೇಜದಿಂದ ಹೊಳೆಯಲಿ. ಭಾವೀ ಪೀಳಿಗೆಯು ಉತ್ತರೋತ್ತರವಾಗಿ ಬೆಳೆಯು

ವಂತಾಗಲಿ. ಇಂದು ಆರ್ಯ ಹಾಗೂ ನಾಗರು ಒಂದು ಗೂಡಿದರೆ, ನಾಳೆ ಮತ್ತೊಂದು ಪ್ರವಾಹವು ಬಂದು ಕೂಡುವದು. ವಿಶ್ವ ಚಾಲಕನು ಮಾನವ ಜಾತಿಯ ಎಲ್ಲ ಮಾದರಿಗಳನ್ನು ಭಾರತದಲ್ಲಿ ತಂದು, ಒಂದು ಸುಂದರವಾದ ದೃಶ್ಯವನ್ನು ನಿರ್ಮಿಸಬಹುದು. ಅವನ ಈ ಇಚ್ಛೆಯನ್ನು ತಿಳಿದು ನಡೆ ಯೋಣ. ಈಶ್ವರ ಇಚ್ಛೆಯ ವಿರುದ್ಧವಾಗಿ ನಡೆದರೆ, ನಾವೂ ಸಾಯುವೆವು. ಮಂದಿಯನ್ನೂ ಕೊಲ್ಲುವೆವು. ಪ್ರವಾಹದ ವಿರುದ್ಧವಾಗಿ ಹೋಗುವದರಲ್ಲಿ ಅರ್ಥವಿಲ್ಲ. ಭರತ ಖಂಡದ ಇತಿಹಾಸದ ಗತಿಯು ಮಾನವೈಕ್ಯದ ಕಡೆಗೆ ಇದೆ. ಪ್ರವಾಹವು ಆ ಕಡೆಗೆ ನಡೆದಿದೆ. ಈ ಪ್ರವಾಹವು ಧೀರ ಗಂಭೀರ ವಾಗಿ ವಿಶಾಲವಾಗಿ ಶಾಂತಿಸಾಗರಕ್ಕೆ ಕೂಡೀತು !

" ರಾಜಾ ಈ ಆಸ್ತಿಕನು ನಿನ್ನ ಬಳಿಯಲ್ಲಿ ಪ್ರೇಮ ಭಿಕ್ಷೆಯನ್ನು ಬೇಡು ತ್ತಿದ್ದಾನೆ. ಒಲ್ಲೆನೆನ ಬೇಡ. ಹಾಕು ಆ ಭಿಕ್ಷೆಯನ್ನು. ಭಾರತದ ಇತಿಹಾಸ ದಲ್ಲಿಯೇ ದಿವ್ಯವಾದ ಭಿಕ್ಷೆ. ರಾಜಾ ನೀನು ಕಠೋರನಿಲ್ಲ ಜನ್ಮತಃ ಯಾರೂ ಕಠೋರರಿರುವದಿಲ್ಲ. ಕೊನೆಗೆ ಕಠೋರರಲ್ಲಿಯ ಕಠೋರತೆಯೂ ನೀರಾಗುವದು. ಕಠೋರತೆಯು ಆತ್ಮ ಚಂದ್ರನ ಮುಂದೆ ನಿಲ್ಲಲುಶಕ್ಯವಾಗು ವದಿಲ್ಲ. ಕೊನೆಗೆ ಕರಗುವದು. ನೋಡು ನಿನ್ನ ಕಠೋರತೆಯು ಕರಗಿ ನೀರಾಯಿತು. ನಿನ್ನ ಕಣ್ಣುಗಳಿಂದ ನೀರು ಬರಹತ್ತಿದವು "

' ಭಗವಾನ್, ನನ್ನನ್ನು ಕ್ಷಮಿಸಿರಿ. ಪಾಪಿಯಾದ ನನ್ನನ್ನೆ ಅಗ್ನಿಯಲ್ಲಿ ಹಾಕಿರಿ. ನಾನು ಅಪರಾಧಿ. ಈ ಸಾವಿರಾರು ಮಾತೆಯರ ಶಾಪದಿಂದ ನಾನು ಮೊದಲೇ ಸುಟ್ಟು ಹೋಗಿರ ಬಹುದು." ಎಂದು ಜನಮೇಜಯನು ಆಸ್ತಿ ಕನ ಪಾದಗಳಿಗೆರಗಿದನು.

" ರಾಜಾ ಏಳು, ಏಳು. ಬಂದ ಮೋಡವು ಕರಗಿತು. ದ್ವೇಷವು ಮಾಯವಾಯಿತು. ನಿನ್ನ ಹೃದಯದಲ್ಲಿಯ ಧರ್ಮ ಸೂರ್ಯನು ಜಾಗೃತ ನಾದನು. ಇನ್ನೇಕೆ ಸಾಯಲು ಬಯಸುವೆ ಈ ಸಾವಿರಾರು ತಾಯಂದಿರು ನಿನಗೆ ಆಶೀರ್ವದಿಸುತ್ತಿದ್ದಾರೆ. ನೋಡು ಅವರ ಮುಖ ಕಮಲಗಳು ಅರ ಳಿವೆ. ಅವರ ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿವೆ. ಅವು ಆಶೀರ್ವಾದದ ಅಶ್ರುಗಳು. ಇನ್ನು ಮರಣದ ಇಚ್ಛೆ ಮಾಡಬೇಡ. ಈಗ ನೀನು

ಚಿರಂಜೀವಿಯು. ಈಗ ನೀನು ಎಲ್ಲರಿಗೂ ಆಧಾರನು. ಈ ಐಕ್ಯವನ್ನು ಬೆಳೆಸು. ಎಲ್ಲ ಕಡೆಗೆ ತಿರುಗಾಡಿ ಈ ಐಕ್ಯ ಜೀವನಕ್ಕೆ ನೀರೆರೆ. ಮೊದಲಿನದೆಲ್ಲವನ್ನು ಮರೆತುಬಿಡು. ಕತ್ತಲೆಯಿಂದ ಪ್ರಕಾಶವು ಬರಲಿ " ಎಂದನು ಆಸ್ತಿಕ.

ಎಲ್ಲ ನಾಗ ಬಂದಿಗಳು ಮುಕ್ತ ಮಾಡಲ್ಪಟ್ಟರು. ಮಕ್ಕಳು ತಾಯಂದಿರನ್ನು ಅಪ್ಪಿದರು. ಪತ್ನಿಯರು ಪತಿಯ ಕಡೆಗೆ ಪ್ರೇಮ ದೃಷ್ಟಿಯಿಂದ ನೋಡಹತ್ತಿದರು. ಗೆಳೆಯರು ಗೆಳೆಯರನ್ನು ಭೆಟ್ಟಿಯಾದರು. ಅಲ್ಲಿ ಪ್ರೇಮ ಪ್ರವಾಹವೇ ಹರಿಯಿತು. ಜಯ ಜಯಕಾರವು ಗಗನವನ್ನು ಮುಟ್ಟಿತು. ' ರಾಜಾಧಿರಾಜ ಜನಮೇಜಯನಿಗೆ ವಿಜಯವಾಗಲಿ. ಭಗವಾನ್ ಆಸ್ತಿಕರಿಗೆ ವಿಜಯವಾಗಲಿ. ಶಾಂತಿ ಧರ್ಮದ ಹಾಗೂ ಐಕ್ಯ ಧರ್ಮದ, ಸಂಗ್ರಾಹಕ ಧರ್ಮದ ವಿಜಯವಾಗಲಿ' ಎಂದು ನಾನಾ ಬಗೆಯಾಗಿ ಜಯ ಘೋಷಗಳು ನಡೆದವು. ಹುಡುಗರು ಕುಣಿಯುತ್ತಿದ್ದರು. ಶಾಂತಿ ಧ್ವಜವು ಹಾರಹತ್ತಿತು. ನಾಗಾನಂದನು ಕೊಳಲನ್ನೂದ ಹತ್ತಿದನು. ಲಕ್ಷ್ಮಾವಧಿ ಪ್ರಜೆಗಳು ಪ್ರೇಮ ಸಂಗೀತ ಸಾಗರದಲ್ಲಿ ಈಸಾಡ ಹತ್ತಿದರು.

ಜನಮೇಜಯನು ಭಾರತೀಯ ಪರಿಷತ್ತನ್ನು ಕರೆದನು. ರಾಜ ಮಹಾರಾಜರು, ಋಷಿ ಮುನಿಗಳು, ಇಂದ್ರನು ಬಂದರು. ನಾಗರ ನಾಯಕರು ನಾಗರ ರಾಜರು ಬಂದರು. ಲಕ್ಷಾವಧಿ ಆರ್ಯ ನಾಗರು ಬಂದರು. ಭವ್ಯವಾದ ದಿವ್ಯ ಸಭೆಯದು. ಈ ಮೊದಲು ಕೈದಿಯಾಗಿದ್ದವರೇ ಸರ್ವಾಲಂಕಾರಗಳಿಂದ ಸಭೆಯಲ್ಲಿ ಶೋಭಿಸುತ್ತಿದ್ದರು. ಮುಖ್ಯ ಆಸನದಲ್ಲಿ ಭಗವಾನ್ ಆಸ್ತಿಕರಿದ್ದರು. ಅವರ ಪಾದದ ಹತ್ತರ ಜನಮೇಜಯ, ಇಂದ್ರರು ಕುಳಿತಿದ್ದರು.

ಮೊದಲು ನಾಗಾನಂದನು ಕೊಳಲನ್ನೂದಿದನು. ಋಷಿಗಳು ಶಾಂತಿ ಮಂತ್ರವನ್ನು ಪಠಿಸಿದರು. ನಂತರ ಆಸ್ತಿಕರು ಮಾತಾಡಲು ಎದ್ದರು.

" ಇಂದು ಪರಮ ಮಂಗಲ ದಿವಸ. ಉಪನಿಷತ್‌ಗಳು ಇಂದು ಕೃತಾರ್ಥವಾದವು. ದೇವರು ನಮಗೆ ದಯತೋರಿಸಿ, ಈ ದಿನವನ್ನು ತಂದಿದ್ದಾನೆ. ನಾವು ನವಭಾರತದ ಇತಿಹಾಸವನ್ನು ಸುವರ್ಣಾಕ್ಷರಗಳಿಂದ

ಇಂದು ಬರೆಯುತ್ತಲಿದ್ದೇವೆ. ಭಿನ್ನ ಭಿನ್ನ ಜಾತಿಗಳು ಕುನಸಿನ ಬುದ್ಧಿಯಿಂದ ಒಬ್ಬರಮೇಲೊಬ್ಬರು ಏರಿ ಹೋಗಿ ಹೊಡೆದಾಡುವದರ ಬದಲು ನಮ್ಮ ಸಂಸ್ಕೃತಿಯೇ ಶ್ರೇಷ್ಠ, ನಾವೇ ದೇವರಿಗೆ ಪ್ರೀಯರು, ಸದ್ಗುಣ ಸಂಪನ್ನರು, ಉಳಿದವರು ಶುಂಭರು ಹೀನರು, ಅಸಂಸ್ಕೃತ ಪಶುಗಳು ಎಂದು ತಿಳಿಯುವದರ ಬದಲು ಎರಡನೇ ಮಾನವ ವಂಶವನ್ನು ದಾಸರನ್ನಾಗಿ ಮಾಡಿ ಅವರನ್ನು ನಾಶ ಮಾಡುವದರ ಬದಲು, ಸರ್ವ ಮಾನವ ವಂಶದಲ್ಲಿ ದಿವ್ಯತೆ ಇದೆ. ಪ್ರತಿಯೊಂದು ಮಾನವ ಸಮಾಜದಲ್ಲಿ ಚಾರಿತ್ರ್ಯವೂ ಪ್ರತಿಭೆಯೂ ಇವೆ, ಹಾಗೂ ಅವರವರ ಸಂಸ್ಕೃತಿಯಲ್ಲಿ ವೈಶಿಷ್ಟ್ಯವಿದೆ, ಎಂಬುದನ್ನು ತಿಳಿದು, ಒಬ್ಬರಿಗೊಬ್ಬರು ಹತ್ತರಬಂದು ಮನಸ್ಸಿನಿಂದಲೂ ಬುದ್ಧಿಯಿಂದಲೂ ಹೆಚ್ಚು ಶ್ರೀಮಂತರಾಗಿ ಹೆಚ್ಚು ವಿಶಾಲರಾಗುವದು ಸರ್ವ ಮಾನವರ ಕರ್ತವ್ಯವಿದೆ. ಎಂಬ ಸಂಗತಿಯು ಭಾರತದಲ್ಲಿ ಇಂದು ಪ್ರಾಮುಖ್ಯವಾಗಿ ತಿಳಿಯಲ್ಪಡುತ್ತಿದೆ. ಇಲ್ಲಿಯ ವರೆಗೆ ಆದದ್ದನ್ನೆಲ್ಲ ಮರೆತುಬಿಡಬೇಕು. ಪರ್ವತ ಪ್ರಾಯ ಮಣ್ಣಿನಲ್ಲಿ ಒಂದು ಸುವರ್ಣದ ಕಣ ದೊರೆಯುತ್ತದೆ. ಅದನ್ನೇ ನಾವು ತೆಗೆದುಕೊಳ್ಳುತ್ತೇವೆ. ಆದರಂತೆಯೇ ಮಾನವಿ ಇತಿಹಾಸದಲ್ಲಿಯ ಅನೇಕ ಘಟನೆಗಳಲ್ಲಿ ಯಾವ ಸತ್ ಕಣ ಸಿಗುವದೋ ಅದನ್ನೇ ತೆಗೆದುಕೊಂಡು ಮುಂದೆ ಸಾಗಬೇಕು, ಅದೇ ನಮ್ಮ ಮುಂದಿನ ಮಾರ್ಗದರ್ಶಕ. ಭಾವೀ ಪೀಳಿಗೆಯ ಕೈಯಲ್ಲಿ ದ್ವೇಷದ ಹಳೆಯ ದೀವಟಗೆಯನ್ನು ನಾವು ಕೊಡಲಾರೆವು. ಪ್ರೇಮದ ಈ ಜ್ಯೋತಿಯನ್ನು ಕೊಡುವೆವು. ' ಈ ನಂದಾದೀಪವನ್ನು ಬೆಳೆಸುತ್ತ ನಡೆಯಿರಿ, ಎಂದು ಹೇಳುವೆವು. ನಮಗೆ ಸಿಕ್ಕ ಬಂಗಾರದ ಕಣವನ್ನು ಅವರಿಗೆ ಕೊಡೋಣ. ಹಳೆಯದನ್ನು ಕೆದರುತ್ತ ಕೂಡ್ರುವದರಲ್ಲಿ ಅರ್ಥವಿಲ್ಲ. ಆದರಲ್ಲಿಯ ಮಾಂಗಲ್ಯವನ್ನು ತೆಗೆದುಕೊಂಡು ಮುಂದೆ ಸಾಗೋಣ. ಒಬ್ಬ ಮುದುಕನ ಕಥೆಯು ನಿಮಗೆ ಗೊತ್ತಿರಬಹುದು. ಅವನಿಗೆ ಇಬ್ಬರು ಮಕ್ಕಳಿದ್ದರು ಅವರಲ್ಲಿ ಬುದ್ಧಿವಂತರು ಯಾರು ಎಂಬುದನ್ನು ನೋಡಬೇಕಾಗಿತ್ತು. ಇಬ್ಬರಿಗೂ ಎರಡು ಕೋಣೆಗಳನ್ನು ಕಟ್ಟಿಸಿಕೊಟ್ಟನು. ಅವರಿಗೆ ಸ್ವಲ್ಪ ದ್ರವ್ಯವನ್ನು ಕೊಟ್ಟು, ಯಾರು ಈ ದ್ರವ್ಯದಿಂದಲೇ ಈ ಕೋಣೆಯನ್ನು ತುಂಬಿ ತೋರಿಸುವರೊ ಅವರಿಗೆ ನನ್ನ ಸಂಪತ್ತನ್ನೆಲ್ಲ ಕೊಡುವೆನು ಎಂದನು. ಒಬ್ಬ ಹುಡುಗನು ಊರಲ್ಲಿಯ ಕಸವನ್ನೆಲ್ಲ ಅಲ್ಪ ಬೆಲೆಗೆ ತೆಗೆದು

ಕೊಂಡು ಕೋಣೆಯನ್ನು ತುಂಬಿದನು. ಇನ್ನೊಬ್ಬನು ಮಣ್ಣಿನ ಹತ್ತು ಪಣತಿಗಳನ್ನು ತೆಗೆದುಕೊಂಡು ಅವುಗಳಲ್ಲಿ ಎಂಣಿ ಹಾಕಿ ಮಂಗಲ ದೀಪ ವನ್ನು ಹಚ್ಚಿದನು. ತಂದೆಯು ಪರೀಕ್ಷೆಗೆ ಬಂದನು. ಒಂದು ಕೋಣೆ ಯಲ್ಲಿ ಕಸವನ್ನು ಇನ್ನೊಂದರಲ್ಲಿ ಮಂಗಲ ಶಾಂತ ಪ್ರಕಾಶವನ್ನು ಕಂಡನು. ನಾವು ಕೂಡಾ ಹಿಂದಿನ ಇತಿಹಾಸದಲ್ಲಿಯ ಹೊಲಸನ್ನು ಸಂಗ್ರಹಿಸದೆ, ಅದ ರಲ್ಲಿಯ ಪ್ರಕಾಶವನ್ನೇ ತೆಗೆದುಕೊಂಡು ಮುಂದೆ ಸಾಗೋಣ. ಎಲ್ಲ ರಾಜ ಮಹಾರಾಜರು, ಎಲ್ಲ ಋಷಿ ಮುನಿಗಳು, ಎಲ್ಲ ಆಶ್ರಮವಾಸಿಗಳು ಮತ್ತು ಪ್ರಜೆಗಳು ಈ ಐಕ್ಯದ ಕೂಸನ್ನು ಬೆಳೆಯಿಸಿರಿ.

“ ತಕ್ಷಕ ವಂಶದ ನಾಯಕರೇ ಬನ್ನಿ. ನಿಮ್ಮ ಹಾಗು ಜನಮೇಜಯನ ಕೈಗಳನ್ನು ಕೂಡಿಸುವೆ. ಇನ್ನು ಮುಂದೆ ಈ ಕೈಗಳು ಪರಸ್ಪರರನ್ನು ಸಂರ ಕ್ಷಿಸಲಿ. ಕೈಗಳು ಪ್ರೇಮ ಸೇವೆಯನ್ನು ಮಾಡಲಿ. ಇಬ್ಬರೂ ಪರಸ್ಪರರು ಆಲಿಂಗನವನ್ನು ತೆಗೆದು ಕೊಳ್ಳಿರಿ. ಇಂದ್ರಾ, ! ನೀನು ಜನಮೇಜಯ ನನ್ನು ಅಪ್ಪಿಕೋ. ಭರತಖಂಡದಲ್ಲಿ ಇನ್ನು ಶಾಂತಿನೆಲೆಗೊಳ್ಳಲಿ. ಆನಂದವು ಹಬ್ಬಲಿ. ವಿವೇಕವು ಬೆಳೆಯಲಿ. ಜ್ಞಾನವು ಪ್ರಕಾಶಮಾನವಾಗಲಿ. ಸ್ನೇ ಹವು ದೃಢವಾಗಲಿ. ಸಹಕಾರವು ಬೆಳೆಯಲಿ. ಇಂದು ನನಗೆ ಧನ್ಯತೆ ಎನಿಸುತ್ತದೆ. ತಪೋಧನರಿಗೆ ಶಾಂತಿ ಪ್ರಕಾಶಕ್ಕಿಂತ ಹೆಚ್ಚಿನ ಆನಂದವೇ ನಿದೆ.? ನಿಜವಾದ ಧರ್ಮನಿಷ್ಠನು ಸುಮ್ಮ ಸುಮ್ಮನೆ ಕೇವಲ ಸ್ವಾರ್ಥಕ್ಕಾಗಿ ಜಗತ್ತಿನಲ್ಲಿ ಯುದ್ಧದ ಬೇಗೆಯನ್ನು ಹಬ್ಬಿಸಲಾರನು. ಈ ಬೆಂಕಿಯನ್ನು ಆರಿಸಲು ಪ್ರಯತ್ನಿಸುವನು. ತನ್ನ ಬಲಿದಾನವನ್ನು ಕೊಟ್ಟು ಪ್ರಯ ತ್ನಿಸುವನು. ಇಂದು ನೀವೆಲ್ಲರು ನಿಜವಾದ ಧರ್ಮನಿಷ್ಠರಾಗಿ ಶೋಭಿ ಸುವಿರಿ. ಇದನ್ನು ಕಂಡು ಪರಮೇಶ್ವರನಿಗೆ ಪ್ರೇಮವು ಉಕ್ಕೇರಿ ಬಂದಿರ ಬಹುದು.

ಆಸ್ತಿಕರು ಭಾವನಾಪರವಶರಾಗಿ ಕೆಳಗೆ ಮೋರೆ ಮಾಡಿ ಕುಳಿತರು. ಜನಮೇಜಯನು ಎದ್ದು ನಿಂತನು. ಮೊದಲು ಅವನ ಬಾಯಿಂದ ಮಾತುಗಳು ಹೊರಡಲಿಲ್ಲ. ಬಹಳ ಕಷ್ಟದಿಂದ ಅವನು ಮಾತನಾಡ ತೊಡಗಿದನು “ ನನ್ನನ್ನು ಕ್ಷಮಿಸಿರಿ. ನಾಗರೆಲ್ಲರು ಕ್ಷಮಿಸಿರಿ.

ಯಾರಿಗೆ ಮಾನಸಿಕ ಅಥವಾ ಶಾರೀರಿಕ ಕಷ್ಟವನ್ನು ನಾನು ಕೊಟ್ಟಿರುವೆನೋ ಅವರೆಲ್ಲರಿಗೆ ನಾನು ಕ್ಷಮೆ ಬೇಡುತ್ತೇನೆ. ಭಗವಾನ್ ಆಸ್ತಿಕರು ಇಂದು ನನಗೆ ಸನ್ಮಾರ್ಗವನ್ನು ತೋರಿಸಿದರು. ನಾವೆಲ್ಲರು ಅದೇ ಮಾರ್ಗದಿಂದ ಸಾಗುವಾ. ನಮ್ಮ ಈ ಸಂಗತಿಯ ಸ್ಮರಣಾರ್ಥವಾಗಿ ವರ್ಷದಲ್ಲಿಯ ಒಂದು ದಿವಸವನ್ನು ಗೊತ್ತುಮಾಡುವಾ. ಆಷಾಢ ಶ್ರಾವಣಗಳಲ್ಲಿ ಮಳೆ ಬಹಳ. ಮಳೆಯಾಗಿ ಅಡವಿಯಲ್ಲಿಯ ಹಾಗು ದೂರದಲ್ಲಿರುವ ಸರ್ಪಗಳ ಹುತ್ತುಗಳಲ್ಲಿ ಮಳೆ ನೀರು ತುಂಬಿತೆಂದರೆ, ಅವು ನಮ್ಮ ಆಶ್ರಯಕ್ಕಾಗಿ ಬರುವವು. ನಮ್ಮ ನಾಗ ಬಾಂಧವರು ಸರ್ಪಗಳ ಪೂಜೆಯನ್ನು ಮಾಡುತ್ತಾರೆ. ಆದ್ದರಿಂದ ನಾವು ಮಳೆಗಾಲದಲ್ಲಿ ಒಂದು ದಿವಸವನ್ನು ನಾಗ ಪೂಜೆಗಾಗಿಯೇ ಎಂದು ಗೊತ್ತು ಮಾಡೋಣ. ಶ್ರಾವಣ ಶುದ್ಧ ಪಂಚಮಿಯ ದಿವಸವೇ ನಾವು ಇದನ್ನು ಆಚರಿಸುವಾ- ಅದೇ ದಿವಸವೇ ನಾಗರ ದೊಡ್ಡ ಜಾತ್ರೆಯು ಸೇರುವದು. ಅದೇ ದಿವಸವನ್ನು ಅಖಿಲ ಭಾರತದಲ್ಲಿ ಆಚರಿಸುವಾ. ಆರ್ಯ ಹಾಗು ನಾಗರೆಲ್ಲ ಆ ದಿವಸ ನಾಗ ದೇವರ ಪೂಜೆಯನ್ನು ಮಾಡುವಾ. ಅಂದು ನಾವೆಲ್ಲ ಅಹಿಂಸೆಯನ್ನು ಪಾಲಿಸೋಣ. ಹುಳ ಹಾಗು ಇರುವೆಗಳಿಗೆ ಸಹ ದುಃಖಕೊಡಬಾರದು. ಎಲೆ ಹಾಗು ಹೂಗಳನ್ನು ಕೊಯ್ಯಬಾರದು. ಒಂದು ದಿನವಾದರೂ ಪ್ರೇಮದ ದಿವ್ಯ ದರ್ಶನವನ್ನು ತಕ್ಕೊಳ್ಳುವಾ. ಆ ದಿನ ನಾವು ನಗೋಣ, ಆಡೋಣ, ಕುಣಿಯೋಣ, ಜೋಕಾಲಿಯನ್ನಾಡೋಣ, ಕಥೆ ಹೇಳೋಣ ಈ ಗೊತ್ತು ವಳಿಯು ತಮ್ಮೆಲ್ಲರಿಗೆ ಮಾನ್ಯವಿದೆಯೇ ? ' ಎಂದನು.

ಎಲ್ಲ ರಾಜರು ತಲೆದೂಗಿದರು. ಋಷಿ, ಮುನಿಗಳು ಒಪ್ಪಿದರು. ನಾಗ ಜಾತಿಯ ತಕ್ಷಕ ವಂಶದ ಆ ತರುಣನು 'ನಾವು ಎಲ್ಲವನ್ನೂ ಮರೆಯೋಣ, ನಾವೆಲ್ಲ ಬಂಧುಗಳಾಗಿರೋಣ' ಎಂದನು. ವತ್ಸಲೆಯು ಅಲ್ಲಿಗೆ ಬಂದು 'ನಾನು ಮಹಾರಾಜ ಜನಮೇಜಯನಿಗೆ ಬಹಳ ಬಿರಿನುಡಿಗಳನ್ನಾಡಿದೆನು. ಅದಕ್ಕಾಗಿ ನನ್ನನ್ನು ಅವರು ಕ್ಷಮಿಸಬೇಕು' ಎಂದಳು. ಕೂಡಲೇ ಜನಮೇಜಯನು ಎದ್ದು ನಿಂತು "ನೀನು ಬಹಳ ದೊಡ್ಡ ಪತಿವ್ರತೆ. ರಾಜನ ಆಜ್ಞೆಗಿಂತ ಸದಸದ್ವಿವೇಕ ಬುದ್ಧಿಯು ಮೇಲೆಂಬುದನ್ನು ಇಂದು ನೀನು

ನಿರ್ಭಯಳಾಗಿ ಜಗತ್ತಿಗೆ ತೋರಿಸಿ ಕೊಟ್ಟಿರುವಿ. ರಾಜನ ಆಜ್ಞೆಯು ಯೋಗ್ಯ ವಿರದಿದ್ದರೆ ಅದನ್ನು ಕಾಲಲ್ಲಿ ತುಳಿಯುವದೇ ಪ್ರಜೆಗಳ ಕರ್ತವ್ಯ. ಹೀಗೆ ಮಾಡುವದರಿಂದಲೇ ರಾಜನು ಕರ್ತವ್ಯದಕ್ಷನಾಗುವನು. ರಾಜಾಜ್ಞೆಗೆ ತಲೆದೂಗುವದು ಪ್ರಜೆಗಳ ಕರ್ತವ್ಯವಲ್ಲ. ವತ್ಸಲೆಯೇ ನೀನೇ ಸದ್ಧರ್ಮದ ಮಾರ್ಗದರ್ಶಕಳು. ಆ ಸೈನಿಕರನ್ನು ಹಿಂದಕ್ಕೆ ಕಳಿಸಿ ಅವರಿಗೆ ಹೊಸ ಮಾರ್ಗವನ್ನು ತೋರಿಸಿದೆ. ಈ ಮದಾಂಧನನ್ನು ಕ್ಷಮಿಸು. ನಾನು ದೊಡ್ಡ ಅಪರಾಧಿಯು. ನನ್ನ ದುಃಖವನ್ನು ಶಮನಗೊಳಿಸಲು ನನಗೆ ನಿನ್ನ ಪಾದ ಗಳ ಮೇಲೆ ಬೀಳಗೊಡು ' ಎಂದನು.

ನಿಜವಾಗಿಯೂ ಜನಮೇಜಯನು ವತ್ಸಲೆಗೆ ನಮಸ್ಕರಿಸಿದನು. ಶಹಾ ಬಾಸ! ಶಹಾಬಾಸ! ಎಂದು ಎಲ್ಲರೂ ಕೂಗಿದರು. ' ಜನಮೇಜಯ ಹಾಗೂ ವತ್ಸಲೆಯರಿಬ್ಬರು ಒಂದೇ ದಿವಸ ಹುಟ್ಟಿದ್ದಾರೆ ಇಬ್ಬರ ಧ್ಯೇಯವು ಇಂದು ಒಂದೇ ಆಯಿತು ' ಎಂದಳು ಅಜ್ಜಿ ಸುಶ್ರುತೆ. ಉತ್ಸವವು ಮುಗಿ ಯಿತು. ಇಡೀ ಭರತಖಂಡವು ಒಂದೆಡೆ ಕೂಡಿತ್ತು. ಆನಂದದಿಂದ ಒಂದಾಗಿತ್ತು.

———

# ೨೧

ಪ್ರಯೋಗಪತಿಗೆ ಅತ್ಯಂತ ಆನಂದವಾಗಿತ್ತು ತಾನೇ ನೆಟ್ಟಗಿಡವು ಹಣ್ಣು ಕೊಡಹತ್ತಿದರೆ ಅವನಿಗೆಷ್ಟು ಆನಂದವಾದೀತು! ಎರಡನೆಯವರಿಗೆ ಆ ಆನಂದದ ಕಲ್ಪನೆಯು ಹೇಗೆ ಬಂದೀತು..? ಆರ್ಯ ಹಾಗು ನಾಗರ ಐಕ್ಯದ ಪ್ರಯೋಗವು ಯಶಸ್ವಿಯಾಗುವದೇ ಎಂಬ ಚಿಂತೆಯು ಬಾಧಿಸುತ್ತಿತ್ತು. ನಾವು ದಂಡೆಗೆ ಹತ್ತುವೆವೋ ಅಥವಾ ಬಿರುಗಾಳಿ ಎದ್ದು ಮುಳುಗುವೆವೋ? ಎಂಬ ಚಿಂತೆಯು ಹೆಚ್ಚುತ್ತಲಿತ್ತು. ಪ್ರಯೋಗಪತಿಯ ಶ್ರದ್ಧೆಯ ಪರೀಕ್ಷೆಯಿತ್ತು. ಅವನು ಪ್ರಯತ್ನವನ್ನು ನಡೆಸಿದ. ಶ್ರದ್ಧೆಗೆ ಜಯ ಸಿಕ್ಕಿತು. ಮೊದಲ ಹೆಜ್ಜೆಯನ್ನು ಇಟ್ಟನು.

ಪ್ರಯೋಗಪತಿಯು ಮಂಗಲಗೀತೆಗಳಿಂದ ಸ್ತುತಿಸಿ ಪರಮೇಶ್ವರನನ್ನು ಎಬ್ಬಿಸಿದನು. ಪ್ರಭುವು ಜಾಗ್ರತನಾದನು. ಪ್ರಯೋಗಪತಿಯ ಹಸನ್ಮುಖವನ್ನುನೋಡಿ, ಅವನಿಗೆ ಸಮಾಧಾನವೆನಿಸಿತು.

'ಮೊದಲನೆಯ ಪ್ರಯೋಗವು ಯಶಸ್ವಿಯಾಯಿತಷ್ಟೇ?' ಎಂದನು ಪ್ರಭು

'ಆಹುದು ದೇವಾ' ಉತ್ತರವಿತ್ತನು ಪ್ರಯೋಗಪತಿ

"ನಿಮ್ಮ ಪ್ರಯೋಗವು ಮುಂದೆ ನಡೆಯಲಿ. ಹೀರೆ ಮಾನವೀ ಪ್ರವಾಹವು ಭಾರತದಲ್ಲಿ ಬರಲಿ. ಐಕ್ಯದ ಹೆಜ್ಜೆಯು ಮುಂದೆ ಬೀಳಲಿ. ವಿವಿಧ ಧರ್ಮ, ವಿವಿಧ ಸಂಸ್ಕೃತಿಗಳು ಹತ್ತರ ಬರಲಿ. ಮೊದ ಮೊದಲು ಸ್ಪರ್ಧೆಯಾಗಬಹುದು. ಜಗಳಗಳಾಗಬಹುದು. ಕೊನೆಗೆ ಐಕ್ಯವು ಪ್ರಕಟವಾಗುವದು. ನನ್ನ ಕಣ್ಣೆದುರಿಗೆ ಎಲ್ಲ ಸಂಸ್ಕೃತಿಗಳ ಐಕ್ಯವು ಕಾಣುತ್ತಿದೆ.

ಭರತಭೂಮಿಯಲ್ಲಿ ನನ್ನ ಇಚ್ಛೆಯು ಪೂರ್ಣವಾದ ದೃಶ್ಯನನ್ನು ನಾನು ನೋಡುತ್ತಿದ್ದೇನೆ. ಆರ್ಯ ಹಾಗು ನಾಗರ ಐಕ್ಯವಾಗುವದರಲ್ಲಿ ಎಷ್ಟೋ ಅಡಚಣೆಗಳು ಬಂದವು ಆದರೆ ಮುಂದೆ ಬರುವ ಅಡೆ ತಡೆಗಳ ಮುಂದೆ ಇವು ಏನೂ ಅಲ್ಲ. ಇದಕ್ಕಿಂತ ಭಿನ್ನವಾದ ಪ್ರಶ್ನೆಗಳು ಉತ್ಪನ್ನ ವಾಗುವವು. ಆರ್ಯರು ನಾಗರ ಸಂಸ್ಕೃತಿಯನ್ನು ಅರಗಿಸಿಕೊಳ್ಳುವರು. ಆದರೆ ನಾಗರನ್ನು ಕೆಳ ಕೆಳಕ್ಕೆ ದೂಡುತ್ತ ಹೋಗುವರು. ಅವರನ್ನು ಅಸ್ಪೃಶ್ಯ ರಂತೆ ಮಾಡುವರು. ಅವರ ಹೊಲಮನೆಗಳನ್ನು ಕಸಿದುಕೊಳ್ಳುವರು. ಅವರನ್ನು ಪರಾವಲಂಬಿಗಳನ್ನಾಗಿ ಮಾಡುವರು. ಕೊನೆಗೆ ಅದು ಸ್ಪೃಶ್ಯ ಅಸ್ಪೃಶ್ಯದ ಜಗಳದಲ್ಲಿ ಪರಿಯವಸಾನವಾಗುವದು. ಅದಕ್ಕೂ ಬೆದರುವ ಕಾರಣವಿಲ್ಲ. ಎಷ್ಟೋ ಉದಾರ ಸ್ಪೃಶ್ಯರು ಅವರನ್ನು ಹತ್ತರ ಕರೆಯು ವರು. ಮೆಲ್ಲ ಮೆಲ್ಲನೆ ಈ ಪ್ರಶ್ನೆಯು ಬಿಡುವದು. ಹೀಗೆಯೇ ಭಿನ್ನ ಭಿನ್ನ ಸಂಸ್ಕೃತಿಗಳಲ್ಲಿ ಜಗಳಗಳಾಗುವವು. ಆದರೆ ಮುಂದೆ ಪರಸ್ಪರರು, ಸ್ನೇಹದಿಂದಿರಲು ಕಲಿಯುವರು. ಜನರು ಎರಡೂ ಸಂಸ್ಕೃತಿಗಳ ಒಳ್ಳೇ ಗುಣಗಳನ್ನು ಸ್ವೀಕರಿಸುವರು. ಎರಡೂ ಧರ್ಮಗಳಲ್ಲಿಯ ಸಾಧು ಸಂತರನ್ನು ಪೂಜಿಸುವರು. ಕೊನೆಗೆ ಸರ್ವರನ್ನು ಸಂರಕ್ಷಿಸುವ ಐಕ್ಯಕ್ಕೆ ವಿಜಯ ವಾಗುವದು. ಜೀವನದ ಸ್ವರೂಪವು ಸಂಹಾರವಿರದೆ, ಸಹಕಾರವಿದೆ ಎಂಬ ಮಾತು ಎಲ್ಲರಿಗೂ ಹೊಳೆಯುವದು. ದ್ವೇಷವು ಎಂದೂ ವಿಜಯಿ ಯಾಗುವದಿಲ್ಲ. ಆತ್ಮವು ಎಲ್ಲರನ್ನು ಭೆಟ್ಟಿಯಾಗಲು ಇಚ್ಛಿಸುತ್ತದೆ. ಸರ್ವೋದಯಕ್ಕಾಗಿ ನಿರಪೇಕ್ಷ ಬುದ್ಧಿಯಿಂದ ಸರ್ವಸ್ವವನ್ನು ತ್ಯಾಗ ಮಾಡುವ ಜನರ ಸುತ್ತಲೂ ಮಾನವೀ ಸಮಾಜವು ತಿರುಗಹತ್ತುತ್ತದೆ. ಈ ಬಗೆಯಾಗಿ ವಿರೋಧದೊಳಗಿಂದ ವಿಕಾಸವು ವಿಜಯಿಯಾಗಿ ಹೊರ ಬರುತ್ತದೆ. ಆದುದರಿಂದ ನೀನು ನಿರಾಶನಾಗ ಬೇಡ. ಕೊನೆಗೆ ಸತ್ಯಕ್ಕೆ ಜಯವಾಗುವದು ಎಂಬುವದರಲ್ಲಿ ಶ್ರದ್ಧೆಯನ್ನಿಡು. ಸತ್ಪ್ರವೃತ್ತಿಗಳಲ್ಲಿ ವಿಶ್ವಾಸ ವನ್ನಿಡು. ಪ್ರೇಮದಿಂದ ಮಾನವರು ಹತ್ತರ ಬರುವಂತೆ ಮಾಡು. ಪರ ಸ್ಪರರಲ್ಲಿಯ ಒಳ್ಳೆಯದನ್ನೇ ನೋಡಲು ಜನರಿಗೆ ಕಲಿಸು. ಈ ವಿಶಾಲವಾದ ಸುಂದರವಾದ ಭಾರತದೇಶದಲ್ಲಿ ಮಾನವತೆಯ ಐಕ್ಯದ ಪ್ರಯೋಗವು

ಸಂಪೂರ್ಣ ಯಶಸ್ವಿಯಾಗಲಿ. ಆದು ಯಶಸ್ವಿಯಾಗುವದೆಂಬುದನ್ನು ನಾನು ನೋಡುತ್ತಲೂ ಇದ್ದೇನೆ.'

"ಪ್ರಭೋ! ನಾವು ಪ್ರಯತ್ನಿಸುವೆವು. ಮಾನವರ ಅಂತರ್ಯಾಮಿಯು ಒಬ್ಬನೇ ಇರುವನೆಂದು ತಿಳಿದು ಜನರಿಗೆ ಆನಂದವಾದೀತು. ನೀನು ನಿನ್ನ ಧ್ಯಾನದಲ್ಲಿ ಮಗ್ನನಾಗು. ನಾವು ಶ್ರದ್ಧಾಪೂರ್ವಕವಾಗಿ ಪ್ರಯೋಗವು ಪರಿಪೂರ್ಣವಾಗುವಂತೆ ಯತ್ನಿಸುವೆವು. ಈ ದೇಶದಲ್ಲಿ ಆ ಪ್ರಯೋಗವು ಯಶಸ್ವಿಯಾದೊಡನೆಯೇ ನಿನ್ನನ್ನು ಕರೆಯುವೆವು. ಪ್ರಯೋಗದ ಫಲಗಳನ್ನು ನಿನ್ನ ಚರಣಗಳಲ್ಲಿ ಅರ್ಪಿಸುವೆವು" ಎಂದನು ಪ್ರಯೋಗಪತಿ.

ಪ್ರಭುವು ಧ್ಯಾನದಲ್ಲಿ ಮಗ್ನನಾದನು. ಪ್ರಯೋಗಪತಿಯು ಮಾನವೈಕ್ಯದ ಪ್ರಯೋಗದಲ್ಲಿ ತಲ್ಲೀನನಾದನು.



## ಮಿಂಚಿನಬಳ್ಳಿಯ ಪ್ರಕಟನೆಗಳಲ್ಲಿ ಈಗ ದೊರೆಯುವ ಪುಸ್ತಕಗಳು

| | | | |
|---|---|---|---|
| ೧ | ಮಿಂಚಿದ ಮಹಿಳೆಯರು | | ೨-೦-೦ |
| ೨ | ಜಾಗ್ರತ ಚೀನ | | ೨-೦-೦ |
| ೩ | ರಾಷ್ಟ್ರಪತಿಗಳು | | ೪-೦-೦ |
| ೪ | ಕಂನಾಡ ಸಾಹಿತ್ಯಜ್ಞರ ಆತ್ಮಕಥನ | | ೨-೦-೦ |
| ೫ | ಗಾಂಧೀಜಿಯವರ ರಾಜಕೀಯ ಪತ್ರಗಳು | | ೨-೦-೦ |
| ೬ | ಮಹಾತ್ಮರ ಸ್ವತಂತ್ರ ಭಾರತದ ರಾಜ್ಯಘಟನೆ | | ೧-೪-೦ |
| ೭ | ಬೆಳಕಿನ ಬಾಳು | | ೨-೮-೦ |
| ೮ | ಬಂಡಾಯದ ಇತಿಹಾಸ (೧೮೫೭) | | ೫-೦-೦ |
| ೯ | ಬುದ್ಧ ಜಾತಕಗಳು | | ೨-೦-೦ |
| ೧೦ | ಶ್ರೀ ಅರವಿಂದರ ಧರ್ಮ ಹಾಗೂ ರಾಷ್ಟ್ರೀಯತ್ವ | | ೧-೮-೦ |
| ೧೧ | ಗಾಂಧೀ ಸೂತ್ರಗಳು | | ೨-೮-೦ |
| ೧೨ | ಸಮಾಜ ದರ್ಶನ | | ೧-೮-೦ |
| ೧೩ | ಮಾರ್ಕ್ಸವಾದ | | ೨-೦-೦ |
| ೧೪ | ಗಾಂಧಿಯವರ ದಕ್ಷಿಣಯಾತ್ರೆ | | ೨-೪-೦ |
| ೧೫ | ಆಹಾರ ವಿಜ್ಞಾನಸಾರ | | ೧-೪-೦ |
| ೧೬ | ಭಕ್ತಿ ಸುಮನಾಂಜಲಿ | ೩-೦-೦ | ೨-೮-೦ |
| ೧೭ | ಕಲ್ಕಿ | ೧-೮-೦ | ೧-೦-೦ |
| ೧೮ | ಪಶ್ಚಿಮದ ಪ್ರತಿಭೆ ೧ನೆಯ ಭಾಗ | ೨-೮-೦ | ೨-೦-೦ |
| ೧೯ | ಬ್ಯಾಂಕ ವ್ಯವಸಾಯದ ಕೈಪಿಡಿ | ೨-೮-೦ | ೨-೦-೦ |
| ೨೦ | ಪಶ್ಚಿಮದ ಪ್ರತಿಭೆ ೨ನೆಯ ಭಾಗ | ೨-೦-೦ | ೧-೮-೦ |
| ೨೧ | ಆದರ್ಶರಾಜ್ಯ | ೨-೮-೦ | ೨-೦-೦ |
| ೨೨ | ಶ್ರೀ ಸಾನೆಗುರೂಜಿಯವರ ಚರಿತ್ರೆ ಹಾಗು ಅವರ ಕೃತಿಗಳು | ೮-೦-೦ | ೬-೮-೦ |
| ೨೩ | ಸೆರೆಮನೆಯ ಶೂರ | | ೨-೮-೦ |
| ೨೪ | ಪ್ರಾರ್ಥನೆ ( ಪ್ರಾರ್ಥನೆಯ ಬಗೆಗೆ ಗಾಂಧೀಜಿಯವರ ವಿಚಾರಗಳು ) | | ೦-೮-೦ |
| ೨೫ | ಹಾಸ್ಯ ಪ್ರಬಂಧಗಳು | ೨-೮-೦ | ೨-೦-೦ |
| ೨೬ | ಛತ್ರಪತಿ ಶಿವಾಜಿ | | ೦-೪-೦ |
| ೨೭ | ವಿನೋಬಾ ಭಾವೆ | | ೦-೮-೦ |
| ೨೮ | ಅಪೂರ್ವ ತ್ಯಾಗ ( ಕಥಾಸಂಕಲನ ) | | ೦-೧೨-೦ |
| ೨೯ | ಆಸ್ತಿಕ | | ೩-೮-೦ |

**ವ್ಯವಸ್ಥಾಪಕ, ಮಿಂಚಿನಬಳ್ಳಿ, ಧಾರವಾಡ.**